ಕೆ. ನಾರಾಯಣಸ್ವಾಮಿಯವರ ಅಭಿನಂದನಾ ಗ್ರಂಥ

# ಮೌನ ಸಾಧಕ





ಸಂಪಾದಕರು : ಡಾ. ಕೆ.ಪಿ. ನಾರಾಯಣಪ್ಪ, ಮ.ನಾ. ಕೃಷ್ಣಮೂರ್ತಿ



ಕೆ. ನಾರಾಯಣಸ್ವಾಮಿಯವರ ಅಭಿನಂದನಾ ಗ್ರಂಥ

# ಮೌನ ಸಾಧಕ

ಸಂಪಾದಕರು

ಡಾ. ಕೆ.ಪಿ. ನಾರಾಯಣಪ್ಪ

ಮ.ನಾ. ಕೃಷ್ಣಮೂರ್ತಿ

**ಕೆ. ನಾರಾಯಣಸ್ವಾಮಿ ಅಭಿನಂದನಾ ಸಮಿತಿ**

ನಂ. 33, 4ನೇ ಮುಖ್ಯರಸ್ತೆ, 5ನೇ 'ಬಿ' ಅಡ್ಡರಸ್ತೆ, ಗಿರಿನಗರ

ಬೆಂಗಳೂರು – 560 085 ಮೊಬೈಲ್ : 9449730589, 9449994934

**"MOUNA SAADHAKA" :**
**K. Narayanaswamy Abhinandana Grantha** - A Felicitation Volume Presented to **Prof. K. Narayanaswamy,** Edited by **Dr. K.P. Narayanappa & Ma.Naa. Krishnamurthy,** Published by **K. Narayanaswamy Abhinandana Samithi,** No. 33, 4th Main, 5th 'B' Cross, Girinagar, Bangalore - 560 085. Mobile : 9449730589, 9449994934

First Edition : 2016



Pages : xxx+354=384

Copy : 1000

Price : Rs. 280/-

ಪ್ರಕಾಶಕರು :
**ಕೆ. ನಾರಾಯಣಸ್ವಾಮಿ ಅಭಿನಂದನಾ ಸಮಿತಿ**
ನಂ. 33, 4ನೇ ಮುಖ್ಯರಸ್ತೆ, 5ನೇ 'ಬಿ' ಅಡ್ಡರಸ್ತೆ, ಗಿರಿನಗರ
ಬೆಂಗಳೂರು - 560 085 ಮೊಬೈಲ್ : 9449730589, 9449994934

ಅಕ್ಷರ ಜೋಡಣೆ ಮತ್ತು ಮುಖಪುಟ ವಿನ್ಯಾಸ :
**ಜಿ.ವಿ. ಧನಂಜಯ**

Printed at :
**Usha Graphics**
# 173, 7th Main, Govindarajanagar
Bangalore - 560 079.
Cell : 9844467351



ಶಿವಾಯತ ಧರ್ಮಗುರು
**ಶ್ರೀ ವೀರಭದ್ರ ಚನ್ನಮಲ್ಲ ದೇಶಿಕೇಂದ್ರ ಮಹಾಸ್ವಾಮಿಗಳು**
ಪೀಠಾಧ್ಯಕ್ಷರು, ನಿಡುಮಾಮಿಡಿ ಮಹಾಸಂಸ್ಥಾನಮಠ
ಗೂಳೂರು, ಬಾಗೇಪಲ್ಲಿ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ

ದಿನಾಂಕ : 16-09-2016

# ನಲ್ನುಡಿ



ಶ್ರೀ ಕೆ. ನಾರಾಯಣಸ್ವಾಮಿಯವರು ಸರ್ಕಾರಿ ನೌಕರಿಯಲ್ಲಿದ್ದುಕೊಂಡು ಸಮಾಜದ ಬಗ್ಗೆ ಕಳಕಳಿಯನ್ನು ಬೆಳೆಸಿಕೊಂಡು, ಸಮಾಜದ ಬದಲಾವಣೆಗೆ ಶ್ರಮಿಸಿದವರು. ಸಮಾಜ ಬದಲಾವಣೆಗೆ ಪೂರಕವಾದ ಸಾಹಿತ್ಯ ರಚನೆ, ಅನುವಾದದಲ್ಲಿ ತೊಡಗಿದರು. ಅತ್ತ ಸರ್ಕಾರಿ ನೌಕರಿ ಇತ್ತ ಸಮಾಜ ಪರಿವರ್ತನೆ ಎರಡಕ್ಕೂ ಚ್ಯುತಿ ಬಾರದಂತೆ ಸಮತೂಕದಿಂದ ನಡೆಸಿಕೊಂಡು ಬಂದರು. ಆದ್ದರಿಂದಲೇ ಅವರು ಈ ಎರಡೂ ಕ್ಷೇತ್ರಗಳಲ್ಲಿ ಯಶಸ್ಸು ಕಂಡರು. ಅವರು ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದ ಶಿಕ್ಷಣ ಸಂಸ್ಥೆಗಳು ಮಾದರಿ ಸಂಸ್ಥೆಗಳಾಗಿ ಬೆಳೆದವು. ಗುಣಮಟ್ಟದ ಶಿಕ್ಷಣವನ್ನು ನೀಡಿದವು. ತಮ್ಮ ಸಹೋದ್ಯೋಗಿಗಳಲ್ಲಿ ಕರ್ತವ್ಯಪ್ರಜ್ಞೆ ಮೂಡಿಸಿದರು. ವಿದ್ಯಾರ್ಥಿಗಳಲ್ಲಿ ಕಲಿಕೆಯ ಹಸಿವು ಹುಟ್ಟಿಸಿದರು. ಸಂಸ್ಥೆಗಳು ಶಿಸ್ತಿನ ತಾಣಗಳಾದವು. ಬಾಗೇಪಲ್ಲಿಯ ಪಟ್ಟಣದಲ್ಲಿನ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಅವರು ಪ್ರಾಂಶುಪಾಲರಾಗಿದ್ದ ಅವಧಿಯಲ್ಲಿ ಮಾಡಿದ ಕಾರ್ಯಗಳು ನಿಜಕ್ಕೂ ಅನನ್ಯವಾದವು. ಒಂದು ಸಂಸ್ಥೆ ಮಾಡಬಹುದಾದ ಕೆಲಸವನ್ನು ಕೆ. ನಾರಾಯಣಸ್ವಾಮಿಯವರೊಬ್ಬರೇ ಮಾಡಿದರು. ಆ ನಿಟ್ಟಿನಲ್ಲಿ ಅವರಿಗೆ ಸಹಕಾರ ನೀಡಿದ ಶಿಕ್ಷಕರ ಕಾರ್ಯ ಶ್ಲಾಘನೀಯವಾದುದು.

ಶಿಕ್ಷಣ ಇಲಾಖೆಯಲ್ಲಿನ ಜಂಟಿ ನಿರ್ದೇಶಕರಂತಹ ಉನ್ನತ ಹುದ್ದೆಯಿಂದ ನಿವೃತ್ತಿ ಹೊಂದಿದ ಬಳಿಕ ವಿಶ್ರಾಂತಿ ಜೀವನವನ್ನು ನಡೆಸುವ ಬದಲಿಗೆ ಸಮಾಜದ ಒಳಿತಿಗಾಗಿ ಮುಂದಾದರು. ಪಿಂಚಣಿ ಹಣದಿಂದಲೇ ತಮ್ಮ ಪ್ರಯಾಣ ವೆಚ್ಚ ಸೇರಿದಂತೆ ಇತರೆ ವೆಚ್ಚಗಳನ್ನು ಭರಿಸಿದರು. ಸಮಾಜದಲ್ಲಿನ ಸಮಸ್ಯೆಗಳಿಗೆ ಅವರು ಸ್ಪಂದಿಸುವ ರೀತಿ ಇತರೆ ಸಮಾಜ ಸೇವಾಸಕ್ತರಿಗೆ ಮಾದರಿಯಾಗಿರುವಂಥದ್ದು. ಸಮಾಜದ ಹಿತದಲ್ಲೇ ತಮ್ಮ ಹಿತವನ್ನು ಬಯಸುವ ವಿಶಿಷ್ಟ ವ್ಯಕ್ತಿತ್ವ ಹೊಂದಿರುವ ಇವರು, ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕುಗಳಲ್ಲಿ ಫ್ಲೋರೋಸಿಸ್ ನಿವಾರಣೆಗೆ ಸಂಬಂಧಿಸಿದಂತೆ ಕೈಗೊಂಡ ಕಾರ್ಯಕ್ರಮಗಳು ಜನ ಮೆಚ್ಚುಗೆಗೆ ಪಾತ್ರವಾಗಿವೆ. ತಮ್ಮ ಹಣವನ್ನು



ಸಮಾಜ ಸೇವೆಗೆ ಖರ್ಚು ಮಾಡಿದರೂ ಸಹ ಇತರರ ಹಣದ ವಿಷಯದಲ್ಲಿ ಇವರು ಹೊಂದಿರುವ ಪ್ರಾಮಾಣಿಕತೆ ಆದರ್ಶಪ್ರಾಯ.

ತಾವು ಮಾಡುವ ಸಮಾಜ ಸೇವೆಗೆ ಬೇಕಾದ ಜ್ಞಾನವನ್ನು ಅರಿತುಕೊಳ್ಳಲು ಇವರು ರಾಜ್ಯ ಮತ್ತು ರಾಷ್ಟ್ರದ ವಿವಿಧ ಭಾಗಗಳಲ್ಲಿ ನಡೆಯುವ ಕಾರ್ಯಾಗಾರಗಳಲ್ಲಿ, ತರಬೇತಿ ಶಿಬಿರಗಳಲ್ಲಿ ವಿದ್ಯಾರ್ಥಿಗಳಂತೆ ಭಾಗವಹಿಸಿ ಕುತೂಹಲ ಮತ್ತು ಆಸಕ್ತಿಯಿಂದ ಆಲಿಸಿ ವಿಷಯವನ್ನು ಮನನ ಮಾಡಿಕೊಳ್ಳುವ ಪರಿ ನಮ್ಮನ್ನು ಬೆರಗುಗೊಳಿಸಿದೆ. ಇಳಿವಯಸ್ಸಿನಲ್ಲೂ ಅವರು ಸಮಾಜದ ಬಗ್ಗೆ ತೋರುವ ಆಸ್ಥೆ, ನೆಲ, ಜಲ, ವನ ಸಂರಕ್ಷಣೆಯ ಬಗ್ಗೆ ಇವರಿಗಿರುವ ತುಡಿತ ಅಚ್ಚರಿಗೊಳಿಸುವಂತಹದು.

ಕೆ. ನಾರಾಯಣಸ್ವಾಮಿಯವರು ಬಹು ದೊಡ್ಡ ಪುಸ್ತಕ ಪ್ರೇಮಿಗಳು. ಅವರು ಹಣವನ್ನು ಸಂಗ್ರಹಿಸಲಿಲ್ಲ ಪುಸ್ತಕಗಳನ್ನು ಸಂಗ್ರಹಿಸಿದರು. ಆ ಸಂಗ್ರಹವೆಂಬುದು ಪ್ರದರ್ಶನಕ್ಕಾಗಿ ಅಲ್ಲ. ತಮ್ಮ ಅರಿವಿನ ದರ್ಶನಕ್ಕಾಗಿ.

ಶ್ರೀಯುತ ನಾರಾಯಣಸ್ವಾಮಿಯವರು, ನಮ್ಮ ಹಿರಿಯ ಗುರುಗಳಾದ ಶ್ರೀ ಜಚನಿ ಅವರ ಕಾಲದಿಂದಲೂ ಸಂಪರ್ಕವನ್ನು ಹೊಂದಿದ್ದಾರೆ. ಕೆಲವು ವರ್ಷಗಳು ಸಂಸ್ಥಾನದ ಕಾಲೇಜಿನ ಪ್ರಾಂಶುಪಾಲರಾಗಿ ಕೆಲಸ ಮಾಡಿದ್ದಾರೆ. ಬಳಿಕ ಮಠ ಕೈಗೊಂಡ ವೈಚಾರಿಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಈ ಅವರ ಸರಳ ಸಜ್ಜನಿಕೆ, ಪ್ರಾಮಾಣಿಕತೆ, ಸಾಮಾಜಿಕ ಕಳಕಳಿ, ಕ್ರಿಯಾಶೀಲತೆ ಈ ಗುಣಗಳನ್ನು ಕಂಡು ಸಂಸ್ಥಾನದಿಂದ ಮಾನವತಾ ಪ್ರಶಸ್ತಿಯನ್ನು ನೀಡುವ ಮೂಲಕ ಗೌರವಿಸಿದ್ದೇವೆ.

ಇಂದಿನ ಸಮಾಜದಲ್ಲಿ ಕೆಲವೇ ಕೆಲವು ಮಂದಿ ಪ್ರಾಮಾಣಿಕ ಸಮಾಜ ಚಿಂತಕರಲ್ಲಿ ಒಬ್ಬರಾಗಿರುವ ಕೆ. ನಾರಾಯಣಸ್ವಾಮಿಯವರು ಯಾವುದೇ ಪೂರ್ವಗ್ರಹಗಳಿಲ್ಲದೆ ಸಂವಾದಿಸುವ ಆರೋಗ್ಯವಂತ ಮನಸ್ಸನ್ನು ಹೊಂದಿದ್ದಾರೆ. ಸರಳ ಜೀವನ ಮತ್ತು ಉದಾತ್ತ ಚಿಂತನೆಯ ಹಿರಿದಾದ ವ್ಯಕ್ತಿತ್ವವುಳ್ಳ ನಾರಾಯಣಸ್ವಾಮಿಯವರ ಬಗ್ಗೆ ಗ್ರಂಥವನ್ನು ಹೊರ ತರುತ್ತಿರುವುದು ಸ್ಮರಣೀಯ ಕಾರ್ಯ. ಇದಕ್ಕಾಗಿ ಶ್ರಮಿಸಿದ ಎಲ್ಲರಿಗೂ ಶುಭವಾಗಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

ಶಿವಸ್ಮರಣೆಯೊಂದಿಗೆ

ನಿರ್ಭಯ ಚನ್ನಮಲ್ಲ ಸ್ವಾಮೀಜಿ



ಸಿದ್ದರಾಮಯ್ಯ
ಮುಖ್ಯಮಂತ್ರಿ

ವಿಧಾನಸೌಧ
ಬೆಂಗಳೂರು – 560 001

ನಂ.: ಸಿಎಂ/ಪಿಎಸ್/164ಯ2016

ದಿನಾಂಕ : 14–10–2016

# ಸಂದೇಶ



ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಹೊಸೂರು ಗ್ರಾಮದ ಶ್ರೀ ಕೆ. ನಾರಾಯಣಸ್ವಾಮಿ ಅವರ ಅಭಿಮಾನಿಗಳ ಬಳಗವು ಶ್ರೀಯುತರನ್ನು ಕುರಿತು ಅಭಿನಂದನಾ ಗ್ರಂಥವನ್ನು ಹೊರತರುತ್ತಿರುವುದು ಅತ್ಯಂತ ಸಂತಸದ ಸಂಗತಿಯಾಗಿದೆ.

ಕೆಲವು ಪ್ರಕರಣಗಳಲ್ಲಿ ವೃತ್ತಿಯ ಜೊತೆಗೆ ಪ್ರವೃತ್ತಿಯೂ ಚಿಗುರೊಡೆಯುತ್ತದೆ! ಮತ್ತೆ ಕೆಲವು ಪ್ರಕರಣಗಳಲ್ಲಿ ವ್ಯಕ್ತಿಯು ನಿವೃತ್ತಿಯಾದ ನಂತರವೇ ಆತನಲ್ಲಿ ಪ್ರವೃತ್ತಿಯು ಪಸರಿಸುತ್ತದೆ!! ಒಂದೇ ವಾಕ್ಯದಲ್ಲಿ ಬಣ್ಣಿಸಬಹುದಾದರೆ ವೃತ್ತಿಗೂ ಪ್ರವೃತ್ತಿಗೂ ಎಲ್ಲಿಲ್ಲದ ನಂಟು !!! ಆದರೆ, ಈ ನಂಟಿನ ಅಂಟಿನಲ್ಲಿ ಎಲ್ಲಿಲ್ಲದ ಅಂತರ ಹಾಗೂ ಎಲ್ಲಿಲ್ಲದ ಆಕರ್ಷಣೆ ಕೂಡಾ ಇದೆ.

ಶಿಕ್ಷಣ ಎಂಬುದು ಎಲ್ಲರಲ್ಲೂ ವೈಜ್ಞಾನಿಕ ಮನೋಭಾವವನ್ನು ಹಾಗೂ ವೈಚಾರಿಕ ಮನೋಧರ್ಮವನ್ನು ಮೂಡಿಸಬೇಕು. ಶಿಕ್ಷಣದ ಆಶಯವು ಸಾಕಾರಗೊಳ್ಳಬೇಕಾದರೆ ನಮ್ಮ ಸಮಾಜಕ್ಕೆ ಪರಿಣಾಮಕಾರಿ ಹಾಗೂ ಪ್ರಭಾವೀ ಶಿಕ್ಷಕರ ಅಗತ್ಯವಿದೆ.

ಸಮಾಜದಲ್ಲಿನ ಹತ್ತು ಹಲವು ಸಮಸ್ಯೆಗಳಿಗೆ ಪರಿಹಾರ ದೊರಕಿಸಿ ಕೊಡುವ ಹಾಗೂ ಸಮಾಜದಲ್ಲಿ ಬದಲಾವಣೆ ತರುವ ಸಾಮರ್ಥ್ಯ ಪ್ರತಿಯೊಬ್ಬ ಶಿಕ್ಷಕರಲ್ಲೂ ಮನೆ ಮಾಡಿರುತ್ತದೆ ಎಂಬುದು ನನ್ನ ನಂಬಿಕೆ ಹಾಗೂ ವಿಶ್ವಾಸ.

ಬಹುಮುಖ ಪ್ರತಿಭೆ ಶ್ರೀ ಕೆ. ನಾರಾಯಣಸ್ವಾಮಿ ಅವರ ವ್ಯಕ್ತಿಚಿತ್ರವನ್ನು ಅವಲೋಕಿಸಿದಾಗ ವೃತ್ತಿಯಲ್ಲಿ ಶಿಕ್ಷರಾಗಿ ಮಾತ್ರವಲ್ಲ, ಪ್ರವೃತ್ತಿಯಲ್ಲಿ ಸಮಾಜ ಸೇವಕರಾಗಿ – ಸಮಾಜ ಸುಧಾರಕರಾಗಿ ಕಾರ್ಯ ನಿರ್ವಹಿಸಿರುವುದು ವ್ಯಕ್ತವಾಗುತ್ತದೆ. ಅಲ್ಲದೆ, ಇದು ಶ್ರೀ ಕೆ. ನಾರಾಯಣಸ್ವಾಮಿ ಅವರಲ್ಲಿನ ಸಾಮಾಜಿಕ ಕಳಕಳಿ ಹಾಗೂ ಕಾಳಜಿಯನ್ನು ಬಿಂಬಿಸುತ್ತದೆ.

ನೈಜ ಘಟನೆಗಳ ಚಿತ್ರಣದೊಂದಿಗೆ ವಾಸ್ತವಿಕತೆಯ ನೆಲೆಗಟ್ಟಿನಲ್ಲಿ ರೂಪುಗೊಂಡು ಶ್ರೀ ಕೆ. ನಾರಾಯಣಸ್ವಾಮಿ ಅವರ ಅಭಿನಂದನಾ ಗ್ರಂಥವು ಯುವ ಜನತೆಯಲ್ಲಿ ಪ್ರೇರಣೆ ಹಾಗೂ ಸ್ಫೂರ್ತಿಯನ್ನು ಚಿಮ್ಮಿಸುವಲ್ಲಿ ಅತ್ಯಂತ ಯಶಸ್ವಿಯಾಗಲಿ ಎಂಬುದೇ ನನ್ನ ಮನದಾಳದ ಹಾರೈಕೆ.

(ಸಿದ್ದರಾಮಯ್ಯ)



**ಎನ್.ಹೆಚ್. ಶಿವಶಂಕರ ರೆಡ್ಡಿ**
ಉಪ ಸಭಾಧ್ಯಕ್ಷರು
ಕರ್ನಾಟಕ ವಿಧಾನಸಭೆ




ದೂರವಾಣಿ : 080–22258577
080–22033363
ಫ್ಯಾಕ್ಸ್ : 080–22258299
ಕೊಠಡಿ ಸಂಖ್ಯೆ : 135, 1ನೇ ಮಹಡಿ
ವಿಧಾನಸೌಧ, ಬೆಂಗಳೂರು – 560 001

ನಂ.:ಕವಿಸ:ಉಸ: 844:2015 ದಿನಾಂಕ : 17–01–2015

# ಸಂದೇಶ



2013ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಶ್ರೀ ಕೆ. ನಾರಾಯಣಸ್ವಾಮಿ ಅಭಿನಂದನಾ ಸಮಿತಿಯ ವತಿಯಿಂದ ಅಭಿನಂದನಾ ಗ್ರಂಥವನ್ನು ಹೊರತರುತ್ತಿರುವುದು ಮೆಚ್ಚುಗೆಯ ವಿಷಯವಾಗಿದೆ ಹಾಗೂ ಈ ಅಭಿನಂದನಾ ಗ್ರಂಥದ ಮೂಲಕ ಶ್ರೀ ಕೆ. ನಾರಾಯಣಸ್ವಾಮಿರವರ ಸೇವೆಯನ್ನು ಸಕಾಲದಲ್ಲಿ ಗುರುತಿಸಿ, ಇವರ ಸಾಧನೆಗಳನ್ನು ದಾಖಲಿಸಲು ಮುಂದಾಗುತ್ತಿರುವುದು, ಅವರ ಮೇಲಿನ ಗೌರವ, ವಿಶ್ವಾಸ, ಪ್ರೀತಿ ಇವುಗಳ ಸಂಕೇತವೆಂದು ನಾನು ಭಾವಿಸುತ್ತೇನೆ.

ನನ್ನ ಮತಕ್ಷೇತ್ರದವರಾದ ಶ್ರೀ ಕೆ. ನಾರಾಯಣಸ್ವಾಮಿಯವರು 'ಕಾಯಕವೇ ಕೈಲಾಸ' ಎಂಬ ಧ್ಯೇಯದಿಂದ ತಾವು ನಿರ್ವಹಿಸಿದ ಪ್ರತಿಯೊಂದು ಕ್ಷೇತ್ರಕ್ಕೂ ನೀಡಿರುವ ಕೊಡುಗೆ ಅವಿಸ್ಮರಣೀಯ. ಶ್ರೀಯುತರು, ಹಲವಾರು ಸಾಮಾಜಿಕ ಸೇವಾ ಕಾರ್ಯಗಳಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡು ಜನಾನುರಾಗಿಗಳಾಗಿದ್ದಾರೆ.

ಅಪಾರ ಶಿಷ್ಯರು – ಸಹವರ್ತಿಗಳು ಇವರ ಒಡನಾಟ ಹೊಂದಿರುವ ಶ್ರೀ ಕೆ. ನಾರಾಯಣಸ್ವಾಮಿರವರು, ಕನ್ನಡ ಉಪನ್ಯಾಸಕರಾಗಿ, ಪದವಿಪೂರ್ವ ಶಿಕ್ಷಣ ಇಲಾಖೆಯ ಉಪ–ನಿರ್ದೇಶಕರಾಗಿ, ಜಂಟಿ ನಿರ್ದೇಶಕರಾಗಿ, ದಲಿತ ಚಿಂತಕರಾಗಿ, ನೆಲ–ವನ–ಜಲಗಳ ಸಂರಕ್ಷಣೆ, ಕೃಷಿ ಈ ಕ್ಷೇತ್ರಗಳಲ್ಲಿ ಅವರು ತೋರಿದ ಕಾಳಜಿ ಮನೆ ಮಾತಾಗಿದೆ.

ಸರ್ವವ್ಯಾಪಿಯಾದ ಭಗವಂತನು ಶ್ರೀ ಕೆ. ನಾರಾಯಣಸ್ವಾಮಿರವರಿಗೆ ಸನ್ಮಂಗಳವನ್ನುಂಟು ಮಾಡಲಿ ಹಾಗೂ ನೀವು ಉದ್ದೇಶಿಸಿರುವ ಅಭಿನಂದನಾ ಗ್ರಂಥವು ಯಶಸ್ಸನ್ನು ಕಾಣಲೆಂದು ಹಾರೈಸುತ್ತೇನೆ.

(ಎನ್.ಹೆಚ್. ಶಿವಶಂಕರ ರೆಡ್ಡಿ)



**ಡಾ. ಎಂ. ವೀರಪ್ಪ ಮೊಯಿಲಿ**
ಸಂಸತ್ ಸದಸ್ಯರು (ಲೋಕಸಭೆ)
ಅಧ್ಯಕ್ಷರು,
ಸಂಸದೀಯ ಆರ್ಥಿಕ ಸ್ಥಾಯಿ ಸಮಿತಿ
ನವದೆಹಲಿ – 110 001




ದಿನಾಂಕ : 14–05–2016

# ಸಂದೇಶ



ಶ್ರೀ ಕೆ. ನಾರಾಯಣಸ್ವಾಮಿ ಇವರು ಚಿಕ್ಕಬಳ್ಳಾಪುರ ಲೋಕಸಭಾ ಕ್ಷೇತ್ರದ ಗೌರಿಬಿದನೂರು ತಾಲ್ಲೂಕು ಹೊಸೂರು ಗ್ರಾಮದವರಾಗಿದ್ದು, ಹಲವು ಕ್ಷೇತ್ರಗಳಲ್ಲಿ ನಿಸ್ಪೃಹತೆಯಿಂದ ಕರ್ತವ್ಯ ನಿರ್ವಹಿಸಿ, ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಇವರು ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ, ಬಾಗೇಪಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಪ್ರಾಂಶುಪಾಲರಾಗಿ ಸಲ್ಲಿಸಿದ ಸೇವೆ ಅನನ್ಯವಾದುದು. ಇವರು ಅವಿಭಜಿತ ಕೋಲಾರ ಜಿಲ್ಲೆಯಲ್ಲಿನ ದಲಿತ ಸಮುದಾಯದಲ್ಲಿ ಜಾಗೃತಿ ಮೂಡಿಸಲು ನಡೆಸಿದ ಕಾರ್ಯಕ್ರಮಗಳು ಇಂದಿಗೂ ಸ್ಮರಣೀಯವಾಗಿವೆ. ಪ್ರಜ್ಞಾವಂತ ನಾಗರಿಕರಾಗಿ ತಮ್ಮ ವೃತ್ತಿಯನ್ನು ಪ್ರಾಮಾಣಿಕವಾಗಿ ಮಾಡಿರುತ್ತಾರೆ.

ಶ್ರೀ ನಾರಾಯಣಸ್ವಾಮಿಯವರು ವೈಚಾರಿಕ ಸಾಹಿತ್ಯ ಕ್ಷೇತ್ರಕ್ಕೆ ಮತ್ತು ಪರಿಸರ ಸಂರಕ್ಷಣೆಗೆ ನೀಡಿದ ಕೊಡುಗೆ ವಿಶಿಷ್ಟವಾದುದು. ಬಹುಮುಖ ಪ್ರತಿಭೆಯುಳ್ಳ ಇವರಿಗೆ ಶಿಷ್ಯರು ಮತ್ತು ಸ್ನೇಹಿತರು ಅಭಿನಂದನಾ ಗ್ರಂಥವನ್ನು ಸಮರ್ಪಣೆ ಮಾಡುತ್ತಿರುವುದು ಸಂತೋಷದ ಸಂಗತಿ. ಇವರು ಸಮಾಜಕ್ಕೆ ಇನ್ನೂ ಹೆಚ್ಚಿನ ನಿಷ್ಠೆಯಿಂದ ಸೇವೆ ಸಲ್ಲಿಸಲಿ ಎಂದು ಹಾರೈಸುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

(ಎಂ. ವೀರಪ್ಪ ಮೊಯಿಲಿ)



**ಡಾ. ಕೆ.ಹೆಚ್. ಮುನಿಯಪ್ಪ**
(ಮಾಜಿ ಕೇಂದ್ರ ಸಚಿವರು)
ಸಂಸತ್ ಸದಸ್ಯರು
ಕೋಲಾರ ಲೋಕಸಭಾ ಕ್ಷೇತ್ರ




ನಂ. 100/ಬಿ, 60 ಅಡಿರಸ್ತೆ,
ಸಿದ್ಧಿವಿನಾಯಕ ಬಡಾವಣೆ, ಭೂಪಸಂದ್ರ
ಸಂಜಯನಗರ, ಬೆಂಗಳೂರು-560 094
ದೂ.: 080-23415733, 23415755
ನಂ. 7, ತ್ಯಾಗರಾಜ ಮಾರ್ಗ
ನವದೆಹಲಿ - 110 011
ದೂ. : 011-23794481, 23792703

ದಿನಾಂಕ : 08-06-2016

## ಶುಭ ಸಂದೇಶ



ಶ್ರೀ ಕೆ. ನಾರಾಯಣಸ್ವಾಮಿಯವರು ಚಿಕ್ಕಳ್ಳಾಪುರ ಲೋಕಸಭಾ ಕ್ಷೇತ್ರದ ಗೌರಿಬಿದನೂರು ತಾಲ್ಲೂಕು, ಹೊಸೂರು ಗ್ರಾಮದವರಾಗಿದ್ದು, ಹಲವು ಕ್ಷೇತ್ರಗಳಲ್ಲಿ ನಿಷ್ಪೃಹತೆಯಿಂದ ದುಡಿದು, ಆ ಕ್ಷೇತ್ರಗಳಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಇವರು ಚಿಕ್ಕಬಳ್ಳಾಪುರ ಜಿಲ್ಲೆಯ ಗುಡಿಬಂಡೆ, ಬಾಗೇಪಲ್ಲಿಯ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಪ್ರಾಂಶುಪಾಲರಾಗಿದ್ದಾಗ ಸಲ್ಲಿಸಿದ ಸೇವೆ ಅನನ್ಯವಾದುದು. ಇವುಗಳಲ್ಲಿ ಪ್ರತಿಯೊಂದೂ ಅವರ ಶ್ರದ್ಧೆ ನಿಷ್ಠೆಯನ್ನು ಸಾರುತ್ತವೆ. ಇದರ ಜೊತೆಗೆ ಇವರು ಅವಿಭಜಿತ ಕೋಲಾರ ಜಿಲ್ಲೆಯಲ್ಲಿನ ದಲಿತ ಸಮುದಾಯದಲ್ಲಿ ಜಾಗೃತಿ ಮೂಡಿಸಲು ನಡೆಸಿದ ಕಾರ್ಯಕ್ರಮಗಳು ಇಂದಿಗೂ ಸ್ಮರಣೀಯವಾದವುಗಳು. ಸಮಾಜದಲ್ಲಿನ ಓರ್ವ ಪ್ರಜ್ಞಾವಂತ ನಾಗರೀಕರಾಗಿ ತಮ್ಮ ವೃತ್ತಿಯನ್ನು ಪ್ರಾಮಾಣಿಕವಾಗಿ ನಿರ್ವಹಿಸುವುದರ ಜೊತೆಗೆ, ಸಮಾಜದಲ್ಲಿ ಜಾಗೃತಿ ಮೂಡಿಸುವಂತಹ ಕಾರ್ಯವನ್ನು ಪ್ರಾಮಾಣಿಕವಾಗಿ ಮಾಡಿದ್ದಾರೆ.

ಶ್ರೀಯುತ ಕೆ. ನಾರಾಯಣಸ್ವಾಮಿಯವರು ವೈಚಾರಿಕ ಸಾಹಿತ್ಯ ಕ್ಷೇತ್ರಕ್ಕೆ ಮತ್ತು ಪರಿಸರ ಸಂರಕ್ಷಣೆಗೆ ನೀಡಿದ ಕೊಡುಗೆ ವಿಶಿಷ್ಟವಾದುದು. ಇಂತಹ ಬಹುಮುಖ ಪ್ರತಿಭಾವಂತರಾಗಿರುವ ಇವರಿಗೆ ಇವರ ಸ್ನೇಹಿತರು ಮತ್ತು ಶಿಷ್ಯರು ಅಭಿನಂದನಾ ಗ್ರಂಥವನ್ನು ಸಮರ್ಪಣೆ ಮಾಡುತ್ತಿರುವುದು ಸಂತೋಷದ ಸಂಗತಿಯಾಗಿದೆ. ಇದರ ಜೊತೆಗೆ ಇವರಿಗೆ ಇಂತಹ ಹಲವು ಸತ್ಕಾರ ಮತ್ತು ಪುರಸ್ಕಾರಗಳು ದೊರೆಯುವಂತಾಗಲಿ ಎಂದು ಆಶಿಸುತ್ತೇನೆ.

ಶ್ರೀಯುತ ಕೆ. ನಾರಾಯಣಸ್ವಾಮಿಯವರಿಗೆ ಭಗವಂತ ಆಯುಷ್ಯ, ಆರೋಗ್ಯವನ್ನು ನೀಡಿ, ಇವರಿಂದ ಈ ಸಮಾಜಕ್ಕೆ ಮತ್ತಷ್ಟು ಕೊಡುಗೆ ಸಂದಾಯವಾಗುವಂತೆ ಮಾಡಲಿ ಎಂದು ಹಾರೈಸುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

**(ಡಾ. ಕೆ.ಹೆಚ್. ಮುನಿಯಪ್ಪ)**



**ಕೆ.ಎನ್. ರಾಜಣ್ಣ**
ಶಾಸಕರು
ಮಧುಗಿರಿ ವಿಧಾನಸಭಾ ಕ್ಷೇತ್ರ
ಅಧ್ಯಕ್ಷರು, ಕ.ರಾ.ಸ. ಅಪೆಕ್ಸ್ ಬ್ಯಾಂಕ್ ನಿ., ಬೆಂ.
ಅಧ್ಯಕ್ಷರು, ಡಿ.ಸಿ.ಸಿ. ಬ್ಯಾಂಕ್ ನಿ., ತುಮಕೂರು



"ರಜತಾದ್ರಿ", ಎನ್.ಹೆಚ್.-4
ಕ್ಯಾತಸಂದ್ರ
ತುಮಕೂರು - 572 104.

# ಸಂದೇಶ



ಶ್ರೀ ಕೆ. ನಾರಾಯಣಸ್ವಾಮಿಯವರು ನಮ್ಮ ನೆರೆಯ ಜಿಲ್ಲೆ ಚಿಕ್ಕಬಳ್ಳಾಪುರದ ಗೌರಿಬಿದನೂರು ತಾಲ್ಲೂಕು ಹೊಸೂರು ಗ್ರಾಮದವರಾಗಿದ್ದು, ತಮಗೆ ಹಲವು ವರ್ಷಗಳಿಂದ ಪರಿಚಿತರು. ಇವರು ಶಿಕ್ಷಣ ಸಮಾಜ ಸೇವೆ, ನೆಲ, ಜಲ, ಕೃಷಿ ಸಂರಕ್ಷಣೆ, ವೈಚಾರಿಕ ಸಾಹಿತ್ಯ ಕ್ಷೇತ್ರಗಳಲ್ಲಿ ನಿಷ್ಪೃಹತೆಯಿಂದ ದುಡಿದು, ಆ ಕ್ಷೇತ್ರಗಳಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಚಿಕ್ಕಬಳ್ಳಾಪುರ ಜಿಲ್ಲೆಯ ಗುಡಿಬಂಡೆ, ಬಾಗೇಪಲ್ಲಿಯ ಸರ್ಕಾರಿ ಪದವಿಪೂರ್ವ ಕಾಲೇಜುಗಳಲ್ಲಿ ಪ್ರಾಂಶುಪಾಲರಾಗಿದ್ದಾಗ ಸಲ್ಲಿಸಿದ ಸೇವೆ ಅನನ್ಯವಾದುದು. ಇದರ ಜೊತೆಗೆ ಇವರು ಅವಿಭಜಿತ ಕೋಲಾರ ಜಿಲ್ಲೆಯಲ್ಲಿನ ದಲಿತ ಸಮುದಾಯದಲ್ಲಿ ಜಾಗೃತಿ ಮೂಡಿಸಲು ನಡೆಸಿದ ಕಾರ್ಯಕ್ರಮಗಳು ಇಂದಿಗೂ ಸ್ಮರಣೀಯವಾದವುಗಳು.

ಶ್ರೀಯುತ ಕೆ. ನಾರಾಯಣಸ್ವಾಮಿಯವರು ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಯ ಬಗ್ಗೆ ನಾನು ಕೇಳಿ ತಿಳಿದುಕೊಂಡಿದ್ದೇನೆ. ಅದು ನಿಜವಾಗಿಯೂ ಇತರರಿಗೆ ಮಾದರಿಯಾದುದು. ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ ಬಳಿಕ ಸಮಾಜ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡರು. ಆ ಸಮಯದಲ್ಲಿ ಇವರು ಕೈಗೊಂಡ ಆರ್ಥಿಕ ಸಬಲೀಕರಣ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದೇನೆ. ಸದರಿ ಕಾರ್ಯಕ್ರಮದ ಹಿಂದಿನ ಅವರ ಆಲೋಚನೆಯ ಬಹು ದೊಡ್ಡ ಆರ್ಥಿಕ ಚಿಂತನೆಯಾಗಿದೆ. ತಳ ಸಮುದಾಯಗಳ ಸಾಮಾಜಾರ್ಥಿಕ ಸ್ಥಿತಿಗಳನ್ನು ಸುಧಾರಿಸುವ ಬಗ್ಗೆ ಅವರು ಹೊಂದಿರುವ ಕಾಳಜಿ ವಿಶಿಷ್ಟವಾದುದು. ಇಂತಹ ಸಮಾಜ ಚಿಂತಕರಿಗೆ ಅವರ ಸ್ನೇಹಿತರು ಮತ್ತು ಶಿಷ್ಯರು ಅಭಿನಂದನಾ ಗ್ರಂಥವನ್ನು ಸಮರ್ಪಣೆ ಮಾಡುತ್ತಿರುವುದು ಸಂತೋಷದ ಸಂಗತಿಯಾಗಿದೆ. ಇದರ ಜೊತೆಗೆ ಇವರಿಗೆ ಇಂತಹ ಹಲವು ಸತ್ಕಾರ ಮತ್ತು ಪುರಸ್ಕಾರಗಳು ದೊರೆಯುವಂತಾಗಲೀ ಎಂದು ಆಶಿಸುತ್ತೇನೆ.

K. N. Rajanna

**(ಕೆ.ಎನ್. ರಾಜಣ್ಣ)**
ಶಾಸಕರು, ಮಧುಗಿರಿ ವಿಧಾನಸಭಾ ಕ್ಷೇತ್ರ



**ಡಾ. ಎನ್. ನಾಗಾಂಬಿಕಾ ದೇವಿ, ಭಾ.ಆ.ಸೇ.**
ಸರ್ಕಾರದ ಪ್ರಧಾನ ಕಾರ್ಯದರ್ಶಿ
(ಪಂಚಾಯತ್ ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್
ರಾಜ್ ಇಲಾಖೆ



ಕರ್ನಾಟಕ ಸರ್ಕಾರದ ಸಚಿವಾಲಯ
3ನೇ ಹಂತ, 3ನೇ ಮಹಡಿ
ಬಹುಮಹಡಿಗಳ ಕಟ್ಟಡ, ಬೆಂಗಳೂರು–1
ದೂರವಾಣಿ : 080–22384574, 22032941
ಫ್ಯಾಕ್ಸ್ : 080–22389520

ದಿನಾಂಕ : 23–07–2016

# ಸಂದೇಶ



ಶ್ರೀಯುತ ಕೆ. ನಾರಾಯಣಸ್ವಾಮಿಯವರು ನನಗೆ ಕಳೆದ 20 ವರ್ಷಗಳಿಂದ ಪರಿಚಿತರು. ಈ 20 ವರ್ಷಗಳಲ್ಲಿ ಹಲವು ಬಾರಿ ನಮ್ಮ ಮತ್ತು ಅವರ ಭೇಟಿ ಆಗಿದೆ. ಅವರು ಒಮ್ಮೆ ಗೌರಿಬಿದನೂರಿನಲ್ಲಿ ಏರ್ಪಡಿಸಿದ್ದ ಪ್ರತಿಭಾ ಪುರಸ್ಕಾರ ಸಮಾರಂಭಕ್ಕೆ ನಾನು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದೇನು. ಆಗ ಅವರ ಸರಳ ಸಜ್ಜನಿಕೆ, ಸಂಘಟನಾಚಾತುರ್ಯವನ್ನು ಗಮನಿಸಿದ್ದೇನೆ. ಇದರ ಜೊತೆಗೆ ಇವರು ಗೌರಿಬಿದನೂರಿನಲ್ಲಿ ಶೋಷಿತರಿಗಾಗಿ ಹಲವು ವರ್ಷಗಳಿಂದ ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ಸಹ ಕೇಳಿ ತಿಳಿದುಕೊಂಡಿದ್ದೇನೆ. ಇಂತಹ ಇವರಿಗೆ ಕರ್ನಾಟಕ ರಾಜ್ಯ ಸರ್ಕಾರವು 2013ರಲ್ಲಿ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದು ಸಂತಸದ ಸಂಗತಿಯೇ ಆಗಿದೆ. ಇದರ ಜೊತೆಗೆ ಇವರ ಶಿಷ್ಯರು ಮತ್ತು ಸಹವರ್ತಿಗಳು ಇವರಿಗೆ ಅಭಿನಂದನಾಗ್ರಂಥವನ್ನು ಸಮರ್ಪಣೆ ಮಾಡಲು ಮುಂದಾಗಿರುವುದು ಶ್ಲಾಘನೀಯವಾದುದಾಗಿದೆ.

ಸಮಾಜದ ಬಗ್ಗೆ ಕಳಕಳಿಯನ್ನು ಹೊಂದಿರುವ ಇವರು ತಮ್ಮ ನಿವೃತ್ತಿಯ ಜೀವನದಲ್ಲೂ ಸದಾ ಕ್ರಿಯಾಶೀಲರಾಗಿದ್ದುಕೊಂಡು ಸಮಾಜದ ಒಳಿತಿಗಾಗಿ ಮಾಡುತ್ತಿರುವ ಕಾರ್ಯಗಳು ಇತರರಿಗೆ ಮಾದರಿಯಾದವುಗಳಾಗಿವೆ. ತಮ್ಮ ಸೇವಾ ತತ್ಪರತೆಯಿಂದ ಇಂದಿನ ಯುವಜನತೆಗೆ ಮಾದರಿಯಾಗಿರುವ ಈ ಮಹನೀಯರಿಗೆ ಮತ್ತಷ್ಟು ಗೌರವ, ಸನ್ಮಾನಗಳು ಸಲ್ಲುವಂತಾಗಲಿ. ಅವರ ಶಿಷ್ಯರು ಮತ್ತು ಸಹವರ್ತಿಗಳು ಕೈಗೊಂಡಿರುವ ಕಾರ್ಯ ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

**(ಡಾ. ಎನ್. ನಾಗಾಂಬಿಕಾ ದೇವಿ, ಭಾ.ಆ.ಸೇ.)**
ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪಂ.ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ



# ಕೆ. ನಾರಾಯಣಸ್ವಾಮಿ ಅಭಿನಂದನಾ ಸಮಿತಿ

ಗೌರವ ಅಧ್ಯಕ್ಷರು

**ಶ್ರೀ ಶ್ರೀ ಶ್ರೀ ವೀರಭದ್ರ ಚೆನ್ನಮಲ್ಲ ಮಹಾಸ್ವಾಮಿಗಳು**

ನಿಡುಮಾಮಿಡಿ ಮಹಾಸಂಸ್ಥಾನ ಮಠ, ಗೂಳೂರು, ಬಾಗೇಪಲ್ಲಿ ತಾಲ್ಲೂಕು
ಚಿಕ್ಕಬಳ್ಳಾಪುರ ಜಿಲ್ಲೆ

| | |
|---|---|
| ಅಧ್ಯಕ್ಷರು | **ಡಾ. ಎಸ್. ಬಿಸಲಯ್ಯ**<br>ಮಾಜಿ ಕುಲಪತಿಗಳು<br>ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು |
| ಕಾರ್ಯಾಧ್ಯಕ್ಷರು | **ಶ್ರೀ ನಾಗರಾಜಪ್ಪ** |
| ಉಪಾಧ್ಯಕ್ಷರು | **ಶ್ರೀ ಎನ್. ಬಾಬಣ್ಣ** |
| ಕಾರ್ಯದರ್ಶಿಗಳು | **ಶ್ರೀ ಎಚ್. ವೇಣುಗೋಪಾಲ್** |
| ಖಜಾಂಚಿ | **ಡಾ. ಚಿನ್ನಕೈವಾರಮಯ್ಯ** |
| ಸದಸ್ಯರು | **ಶ್ರೀ ಸಿ.ಜಿ. ಗಂಗಪ್ಪ**<br>**ಶ್ರೀ ಶ್ರೀರಂಗಚಾರಿ** |
| ಸಂಪಾದಕ ಮಂಡಳಿ | **ಡಾ. ಕೆ.ಪಿ. ನಾರಾಯಣಪ್ಪ**<br>**ಶ್ರೀ ಮ.ನಾ. ಕೃಷ್ಣಮೂರ್ತಿ** |
| ಸಲಹೆಗಾರರು | **ಶ್ರೀ ಕೆ.ಎನ್. ರಾಜಣ್ಣ,** ಶಾಸಕರು<br>**ಪ್ರೊ. ನಗರೆಗೆರೆ ರಮೇಶ್**<br>**ನ್ಯಾ. ವಿ. ಹನುಮಂತಪ್ಪ ರಮಾಪುರ**<br>**ಶ್ರೀಮತಿ ಪ್ರಭಾವತಿ ವೆಂಕಟಶಿವಾರೆಡ್ಡಿ**<br>**ಡಾ. ಕೆ.ಆರ್. ಗಣೇಶ್** |

# ಸಂಪಾದಕೀಯ





ಶ್ರೀಯುತ ಕೆ. ನಾರಾಯಣಸ್ವಾಮಿಯವರ ಸೇವೆಯು ನಾಡು-ನುಡಿಗೆ ಸಾಕಷ್ಟು ಕೊಡುಗೆಗಳನ್ನು ನೀಡಿದೆ. ಪರಿಸರ, ಶಿಕ್ಷಣ, ಜಲಸೇವೆಗಳು, ಭಾಷೆ, ದಲಿತಪರ ಹೋರಾಟಗಳು... ಹೀಗೆ ಆಡುವುಟ್ಟದ ಸೊಪ್ಪಿಲ್ಲ, ನಾರಾಯಣಸ್ವಾಮಿಯವರು ಸೇವೆ ಸಲ್ಲಿಸದ ಕ್ಷೇತ್ರಗಳಿಲ್ಲ ಎಂಬಂತೆ ಅನೇಕ ವಿಚಾರಗಳಲ್ಲಿ ನಾರಾಯಣಸ್ವಾಮಿಯವರ ಕೊಡುಗೆ ಅಪಾರವಾದವು. ಸಾಮಾನ್ಯರಲ್ಲಿ ಸಾಮಾನ್ಯರಂತೆ ಬೆರೆತು ಹೋಗುವ ಕೆ. ನಾರಾಯಣಸ್ವಾಮಿಯವರು ತಮ್ಮ ಅಪಾರ ಶಿಷ್ಯಬಳಗದ ವಲಯದಲ್ಲಿ "ಕೆಎನ್ನೆಸ್" ಎಂದೇ ಚಿರಪರಿಚಿತರು. ಅನ್ಯಾಯದ ವಿರುದ್ಧ ಸಿಡಿದೇಳುವ ಕೆಎನ್ನೆಸ್‌ರವರ ಸಿಟ್ಟು ಸಾತ್ವಿಕ, ಅಷ್ಟೇ ಕಠಿಣ. ನಾಡಿನಲ್ಲಿ ಮತ್ತು ನಾಡಿನಿಂದಾಚೆಗೆ ಅವರ ಅನನ್ಯ ಸೇವೆಗಳು ಹರಡಿಕೊಂಡಿದ್ದು ಸಾಹಿತ್ಯ, ಜಲಸಂರಕ್ಷಣೆ, ಶೈಕ್ಷಣಿಕ, ಬೌದ್ಧಿಕ ವಿಚಾರಗಳು ಸೇರಿದಂತೆ ರೈತರು, ವಿದ್ಯಾರ್ಥಿಗಳು, ಹೋರಾಟಗಾರರು ಪ್ರಗತಿಪರ ಚಿಂತಕರೆಲ್ಲರಿಗೂ ಕೆಎನ್ನೆಸ್ ಮಾರ್ಗದರ್ಶಕರಂತೆ, ಸಮಾಜಮುಖಿ ಸೇವೆಗಳನ್ನು ಸಲ್ಲಿಸಿದ್ದಾರೆ. ಭಾಷೆ, ಗಡಿಗಳ ಹಂಗಿಲ್ಲದೆ ನೂರಾರು ಮೈಲಿ ಪ್ರಯಾಣ ಬೆಳೆಸಿ ತಮ್ಮ ವೈಚಾರಿಕ ಚಿಂತನೆಗಳನ್ನು ಪ್ರಸ್ತುತಪಡಿಸಿದ್ದಾರೆ. ಹಲವಾರು ಮೌಲ್ವಿಕ ಸಾಹಿತ್ಯ ಪುಸ್ತಕಗಳನ್ನು ಕನ್ನಡಕ್ಕೆ ತಂದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಅಲ್ಲದೇ ಲೈಂಗಿಕ ಕಾರ್ಯಕರ್ತರ ನೋವು, ಒಳಬೇಗುದಿಗಳನ್ನು ಸಮಾಜದ ಮುಂದೆ ತೆರೆದಿಡುವ ಪ್ರಯತ್ನದ ಭಾಗವಾಗಿ ಮಲಯಾಳಂನಲ್ಲಿ ಪ್ರಕಟವಾದ ನಳಿನಿಜಮೀಲಾ ಎಂಬ ಲೈಂಗಿಕ ಕಾರ್ಯಕರ್ತೆಯ ಸ್ವಯಂ ಕಥನ "ಸೆಕ್ಸ್‌ವರ್ಕರ್ ಒಬ್ಬಳ ಆತ್ಮ ಕಥನ"ವನ್ನು ಅತ್ಯಂತ ಸರಳವಾಗಿ ಕನ್ನಡಕ್ಕೆ ತಂದಿದ್ದಾರೆ. ಇದು ಅವರ ಉದಾತ್ತ ಹಿರಿಮೆಯನ್ನು ವಿಶಾಲ ಮನೋಭಾವವನ್ನು ತೋರಿಸುತ್ತದೆ.

ಇವರು ನಮ್ಮ ನಡುವೆ ಇರುವ ಒಬ್ಬ ಪ್ರಜ್ಞಾವಂತ, ಕ್ರಿಯಾಶೀಲ ಸಮಾಜ ಚಿಂತಕರು. ಸದಾ ಚಟುವಟಿಕಗಳಿಂದ ಕೂಡಿರುವುದನ್ನೇ ಜೀವಂತಿಕೆ ಎಂದು ನಂಬಿರುವವರು. ಇವರ ಇಂತಹ ಚಿಂತನೆಯ ಫಲವಾಗಿ ಇವರು ನಿತ್ಯ ಒಂದಲ್ಲ ಒಂದು ಚಟುವಟಿಕೆಯಲ್ಲಿ ನಿರತರಾಗಿದ್ದುಕೊಂಡು ಏನಾದರೂ ಒಂದನ್ನು ಮಾಡುತ್ತಾ ಉತ್ತಮ ಸಮಾಜ ನಿರ್ಮಾಣದ ಕನಸು ಕಟ್ಟುತ್ತಿರುತ್ತಾರೆ. ಇಂತಹ ಇವರು ಪ್ರವೃತ್ತಿಯಿಂದ ಹಲವರ ಮೇಲೆ ಗಾಢವಾದ ಪ್ರಭಾವ ಬೀರಿದ್ದಾರೆ. ಹಲವು ಮಂದಿ ಬದುಕು



ಕಟ್ಟಿಕೊಳ್ಳಲು ನೆರವಾಗಿದ್ದಾರೆ. ಸಮಾಜದಲ್ಲಿ ಉತ್ತಮ ಚಿಂತನೆಗಳು ಮೂಡಲು ಕಾರಣರಾಗಿದ್ದಾರೆ. ಹೀಗೆ ನಿರಂತರವಾಗಿ ಚಟುವಟಿಕೆಗಳಲ್ಲಿ ನಿರತರಾಗಿ ಏನಾದರೊಂದನ್ನು ಮಾಡುತ್ತಾ ಸಾಗಿರುವ ಇವರು ಸ್ವಂತಕ್ಕೆ ಏನನ್ನೂ ಬಯಸಿದವರಲ್ಲ. ನಿಷ್ಕಾಮರಾಗಿ ದುಡಿಯುವುದನ್ನೇ ಕಾಯಕ ಮಾಡಿಕೊಂಡಿದ್ದಾರೆ. ಇದೆಲ್ಲವೂ ಉದ್ದೇಶ ರಹಿತವಾಗಿ, ಸಹಜ ಕ್ರಿಯೆ ಎಂಬಂತೆ ನಡೆದು ಹೋಗುತ್ತಿದೆ. ಈ ಮಾತುಗಳಲ್ಲಿ ಲವಲೇಶವೂ ಉತ್ಪ್ರೇಕ್ಷೆಯಿಲ್ಲ. ಇದು ಅವರನ್ನು ಬಲ್ಲ ಎಲ್ಲರಿಗೂ ಗೊತ್ತಿರುವ ಸಂಗತಿ.

ಕೆ. ನಾರಾಯಣಸ್ವಾಮಿಯವರು ಉಪನ್ಯಾಸಕರಾಗಿ, ಪ್ರಿನ್ಸಿಪಾಲರಾಗಿ, ಉಪ ನಿರ್ದೇಶಕರಾಗಿ, ಜಂಟಿ ನಿರ್ದೇಶಕರಾಗಿ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸಿದ್ದಾರೆ. ಇದರ ಜೊತೆಗೆ ದಲಿತ ಸಂಘರ್ಷ ಸಮಿತಿಯ ಸಂಸ್ಥಾಪಕರಲ್ಲಿ ಒಬ್ಬರಾಗಿ 1970ರ ದಶಕದಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಹೋರಾಟದ ಕಾವಿನ ಜೀವಾಳವಾಗಿ ಕೆಎನ್ನೆಸ್ ದುಡಿದದ್ದು ಸರ್ವವಿಧಿತ. ದಲಿತರ ಶೋಷಣೆಯ ವಿರುದ್ಧ, ದೌರ್ಜನ್ಯಗಳ ವಿರುದ್ಧ ನಡೆದ ಚಳವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಅವಿಭಜಿತ ಕೋಲಾರ ಜಿಲ್ಲೆಯಲ್ಲಿ ಹಮ್ಮಿಕೊಂಡ ಹೋರಾಟಗಳು, ಚಳವಳಿಗಳು ಅನೇಕ.

ತಮ್ಮ ಜೀವನಪೂರ್ತಿ ಬುದ್ಧ ಹಾಗೂ ಅಂಬೇಡ್ಕರ್‌ರವರ ವಿಚಾರಧಾರೆಗಳನ್ನು ಪ್ರತಿಪಾದಿಸುತ್ತಲೇ ಬಂದ ಕೆ. ನಾರಾಯಣಸ್ವಾಮಿಯವರ ವ್ಯಕ್ತಿತ್ವವನ್ನು ಬಿಂಬಿಸುವ ಸಲುವಾಗಿ ಕೆ. ನಾರಾಯಣಸ್ವಾಮಿಯವರ ಚಿತ್ರದ ಹಿಂಬದಿಯಲ್ಲಿ ಬುದ್ಧ ಹಾಗೂ ಅಂಬೇಡ್ಕರ್‌ರವರ ಚಿತ್ರಗಳು ಒಡಮೂಡುವಂತೆ ರಾಜ್ಯ ಚಿತ್ರಕಲಾ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಶ್ರೀ ದೇವೇಂದ್ರ ಹುಡಾರವರು ರಚಿಸಿದ ಚುಕ್ಕಿ ಚಿತ್ರವನ್ನು ಈ ಅಭಿನಂದನಾ ಗ್ರಂಥದಲ್ಲಿ ಬಳಸಿಕೊಳ್ಳಲಾಗಿದೆ. ಇದಲ್ಲದೇ ಡಾ. ಎಲ್. ಹನುಮಂತಯ್ಯನವರು ತಮ್ಮ ಲೇಖನದಲ್ಲಿ "ಅಂದು ಕೋಲಾರ ಜಿಲ್ಲೆಯ ಯುವಶಕ್ತಿಯನ್ನು ನಕ್ಸಲ್ ಹೋರಾಟದ ಕಡೆಗೆ ವಾಲದಂತೆ ತಡೆಗೋಡೆಯಂತೆ ಕೆಲಸ ನಿರ್ವಹಿಸಿದವರು ಕೆ. ನಾರಾಯಣಸ್ವಾಮಿ" ಎಂದಿದ್ದಾರೆ. ಶ್ರೀಯುತ ಕೆಎನ್ನೆಸ್ ಅವರ ದಲಿತಪರ, ರೈತಪರ, ವಿದ್ಯಾರ್ಥಿಗಳ ಪರವಾದ ಕಾಳಜಿಗಳನ್ನು ವ್ಯಕ್ತಪಡಿಸಲು ಅನೇಕ ಮಹನೀಯರು ಹಲವಾರು ಲೇಖನಗಳನ್ನು ಕಳುಹಿಸಿರುವುದನ್ನು ಈ ಅಭಿನಂದನಾ ಗ್ರಂಥದಲ್ಲಿ ಕಾಣಬಹುದಾಗಿದೆ. ಅಲ್ಲದೇ ಇವರು ದಲಿತ ಸಾಹಿತಿಯಾಗಿ, ಜಲ ಶಿಕ್ಷಕರಾಗಿ, ಪರಿಸರ ಪ್ರೇಮಿಯಾಗಿ ಹತ್ತು ಹಲವು ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಇವುಗಳ ಜೊತೆ ಕೃಷಿ ಕ್ಷೇತ್ರದಲ್ಲಿನ ತಲ್ಲಣ, ತವಕಗಳ ನಿವಾರಣೆ, ಆಹಾರ ಪದ್ದತಿಗಳಿಂದ ಇಂದಿನ ಸಮಾಜದ ಮೇಲೆ ಉಂಟಾಗುತ್ತಿರುವ ದುಷ್ಪರಿಣಾಮಗಳನ್ನು ಕುರಿತು ಚಿಂತನೆ ನಡೆಸಿ ನಿವಾರಣೆಗೆ ಕಾರ್ಯಕ್ರಮಗಳನ್ನು ರೂಪಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಈ ಗ್ರಂಥದ ಮೊದಲ ಭಾಗದಲ್ಲಿ ಕೆ. ನಾರಾಯಣಸ್ವಾಮಿಯವರ ಶಿಷ್ಯರು, ಸಹೋದ್ಯೋಗಿಗಳು, ಸಹ ಪಾಠಿಗಳು, ಸಾಹಿತಿಗಳು, ದಸಂಸದ ಮುಖಂಡರು, ಒಡನಾಡಿಗಳು, ಅವರ ಸಹೋದರಿಯರು, ವಿಶೇಷವಾಗಿ ಅವರ ಏಕೈಕ ಪುತ್ರಿ

ಬರೆದ ಲೇಖನಗಳು ಇವೆ. ಬಹುತೇಕ ಎಲ್ಲಾ ಲೇಖನಗಳಲ್ಲಿ ಇವರ ಮಾನವೀಯ ಮುಖವನ್ನು ಭಾವುಕತೆಯ ನೆಲೆಯಲ್ಲಿ ಅನಾವರಣಗೊಳಿಸಲಾಗಿದೆ. ಮಗಳ ಲೇಖನ ಮಾತ್ರ 'ಅಪ್ಪನ' ಕೌಟುಂಬಿಕ ಹೊಣೆಯನ್ನು ನೆನಪಿಸುವಂತಿದೆ, ಮಗಳ ಲೇಖನದ ಮೊದಲ ಪ್ಯಾರಾದಲ್ಲಿ 'ಮನೆಗೆ ಮಾರಿ ಊರಿಗೆ ಉಪಕಾರಿ' ಎಂಬ ಗಾದೆಯ ಮಾತು ಉಲ್ಲೇಖಿಸಲಾಗಿದೆ. ಆದರೂ ಇಂಥ ಅಪ್ಪನ ಮಗಳು ಎಂದು ಹೇಳಿಕೊಳ್ಳಲು ನನಗೆ 'ಹೆಮ್ಮೆ' ಎನಿಸುತ್ತದೆ ಎಂದು ಬೀಗುತ್ತಾರೆ.

ಎರಡನೆಯ ಭಾಗ, ಕೆ. ನಾರಾಯಣಸ್ವಾಮಿಯವರ ಅಭಿರುಚಿ, ಆಸಕ್ತಿ ಕ್ಷೇತ್ರಗಳಾದ ಶಿಕ್ಷಣ, ಪರಿಸರ, ದಲಿತ ಪ್ರಜ್ಞೆ, ವೈಚಾರಿಕ ಸಾಹಿತ್ಯ–ಇವುಗಳಿಗೆ ಸಂಬಂಧಿಸಿದ ನಾಡಿನ ಪ್ರಸಿದ್ಧ ಲೇಖಕರ ಬರಹಗಳನ್ನು ಒಳಗೊಂಡಿದೆ. ಮೇಸ್ಟ್ರಿಗೆ ಸಂಬಂಧಿಸಿದ ಕೆಲವು ಅಪರೂಪದ ಭಾವ ಚಿತ್ರಗಳು, ಇವರ ಚಟುವಟಿಕೆಗಳನ್ನು ಕುರಿತು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಗೊಂಡಿರುವ ಕೆಲವು ಮಹತ್ವದ ಲೇಖನಗಳನ್ನು ಬಳಸಿಕೊಳ್ಳಲಾಗಿದೆ. ಪ್ರಶಸ್ತಿ ಫಲಕಗಳು ಮತ್ತು ಪತ್ರಗಳ ಭಾವಚಿತ್ರಗಳು. ಹೀಗೆ ಕೆಎನ್ಎಸ್‌ರವರ ವಿವಿಧ ಮುಖದ ಚಿತ್ರಗಳನ್ನು ಈ ಗ್ರಂಥದಲ್ಲಿ ಸಾಧ್ಯವಾದಷ್ಟು ಪರಿಣಾಮಕಾರಿಯಾಗಿ ಪರಿಚಯ ಮಾಡಿಕೊಡುವ ಪ್ರಯತ್ನವನ್ನು ಮಾಡಲಾಗಿದೆ. ಆದರೂ ಕಾಣದ ಮುಖವೊಂದು ನಮಗೆ ಕಾಣದಂತೆ ಎಲ್ಲೋ ಅಡಗಿರಬಹುದು ಎಂಬ ಅರಿವೂ ನಮಗಿದೆ. ಅದಕ್ಕೆ ನಮಗಿದ್ದ ಹಲವು ಮಿತಿಗಳು ಕಾರಣವೆಂದು ಸಹೃದಯ ಓದುಗರು ಗ್ರಹಿಸಬೇಕೆಂದು ನಮ್ಮ ವಿನಮ್ರ ಮನವಿ.

ಕೆ. ನಾರಾಯಣಸ್ವಾಮಿ ಅವರ ಎಲ್ಲಾ ಕೆಲಸಕಾರ್ಯಗಳನ್ನು ಅವರ ವಿಚಾರ ಧಾರೆಗಳನ್ನು ನೆನೆಯುತ್ತಾ ಅವರು ಸಮಾಜಕ್ಕೆ, ನಾಡಿಗೆ ಸಲ್ಲಿಸಿರುವ ಸೇವೆಗಳನ್ನು ಅಭಿನಂದಿಸುವ ಯತ್ನವಾಗಿ ಶ್ರೀಯುತ ಕೆ.ಎನ್.ಎಸ್. ರವರಿಗೆ ಒಂದು ಅಭಿನಂದನಾ ಗ್ರಂಥವನ್ನು ಸಮರ್ಪಿಸಿ, ಹೊರತರಬೇಕೆಂಬ ಅದಮ್ಯ ಬಯಕೆಯಿಂದ ಒಂದಿಷ್ಟು ಮಂದಿ ಸಮಾನ ಮನಸ್ಕರು ಸೇರಿ ಪ್ರಯತ್ನಗಳನ್ನು ಆರಂಭಿಸಿದಾಗ "ನಾನೇನು ಅಂತಹ ದೊಡ್ಡ ಸಾಧನೆಯನ್ನೇನೂ ಮಾಡಿಲ್ಲವೆಂದು, ನನಗಾಗಿ ಒಂದು ಅಭಿನಂದನಾ ಗ್ರಂಥ ಹೊರತರುವ ಪ್ರಯತ್ನಗಳು ಬೇಡವೇ ಬೇಡ" ಎಂದು ವಿನಮ್ರವಾಗಿ ತಳ್ಳಿಹಾಕಿದವರು ಕೆ.ಎನ್.ಎಸ್. ಆದರೂ ಪಟ್ಟುಬಿಡದ ನಾವು ನಿಡುಮಾಮಿಡಿ ಪೀಠಾಧ್ಯಕ್ಷರಾದ ಶ್ರೀ ಶ್ರೀ ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿಗಳ ನೇತೃತ್ವದಲ್ಲಿ ಅಭಿನಂದನಾ ಸಮಿತಿಯನ್ನು ರಚಿಸಿಕೊಂಡು ಕೆ.ಎನ್.ಎಸ್.ರವರನ್ನು ಒಪ್ಪಿಸಿ ಈ ಕಾರ್ಯಕ್ಕೆ ಅಣಿಯಾದೆವು. ಕೆ.ಎನ್.ಎಸ್.ರವರ ಸಮಕಾಲಿನರನ್ನು ಅವರೊಂದಿಗೆ ಆಪ್ತ ಒಡನಾಟವನ್ನು ಹೊಂದಿದ್ದ ಮಹನೀಯರನ್ನು ಸಂಪರ್ಕಿಸಿ ಕೆ.ಎನ್.ಎಸ್.ರವರ ಕೆಲಸ ಕಾರ್ಯಗಳ ಕುರಿತಾಗಿ ಅವರೊಂದಿಗಿನ ಒಡನಾಟದ ಕುರಿತಾಗಿ ಲೇಖನಗಳನ್ನು ಬರೆದುಕೊಡಬೇಕೆಂದು ಕೇಳಿಕೊಂಡಾಗ ಅಭೂತಪೂರ್ವ ಪ್ರತಿಕ್ರಿಯೆ ವ್ಯಕ್ತವಾಗಿದ್ದು ಕಂಡು ಮೂಕವಿಸ್ಮಿತರಾಗುವ ಸರದಿ ನಮ್ಮದಾಗಿತ್ತು. ಅಭಿನಂದನಾ ಗ್ರಂಥಕ್ಕಾಗಿ



ಹಲವುಬಂದ ಅನೇಕ ಲೇಖನಗಳನ್ನು ಕ್ರೋಢೀಕರಿಸಿ, ಅವುಗಳಲ್ಲಿ ಮೌಲ್ಯಯುತವಾದ ಲೇಖನಗಳನ್ನು ಆಯ್ದು ಈ ಅಭಿನಂದನಾ ಗ್ರಂಥದಲ್ಲಿ ಪ್ರಕಟಿಸಲಾಗಿದೆ. ಕೆ.ಎನ್.ಎಸ್.ರವರ ಕುರಿತಾದ ಅತಿಯಾದ ಅಭಿಮಾನದಿಂದಾಗಿ, ಅತ್ಯಂತ ಎಚ್ಚರದಿಂದ ಹೊರತರಲಾಗುತ್ತಿರುವ ಈ ಗ್ರಂಥವನ್ನು ಕೆ.ಎನ್.ಎಸ್. ಅಭಿಮಾನಿಗಳು ಪ್ರೀತಿಯಿಂದ ಸ್ವೀಕರಿಸುವರೆಂದು ಆಶಿಸುತ್ತೇವೆ.

ಈ ಅಭಿನಂದನಾ ಗ್ರಂಥಕ್ಕೆ ಅನೇಕ ಮಹನೀಯರು ಅನೇಕ ವಿಧದಲ್ಲಿ ನೆರವಾಗಿದ್ದಾರೆ. ಅದರಲ್ಲಿ ಮುಖ್ಯವಾಗಿ ಈ ಗ್ರಂಥಕ್ಕೆ ಶ್ರೀ ಕೆ. ನಾರಾಯಣಸ್ವಾಮಿಯವರ ಚುಕ್ಕಿಚಿತ್ರ ರಚಿಸಿಕೊಟ್ಟ ಕರ್ನಾಟಕ ಚಿತ್ರಕಲಾ ಅಕಾಡೆಮಿಯ ಪ್ರಶಸ್ತಿ ಪುರಸ್ಕೃತ ಕಲಾವಿದ ಶ್ರೀಯುತ ದೇವೇಂದ್ರ ಹುಡಾರವರಿಗೆ, ಒಳಪುಟಗಳಲ್ಲಿನ ಕೆ.ಎನ್.ಎಸ್.ರವರ ಹಿಂದಿನ ಮತ್ತು ಇಂದಿನ ರೇಖಾಚಿತ್ರಗಳನ್ನು ರಚಿಸಿಕೊಟ್ಟ ಕಲಾವಿದ ನಾ. ರೇವನ್‌ರವರಿಗೆ, ಈ ಗ್ರಂಥದ ಅಕ್ಷರ ವಿನ್ಯಾಸ ಮತ್ತು ಮುದ್ರಣವನ್ನು ಅಂದವಾಗಿ ಮಾಡಿಕೊಟ್ಟಂತಹ ಉಷಾ ಗ್ರಾಫಿಕ್ಸ್ ಸಂಸ್ಥೆಯ ಜಿ.ವಿ. ಧನಂಜಯ ಇವರಿಗೆ, ಕೆ. ನಾರಾಯಣಸ್ವಾಮಿಯವರ ಅಭಿನಂದನಾ ಸಮಿತಿಯ ಆಗಿಂದಾಗ್ಗೆ ಮಾರ್ಗದರ್ಶನವನ್ನು ನೀಡಿದ್ದರ ಜೊತೆಗೆ ಗ್ರಂಥಕ್ಕೆ ನಲ್ವರಿಕೆಯನ್ನು ನೀಡಿ ಹರಸಿದ ಗೌರವಾಧ್ಯಕ್ಷರಾದ ನಿಡುಮಾಮಿಡಿ ಮಹಾ ಸಂಸ್ಥಾನದ ಶ್ರೀ ಶ್ರೀ ಶ್ರೀ ವೀರಭದ್ರಚನ್ನಮಲ್ಲ ದೇಶೀಕೇಂದ್ರ ಮಹಾಸ್ವಾಮಿಗಳು ಹಾಗೂ ಗ್ರಂಥಕ್ಕೆ ಮೌಲಿಕ ಮುನ್ನುಡಿ ಬರೆದುಕೊಟ್ಟು ಕೃತಿಯ ಮೌಲ್ಯ ಹೆಚ್ಚಿಸಿದ ಸಮಿತಿಯ ಅಧ್ಯಕ್ಷರಾದ ನಿವೃತ್ತ ಕುಲಪತಿ ಡಾ. ಎಸ್. ಬಿಸಲಯ್ಯರವರಿಗೂ, ಅಖಿಲ ಕರ್ನಾಟಕ ವಾಲ್ಮೀಕಿ ನಾಯಕ ಮಹಾಸಭಾದ ರಾಜ್ಯಾಧ್ಯಕ್ಷರಾದ ಶ್ರೀಯುತ ಎಂ. ನರಸಿಂಹಯ್ಯನವರಿಗೆ, ಈ ಪ್ರಯತ್ನಕ್ಕೆ ಬೆಂಬಲವಾಗಿ ನಿಂತು ಹಲವು ರೀತಿಯಲ್ಲಿ ಸಹಕರಿಸಿದ ವಾಣಿಜ್ಯ ತೆರಿಗೆ ಇಲಾಖೆಯ ಜಂಟಿ ಆಯುಕ್ತ ಶ್ರೀ ನಾಗರಾಜಪ್ಪರವರಿಗೆ, ವಾಣಿಜ್ಯ ತೆರಿಗೆ ಇಲಾಖೆಯ ಸಹಾಯಕ ಆಯುಕ್ತ ಶ್ರೀ ಎಚ್.ವೇಣುಗೋಪಾಲ್‌ರವರಿಗೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಪರ ಆಯುಕ್ತ (ನಿವೃತ್ತ) ಶ್ರೀ ಬಾಬಣ್ಣನವರಿಗೆ, ನಾಯಕ ಸಮುದಾಯದ ಮುಖಂಡರಾದ ಶ್ರೀ ಅಶೋಕ್‌ಕುಮಾರ್‌ರವರಿಗೆ, ಶ್ರೀ ಕರೇತಿಮ್ಮಯ್ಯನವರಿಗೆ, ಶ್ರೀ ವೆಂಕಟೇಶ್, ಶ್ರೀ ಬೈಚಾಪುರ ಗಂಗಾಧರ್, ಶ್ರೀ ಬಿ.ಎನ್. ರಂಗನಾಥ್, ಶ್ರೀ ಎನ್. ಗಂಗಾಧರ್‌ರವರಿಗೆ ಮತ್ತು ದಸಂಸದ ರಾಜ್ಯ ಸಂಚಾಲಕ ಶ್ರೀ ಎನ್. ವೆಂಕಟೇಶ್, ಜಿಲ್ಲಾ ಸಂಚಾಲಕ ಶ್ರೀ ಸಿ.ಜಿ. ಗಂಗಪ್ಪ, ತಾಲ್ಲೂಕು ಸಂಚಾಲಕ ಶ್ರೀ ಪಿ. ನರಸಿಂಹಮೂರ್ತಿ ಮತ್ತು ದ.ಸಂ.ಸ. ಗೆಳೆಯರಿಗೆ, ಲೇಖನಗಳನ್ನು ನೀಡಿ ಸಹಕರಿಸಿದ ಎಲ್ಲಾ ಲೇಖಕರಿಗೂ ನಾವು ಅಭಾರಿಯಾಗಿದ್ದೇವೆ.

**– ಡಾ. ಕೆ.ಪಿ. ನಾರಾಯಣಪ್ಪ**
**ಮ.ನಾ. ಕೃಷ್ಣಮೂರ್ತಿ**
ಸಂಪಾದಕರು





# ಮುನ್ನುಡಿ



ನನಗೆ ಪ್ರೊ. ಕೆ. ನಾರಾಯಣಸ್ವಾಮಿ (ಪ್ರೀತಿಯಿಂದ ಕೆ.ಎನ್.ಎಸ್. ಎಂದೇ ಕರೆಯಲ್ಪಡುವ)ರವರು 1957ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಮಹಾರಾಜ ಕಾಲೇಜಿನಲ್ಲಿ ಪರಿಚಯ. ಅಂದು, K.N.S. ಅವರು B.A. (Hons) ಕನ್ನಡದ ವಿದ್ಯಾರ್ಥಿ. ನಾನು B.A. (Hons) Economicsನ ವಿದ್ಯಾರ್ಥಿ ನಾವು ಆಯ್ದುಕೊಂಡ ವಿಷಯಗಳು ಬೇರೆಯಾದರೂ, Honours ವಿದ್ಯಾರ್ಥಿಗಳೆಲ್ಲ ಪೂರ್ವಭಾವಿಯಾಗಿ ಕೆಲವು ವಿಷಯಗಳನ್ನು ಒಂದೇ ತರಗತಿಯಲ್ಲಿ ಕಲಿಯುವ ಅವಕಾಶ. ಆಗಲೇ ಪೂರ್ಣಚಂದ್ರ ತೇಜಸ್ವಿಯವರು ಕೂಡ ಅದೇ ತರಗತಿಗೆ ಬಂದು ಕಲಿತವರು. ಇದರ ಜೊತೆಗೆ K.N.S. ಅವರು ಮತ್ತು ನಾನು ಸಮಾಜದ ವಿದ್ಯಾರ್ಥಿ ಸಂಘದ ಕಾರ್ಯ ಚಟುವಟಿಕೆಗಳಲ್ಲಿ ವರ್ಷಕ್ಕೆ ಒಮ್ಮೆಯಾದರೂ ಭೇಟಿಯಾಗುತ್ತಿದ್ದೆವು. ಅಂದಿನ ಕಾಲದಲ್ಲಿ ನಾನು ಕಂಡಂತಹ K.N.S. ಅವರು ಸಂಭಾವಿತ, ಮೌನಿ, ತಮ್ಮಷ್ಟಕ್ಕೆ ತಾವೆ, ಮುನ್ನುಗ್ಗುವ ಸ್ವಭಾವವಿಲ್ಲ, ಆಕ್ರಮಣ ಶೀಲವಾದ ಗುಣ ಇಲ್ಲವೇ ಇಲ್ಲ. ಅಂದರೆ, ಇಂತಹ ಮೌನಸಾಧಕ ತಮ್ಮ ಜೀವನದ ಕನಸುಗಳನ್ನು ಎಷ್ಟೊಂದು ಬಚ್ಚಿಟ್ಟುಕೊಂಡಿದ್ದರೂ, ಆ ಕನಸುಗಳಲ್ಲೇ ರೂಪ ಪಡೆದಾಗ ಈ ಸಮಾಜಕ್ಕೆ ಈ ಮೌನ ಸಾಧಕರಾಗಿ K.N.S. ಅವರ ಲಭ್ಯವಾಯಿತು. ಇಂದು, ಅವರ ಹಿತೈಷಿಗಳ, ಸ್ನೇಹಿತರ, ಬಂಧುಗಳ ಮತ್ತು ಹಿಂದಿನ ವಿದ್ಯಾರ್ಥಿಗಳ ಲೇಖನಗಳನ್ನು "ಮೌನ ಸಾಧಕ" ಅಭಿನಂದನಾ ಗ್ರಂಥದಲ್ಲಿ ಓದಿದಾಗ ಅವರ ವ್ಯಕ್ತಿತ್ವದ ಪರಿಚಯವಾಯಿತೆನ್ನಬಹುದು. ಆದರೂ, ಅವರು ಕ್ರಮಿಸಿದ ಹಾದಿ ಮತ್ತು ಕಾರ್ಯ ಚಟುವಟಿಕೆಗಳ ಪಟ್ಟಿಯನ್ನು ನೋಡಿದಾಗ, K.N.S. ಅವರು ಅತಿ ಎತ್ತರದಲ್ಲಿ ನಿಲ್ಲುತ್ತಾರೆ. ಅದೇ ಮನಸ್ಸಿಗೆ ಮುದವನ್ನು ಕೊಡುತ್ತದೆ.



K.N.S. ಅವರನ್ನು ಬಣ್ಣಿಸುವ ಆಯಾಮಗಳು ಹತ್ತು ಮತ್ತು ಹಲವಾರು; ಶಿಕ್ಷಣ ತಜ್ಞ, ಒಳ್ಳೆಯ ಮೇಷ್ಟು, ಶಿಕ್ಷಣ ಕ್ಷೇತ್ರದಲ್ಲಿ ಒಳ್ಳೆಯ ಆಡಳಿತಗಾರ, ವ್ಯಕ್ತಿಗತವಾದ ಅಥವಾ ಸಮಾಜದ ಸಮಸ್ಯೆಗಳಿಗೆ ಸ್ಪಂದಿಸುವ ವ್ಯಕ್ತಿತ್ವ, ಶೋಷಿತ ಸಮುದಾಯದಲ್ಲಿ ತಮ್ಮನ್ನು ಗುರುತಿಸಿಕೊಂಡು ಅವರ ಏಳ್ಗೆಗಾಗಿ ದುಡಿದ ಮಹಾನ್ ಚೇತನ, ದಲಿತ ಸಂಘರ್ಷ ಸಮಿತಿಯ ಪ್ರೇರಕ ಶಕ್ತಿ, ಬಾಪು, ಬುದ್ಧ ಮತ್ತು ಅಂಬೇಡ್ಕರ್‌ರವರ ತತ್ವಧಾರೆಗಳ ಪ್ರತಿಪಾದಕರು, ಬಡವರ ಆರ್ಥಿಕ ಸಬಲೀಕರಣಕ್ಕೆ ಪ್ರಯತ್ನ, ಪ್ರತಿಭಾ ಪುರಸ್ಕಾರದ ಮೂಲಕ ವಿದ್ಯಾರ್ಥಿಗಳು ಮತ್ತು ಅವರ ತಂದೆ ತಾಯಂದಿರು ಹೆಮ್ಮೆ ಪಡುವಂತೆ ಮಾಡಿದ ಸಾಧಕ, ಪರಿಸರ ರಕ್ಷಣೆ ಬಗ್ಗೆ ಕಾಳಜಿ, ತಮ್ಮ ವಿದ್ಯಾರ್ಥಿಗಳ ಮೂಲಕ ಗುಡಿಬಂಡೆ ಮತ್ತು ಬಾಗೇಪಲ್ಲಿ ತಾಲ್ಲೂಕಗಳಲ್ಲಿ ಫ್ಲೋರೋಸಿಸ್‌ನ ಹಾವಳಿ ಕಡಿಮೆ ಮಾಡಿದ ರುವಾರಿ, ಜಲಶಿಕ್ಷಕ, ಅನ್ಯಾಯದ ವಿರುದ್ಧ ಸಿಡಿದೇಳುವ ವ್ಯಕ್ತಿತ್ವ, ಸಾಮಾನ್ಯರಲ್ಲಿ ಸಾಮಾನ್ಯರಂತೆ ಬೆರೆಯುವ ಗುಣ, ಕ್ರಿಯಾಶೀಲ ಸಮಾಜದ ಚಿಂತಕ, ನಿಷ್ಠೆಯಿಂದ ದುಡಿಯುವ ವ್ಯಕ್ತಿತ್ವ, ಕನ್ನಡ ಸಾಹಿತ್ಯಕ್ಕೆ ತಮ್ಮದೇ ಕಿರು ಕಾಣಿಕೆ ಕೊಟ್ಟ ವ್ಯಕ್ತಿ, ಸರಳತೆಗೆ ಮತ್ತೊಂದು ಹೆಸರು, ಹೊಸ ಪ್ರಯೋಗಗಳ ರುವಾರಿ - ಇನ್ನೇನು ಬೇಕು ಮೌನ ಸಾಧಕರೆಂದು ಕರೆಸಿಕೊಳ್ಳಲು ಮತ್ತು KNS ಕಿರಿಯರಿಗೆ ಮಾತ್ರವಲ್ಲ, ಹಿರಿಯರಿಗೂ ಕೂಡ ಮಾದರಿಯಾಗಿ ನಿಲ್ಲಬಲ್ಲ ವ್ಯಕ್ತಿ.

ಅಭಿನಂದನಾ ಗ್ರಂಥ "ಮೌನ ಸಾಧಕ" KNS ಅವರಿಗೆ ಹೇಳಿ ಮಾಡಿಸಿದಂತಹ ಗ್ರಂಥವಾಗಿ ಹೊರಹೊಮ್ಮಿದೆ. ಈ ಗ್ರಂಥದ ಲೇಖಕರು ಮತ್ತು ಇದರ ಸಂಪಾದಕೀಯ ಹೊರೆ ಹೊತ್ತ ಡಾ. ಕೆ.ಪಿ. ನಾರಾಯಣಪ್ಪ ಮತ್ತು ಮ.ನಾ. ಕೃಷ್ಣಮೂರ್ತಿಯವರು ಅಭಿನಂದನಾರ್ಹರು. ಇದಕ್ಕೆ ನೆರವಾಗಿ ನಿಂತ ಸಮಿತಿಯ ಸದಸ್ಯರೆಲ್ಲರಿಗೂ ನನ್ನ ಅಭಿನಂದನೆಗಳು.

ಡಾ. ಎಲ್. ಹನುಮಂತಯ್ಯನವರು KNS ಅವರನ್ನು ಕುರಿತು ಬರೆಯುವುದು ಪುಣ್ಯದ ಕೆಲಸವೆಂದು ಭಾವಿಸುತ್ತಾರೆ. ಅದೇ ರೀತಿ ಈ ಗ್ರಂಥಕ್ಕೆ ಮುನ್ನುಡಿ ಬರೆಯಲು ಸಿಕ್ಕಿರುವ ಅವಕಾಶವನ್ನು ನನ್ನ ಸೌಭಾಗ್ಯವೆಂದು ತಿಳಿಯುತ್ತೇನೆ. ಈ ಅಭಿನಂದನಾ ಗೌರವ ಅಧ್ಯಕ್ಷರಾದ ಶ್ರೀ ವೀರಭದ್ರ ಚೆನ್ನಮಲ್ಲ ಮಹಾಸ್ವಾಮಿಗಳಿಗೆ ನನ್ನ ನಮನ ಮತ್ತು ಅವರ ಜೊತೆಯಲ್ಲಿ ನನ್ನನ್ನು ಅಧ್ಯಕ್ಷನಾಗಿ ಒಪ್ಪಿರುವ ತಮಗೆಲ್ಲ ನಾನು ಋಣಿ.

**– ಡಾ. ಎಸ್. ಬಿಸಲಯ್ಯ**

ನಿವೃತ್ತ ಕುಲಪತಿ, ಕೃಷಿ ವಿಶ್ವವಿದ್ಯಾನಿಲಯ

ಬೆಂಗಳೂರು - 560 065



# ಸ್ವಗತ

– ಕೆ. ನಾರಾಯಣಸ್ವಾಮಿ



ನಾನು ಇಲ್ಲಿಯವರೆಗೆ ಅನೇಕ ಅಭಿನಂದನಾ ಗ್ರಂಥಗಳನ್ನು ಓದಿರುವೆ. ಅಂತಹ ಸಾಧಕರನ್ನೂ ಅರಿತಿರುವೆ. ಅರ್ಥ ಮಾಡಿಕೊಂಡಿರುವೆ. ಅವರೆಲ್ಲ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಅಸಾಧಾರಣವಾದುದನ್ನು ಸಾಧಿಸಿದವರು. ಅವರು ಪ್ರತಿಭಾವಂತರಾಗಿದ್ದು ವಿಶೇಷ ಶಕ್ತಿ, ಸಾಮರ್ಥ್ಯವನ್ನು ಪ್ರದರ್ಶಿಸಿದವರು. ಗಣನೀಯ ಸೇವೆ ಸಲ್ಲಿಸಿದವರು. ಮರೆಯಲಾಗದ ಸಾಧಕರು.

ಅಂತಹವರಿಗೆಲ್ಲಾ ಹೋಲಿಸಿಕೊಂಡಾಗ ನಾನು ಸಾಮಾನ್ಯ ವ್ಯಕ್ತಿ ಅನ್ನಿಸುತ್ತದೆ. ನನ್ನ ಆತ್ಮೀಯರು, ಹಿತೈಷಿಗಳು ನನ್ನಲ್ಲಿ ಏನೋ ವಿಶೇಷ ಶಕ್ತಿಯಿದೆ ಎಂದು ಭಾವಿಸಿ, 7-8 ವರ್ಷಗಳಿಂದ ಅಭಿನಂದನಾ ಗ್ರಂಥವನ್ನು ಪ್ರಕಟಿಸುವ ಇರಾದೆ ವ್ಯಕ್ತಪಡಿಸಿದಾಗಲೆಲ್ಲಾ ನಿರಾಕರಿಸುತ್ತಲೂ, ಮುಂದೂಡುತ್ತಲೂ ಬಂದೆ. ದೀರ್ಘಕಾಲ ಹೀಗೆ ಕಾಯಿಸುವುದು ಸೂಕ್ತವೆನಿಸಲಿಲ್ಲ. ಕೊನೆಗೆ ಅವರೆಲ್ಲರ ಪ್ರೀತಿಗೆ, ಅಭಿಮಾನಕ್ಕೆ, ವಿಶ್ವಾಸಕ್ಕೆ ಮಣಿಯಲೇ ಬೇಕಾಯಿತು.

ನನ್ನ ಜೀವನದ ಯಾನದಲ್ಲಿ ನಾನು ಮಾಡಿದ ಕಾರ್ಯಗಳಿಗೆ ಪ್ರೇರಣೆಯಾಗಿರುವವರು ಹಲವು ಮಂದಿ. ಆ ಮಹನೀಯರ ಪ್ರಭಾವ, ಪ್ರೇರಣೆಗಳಿಂದ ನಾನು ಸಾಮಾಜಿಕ ಪ್ರಜ್ಞೆ, ದೇಶ ಪ್ರೇಮ, ದಲಿತ ಪ್ರಜ್ಞೆ, ಪರಿಸರ ಪ್ರೇಮವನ್ನು ಬೆಳೆಸಿಕೊಂಡು ಸರಳವಾಗಿ ಜೀವಿಸುತ್ತಾ ಪುಸ್ತಕ ಪ್ರೇಮಿಯಾಗುವಂತಾಯಿತು. ಮೊದಲನೆಯದಾಗಿ ನನ್ನ ತಂದೆ ಕಂಬಯ್ಯ, ತಾಯಿ ತಿಮ್ಮಕ್ಕರಿಗೆ ಋಣಿಯಾಗಿದ್ದೇನೆ. ನನ್ನ ತಂದೆ ಪ್ರಾಥಮಿಕ ಶಾಲೆಯ ಶಿಕ್ಷಕರು. ಶಿಸ್ತು ಬದ್ಧ ವ್ಯಕ್ತಿ. ಭಯಸ್ಥರು. ಸಮಯ ಪ್ರಜ್ಞೆಯಿದ್ದ ಮೇಷ್ಟ್ರು. ಅವರಲ್ಲಿನ ಈ ಗುಣ



ರಕ್ತಗತವಾಗಿ ನನಗೆ ಬಂದಿತ್ತು. ಇನ್ನು ತಾಯಿ ತಿಮ್ಮಕ್ಕ ಸಾಮಾನ್ಯ ಗೃಹಿಣಿ. ಅಪ್ಪನ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆದು ಸಹಧರ್ಮಿಣಿ ಎನ್ನಿಸಿಕೊಂಡಿದ್ದರು. ನಮ್ಮನ್ನೆಲ್ಲಾ ವಿನಯವಂತರನ್ನಾಗಿ ಬೆಳೆಸಿದರು. ಬಾಲ್ಯದಲ್ಲಿ ಇವರ ಪ್ರಭಾವಕ್ಕೆ ಒಳಗಾಗಿದ್ದ ನಾನು ಬೆಳೆದಂತೆ ಚಿಕ್ಕಪ್ಪ ಕೆ.ಎಚ್. ಕದಿರಪ್ಪನವರ ಪ್ರಭಾವಕ್ಕೆ ಒಳಗಾದೆನು. ನಾನು ಮಾಧ್ಯಮಿಕ ಶಾಲೆಯಲ್ಲಿ ಅವರ ಶಿಷ್ಯ. ಅವರು ಶಿಸ್ತು, ಸಂಯಮ, ವೃತ್ತಿಯಲ್ಲಿನ ಬದ್ಧತೆಗೆ ಹೊಂದಿದ್ದರು. ಇದರಿಂದಾಗಿಯೇ ಹೊಸೂರು ಹೋಬಳಿಯಲ್ಲಿ ಪ್ರಭಾವಿ ಶಿಕ್ಷಕರಾಗಿದ್ದರು (ಮಾಧ್ಯಮಿಕ ಶಾಲೆ). ಇಂಗ್ಲೀಷ್‌ನ ವ್ಯಾಕರಣದಲ್ಲಿ ಅವರಿಗೆ ಒಳ್ಳೆಯ ಪ್ರಭುತ್ವವಿತ್ತು. ನಾನು ನನ್ನ ಎಲ್ಲಾ ಭಾವನೆಗಳನ್ನು ಇವರೊಂದಿಗೆ ಮುಕ್ತವಾಗಿ ಹಂಚಿಕೊಳ್ಳುತ್ತಿದ್ದೆ. ತಂದೆಯವರಿಗಿಂತಲೂ ಹೆಚ್ಚಾಗಿ ನಾನು ಇವರೊಂದಿಗೆ ಆತ್ಮೀಯತೆ ಹೊಂದಿದ್ದೆ. ಇದಕ್ಕೆ ಅವರು ನನ್ನ ಮೇಲೆ ಬೀರಿದ್ದ ಪ್ರಭಾವವೇ ಕಾರಣ. ಇವರ ಹಾಗೆ ನನ್ನ ಮೇಲೆ ಗಾಢವಾದ ಪ್ರಭಾವ ಬೀರಿದ್ದವರು ನನ್ನ ಅಕ್ಕ ಕೆ. ಅಶ್ವತ್ಥಮ್ಮ. ಇವರೂ ಸಹ ಶಿಕ್ಷಕರು. ಇವರು ತಮ್ಮಗಳ ವೃತ್ತಿಯಲ್ಲಿ ಗಳಿಸಿದ್ದ ಯಶಸ್ಸನ್ನು ಕಂಡು ನಾನೂ ಅವರಂತೆ ಆಗಬೇಕೆಂದು ಬಯಸಿದೆನು.

ಶಿಕ್ಷಕರ ಕುಟುಂಬದಿಂದ ಬಂದ ನಾನು ಮುಂದೆ ಶಿಕ್ಷಕನಾಗಿ ಸಮಾಜದಲ್ಲಿ ಹೆಸರು ಗಳಿಸಬೇಕೆಂದು ಬಾಲ್ಯದಲ್ಲೇ ನಿರ್ಧರಿಸಿದೆನು. ಇದಕ್ಕೆ ನೀರೆರೆದು ಪೋಷಿಸಿದವರು ನನ್ನ ಗುರುಗಳಾದ ಹೊಸೂರಿನ ಸು. ವೆಂಕಟಾಚಲಯ್ಯರವರು. ಅವರು ನನ್ನ ಮೇಲೆ ಬೀರಿದ ಪ್ರಭಾವ ಮರೆಯಲಾಗದು. ಇವರು ನಮ್ಮ ಊರಿನ ಮಾಧ್ಯಮಿಕ ಶಾಲಾ ಶಿಕ್ಷಕರಾಗಿದ್ದರು. ಆಗ ಅವರು ಹಿಂದಿ, ಇಂಗ್ಲೀಷ್, ತೆಲುಗು, ಕನ್ನಡ ಭಾಷೆಗಳಲ್ಲಿ ವಿದ್ವಾಂಸರಾಗಿದ್ದರು. ಹಿಂದಿ ಭಾಷೆಯಿಂದ ಜೀವಾತ್ಮ, ಆಸ್ತಿಕವಾದ, ಯೌವ್ವನದ ರಹಸ್ಯ ಇತ್ಯಾದಿ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದರು. ಅವರ ಮನೆ ಪುಸ್ತಕದ ಭಂಡಾರವೂ ಆಗಿದ್ದಿತು. ಹಿಂದಿ, ತೆಲುಗು, ಕನ್ನಡ ಭಾಷೆಯಲ್ಲಿನ ಅನೇಕ ಪುಸ್ತಕಗಳನ್ನು ಸಂಗ್ರಹಿಸಿದ್ದರು. ಅನುವಾದಿಸುವ, ಪುಸ್ತಕ ಸಂಗ್ರಹಿಸುವ, ಓದುವ ಚಟಕ್ಕೆ ಅಂದೇ ನನಗೆ ನಾಂದಿ ಬಿದ್ದಿತು ಎನ್ನಬಹುದು. ಅವರಂತೆ ನಾನು ಏಕಾಗಬಾರದು ಅನ್ನಿಸಿತು. ಜೊತೆಗೆ ನನ್ನ ಬಾಲ್ಯ ಸ್ನೇಹಿತ ಜಿ.ಎಸ್. ಬಲರಾಮ ಗುಪ್ತ ಸಹ ಅವರ ಪ್ರಭಾವಕ್ಕೆ ಸಿಕ್ಕಿ ಇಬ್ಬರೂ ಸಮಾನ ಮನಸ್ಕರಾದೆವು. ಕನ್ನಡ ಭಾಷೆಯಲ್ಲಿ ಬರೆಯುವ, ಓದುವ ಹವ್ಯಾಸ ಬೆಳೆಸಿಕೊಂಡೆವು.

ಬಲರಾಮ ಗುಪ್ತ ಆಗಲೇ ಕನ್ನಡದಲ್ಲಿ ಪದ್ಯಗಳನ್ನು ರಚಿಸುತ್ತಿದ್ದರು. ನಾವುಗಳು ಇಂಟರ್ ಮಿಡಿಯೆಟ್‌ನಲ್ಲಿ ಓದುವಾಗ ತೇರ್ಗಡೆಯಾಗದೆ, ಮನೆಯಲ್ಲೇ ನಿಂತಾಗ ಕನ್ನಡದಲ್ಲಿ ಹಸ್ತಪ್ರತಿ ಪತ್ರಿಕೆಯನ್ನು ತರಲು ನಿರ್ಧರಿಸಿ ಲೇಖನಗಳನ್ನು ಬರೆದೆವು. ಹಿಂದಿಯ ಲೇಖನಗಳನ್ನು ಅನುವಾದಿಸಿ ಅದರಲ್ಲಿ ಪ್ರಕಟಿಸಿದೆವು. ಹೊಸೂರಿನಲ್ಲಿ



ವಾಚನಾಲಯವಿದ್ದು, ಇದನ್ನು ಅದರಲ್ಲಿ ಇಟ್ಟೆವು. ಒಳ್ಳೆಯ ಉತ್ತೇಜನ, ಪ್ರೇರಣೆ ಸಿಕ್ಕಿತು. ಇದು ನಮ್ಮ ಬರವಣಿಗೆಗೆ ತಳಹದಿ ಒದಗಿಸಿತು.

ನಮ್ಮ ಮೇಲೆ ಪ್ರಭಾವ ಬೀರಿದ ಸು. ವೆಂಕಟಾಚಲಯ್ಯ ಅವರ ಗೃಹವು ಉಚಿತ ಟ್ಯೂಷನ್ ಕೇಂದ್ರವಾಗಿತ್ತು. ಅವರು ನಮಗೆ ಉಚಿತವಾಗಿ ಪಾಠ ಹೇಳುವುದರ ಜೊತೆಗೆ, ನೈತಿಕ ಮೌಲ್ಯಗಳನ್ನು ಬೋಧಿಸುತ್ತಿದ್ದರು. ಗಾಂಧಿವಾದಿಯಾಗಿದ್ದ ಅವರು ನಮಗೆ ಮನೆಯ ಪಾಠದ ಸಮಯದಲ್ಲಿ ಅಥವಾ ಶಾಲೆಯ ತರಗತಿಯಲ್ಲಿ ಸ್ವಾತಂತ್ರ್ಯ ಚಳವಳಿಯ ಬಗ್ಗೆ ಹೇಳುತ್ತಾ ಆಸಕ್ತಿ ಮೂಡಿಸುತ್ತಿದ್ದರು. ಗಾಂಧಿಯಿಂದ ಪ್ರಭಾವಿತರಾಗಿದ್ದ ಅವರು ಖಾದಿ ಬಟ್ಟೆ ಧರಿಸುತ್ತಿದ್ದರು; ಗೀತಾಧ್ಯಯನ ಪ್ರತಿದಿನ ಮಾಡುತ್ತಿದ್ದರು. ವಿದ್ಯಾರ್ಥಿಗಳಿಗೂ ಬೋಧಿಸಿ, ಪಠಣ ಮಾಡಿಸುತ್ತಿದ್ದರು. ಆಧ್ಯಾತ್ಮ ಜೀವಿಗಳಾಗಿದ್ದ ಅವರ ಪ್ರಭಾವಕ್ಕೆ ಹಲವು ಮಂದಿ ನಮ್ಮ ಹಾಗೆ ಒಳಗಾಗಿದ್ದರು. ನಮ್ಮ ತಂದೆ, ಮಾವನವರೂ ಸಹ ಅವರ ಪ್ರಭಾವಕ್ಕೆ ಒಳಗಾಗಿದ್ದರು.

ನಾನು, ಬಲರಾಮ ಗುಪ್ತ, ಹೆಚ್. ನರಸಪ್ಪ, ಎಸ್. ನಾಗಪ್ಪ, ರಾಜಣ್ಣ ನಿತ್ಯ ಅವರ ಮನೆಗೆ ಭೇಟಿ ನೀಡುತ್ತಿದ್ದೆವು. ಒಂದಿಬ್ಬರು ಅವರ ಮನೆಯಲ್ಲೇ ಮಲಗುತ್ತಿದ್ದರು. ಇವರು ಪಾಠದ ಜೊತೆಗೆ ಸ್ವಾತಂತ್ರ್ಯ ಹೋರಾಟಗಾರರ ಕತೆಗಳನ್ನು ಹೇಳುತ್ತಿದ್ದರು. ಅವರ ತ್ಯಾಗ, ನಿಷ್ಠೆ, ಧೈರ್ಯ, ಸಾಹಸಗಳನ್ನು ಕಣ್ಣಿಗೆ ಕಟ್ಟುವ ಹಾಗೆ ವರ್ಣಿಸುತ್ತಿದ್ದರು. ಗಾಂಧೀಜಿ, ಲಜಪತರಾಯ್, ಸುಭಾಷ್‌ಚಂದ್ರ ಬೋಸ್, ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರನಾಥ ತಿಲಕ್ ಇನ್ನೂ ನೂರಾರು ಮಂದಿಯ ತ್ಯಾಗ ಬಲಿದಾನಗಳ ಬಗ್ಗೆ ಹೇಳುತ್ತಿದ್ದರು. ಇವು ನಮ್ಮ ಮನಸ್ಸಿನ ಮೇಲೆ ಗಾಢವಾದ ಪ್ರಭಾವ ಬೀರಿದವು. ಅವರ ಹಾಗೆ ನಾವೂ ಸರಳ ಜೀವನ ನಡೆಸಬೇಕು, ಪ್ರಾಮಾಣಿಕರಾಗಿ ಬಾಳಬೇಕು, ಸಾಹಿತ್ಯ ಕೃಷಿ ಮಾಡಬೇಕೆಂಬ ಧ್ಯೇಯವನ್ನು ಬೆಳೆಸಿಕೊಂಡೆವು. ಅವರ ಮನೆತುಂಬ ಪುಸ್ತಕದ ರಾಶಿಯೇ ಇದ್ದಿತು. ನಾನೂ ಕೊಳ್ಳಬೇಕು ಎನಿಸಿತು. ಹಾಗೆ ಮಾಡಿದೆ. ನನಗೆ ಗೊತ್ತಿಲ್ಲದಂತೆ ಅವರ ಸಾಧನೆಗಳ ಪ್ರಭಾವಕ್ಕೆ ಒಳಗಾದೆನು. ಸಾವಿರಾರು ಪುಸ್ತಕಗಳನ್ನು ಖರೀದಿಸಿದೆನು.

ಗೌರಿಬಿದನೂರಿನ ಆಚಾರ್ಯ ಪ್ರೌಢಶಾಲೆಗೆ 8ನೆಯ ತರಗತಿಗೆ ದಾಖಲಾದೆನು. ಆಗ ತಾನೆ ಪ್ರಾರಂಭವಾಗಿದ್ದ ಜನರಲ್ ಹಾಸ್ಟೆಲ್‌ನಲ್ಲಿ ಊಟ ವಸತಿ. ರಾತ್ರಿ ಶಾಲೆಯಲ್ಲೇ ಮಲಗುವುದು. ಇಲ್ಲಿ ಎರಡು ವರ್ಷ ಕಟ್ಟುನಿಟ್ಟಾದ ಶಿಸ್ತು ಪಾಲನೆ ಆಯಿತು. ಆಗ ಶಾಲೆಯ ಶಿಕ್ಷಕರಾಗಿದ್ದ ಜಿ.ಪಿ. ದಾಸೇಗೌಡ, ಎಂ.ಆರ್. ನಾರಾಯಣ್‌ರವರು ನಮಗೆ ಮಾದರಿ ಶಿಕ್ಷಕರಾದರು. ಅವರಲ್ಲಿನ ಶಿಸ್ತು, ಶ್ರದ್ಧೆ, ಪ್ರಾಮಾಣಿಕತೆ, ದೇಶ ಪ್ರೇಮ ನಮ್ಮ ಮೇಲೆ ಪ್ರಭಾವ ಬೀರಿತು. ಇವರುಗಳು ನಿಲಯದ ಪಾಲಕರಾಗಿದ್ದರು.



ವಿದ್ಯಾರ್ಥಿ ನಿಲಯದಲ್ಲಿ ಬೆಳಿಗ್ಗೆ ಬೇಗ ಏಳಬೇಕು. ಪ್ರಾರ್ಥನೆ ಮಾಡಬೇಕು. ನಂತರ ತಣ್ಣೀರಿನ ಸ್ನಾನ, ಅಧ್ಯಯನ, ಊಟ ಮಾಡಿ ಶಾಲೆಗೆ ವೇಳೆಗೆ ಸರಿಯಾಗಿ ಹೋಗಬೇಕು. ಬೇಸಿಗೆ ರಜಾ ದಿನಗಳಲ್ಲಿ ಸಮಾಜ ಸೇವಾ ಕಾರ್ಯಗಳು ಇರುತ್ತಿದ್ದವು. ತಾಲ್ಲೂಕಿನ ಯಾವುದಾದರೂ ಒಂದು ಹಳ್ಳಿಗೆ ಹೋಗಿ ಒಂದು ತಿಂಗಳ ಕಾಲ ಅಲ್ಲಿಯೇ ಇದ್ದು ಸೇವಾ ಕಾರ್ಯಗಳು ಅಂದರೆ ರಸ್ತೆ, ಚರಂಡಿಗಳನ್ನು ಸ್ವಚ್ಛ ಮಾಡಬೇಕು. ನಾಟಕಗಳನ್ನು ಪ್ರದರ್ಶಿಸಿ ಜಾಗೃತಿ ಮೂಡಿಸಬೇಕು. ಇವುಗಳು ನನ್ನಲ್ಲಿ ಸಾಮಾಜಿಕ ಪ್ರಜ್ಞೆ ಮೂಡಿಸಿದವು. ಈ ಒಂದು ತಿಂಗಳ ಕಾಲದಲ್ಲಿ ನಾವೆಲ್ಲರೂ ಒಂದೇ ಎಂಬ ಭಾವನೆಯಿಂದ ಸಹಜೀವನ ನಡೆಸುತ್ತಿದ್ದೆವು. ನಮ್ಮಲ್ಲಿ ಮೇಲು-ಕೀಳು, ಬಡವ-ಬಲ್ಲಿದ ಇತ್ಯಾದಿಗಳಿಗೆ ಕಿಂಚಿತ್ತೂ ಅವಕಾಶವಿರಲಿಲ್ಲ. ಆಗ್ಗೆ ನನಗೆ ಇದರ ಅರಿವಿರಲಿಲ್ಲವಾದರೂ, ಮುಂದೆ ಉಪನ್ಯಾಸಕನಾಗಿ ವೃತ್ತಿಯನ್ನು ಪ್ರಾರಂಭಿಸಿದಾಗ ಹೆಜ್ಜೆ ಹೆಜ್ಜೆಗೆ ಎದುರಾದ ತಾರತಮ್ಯ ಭಾವನೆಗಳನ್ನು ಎದುರಿಸಲು ಈ ಸೇವಾದಳದ ಶಿಬಿರಗಳಲ್ಲಿ ನಾನು ಕಂಡುಂಡ ಅನುಭವಗಳು ನನಗೆ ಸಹಕಾರಿಯಾದವು.

ಮುಂದೆ ಎಸ್.ಎಸ್.ಎಲ್.ಸಿ. ಪಾಸ್ ಆಗಿ ಸಿದ್ಧಗಂಗೆ ಮಠಕ್ಕೆ ಕಾಲೇಜು ಶಿಕ್ಷಣಕ್ಕೆ ಹೋದಾಗ ಇದೇ ಸು. ವೆಂಕಟಾಚಲಯ್ಯ ಅವರ ಪ್ರಭಾವದಿಂದ ಅಲ್ಲಿ ಜಾಗ ಸಿಕ್ಕಿತು. ತುಮಕೂರಿನಲ್ಲಿ ಇಂಟರ್ ಮೀಡಿಯೆಟ್ ಪರೀಕ್ಷೆಯಲ್ಲಿ ಒಂದೇ ಬಾರಿಗೆ ತೇರ್ಗಡೆಯಾಗಲಿಲ್ಲವಾದ್ದರಿಂದ ಒಂದು ವರ್ಷ ಮನೆಯಲ್ಲಿಯೇ ಉಳಿಯಬೇಕಾಯಿತು. ಆಗಿನ ನನ್ನ ಬಾಲ್ಯ ಸ್ನೇಹಿತ ಜಿ.ಎಸ್. ಬಲರಾಮ ಗುಪ್ತ ಸಹ ಅನುತ್ತೀರ್ಣರಾಗಿದ್ದರಿಂದ ಇಬ್ಬರೂ ಸೇರಿ ಹಸ್ತ ಪ್ರತಿ ಪತ್ರಿಕೆ ಪ್ರಕಟಿಸಿದೆವು.

ಬಲರಾಮ ಗುಪ್ತ ಇಂಟರ್‌ಮೀಡಿಯೆಟ್ ನಂತರ ವಿಜ್ಞಾನಕ್ಕೆ ವಿದಾಯ ಹೇಳಿ ಆಂಗ್ಲ ಭಾಷೆ ಬಗ್ಗೆ ಆಸಕ್ತಿ ಬೆಳೆಸಿಕೊಂಡರು. ನಾನು ಕಲಾ ವಿಭಾಗದಲ್ಲಿ ಮುಂದುವರೆದು ಕನ್ನಡದಲ್ಲಿ ಶೇ. 60 ಅಂಕಗಳನ್ನು ಪಡೆದು ಮೈಸೂರಿನ ಮಹಾರಾಜ ಕಾಲೇಜಿನ ಕನ್ನಡ ಬಿ.ಎ. ಆನರ್ಸ್‌ಗೆ ದಾಖಲಾದೆ. 3-4 ತಿಂಗಳು ಊಟ ವಸತಿಗಾಗಿ ಪರದಾಡಬೇಕಾಯಿತು. ಆಗ ಡಾ. ಜಿ. ತಿಮ್ಮಯ್ಯ ಸಹಾಯಕ್ಕೆ ಬಂದು, ಖಾಯಂ ವ್ಯವಸ್ಥೆ ಆಗುವವರೆಗೆ ಆತನ ಆಶ್ರಯದಲ್ಲಿ ಉಳಿದೆ. ನಾನಾ ಅನಾನುಕೂಲಗಳ ಮಧ್ಯೆ ಎಂ.ಎ.ಯಲ್ಲಿ ಕೇವಲ 50% ಅಂಕಗಳನ್ನು ಪಡೆದು ತೇರ್ಗಡೆಯಾದೆ.

ಬಿ.ಎ. ಆನರ್ಸ್, ಎಂ.ಎ. ವ್ಯಾಸಂಗ ಮಾಡುತ್ತಿದ್ದಾಗ, ಪುಸ್ತಕಗಳನ್ನು ಖರೀದಿಸುವ ಹುಚ್ಚು ಬೆಳೆಯಿತು. ಹಳೆಯ ಪುಸ್ತಕಗಳು ಅಗ್ಗವಾಗಿ ಸಿಗುತ್ತಿದ್ದವು. ಅವುಗಳನ್ನು ಖರೀದಿಸುತ್ತಿದ್ದೆ. ಹಿಂದಿ ಭಾಷೆಯ ನವನೀತ ಎಂಬ ಮಾಸ ಪತ್ರಿಕೆಯನ್ನು ಪ್ರತಿ ತಿಂಗಳು ಖರೀದಿಸುತ್ತಿದ್ದೆ. ಸಹಪಾಠಿಯಾಗಿದ್ದ ಸಿಪಿಕೆಯವರು ಪುಸ್ತಕ ಪ್ರಪಂಚದಲ್ಲಿ ಪ್ರತಿ ತಿಂಗಳು



ಒಂದು ಲೇಖನ ಪ್ರಕಟಿಸುತ್ತಿದ್ದರು. ಆ ಮೂಲಕ ಅವರು ತಿಂಗಳಿಗೆ 10-15 ರೂಪಾಯಿಗಳನ್ನು ಸಂಪಾದಿಸುತ್ತಿದ್ದರು. ಅವರು ಇಂಗ್ಲೀಷ್‌ನಿಂದ ಅನುವಾದ ಮಾಡುತ್ತಿದ್ದರು. ನಾನು ಹಿಂದಿಯಿಂದ ಅನುವಾದ ಮಾಡುತ್ತಿದ್ದೆ. ಎರಡು - ಮೂರು ತಿಂಗಳಿಗೆ ಒಂದು ಲೇಖನ (ನನ್ನ ಲೇಖನ) ಪ್ರಕಟವಾಗುತ್ತಿತ್ತು. ಇದರಿಂದ ನನಗೆ ಆರ್ಥಿಕ ಸಹಾಯವಾಗುತ್ತಿತ್ತು. ಪ್ರಜಾವಾಣಿಯಲ್ಲಿ ಆಗಾಗ್ಗೆ ಲೇಖನ ಪ್ರಕಟವಾಗಿ 7.50 ರೂಪಾಯಿಗಳು ದೊರೆಯುತ್ತಿತ್ತು.

ದಲಿತ ಚಳುವಳಿಯಲ್ಲಿ ಯಾರದೇ ಪ್ರೇರಣೆ, ಸ್ಫೂರ್ತಿಯಿಂದ ನಾನು ಪ್ರವೇಶಿಸಲಿಲ್ಲ. ನನ್ನಷ್ಟಕ್ಕೆ ನಾನೇ ಪ್ರವೇಶಿಸಿದೆ. 1970ರ ದಶಕದಲ್ಲಿ ನಾನು ಚಿಂತಾಮಣಿ ಪುರಸಭಾ ಪ್ರಥಮ ದರ್ಜೆ ಕಾಲೇಜಿನಲ್ಲಿ ಉಪನ್ಯಾಸಕನಾಗಿದ್ದೆ. ಒಂದು ದಿನ ಶ್ರೀನಿವಾಸಪುರಕ್ಕೆ ಬಸ್ಸಿನಲ್ಲಿ ಪ್ರಯಾಣಿಸುತ್ತಿದ್ದೆ. ಕೊಡಿದವಾಡಿ ಬಸ್ ನಿಲ್ದಾಣದಲ್ಲಿ ಬಸ್ಸು ನಿಲ್ಲಿಸಿದ್ದ. ಆಗ ಒಬ್ಬ ವಿದ್ಯಾರ್ಥಿ ಸೌದೆ ಹೊರೆ ಹೊತ್ತು ಹಾದು ಹೋಗುತ್ತಿದ್ದ. ಆತ ಪಿಯುಸಿ ತರಗತಿಯಲ್ಲಿ ನನಗೆ ವಿದ್ಯಾರ್ಥಿಯಾಗಿದ್ದ. ಕಪ್ಪಗೆ ಕುಳ್ಳಗಿದ್ದ. ಯಾಕೋ ಅವನ ಮುಖ ನನ್ನ ಗಮನ ಸೆಳೆಯಿತು. ಎಲ್ಲಿಲ್ಲದ ಕನಿಕರ ಮೂಡಿತು. ಅಯ್ಯೋ ಪಾಪ! ಎನ್ನಿಸುವಂತಿತ್ತು ಅವನ ಮುಖ. ಆಗ ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ಮುದ್ರೆಯೊತ್ತಿದ್ದ ಅವನು ಎರಡು ಮೂರು ದಿನಗಳ ನಂತರ ಚಿಂತಾಮಣಿ ರಸ್ತೆಯಲ್ಲಿ ಆಕಸ್ಮಿಕವಾಗಿ ಕಾಣಸಿದ. ಆ ಅವಕಾಶ ಬಿಡಲಿಲ್ಲ. ಅವನ ಪೂರ್ವಾಪರ ಹಿನ್ನೆಲೆಯನ್ನೆಲ್ಲಾ ತಿಳಿದುಕೊಂಡೆ. ಅವನು ಅನಾಥ. ತಂದೆ ತಾಯಿ ಇರಲಿಲ್ಲ. ಚಿಕ್ಕಪ್ಪನ ಆಶ್ರಯದಲ್ಲಿದ್ದ. ನಿತ್ಯವೂ ಒಂದು ಹೊರೆ ಸೌದೆ ಮನೆಗೆ ತರುವಂತಿದ್ದರೆ ಊಟ. ಇಲ್ಲವೆ ಉಪವಾಸ. ನನಗೆ ಎಲ್ಲಿಲ್ಲದ ಕನಿಕರ ಮೂಡಿತು. ಎಂತಹ ಕಟುಕನಿಗಾದರೂ ಅವನ ಮುಖ ಸೆಳೆಯುವಂತಿತ್ತು. ಪರೀಕ್ಷೆಗೆ ಕಟ್ಟೀದ್ದೀಯಾ? ಎಂದೆ, ಇಲ್ಲ, ಹಣ ಇಲ್ಲ ಎಂದನು, ನಾನು ಕೊಡ್ತೇನೆ, ಕಟ್ಟುತ್ತೀಯಾ! ಎಂದೆ, 'ಒಪ್ಪಿಕೊಂಡ' ಊಟಕ್ಕೆ, ನಮ್ಮ ಮನೆಗೆ ಬಂದು ಊಟ ಮಾಡಿಕೊಂಡು ಹೋಗಲು ವ್ಯವಸ್ಥೆ ಮಾಡಿದೆ. ಇರಲು ಬಾಡಿಗೆ ರೂಮೂ ವ್ಯವಸ್ಥೆ ಮಾಡಿದ್ದಾಯಿತು. ಪಿಯುಸಿಯಲ್ಲಿ ಹಿಂದೆ ಫೇಲಾಗಿದ್ದ ಅವನು, ನಾನು ಮಾಡಿದ ವ್ಯವಸ್ಥೆಯನ್ನು ಬಳಸಿಕೊಂಡು ಈ ಬಾರಿ ತೇರ್ಗಡೆಯಾದ. ಅದೇ ಸಮಯಕ್ಕೆ ಅಂಚೆ ಇಲಾಖೆಯಲ್ಲಿ ಹುದ್ದೆಗಳ ಖಾಲಿ ಇರುವ ಬಗ್ಗೆ ಜಾಹಿರಾತು ಪ್ರಕಟವಾಗಿದ್ದು, ಅರ್ಜಿ ಹಾಕಿಸಿದ್ದಾಯಿತು. ಆಯ್ಕೆಯೂ ಆಯಿತು. ತರಬೇತಿಗಾಗಿ ಚನ್ನಪಟ್ಟಣಕ್ಕೆ ಹಾಕಿಸಿಕೊಂಡಾಯಿತು. 3-4 ತಿಂಗಳ ನಂತರ ಅದೂ ಮುಗಿಸಿದ. ಖಾಯಮ್ಮಾಗಿ ನೇಮಕವೂ ಆಗಿ ಉದ್ಯೋಗ ಸಿಕ್ಕಿತು. ವರ್ತೂರು ಪೋಸ್ಟ್ ಆಫೀಸ್‌ನಲ್ಲಿ ಕೆಲಸ ಪ್ರಾರಂಭಿಸಿದನು. (ಇವರ ಹೆಸರು ಮುನಿವೆಂಕಟಪ್ಪ, ಹುಟ್ಟಿನಿಂದ ದಲಿತ ಸಮುದಾಯಕ್ಕೆ ಸೇರಿದವರು). ಈ ಘಟನೆಯಿಂದ ನಾನು ದಲಿತ ಸಮಾಜದ



ಅಧ್ಯಯನ ಪ್ರಾರಂಭಿಸಿದೆ. ಆಗ ಯಾವುದೇ ಸಾಹಿತ್ಯ ಇರಲಿಲ್ಲ. ಈ ಪ್ರಕರಣದಿಂದ ಅನೇಕ ದಲಿತ ವಿದ್ಯಾರ್ಥಿಗಳು ಸಂಪರ್ಕಕ್ಕೆ ಬಂದರು. ಪರಸ್ಪರ ಚರ್ಚೆ ವಿನಿಮಯ ಸಾಗಿತು. ದಲಿತ ಸಮಾಜದ ಆಗುಹೋಗುಗಳ ಬಗ್ಗೆ ಪೂರ್ತಿಯಾಗಿ ಚಿಂತಾ ಮಗ್ನನಾದೆ. ನಿರತನಾದೆ. ಕೆಲವರು ದಲಿತ ಯುವಕರು ಒಂದೆರಡು ತೆಲುಗು ಪುಸ್ತಕಗಳನ್ನು ಓದಲು ನೀಡಿದರು. ಆರ್. ರಾಮಣ್ಣ ಎಂಬ ವಿದ್ಯಾರ್ಥಿ ತೆಲುಗಿನಲ್ಲಿದ್ದ ಅಂಬೇಡ್ಕರ್ ವಾಣಿ, ಧರ್ಮಂ ಕೋಸಂ ಪೋರಾಟಂ ಪುಸ್ತಕ ನೀಡಿದರು. ಕಾಲೇಜಿನಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದಲಿತ ವಿದ್ಯಾರ್ಥಿಗಳು ಇದ್ದರು. ಅವರೊಂದಿಗೆ ಆತ್ಮೀಯತೆ ಬೆಳೆಸಿಕೊಂಡೆ. ಜೊತೆಗೆ ಈ ಎರಡೂ ಪುಸ್ತಕಗಳು ನನ್ನ ಮೇಲೆ ಗಾಢ ಪ್ರಭಾವ ಬೀರಿದವು. ಸಾಮಾಜಿಕ ಸಮಸ್ಯೆಗಳ ಬಗ್ಗೆ ಅರಿತುಕೊಂಡೆ. ಹೀಗೆ ದಲಿತ ಪ್ರಜ್ಞೆ ಬೀಜಗಳು ನನ್ನಲ್ಲಿ ಬಿತ್ತಲ್ಪಟ್ಟವು. ನಾನು ಹಿಂದಿರುಗಲೇ ಇಲ್ಲ.

ಅದೇ ಸಂದರ್ಭದಲ್ಲಿ ತೆಲುಗು ಉಪನ್ಯಾಸಕರಾದ ಆರ್‌ವಿಎಸ್ ಸುಂದರಂ ಕಾಲೇಜಿಗೆ ನೇಮಕಗೊಂಡು ಬಂದರು. ಇಬ್ಬರೂ ಹಲವಾರು ವಿಷಯಗಳಲ್ಲಿ ಸಮಾನ ಮನಸ್ಕರಾಗಿದ್ದೆವು. ಅವರು ಆಂಧ್ರದ ಪ್ರಗತಿಶೀಲ ಚಳವಳಿಯಲ್ಲಿ ನಿರತರಾಗಿದ್ದರು. ಆ ವಿಚಾರಗಳನ್ನು ತಿಳಿಸುತ್ತಾ ನನ್ನ ಮೇಲೂ ಪ್ರಭಾವ ಬೀರಿದರು. ಸಮಾಜದ ಬದಲಾವಣೆ ಬಗ್ಗೆ ಚರ್ಚೆ, ಚಿಂತನೆ ಇಬ್ಬರಲ್ಲೂ ಪ್ರಾರಂಭವಾಯಿತು. ಆಂಧ್ರದ ವಿರಸಂ ಚಳವಳಿಗೆ ತೀರ ನಿಕಟರಾದೆವು. ಸಂಪರ್ಕ ಏರ್ಪಟ್ಟಿತು. ತೆಲುಗಿನಲ್ಲಿ ಕ್ರಾಂತಿಕಾರರ ಕವನ ಸಂಕಲನ 'ದಿಗಂಬರ ಕವುಲು' ಪ್ರಭಾವಕ್ಕೊಳಗಾಗಿ ಕನ್ನಡಕ್ಕೆ ಅನುವಾದಿಸಿದೆವು. 'ದಿಗಂಬರ ಕವಿಗಳು' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿ ರಾಜ್ಯದ ಬೆಂಗಳೂರು, ಮೈಸೂರು, ಗುಲ್ಬರ್ಗದಲ್ಲಿ ಪುಸ್ತಕ ಬಿಡುಗಡೆ ಮಾಡಿಸಿದೆವು. ಪತ್ರಿಕೆಗಳಲ್ಲಿ ದೊಡ್ಡ ಸುದ್ದಿಯಾಯಿತು. ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿ ತೆಲುಗಿಗೆ ಅನುವಾದ ಮಾಡಿದೆವು. ಆದರೆ ಅದು ಬಿಡುಗಡೆ ಆಗಲಿಲ್ಲ. ನಂತರ ಅವರು (ಸುಂದರಂ) ಮೈಸೂರು ವಿಶ್ವವಿದ್ಯಾಲಯಕ್ಕೆ ತೆರಳಿದರು. ನಾನು ಪ್ರಿನ್ಸಿಪಾಲ್ ಆಗಿ ಬಾಗೇಪಲ್ಲಿಗೆ ಬಂದೆನು.

ಚಿಂತಾಮಣಿಯಲ್ಲಿದ್ದಾಗ ಹಲವು ಮಂದಿ ದಲಿತ ವಿದ್ಯಾರ್ಥಿಗಳು ಸಂಪರ್ಕಕ್ಕೆ ಬಂದರು. ಅವರೆಂದರೆ, ನಾರಾಯಣಸ್ವಾಮಿ, ತಿಮ್ಮಪ್ಪ, ಗಡ್ಡಂ ವೆಂಕಟೇಶ, ಶಿವಣ್ಣ ನಂತರದ ದಿನಗಳಲ್ಲಿ ಕೋಟಿಗಾನಹಳ್ಳಿ ರಾಮಯ್ಯ, ಸಿ.ಎಂ. ಮುನಿಯಪ್ಪ, ನಾಗಪ್ಪ, ಮುನಿಸ್ವಾಮಿ ಮುಂತಾದವರು. ಇವರ ಜೊತೆಯಲ್ಲಿ ಸ್ವಾತಂತ್ರ್ಯ ದಿನಾಚರಣೆಯ ಬಹಿಷ್ಕಾರ, ಬೂಸಾ ಬಸವಲಿಂಗಪ್ಪನ ಚಳವಳಿಯನ್ನು ಬೆಂಬಲಿಸಿ ಹೋರಾಟ, ಜಾತಿ ವಿನಾಶಕ್ಕಾಗಿ ಪರಸ್ಪರ ಮನೆಗಳಲ್ಲಿ ಊಟ ಮಾಡುವುದು ಮುಂತಾದ ಚಟುವಟಿಕೆಗಳು ನಡೆದವು. ಇದರ ಜೊತೆಗೆ ನಕ್ಸಲೀಯ ಚಳುವಳಿಯ ಪ್ರಭಾವಕ್ಕೂ ಒಳಗಾದೆನು. ಒಮ್ಮೆ ಗದ್ದರ್‌ರವರ ಭೇಟಿಯನ್ನು



ಮಾಡಿದ್ದೆನು. ಚಳವಳಿಯ ಸಾಹಿತ್ಯದ ಅಧ್ಯಯನ. ಇತ್ಯಾದಿಗಳು ನನ್ನೊಳಗಿನ ಸಾಮಾಜಿಕ ಕಳಕಳಿಯನ್ನು ಜಾಗೃತವಾಗಿರಿಸಿದವು. ದೇವನೂರು ಮಹದೇವ, ಶಿವಾಜಿ ಗಣೇಶನ್, ಹೆಚ್. ಗೋವಿಂದಯ್ಯ, ಪ್ರೊ. ಬಿ. ಕೃಷ್ಣಪ್ಪ, ಇಂದೂಧರ ಹೊನ್ನಾಪುರ, ಡಾ. ಸಿದ್ಧಲಿಂಗಯ್ಯ ಇವರನ್ನೊಳಗೊಂಡ ದಲಿತ ಲೇಖಕ ಕಲಾವಿದರ ಸಂಘಟನೆ, ಮುಂದಿನ ದಿನಗಳಲ್ಲಿ ರೂಪುಗೊಂಡ ದಲಿತ ಸಂಘರ್ಷ ಸಮಿತಿ ಚಟುವಟಿಕೆಗಳು, ಹೋರಾಟಗಳು ನನ್ನೊಳಗಿನ ದಲಿತ ಪ್ರಜ್ಞೆಗೆ ನೀರೆರೆದು ಪೋಷಿಸಿದವು. ರಾಜ್ಯದ ಹಲವೆಡೆ ನಡೆದ ಸಭೆ, ಸಮಾರಂಭ, ಸಮಾವೇಶ, ವಿಚಾರ ಸಂಕಿರಣ, ಅಧ್ಯಯನ ಶಿಬಿರಗಳಲ್ಲಿ ಭಾಗವಹಿಸಿದೆನು. ಇವುಗಳ ದೆಸೆಯಿಂದ ಸಾಮಾಜಿಕ ಪ್ರಜ್ಞೆಗೆ ಒತ್ತು ನೀಡುವಂತಹ ಕೃತಿಗಳನ್ನು ಹಿಂದಿ, ತೆಲುಗು ಭಾಷೆಗಳಿಂದ ಅನುವಾದಿಸಿದೆ.

ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಸಮಾಜವನ್ನು ಕಾಡುತ್ತಿದ್ದ ನೆಲ, ಜಲ, ವನ, ಆರೋಗ್ಯಗಳ ಬಗ್ಗೆ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳನ್ನು ಕಂಡು ಪ್ರಭಾವಿತನಾದೆನು. ಇದರ ಸಲುವಾಗಿ ಆಯಿಲ್ ಪುಲ್ಲಿಂಗ್ (1995ರಲ್ಲಿ) ಫ್ಲೋರೈಡ್‌ಯುಕ್ತ ನೀರಿನ ಸೇವನೆಯಿಂದ ಉಂಟಾಗುತ್ತಿದ್ದ ಸಮಸ್ಯೆಗಳ ಬಗ್ಗೆ ಅವಿಭಜಿತ ಕೋಲಾರ ಜಿಲ್ಲೆಯ ಜನರನ್ನು ಜಾಗೃತಗೊಳಿಸಲು ಹಲವು ಬಗೆಯ ಕಾರ್ಯಕ್ರಮಗಳನ್ನು, ಶಿಕ್ಷಣ ಇಲಾಖೆ ಮತ್ತು ಎಸ್. ಮುನಿಸ್ವಾಮಿ ಮುಂತಾದವರ ಸಹಕಾರದಿಂದ ರೂಪಿಸಿದೆನು. ಇದಕ್ಕೆ ಪೂರಕ ಮಾಹಿತಿ ಪಡೆಯಲು ಪಾನಿಯಾತ್ರೆಯಲ್ಲಿ ಭಾಗವಹಿಸಿದ್ದೆ. 2003ರಲ್ಲಿ ನಂತರ ಜಲಬ್ರಹ್ಮ ರಾಜೇಂದ್ರಸಿಂಗ್‌ರನ್ನು ಜಿಲ್ಲೆಗೆ ಕರೆಸಿ ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಿದೆ. ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆಯವರನ್ನು ಅವರ ಊರು 'ರಾಳೇಗಣ ಸಿದ್ಧಿ'ಯಲ್ಲಿ ಭೇಟಿ ಮಾಡಿ ಅವರ ಸಾಮಾಜಿಕ ಕಾರ್ಯಗಳನ್ನು ಕಣ್ಣಾರೆ ಕಂಡು ಬಂದೆನು.

ನನ್ನೆಲ್ಲಾ ಕಾರ್ಯಗಳಿಗೆ ಅಂಬೇಡ್ಕರ್ ಚಿಂತನೆಗಳನ್ನು ಒಳಗೊಂಡ ಸಾಹಿತ್ಯ, ದಲಿತ ಸಂಘರ್ಷ ಸಮಿತಿಯ ಚಟುವಟಿಕೆಗಳು ದಲಿತ ಸಮುದಾಯದ ನೋವು, ಸಂಕಟಗಳು, ಬುದ್ಧನ ಜೀವ ಪರವಾದ ಆಲೋಚನೆಗಳು, ಬಸವಣ್ಣನವರ ಸಾಹಿತ್ಯದಲ್ಲಿನ ಮಾನವೀಯ ಮೌಲ್ಯಗಳು ಪ್ರೇರಣೆಯಾಗಿವೆ. ಇವುಗಳೇ ನನ್ನ ಚಿಂತನಾ ಕ್ರಮಗಳನ್ನು ರೂಪಿಸಿದವು. ಕನ್ನಡ, ಇಂಗ್ಲಿಷ್, ತೆಲುಗು, ಹಿಂದಿ, ನಿಯತಕಾಲಿಕೆಗಳು, ವೃತ್ತಪತ್ರಿಕೆಗಳಲ್ಲಿನ ಪರಿಸರ, ಸಂಬಂಧಿ ಲೇಖನಗಳು ನನ್ನ ಮನದಾಳಕ್ಕೆ ಇಳಿದು ನನ್ನನ್ನು ಮನುಷ್ಯನನ್ನಾಗಿಸಿದೆವು. ನನ್ನ ಸಾಮಾಜಿಕ ಹೊಣೆಗಾರಿಕೆಯನ್ನು ಒತ್ತಿ ಹೇಳಿದವು. ಆದ್ದರಿಂದಲೇ ನಾನು ಇವುಗಳನ್ನು ಖರೀದಿಸುವ, ಸಂಗ್ರಹಿಸುವ, ಗಂಭೀರವಾಗಿ ಅಧ್ಯಯನ ಮಾಡುವ ಹುಚ್ಚು ಬೆಳೆಸಿಕೊಂಡೆನು. ಆದ್ದರಿಂದಲೇ ನನ್ನ ಮನೆಯಲ್ಲಿ ಇವುಗಳ ರಾಶಿಯೇ ತುಂಬಿದೆ.



ನನ್ನ ಈ ಹವ್ಯಾಸಕ್ಕೆ ಮೌನ ಸಮ್ಮತಿಯನ್ನು ಸೂಚಿಸಿದವರು ನನ್ನ ಪತ್ನಿ ಜಿ. ಜಯಕುಮಾರಿಯವರು. ಇಂದು ನನ್ನದೇನಾದರೂ ಕೊಡುಗೆ ಈ ಸಮಾಜಕ್ಕೆ ಸಂದಾಯವಾಗಿದ್ದರೆ, ಅದರಲ್ಲಿ ಅವರಿಗೂ ಪಾಲಿದೆ. ನನ್ನ ಕಾಲೇಜಿನ ಕೆಲಸಕ್ಕೆ, ಸಾಮಾಜಿಕ ಕಾರ್ಯಗಳಿಗೆ, ಪ್ರವೃತ್ತಿಗೆ ಮೌನವಾಗಿ ಸಮ್ಮತಿ ಮತ್ತು ಬೆಂಬಲವನ್ನು ಸಂಪೂರ್ಣವಾಗಿ ನೀಡಿದ್ದಾರೆ. ಗೆಳೆಯರು, ಸಹೋದ್ಯೋಗಿಗಳು, ವಿದ್ಯಾರ್ಥಿಗಳು ಮನೆಗೆ ಬಂದಾಗ, ಊಟ, ಉಪಹಾರ, ಕಾಫಿ, ಟೀ ನೀಡಿ ಅವರನ್ನು ಸತ್ಕರಿಸಿದರು. ಅಕಾಲದಲ್ಲೂ ಈ ಕಾರ್ಯದಲ್ಲಿ ಲೋಪವಾಗದಂತೆ ಎಚ್ಚರ ವಹಿಸಿದ್ದಾರೆ. ನಾನು ಕಾಯಿಲೆ, ಕಸಾಲೆ ಎಂದು ಆಗಾಗ್ಗೆ ವಿಶ್ರಾಂತಿ ಪಡೆದದ್ದುಂಟು. ಆದರೆ ಅವರು ಮಾತ್ರ ಎಂದಿಗೂ ಕಾಯಿಲೆ ಎಂದು ವಿಶ್ರಾಂತಿ ಪಡೆದವರಲ್ಲ. ತನಗೆ ಇಂತಹುದು ಬೇಕೆಂದು ಒತ್ತಾಯಿಸಿದವರಲ್ಲ. ತಾನಾಯಿತು, ತನ್ನ ಮಗಳಾಯಿತು. ನನ್ನ ವಿಚಾರಗಳಿಗೆ ಬೆಂಬಲ ನೀಡುತ್ತಾ, ಇರುವ ಒಬ್ಬಳೇ ಮಗಳನ್ನು 'ಮಗ-ಮಗಳು' ಎಂದು ಸಂತೃಪ್ತಿಯನ್ನು ಅನುಭವಿಸಿದ ತುಂಬಿದ ಕೊಡದಂತಹ ಮನಸ್ಸಿನವರು. ಆಸ್ತಿಕರಾಗಿರುವ ಅವರು ನಾಸ್ತಿಕನಾಗಿರುವ ನನ್ನ ನಂಬಿಕೆಗಳಿಗೆ ಎಂದೂ ಅಡ್ಡಿಪಡಿಸಿದವರಲ್ಲ. 'ಒಬ್ಬಳೇ ಮಗಳು' 'ನಮಗೆ ಸಾಕೆಂದಾಗ' ಸದ್ಗತಿ, 'ವಂಶದ ಮುಂದುವರಿಕೆ' ಎಂಬ ಮಾತುಗಳನ್ನು ಮುಂದೊಡ್ಡಿ ನನ್ನ ವಿಚಾರಗಳಿಗೆ ಅಡ್ಡಿಪಡಿಸಲಿಲ್ಲ. ಅವರಂತೆಯೇ ಮಗಳು ಎಚ್.ಎನ್. ಪದ್ಮ ನನ್ನ ಭಾವನೆ, ಚಿಂತನೆಗಳನ್ನು ಗೌರವಿಸುತ್ತಿದ್ದಾರೆ. ಈ ಇಬ್ಬರಿಗೂ ನಾನು ಕೃತಜ್ಞನಾಗಿದ್ದೇನೆ.



# ಪರಿವಿಡಿ



ಭಾಗ – ೨ : ಸಾಹಿತ್ಯಿಕ




# ಭಾಗ – ೧

# ಕೆ.ಎನ್.ಎಸ್. ಅಭಿನಂದನೆ






# ನನ್ನಪ್ಪ

– ಹೆಚ್.ಎನ್. ಪದ್ಮ
ಕೆಎನ್ನೆಸ್‌ರವರ ಮಗಳು

ನನ್ನಪ್ಪನ ಬಗ್ಗೆ ಯೋಚಿಸಲು ಹೊರಟರೆ ಕನ್ನಡದಲ್ಲಿ ಒಂದು ಗಾದೆ ಜ್ಞಾಪಕಕ್ಕೆ ಬರುತ್ತೆ. ಅದು "ಊರಿಗೆ ಉಪಕಾರಿ ಮನೆಗೆ ಮಾರಿ" ಎಂಬುದು, ನಮ್ಮಪ್ಪನಿಗೆ ಅಕ್ಷರಶಃ ಅನ್ವಯವಾಗುತ್ತದೆ. ನನ್ನಪ್ಪನಿಗೆ ನಾನೊಬ್ಬಳೇ ಮಗಳು. ನಾನೇ ಹೆಣ್ಣು ಮತ್ತು ಗಂಡು. ಇಬ್ಬರ ಪಾತ್ರವನ್ನು ನಾನೇ ನಿರ್ವಹಿಸಬೇಕಾಗಿತ್ತು. ಇನ್ನು ಒಂದೆರಡು ಮಕ್ಕಳು ಇದ್ದಿದ್ದರೆ ಮನೆಯಲ್ಲಿ ಹಿತಕರವಾಗಿರುತ್ತಿತ್ತು ಎಂದು ನಾನು ನಮ್ಮ ಅಮ್ಮ ಬಯಸುತ್ತಿದ್ದೆವು. ಅದೇ ರೀತಿ ಅವರ ಕನಸುಗಳನ್ನು ನಾವು ಅರ್ಥಮಾಡಿಕೊಳ್ಳುತ್ತಿರಲಿಲ್ಲ. ಮನೆಯಲ್ಲಿ ನಾವು ಮೂವರೇ ಇದ್ದರು ನಾನು ನಮ್ಮ ಅಮ್ಮನದು ಒಂದು ಪಾರ್ಟಿಯಾಗಿದೆ. ನಮ್ಮ ಅಪ್ಪನದೇ ಒಂದು ಪಾರ್ಟಿ. ಅವರು ಒಂದು ಧೃವವಾದರೆ ನಾವು ಒಂದು ಧೃವ. ಆಗಾಗ್ಗೆ ಮನಸ್ತಾಪಗಳು, ಭಿನ್ನಾಭಿಪ್ರಾಯಗಳು ಯಥೇಚ್ಛವಾಗಿದ್ದವು. ಮನೆಯಲ್ಲಿ ಒಂದು ರೀತಿ ಮೌನ ಯುದ್ಧ ನಡೆಯುತ್ತಿತ್ತು.

ನಾನು ಮತ್ತು ನನ್ನ ಅಮ್ಮನಿಗೆ ಹೊರಗಡೆ ಹೋಗಲು ಆಚೆ, ಸಂಚಾರ ಹೋಗಲು ಇಷ್ಟ. ಆದರೆ ನಮ್ಮ ಅಪ್ಪ ಅದಕ್ಕೆಲ್ಲಾ ಅವಕಾಶ ಕೊಡುತ್ತಿರಲಿಲ್ಲ. ಅವರೂ ಅಷ್ಟೆ ಎಲ್ಲಿಯೂ ಹೋಗಲು ಬಯಸುತ್ತಿರಲಿಲ್ಲ. ಸರ್ಕಾರಿ ಕೆಲಸದ ನಿಮಿತ್ತ ಸಾಧ್ಯವಿದ್ದಾಗ ಮಾತ್ರ ತೆರಳುತ್ತಿದ್ದರು. ಈ ಸಂದರ್ಭದಲ್ಲಿ ಮತ್ತೊಂದು ಗಾದೆ ನೆನಪಿಗೆ ಬರುತ್ತದೆ. "ಹಳೇ ಬಟ್ಟೆ ಧರಿಸಿ ಹೊಸ ಪುಸ್ತಕ ಖರೀದಿಸು"



ಎಂಬುದು. ಈ ಗಾದೆಯ ಪ್ರಕಾರ ಅಕ್ಷರಶಃ ನಡೆಯುತ್ತಿದ್ದರು. ಯಾವುದೇ ಆಡಂಬರದ ಜೀವನ ಇಷ್ಟಪಡುತ್ತಿರಲಿಲ್ಲ. ಬಟ್ಟೆಯು ಸಾಧಾರಣ, ಸಾಮಾನ್ಯ. ಪ್ರತಿದಿನ ಉಡುಪು ಬದಲಾಯಿಸಲು ಹೋಗುತ್ತಿರಲಿಲ್ಲ. ಒಮ್ಮೊಮ್ಮೆ ಇಸ್ತ್ರಿ ಮಾಡದ ಉಡುಪನ್ನೇ ನಿಸ್ಸಂಕೋಚವಾಗಿ ಧರಿಸುತ್ತಿದ್ದರು. ಅವರ ಹುದ್ದೆಗೆ ತಕ್ಕಂತೆ ಉಡುಪು ಇರಲೇ ಇಲ್ಲ. ಸಾಮಾನ್ಯ ಉಡುಪು ಧರಿಸಿದರೆ ಯಾರು ಏನೆಂದುಕೊಳ್ಳುವರೋ ಎಂಬ ಚಿಂತೆಯೇ ಇರುತ್ತಿರಲಿಲ್ಲ. ಅಂತಹ ಆಕ್ಷೇಪಣೆಗಳಿಗೆ ಕಿವಿಗಳನ್ನೇ ಕೊಡುತ್ತಿರಲಿಲ್ಲ. ಹೊಸ ಪುಸ್ತಕ, ಹಳೇ ಪುಸ್ತಕಗಳನ್ನು ಖರೀದಿಸುವ ಹುಚ್ಚು ಬೆಳೆಸಿಕೊಂಡಿದ್ದರು. ವಿದ್ಯಾರ್ಥಿ ದೆಸೆಯಲ್ಲಿಯೇ ಪ್ರಾರಂಭವಾಗಿ ಮೈಸೂರಿನ ವ್ಯಾಸಂಗ ಮಾಡುತ್ತಿದ್ದಾಗಲೇ ಹಳೆಯ ಪುಸ್ತಕದ ಅಂಗಡಿಗಳು, ರಸ್ತೆ ಬದಿಯ ಅಂಗಡಿಗಳು ಪ್ರತಿದಿನ ಭೇಟಿಕೊಡುತ್ತಿದ್ದರು. ಬೆಲೆ ಬಾಳುವ ಪುಸ್ತಕಗಳನ್ನು ಸಂಗ್ರಹಿಸಿ ಮೂಟೆ ಕಟ್ಟಿಟ್ಟಿದ್ದರು. ನಮ್ಮ ಅಪ್ಪನಿಗೆ ಅನೇಕ ವಿಷಯಗಳಲ್ಲಿ ಅಭಿರುಚಿ, ಆಸಕ್ತಿ. ಕಾಲಕಾಲಕ್ಕೆ ತಕ್ಕಂತೆ ಅವರ ಆಸಕ್ತಿ, ಅಭಿರುಚಿ ಯಾವುದೇ ಒಂದು ವಿಷಯಕ್ಕೆ ಸೀಮಿತವಾಗಿರಲಿಲ್ಲ. ಪ್ರಾರಂಭದಲ್ಲಿ ಸಾಹಿತ್ಯ ಶಿಕ್ಷಕರು ನಂತರ ದಲಿತ ಪ್ರಜ್ಞೆ ಬೆಳೆಸಿಕೊಂಡ ಮೇಲೆ ಲೆಕ್ಕವಿಲ್ಲದಷ್ಟು ಕೊಳ್ಳುತ್ತಾ ಬಂದರು. ಎಷ್ಟೇ ಬೆಲೆ ಇದ್ದರೂ ಹಿಂಜರಿಯುತ್ತಿರಲಿಲ್ಲ. ಒಮ್ಮೆಮ್ಮೆ 250, 500, ಒಂದು ಸಾವಿರ ರೂ. ಬೆಲೆ ಬಾಳುವ ಕೃತಿಗಳನ್ನು ಖರೀದಿಸುತ್ತಿದ್ದರು. ಪುಸ್ತಕಗಳಷ್ಟೇ ಅಲ್ಲದೆ ಮ್ಯಾಗಜಿನ್, ಹಿಂದಿ, ತೆಲುಗು, ಕನ್ನಡ, ಇಂಗ್ಲಿಷ್, ದಲಿತ ಪ್ರಜ್ಞೆಯ ಜೊತೆ ಜೊತೆಗೆ, ಆರೋಗ್ಯ, ಜಲಪ್ರಜ್ಞೆ, ಕೃಷಿ ಪ್ರಜ್ಞೆ, ಮಣ್ಣು, ಪರಿಸರ, ಅರಣ್ಯ, ಗಾಳಿ, ಶಿಕ್ಷಣ ಇತ್ಯಾದಿ..... ಜಾತಿಪ್ರಜ್ಞೆ, ಸಮಾಜವಾದಿ ಪ್ರಜ್ಞೆ, ಮೌಢ್ಯತೆ ವಿರುದ್ಧ, ಸರಳ ಜೀವನ ಇತ್ಯಾದಿ. ಅವರು ಮಲಗುವ ಮನೆಯಲ್ಲಿ ಮಂಚ ಇದ್ದರೂ ಅದನ್ನು ಪುಸ್ತಕಗಳನ್ನು ಶೇಖರಿಸಲು ಮೀಸಲಾಗಿಟ್ಟು, ತಾವು ನೆಲದ ಮೇಲೆ ಹಾಸಿಗೆಯ ಮೇಲೆ ಮಲಗುತ್ತಿದ್ದರು.

ಇಂದಿಗೂ ನಾಸ್ತಿಕರಾಗಿಯೇ ಉಳಿದಿದ್ದಾರೆ. ಮೊದಲನೆಯ ಮನೆಯಲ್ಲಿ ದೇವರಪೂಜೆಗೆ ಎಂದು ಪ್ರತ್ಯೇಕ ಕೋಣೆ ಕಟ್ಟಿಸಿರಲಿಲ್ಲ. ನಮಗೆ ಬಹಳ ಮುಜುಗರವಾಗುತ್ತಿತ್ತು. ಮಹಡಿ ಕಟ್ಟಿದಾಗ ಈ ಕೊರತೆ ಪರಿಹರಿಸಿಕೊಂಡೆವು. ಪ್ರತ್ಯೇಕವಾಗಿ ದೇವರ ಕೋಣೆ ನಿರ್ಮಿಸಿಕೊಂಡೆವು. ನಮ್ಮನ್ನು ವಿಚಾರವಂತರನ್ನಾಗಿ ಮಾಡಬಹುದಿತ್ತು. ಆದರೆ ಮಾಡಲಿಲ್ಲ. ನಮ್ಮ ಸ್ವಾತಂತ್ರ್ಯಕ್ಕೆ ಅಡ್ಡಿ ಬರುತ್ತಿರಲಿಲ್ಲ.

ನಮ್ಮ ತಾಯಿ ಮನೆಯಲ್ಲಿ ಪ್ರವೇಶಿಸಿದಾಗಲಿಂದ (48 ವರ್ಷಗಳಿಂದ) ಒಮ್ಮೆಯೂ ಕಾಯಿಲೆ ಎಂದು ಮಲಗಿದವಳೇ ಅಲ್ಲ. ನಾನು ಹುಟ್ಟಿದಾಗ ಬಿಟ್ಟರೆ ಇಂದಿನವರೆಗೂ ಒಂದೇ ಒಂದು ದಿನವು ವಿರಾಮವಿಲ್ಲದೆ ಮನೆಯ ಕಾರ್ಯಗಳಲ್ಲಿ ಶ್ರಮಿಸುತ್ತಾ ಬಂದಿದ್ದಾಳೆ. ಆ ಮಟ್ಟಿಗೆ ನಮ್ಮ ತಂದೆಯವರಿಗೆ ಆರ್ಥಿಕವಾಗಿ ಒಂದೇ ಒಂದು ಪೈಸೆಯನ್ನು ಖರ್ಚು

ಮಾಡಿಸಲಿಲ್ಲ. ಆದರೆ ಅಪ್ಪ ಮಾತ್ರ ಸದಾ ಅನಾರೋಗ್ಯವೆಂದು ನರಳುತ್ತಿದ್ದರು. ಅಪ್ಪನಿಗೆ ಬಿ.ಪಿ., ಮಧುಮೇಹ, ಹೃದಯ ಶಸ್ತ್ರ ಚಿಕಿತ್ಸೆ ಇತ್ಯಾದಿ ಗಂಭೀರವಾದ ಖಾಯಿಲೆಗೆ ಒಳಗಾಗಿದ್ದರು. ಪ್ರತಿ ತಿಂಗಳು ಸಾವಿರಾರು ರೂ. ಮಾತ್ರೆಗಳಿಗೇ ಖರ್ಚು ಮಾಡುತ್ತಿದ್ದರು.

ನನ್ನ ತಂದೆಯವರದು Reserve Nature. ಯಾರೊಡನೆಯೂ ಅವರೇ ಮುಂದೆ ಬಿದ್ದು ಮಾತನಾಡುವವರಲ್ಲ. ಸಂಪರ್ಕ ಬೆಳೆಸುತ್ತಿರಲಿಲ್ಲ. ತೀರಾ ಅತೀ ಆತ್ಮೀಯರೆಂದರೆ ಮಾತ್ರ ಸಲಿಗೆಯಿಂದ ವರ್ತಿಸುತ್ತಿದ್ದರು. ಬಂಧುಗಳೊಡನೆ ಅಷ್ಟೇ. ಸದಾ ಮೌನವಾಗಿರುತ್ತಿದ್ದುದರಿಂದ ಅವರೆಲ್ಲಾ ಮಹಾ ಜಂಭಗಾರ, ಅಹಂಕಾರಿ ಎಂದು ನಿಂದಿಸುತ್ತಿದ್ದರು. ಇತ್ತೀಚಿನ ವರ್ಷಗಳಲ್ಲಿ ಮರೆವು ತೀವ್ರವಾಗಿದೆ. ಅದೊಂದು ದೊಡ್ಡ ಆರೋಪವಾಗಿಸಿ ಪರಿಣಮಿಸಿತ್ತು. ನನ್ನ ಅಜ್ಜ - ಅಜ್ಜಿಯವರೊಡನೆಯೂ ಸಂಬಂಧಗಳು ಅಷ್ಟಕ್ಕಷ್ಟೆ. ಬಹುಶಃ ಅದು ಅಪ್ಪನ ಹುಟ್ಟು ಗುಣವೆಂದು ಕಾಣುತ್ತದೆ.

ನಮ್ಮ ಅಪ್ಪನಿಗೆ ಇಂತಹುದೇ ಊಟ, ಉಪಹಾರ, ಸಾಕು ಬೇಕು ಎಂದು ಎಂದೂ ಕೇಳುತ್ತಿರಲಿಲ್ಲ. ನಮ್ಮ ಅಮ್ಮ ಮಾಡಿಟ್ಟಿದ್ದನ್ನು ಉಣ್ಣುತ್ತಿದ್ದರು. ಈ ವಿಷಯದಲ್ಲಿ ಅಮ್ಮನಿಗೆ ಸಂಪೂರ್ಣ ಸ್ವಾತಂತ್ರ್ಯ ಇದ್ದಿತು. ಸಮಯಕ್ಕೆ ಸರಿಯಾಗಿ ಉಪಹಾರ, ಊಟ, ಕಾಫಿ ತಯಾರಾಗಿದ್ದರೆ ಸರಿ. ಉಳಿದ ಹಾಗೆ ಅವುಗಳ ರುಚಿಗಳ ಬಗ್ಗೆ ಎಂದೂ ತಕರಾರು ತೆಗೆದವರಲ್ಲ. ಅಪ್ಪ ಸಕ್ಕರೆ ಕಾಯಿಲೆಗೆ ತುತ್ತಾಗುವ ಮುನ್ನ ಅನ್ನ, ದೋಸೆ ಮುಂತಾದ ತಿಂಡಿಗಳನ್ನು ಇಷ್ಟಪಟ್ಟು ತಿನ್ನುತ್ತಿದ್ದರು. ಸಕ್ಕರೆ ಕಾಯಿಲೆ ಕಾಣಿಸಿಕೊಂಡ ಮೇಲೆ ಕಟ್ಟುನಿಟ್ಟಿನ ಪಥ್ಯವನ್ನು ಪಾಲಿಸಿದರು. ಮುದ್ದೆ ಅವರ ನಿತ್ಯದ ಆಹಾರವಾಯಿತು. ಇದರ ಜೊತೆಗೆ ಚಪಾತಿ, ಅನ್ನ ನಿಗಧಿತ ಪ್ರಮಾಣದಲ್ಲಿ ಸೇವಿಸತೊಡಗಿದರು. ಅವರು ಈ ವಿಷಯದಲ್ಲಿ ವಹಿಸಿದ್ದ ಕಟ್ಟುನಿಟ್ಟುತನದಿಂದ ಹಲವು ಬಾರಿ ಶುಗರ್‌ನಿಂದಾಗಿ (ಸಕ್ಕರೆ ಪ್ರಮಾಣ ದೇಹದಲ್ಲಿ ಕಡಿಮೆ ಆಗಿ) ಸಮಸ್ಯೆ ಅನುಭವಿಸಿದ್ದೂ ಉಂಟು.

ನಮ್ಮ ತಂದೆಯವರು ಶಿಸ್ತುಬದ್ಧ ಮತ್ತು ಸರಳ ಜೀವನವನ್ನು ರೂಢಿಸಿಕೊಂಡವರು. ಬಟ್ಟೆ ಬರೆ ವಿಷಯದಲ್ಲಿ ಹೇಗೊ, ಆಸ್ತಿ ಪಾಸ್ತಿ ವಿಷಯದಲ್ಲೂ ಹಾಗೆಯೇ, ಪ್ರಿನ್ಸಿಪಾಲರಾಗಿ ಕಾರ್ಯನಿರ್ವಹಿಸಿದ್ದ ಇವರು ನಮಗಾಗಿ ಮಾಡಿಕೊಂಡ ಆಸ್ತಿ ಎಂದರೆ ಒಂದು ಮನೆ. ಅದರಲ್ಲೂ ಯಾವುದೇ ಆಡಂಬರವಿಲ್ಲದೆ ಸರಳತೆಯೇ ತುಂಬಿತ್ತು. ನಾನು ಕೆಲಸಕ್ಕೆ ಸೇರಿದ ಮೇಲೆ ನನ್ನ ಮತ್ತು ನನ್ನ ಪತಿ ವೇಣುಗೋಪಾಲರವರ ಸಂಪಾದನೆಯನ್ನು ಸೇರಿಸಿ ಜೊತೆಗೆ ಒಂದಿಷ್ಟು ಸಾಲ ಮಾಡಿ, ಅಪ್ಪ ನಿರ್ಮಿಸಿದ್ದ ಮನೆಯ ಮೇಲೆ ಸುಂದರವಾದ ಮನೆಯನ್ನು ಕಟ್ಟಿಕೊಂಡೆವು. ದ್ವಿಚಕ್ರ ವಾಹನ, ಕಾರು ಕೊಳ್ಳುವ ಸಾಮರ್ಥ್ಯ ಇದ್ದರೂ ಆ ವಿಷಯ ದೂರವೇ ಉಳಿಯಿತು. ಅಂದಿನಿಂದ ಇಂದಿನವರೆಗೆ ಅಪ್ಪನದು ಕಾಲು ನಡಿಗೆಯ ಪಯಣ.

ಎಂತೆಂತಹವರು ಎಂತೆಂತಹುದೋ ವಾಹನದಲ್ಲಿ ತಿರುಗಾಡುತ್ತಿದ್ದಾರೆ; ಆದರೆ ಅಪ್ಪನದು ಮಾತ್ರ ಅದೇ ನಟರಾಜ ಸರ್ವಿಸ್! ನಮಗೂ ಇದು ಒಗ್ಗಿ ಹೋಗಿದೆ.

ನಮ್ಮ ತಂದೆ ನಿಷ್ಠಾವಂತ ಸರ್ಕಾರಿ ನೌಕರರು ಎಂಬುದು ಅವರನ್ನು ಬಲ್ಲ ಎಲ್ಲರಿಗೂ ಗೊತ್ತಿದೆ. ಅವರ ಈ ನಿಷ್ಠೆ ಕಾಲೇಜಿಗಷ್ಟೇ ಸೀಮಿತವಾಗಿರದೆ, ಮನೆಗೂ ವಿಸ್ತರಿಸಿಕೊಳ್ಳುತ್ತಿತ್ತು. ಮನೆಯಲ್ಲೂ ಕಾಲೇಜಿನ ಕೆಲಸ ಕಾರ್ಯಗಳ ಬಗ್ಗೆ ಯೋಚಿಸಿಕೊಳ್ಳುತ್ತಿದ್ದರು. ವಿದ್ಯಾರ್ಥಿಗಳಿಗೆ ಸಹಾಯ ಮಾಡುವ ವಿಷಯದಲ್ಲಿ ವೈಯಕ್ತಿಕ ಲಾಭ ನಷ್ಟಗಳ ಬಗ್ಗೆ ಚಿಂತಿಸದೇ ಮಾಡುತ್ತಿದ್ದರು. ಇವರ ಈ ಗುಣದಿಂದಾಗಿ ಮನೆಗೆ ಬಂದು - ಹೋಗುವ ಸಂದರ್ಶಕರ (Visiters) ಸಂಖ್ಯೆ ಅಪಾರವಾಗಿರುತ್ತಿತ್ತು. ಇದರಿಂದ ಹೀಗೆ ಬಂದ ಸಂದರ್ಶಕರಿಗೆಲ್ಲಾ ನಮ್ಮ ಅಮ್ಮ ಕಾಫಿ ಚಹಾ ತಯಾರಿಸಿ ಕೊಡಬೇಕಾಗಿತ್ತು. ಕೆಲವು ವಿಶೇಷ ಸಂದರ್ಭಗಳಲ್ಲಿ ಅಪ್ಪನ ಆತ್ಮೀಯರಿಗೆ ಊಟ, ಉಪಹಾರ ತಯಾರು ಮಾಡಬೇಕಾಗಿತ್ತು. ಇದೆಲ್ಲ ಕೆಲಸಗಳನ್ನು ಅಮ್ಮ ಅಚ್ಚುಕಟ್ಟಾಗಿ ಮಾಡುತ್ತಿದ್ದರು. ಅಮ್ಮನದು ಒಂದು ರೀತಿಯಲ್ಲಿ ಅವಿಶ್ರಾಂತ ದುಡಿಮೆ. ಇದೆಲ್ಲವನ್ನು ಗಮನಿಸುತ್ತಿದ್ದ ಅಪ್ಪ ಬಾಯಿಬಿಟ್ಟು ಹೇಳದಿದ್ದರೂ, ಮನಸ್ಸಿನಲ್ಲೇ ಅಮ್ಮನಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದರು ಎಂಬುದು ಅವರ ಮನಸ್ಸನ್ನು ಬಲ್ಲ ನನಗೆ ತಿಳಿಯುತ್ತಿತ್ತು.

ನಮ್ಮ ತಂದೆ ಕಾಲೇಜಿನ ಕೆಲಸಗಳಿಗೆ ಹಣ ಖರ್ಚು ಮಾಡಿದಂತೆ ಸಾಮಾಜಿಕ ಸೇವಾ ಕಾರ್ಯಗಳಿಗೂ ತಮ್ಮ ಹಣವನ್ನು ಖರ್ಚು ಮಾಡುತ್ತಿದ್ದದ್ದುಂಟು. ಈ ವಿಷಯ ನಮಗೆ ತಿಳಿದರೂ ನಾವು ಅದರ ಬಗ್ಗೆ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಹಾಗಂತ ಅಪ್ಪ ನಮಗೆ ಯಾವುದರಲ್ಲೂ ಕಡಿಮೆ ಮಾಡಿದವರಲ್ಲ. ಆದರೆ ಅಪ್ಪನ, ಓದು, ಬರವಣಿಗೆ, ಅವರಿಗೆ ಆಗುತ್ತಿದ್ದ ಸನ್ಮಾನ, ದೊರೆತ ಪುರಸ್ಕಾರಗಳನ್ನು ಕಂಡಾಗ ಆನಂದವಾಗುತ್ತಿತ್ತು; ಕೆಎನ್ಎಸ್‌ರವರ ಮಗಳು ಎಂದು ಯಾರಾದರೂ ಗುರುತಿಸಿದಾಗ ಹೆಮ್ಮೆ ಎನ್ನಿಸುತ್ತಿತ್ತು. ಸ್ವತಃ ನನಗೆ 'ಕೆಎನ್ಎಸ್'ರವರ ಮಗಳು ಎಂದು ಹೇಳಿಕೊಳ್ಳಲು ಹೆಮ್ಮೆ ಎನ್ನಿಸುತ್ತದೆ.

ನನ್ನ ಅಪ್ಪ ನಮ್ಮ ಮನೆತನದಲ್ಲಿ ಆಕಾಶದೆತ್ತರಕ್ಕೆ ಆಲದಂತೆ ಬೆಳೆದವರು. ಇದರ ಆಶ್ರಯದಲ್ಲಿ ಸುಖಿಸಿದವರು ಹಲವರು. ನನ್ನ ನಾಲ್ಕು ಮಂದಿ ಸೋದರತ್ತೆಯರು, ಅವರ ಕುಟುಂಬ, ಮಕ್ಕಳು, ಮೊಮ್ಮಕ್ಕಳು, ಅಜ್ಜನ ಕಡೆಯ, ಅಜ್ಜನ ತಮ್ಮಂದಿರು ಅವರ ಮಕ್ಕಳು, ಮೊಮ್ಮಕ್ಕಳು, ಹೀಗೆ ಪಟ್ಟಿ ಬೆಳೆಯುತ್ತದೆ. ಅವರ ಮನೆಯ ಮಕ್ಕಳಿಗೆ ಶಿಕ್ಷಣ, ಉದ್ಯೋಗದ ವಿಷಯ ಬಂದಾಗ ತಮ್ಮೆಲ್ಲಾ ಶಕ್ತಿಯನ್ನು, ಪ್ರಭಾವವನ್ನು ಬಳಸಿ, ಶಕ್ತಿ ಮೀರಿ ಸಹಾಯ ಮಾಡುತ್ತಿದ್ದಾರೆ. ಆದರೂ ಇಂತಹ ಅಪ್ಪ ಬಂಧು ಬಳಗದವರೊಂದಿಗೆ ಹೆಚ್ಚು ಮಾತನಾಡುವುದಿಲ್ಲ ಎಂಬ ಆರೋಪವಿತ್ತು. 'ಮಾತು ಕಡಿಮೆ ಕೆಲಸ ಹೆಚ್ಚು' ಎಂಬುದು ಅವರ ಹುಟ್ಟುಗುಣ ಇರಬಹುದು.



ಏನೇ ಆಗಲಿ ನನಗಂತೂ ಇಂತಹ ಅಪ್ಪನ ಮಗಳಾಗಿ ಜನಿಸಿದ್ದಕ್ಕೆ ಆನಂದವಾಗುತ್ತದೆ. ಅಪ್ಪ-ಅಮ್ಮ ತಮ್ಮ ಎಲ್ಲಾ ಪ್ರೀತಿಯನ್ನು ನನಗೊಬ್ಬಳಿಗೆ ಧಾರೆ ಎರೆದು ಬೆಳೆಸಿದ್ದಕ್ಕೆ ಮತ್ತಷ್ಟು ಸಂತೋಷ ಎನ್ನಿಸುತ್ತದೆ. ಆದರೂ ಒಬ್ಬ ಅಣ್ಣನೋ, ತಮ್ಮನೋ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಆಗಾಗ ಅನ್ನಿಸುತ್ತದೆ.









02

# ಅಕ್ಕತಂಗಿಯ ಮಕ್ಕಳಿಗೆಲ್ಲಾ ಮಾರ್ಗದರ್ಶಕರು

– **ಕೆ. ವೆಂಕಟಲಕ್ಷ್ಮಮ್ಮ, ನಿವೃತ್ತ ಶಿಕ್ಷಕಿ**

(ಕೆ. ನಾರಾಯಣಸ್ವಾಮಿರವರ ತಂಗಿ)

ಗೌರಿಬಿದನೂರು ತಾಲ್ಲೂಕು, ಹೊಸೂರು ಹೋಬಳಿಯಲ್ಲಿ ನೆಲೆಸಿದ್ದ ನಿವೃತ್ತ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದ ಕಂಬಯ್ಯನವರಿಗೆ ನಾಲ್ಕು ಜನ ಹೆಣ್ಣು ಮಕ್ಕಳು. ಇವರ ನಡುವೆ ಹುಟ್ಟಿದ ಗಂಡು ಮಗುವೇ ಕೆ. ನಾರಾಯಣಸ್ವಾಮಿಯವರು. ನಮ್ಮ ತಂದೆಯವರಿಗೆ ಇಬ್ಬರು ಸಹೋದರರು, ನಾಲ್ಕು ಜನ ಸಹೋದರಿಯರು. ಎಲ್ಲರೂ ಒಟ್ಟು ಕುಟುಂಬದಲ್ಲಿಯೇ ಒಗ್ಗಟ್ಟಾಗಿ ಇದ್ದರು. ತಂದೆಯವರ ಮೊದಲನೇ ಸಹೋದರರು ಬೇಸಾಯ ನಿರ್ವಹಿಸುತ್ತಿದ್ದರು. ಅವರೂ ಸಹ ತಮ್ಮ ಹೆಂಡತಿ, ಏಳು ಜನ ಮಕ್ಕಳೊಂದಿಗೆ ಅನ್ಯೋನ್ಯವಾಗಿದ್ದರು. ಎರಡನೇ ಸಹೋದರರಾದ ದಿ. ಶ್ರೀ ಕದಿರಪ್ಪನವರು ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಹೊಸೂರು ಮತ್ತು ರಮಾಪುರ ಶಾಲೆಗಳಲ್ಲಿ ಸೇವೆ ಸಲ್ಲಿಸಿ ತಾಲ್ಲೂಕಿಗೆ ಹೆಸರು ವಾಸಿಯನ್ನು ಪಡೆದಿದ್ದರು. ಇವರ ಕೈ ಕೆಳಗೆ ಅಣ್ಣನವರೂ, ನಾವೂ ವ್ಯಾಸಂಗ ಮಾಡಿದ್ದೇವೆ. ತುಂಬಾ ಮೃದು ಹೃದಯದವರು. ಅವರು ಇಂಗ್ಲಿಷ್ ಭಾಷೆಯಲ್ಲಿ ತುಂಬಾ ಪರಿಣತಿ ಹೊಂದಿದ್ದರು. ಅವರ ಶಿಷ್ಯರೆಲ್ಲಾ ಈಗಲೂ ನೆನೆಸಿಕೊಳ್ಳುತ್ತಿರುತ್ತಾರೆ. ಚಿಕ್ಕಪ್ಪನವರು ಅಣ್ಣನವರ ವ್ಯಾಸಂಗಕ್ಕೆ ಸಹಾಯ ಮಾಡುತ್ತಿದ್ದರು.

ತಂದೆಯವರು ಆಗಿನ ಕಾಲದಲ್ಲಿ ಕೇವಲ 5 ರೂ. ವೇತನದೊಂದಿಗೆ ಶಿಕ್ಷಕರಾಗಿ ನೇಮಕಗೊಂಡರು. ಬರುಬರುತ್ತಾ ವೇತನ ಅಲ್ಪಸ್ವಲ್ಪ ಜಾಸ್ತಿಯಾಗಿ ಕುಟುಂಬ ನಿರ್ವಹಣೆಯೂ ಜಾಸ್ತಿಯಾಗುತ್ತಾ ಬಂತು.



ನಮ್ಮ ತಂದೆಯವರು ನಾಲ್ಕು ಜನ ಹೆಣ್ಣು ಮಕ್ಕಳಲ್ಲಿ ಹಿರಿಯ ಮಗಳಾದ ವಿ. ಅಶ್ವತ್ಥಮ್ಮನವರಿಗೆ ಎಲ್.ಎಸ್. ಪರೀಕ್ಷೆ ತನಕ ಓದಿಸಿ, ಇಬ್ಬರು ಕಿರಿಯ ಹೆಣ್ಣು ಮಕ್ಕಳಿಗೆ ಎಸ್.ಎಸ್.ಎಲ್.ಸಿ. ಪರೀಕ್ಷೆ ತನಕ ಓದಿಸಿ, ಶಿಕ್ಷಕಿಯರ ಹುದ್ದೆ ಕೊಡಿಸಿ ವಿವಾಹಗಳನ್ನು ನೆರವೇರಿಸಿದರು. ತಂದೆಯವರ ಮತ್ತು ಚಿಕ್ಕಪ್ಪಂದಿರ ಪರಿಶ್ರಮದಿಂದಲೋ ನಮ್ಮ ಪುಣ್ಯದಿಂದಲೋ ಎಲ್ಲರೂ ನಿವೃತ್ತಿ ಪಡೆದು ವಿಶ್ರಾಂತಿ ವೇತನವನ್ನು ಪಡೆಯುತ್ತಿದ್ದು ಸುಖವಾಗಿ ಯಾರಿಗೂ ಹೊರೆಯಾಗದೆ ಜೀವನ ನಡೆಸುತ್ತಿದ್ದೇವೆ.

ಇನ್ನು ಅಣ್ಣನವರಾದ ಕೆ. ನಾರಾಯಣಸ್ವಾಮಿಯವರ ಬಗ್ಗೆ ತಿಳಿಸುವುದೇನೆಂದರೆ, ನಮ್ಮ ತಂದೆ ಸುಮಾರು 60-65 ವರ್ಷಗಳ ಹಿಂದೆಯೇ ಇದ್ದ ಒಬ್ಬ ಮಗನನ್ನು ಹೊಸೂರಿನಲ್ಲಿ ಪ್ರಾಥಮಿಕ, ಮಾಧ್ಯಮಿಕ ಶಾಲೆಯಲ್ಲಿ ಓದಿಸಿ, ನಂತರ ಹೊಸೂರಿಗೆ ಸುಮಾರು ಹತ್ತನ್ನೆರಡು ಕಿ.ಮೀ. ದೂರದಲ್ಲಿರುವ ಗೌರೀಬಿದನೂರಿನಲ್ಲಿದ್ದ ಆಚಾರ್ಯ ಪ್ರೌಢಶಾಲೆಗೆ ಸೇರಿಸಿ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಮಾಡಿಸಿದರು. ನಂತರ ತುಮಕೂರು ಸಿದ್ಧಗಂಗೆ ಸ್ವಾಮೀಜಿಯವರ ಹಾಸ್ಟೆಲ್‌ಗೆ ಸೇರಿಸಿ First Grade Collegeನಲ್ಲಿ Intermediat ಮಾಡಿಸಿದರು.

ಅಣ್ಣನವರು ನಂತರ ಮೈಸೂರಿನಲ್ಲಿ B.A. Honors ಮತ್ತು ಕನ್ನಡ M.A. ಪದವಿಯನ್ನು ಮುಗಿಸುವ ಹೊತ್ತಿಗೆ ಅಕ್ಕತಂಗಿಯರು ಶಿಕ್ಷಕಿಯರಾಗಿ ಸೇರಿಕೊಂಡ ಮೇಲೆ ಅಣ್ಣನವರ ವ್ಯಾಸಂಗಕ್ಕೆ ಹಣದ ಅನುಕೂಲವಾಯಿತು. ಹಿರಿಯ ಅಕ್ಕನವರಂತೂ ಪ್ರತಿತಿಂಗಳೂ ಹಣ ಕಳುಹಿಸುತ್ತಿದ್ದರು. ಅಣ್ಣನವರಿಗೆ ವ್ಯಾಸಂಗದ ಸಂದರ್ಭದಲ್ಲಿ ಯಾವ ಕಷ್ಟಗಳೂ ಇಲ್ಲದೆ ಚೆನ್ನಾಗಿ ಗಮನವಿಟ್ಟು ಓದನ್ನು ಮುಗಿಸಿದರು.

ತಂದೆಯವರಿಗೆ ಇದ್ದ ಒಬ್ಬ ಮಗನ ಮೇಲೆ ಅಪಾರವಾದ ಪ್ರೀತಿ, ವಾತ್ಸಲ್ಯ ಇತ್ತು. ಮಗ ಆಗಾಗ್ಗೆ ಹೊರಗಡೆ ಹೋಗಿ ಮನೆಗೆ ಬರುವಷ್ಟರಲ್ಲಿ ಬಹಳ ತಳಮಳಿಸುತ್ತಿದ್ದರು.

ಅಣ್ಣನವರು M.A. ಪದವಿ ಪಡೆದ ಮೇಲೆ ಹೊಸೂರಿನಲ್ಲಿದ್ದ ಶಿಕ್ಷಣತಜ್ಞರಾದ ದಿ. ಹೆಚ್. ನರಸಿಂಹಯ್ಯನವರು ಸ್ಥಾಪಿಸಿರುವ ನ್ಯಾಷನಲ್ ಹೈಸ್ಕೂಲಿನಲ್ಲಿ ಸುಮಾರು ಒಂದು ವರ್ಷ ಶಿಕ್ಷಕ ವೃತ್ತಿಯನ್ನು ನಿರ್ವಹಿಸಿದರು. ನಂತರ ಚಿಂತಾಮಣಿಯ ಮುನ್ಸಿಪಲ್ ಕಾಲೇಜಿನಲ್ಲಿ ಸುಮಾರು ಹತ್ತು ವರ್ಷಗಳು ಉಪನ್ಯಾಸಕರಾಗಿ ಕೆಲಸ ನಿರ್ವಹಿಸಿದರು. ವೃತ್ತಿಯ ಜೊತೆಗೆ ದೀನ ದಲಿತರ, ಬಡ ವಿದ್ಯಾರ್ಥಿಗಳ ಕುಂದುಕೊರತೆಗಳನ್ನು ನಿವಾರಿಸುವ ಬಗ್ಗೆ ಗಮನಹರಿಸಿದರು.

ದಿ. 27-8-1967ರಲ್ಲಿ ಕಲ್ಲೂಡಿ ಗ್ರಾಮದವರಾದ ನಿವೃತ್ತ ಶಿಕ್ಷಕರಾಗಿದ್ದ ಶ್ರೀ ಗಂಗಪ್ಪನವರ 3ನೇ ಪುತ್ರಿಯರಾದ ಚಿ.ಸೌ. ಜಯಕುಮಾರಿಯನ್ನು ತಂದೆ,



ತಾಯಿಯವರ ವಿರೋಧ ಕಟ್ಟಿಕೊಂಡು ಇಷ್ಟಪಟ್ಟು ವಿವಾಹವಾದರು. ಶ್ರೀ ಗಂಗಪ್ಪನವರ ಹಿರಿಯ ಪುತ್ರರಾದ ಶ್ರೀ ಕೆ.ಜಿ. ಲಕ್ಷ್ಮೀನಾರಾಯಣರೊಡನೆ ನನ್ನ ವಿವಾಹವೂ ಆಗಿತ್ತು (1964). ಅಂದರೆ ನನ್ನ ನಾದಿನಿಯನ್ನೇ ಅಣ್ಣಾನವರು ವಿವಾಹವಾದರು. ಅಣ್ಣ, ಅತ್ತಿಗೆಯುವರ ದಾಂಪತ್ಯ ಜೀವನ ಇಂದಿಗೂ ಅನ್ಯೋನ್ಯವಾಗಿದೆ. ಆದರೆ ತಂದೆಯವರೊಡನೆ ಅಣ್ಣ ಬರುಬರುತ್ತಾ ಮನಸ್ತಾಪವನ್ನು ಬೆಳೆಸಿಕೊಂಡು ಕಾಲಕ್ರಮೇಣ ಮಾತು ನಿಲ್ಲಿಸುವಂತಹ ಸ್ಥಿತಿ ನಿರ್ಮಾಣವಾಯಿತು. ತಾಯಿಯವರೊಡನೆ ತುಂಬಾ ಅನ್ಯೋನ್ಯವಾಗಿದ್ದರು.

ಅಣ್ಣಾನವರಿಗೆ 1969 ಡಿಸೆಂಬರ್‌ನಲ್ಲಿ ಒಬ್ಬ ಹೆಣ್ಣು ಮಗಳು ಜನಿಸಿದಳು. ಆ ಹೆಣ್ಣು ಮಗಳಿಗೆ ಬಿ.ಎ. ಪದವಿ ಮಾಡಿಸಿದರು. ಆ ಹೆಣ್ಣು ಮಗಳಾದ ಚಿ.ಸೌ. ಪದ್ಮಳನ್ನು ನನ್ನ ಹಿರಿಯ ಮಗನಾದ ಕೆ.ಎಲ್. ವೇಣುಗೋಪಾಲ್‌ರವರೊಡನೆ ವಿವಾಹ ಮಾಡಿಕೊಟ್ಟರು. ಚಿ. ವೇಣುಗೋಪಾಲ್ ಸಿವಿಲ್ ಇಂಜಿನಿಯರಿಂಗ್ ಮಾಡಿಕೊಂಡು ಬೆಂಗಳೂರು ಜಲಮಂಡಲಿಯಲ್ಲಿ A.E.E. ಆಗಿ ಕೆಲಸ ನಿರ್ವಹಿಸುತ್ತಿರುವರು.

ಅಣ್ಣಾನವರು ಎಲೆಮರೆಯ ಕಾಯಿಯಂತೆ ದಲಿತರ ಸೇವೆಯ ಜೊತೆಗೆ ಹಿಂದಿ, ತೆಲುಗಿನಲ್ಲಿರುವ ಕೆಲವು ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಮನೆಯಲ್ಲಿ ಜ್ಞಾನಾಭಿವೃದ್ಧಿಗೆ ಬೇಕಾಗುವ ಲೆಕ್ಕವಿಲ್ಲದಷ್ಟು ಪುಸ್ತಕಗಳನ್ನು ತರಿಸಿ ಒಂದು ಪುಸ್ತಕ ಭಂಡಾರವನ್ನೇ ಜೋಡಿಸಿಕೊಂಡು, ರಾತ್ರಿ ಹಗಲು ಆ ಪುಸ್ತಕಗಳನ್ನು ಓದುವುದರಲ್ಲಿಯೇ ಮಗ್ನರಾಗಿರುತ್ತಾರೆ.

ಅಣ್ಣಾನವರು ಚಿಂತಾಮಣಿಯಲ್ಲಿದ್ದಾಗಲೇ ಬಿ.ಪಿ. ಮತ್ತು ಶುಗರ್ ಖಾಯಿಲೆ ಕಾಣಿಸಿಕೊಂಡು ಅಂದಿನಿಂದ ಇದುವರೆಗೂ ಪಥ್ಯದಲ್ಲಿಯೇ ಆಹಾರವನ್ನು ಉಪಯೋಗಿಸುತ್ತಿದ್ದಾರೆ. ಅವರ ಪತ್ನಿಯಂತೂ ಬಹಳ ಸಂಯಮದಿಂದ, ತಾಳ್ಮೆಯಿಂದ ಕಾಲಕಾಲಕ್ಕೆ ಊಟೋಪಚಾರಗಳನ್ನು ಮಾಡಿಕೊಂಡು ಬಂದಿದ್ದಾರೆ. ಮನೆಯ ಯಾವ ಜವಾಬ್ದಾರಿಯನ್ನು ವಹಿಸಿಕೊಳ್ಳದೆ ಯಾವಾಗಲೂ ಸಮಾಜ ಸೇವೆಯಲ್ಲಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟಿದ್ದಾರೆ. ಅಕ್ಕ, ತಂಗಿಯರ ಮಕ್ಕಳಿಗೂ ಮಾರ್ಗದರ್ಶಕರಾಗಿದ್ದಾರೆ. ಅಣ್ಣಾನವರಿಗೆ ಹೃದಯ ಶಸ್ತ್ರ ಚಿಕಿತ್ಸೆ ಆಗಿದ್ದರೂ ಸಹ ಎದೆಗುಂದದೆ ತಮ್ಮ ಕೆಲಸ ಕಾರ್ಯಗಳನ್ನು ನಿಭಾಯಿಸುತ್ತಿದ್ದಾರೆ.

ಕೊನೆಯದಾಗಿ ಶಿಕ್ಷಣ ತಜ್ಞರಾಗಿ, ಜಲತಜ್ಞರಾಗಿ, ಪರಿಸರವಾದಿಗಳಾಗಿ, ಸಮಾಜ ಸೇವಕರಾಗಿ, ರಾಜ್ಯ ಪ್ರಶಸ್ತಿ ಪಡೆದವರಾಗಿ ಇರುವುದೇ ನಮ್ಮೆಲ್ಲರಿಗೂ ಹೆಮ್ಮೆಯ ವಿಷಯವಾಗಿದೆ.








# ನಮ್ಮಣ್ಣ ಸ್ವಲ್ಪ ಮುಂಗೋಪಿ

– ಕೆ. ಲಕ್ಷ್ಮಮ್ಮ

(ಕೆ. ನಾರಾಯಣಸ್ವಾಮಿರವರ ಹಿರಿಯ ತಂಗಿ)

ರಿ॥ ಜಾಯಿಂಟ್ ಡೈರೆಕ್ಟರ್ ಕೆ. ನಾರಾಯಣಸ್ವಾಮಿಯವರ ಜೀವನ ಶೈಲಿಯನ್ನು ಅವರ ತಂಗಿಯಾದ ರಿ॥ ಶಿಕ್ಷಕಿಯಾದ ಕೆ. ಲಕ್ಷ್ಮಮ್ಮನವರು ತಿಳಿಸುವುದೇನೆಂದರೆ, ಗೌರಿಬಿದನೂರು ತಾಲ್ಲೂಕಿಗೆ ಸೇರಿದ ಹೊಸೂರು ಗ್ರಾಮದಲ್ಲಿ ವಾಸ ಮಾಡಲ್ಪಟ್ಟ ರಿ॥ ಶಿಕ್ಷಕರಾದ ಕೆ. ಕಂಬಯ್ಯನವರಾದ ನಮ್ಮ ತಂದೆಗೆ ನಾವು ಐವರು ಮಕ್ಕಳು. ಇವರಲ್ಲಿ 4 ಹೆಣ್ಣು, 1 ಗಂಡು, ಬಡ ಕುಟುಂಬದಲ್ಲಿ ಜನಿಸಿದವರು ನಮ್ಮ ತಂದೆಯವರು. ಅವಿಭಕ್ತ ಕುಟುಂಬದಲ್ಲಿ ಇದ್ದು ಕೇವಲ ಅವರ ವೇತನ 5 ರೂ. ನಿಂದ ಶುರುವಾಗಿದ್ದು, ನಮ್ಮ ಅಣ್ಣನವರಿಗೆ ಇಬ್ಬರು ಅಕ್ಕಂದಿರು, ಇಬ್ಬರು ತಂಗಿಯರು, ಈ ನಾಲ್ವರಲ್ಲಿ 3 ಜನ ಅಕ್ಕ, ತಂಗಿಯರು. ಅವರ ಗಂಡಂದಿರೂ ಕೂಡ ಶಿಕ್ಷಕ ವೃತ್ತಿಯಲ್ಲಿದ್ದವರು. 1937ನೇ ಇಸವಿಯಲ್ಲಿ ನಮ್ಮ ಅಣ್ಣನವರು ಜನಿಸಿದರು. ಅದೇ ಊರಿನ ಪ್ರೈಮರಿ ಶಾಲೆ ಮತ್ತು ಮಾಧ್ಯಮಿಕ ಶಾಲೆಯಲ್ಲಿ ಓದಿದವರು. ನಮ್ಮ ಅಣ್ಣನವರ ಸ್ವಭಾವ, ನಡೆನುಡಿಗಳಲ್ಲಿ ತುಂಬಾ ಮೃದುವಾಗಿದ್ದರು. ಅಷ್ಟೇ ಸ್ವಲ್ಪ ಮುಂಗೋಪವು ಇತ್ತು. ಆದರೂ ಶಾಲೆಯಲ್ಲಿ ತುಂಬಾ ಮುಂದಾಗಿದ್ದರು. ಯಾರ ಗೋಜಿಗೂ ಹೋಗುತ್ತಿರಲಿಲ್ಲ. ತಮ್ಮ ಪುಸ್ತಕಗಳ ಪಾಠ ಪ್ರವಚನಗಳ ಓದಿನಲ್ಲಿ ಮಗ್ನರಾಗುತ್ತಿದ್ದರು. ಸರಳ ಜೀವಿಗಳು ಆಗಿದ್ದರು. ಪ್ರೌಢಶಾಲೆ ಆ ಊರಿನಲ್ಲಿರಲಿಲ್ಲ. ಗೌರಿಬಿದನೂರು ಪಟ್ಟಣದಲ್ಲಿರುವ ಶಾಲೆಗೆ ಸೇರಿದರು. ಬಸ್ಸಿನ

ಸೌಕರ್ಯಗಳು ಹೆಚ್ಚಿಗೆ ಇರಲಿಲ್ಲ. ಹಾಸ್ಟೆಲಿನಲ್ಲಿ ಸೇರಿಸಿದರು. ಧಾರಾಳವಾಗಿ ಖರ್ಚು ಮಾಡಲು ಹಣದ ಅಭಾವ ತುಂಬಾ ಇತ್ತು. ಅದೇ ಊರಿನಲ್ಲಿ ನಮ್ಮ ಅಕ್ಕನವರು ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದರು. ವಾರಕ್ಕೊಮ್ಮೆ ನಮ್ಮ ಅಣ್ಣನವರು ಅವರ ಮನೆಗೆ ಹೋಗಿ ಕಾಡಿ ಬೇಡಿ 4 ಆಣೆ ಅಥವಾ 8 ಆಣೆಯನ್ನು ತೆಗೆದುಕೊಂಡು ಹೋಗುತ್ತಿದ್ದರು. ನಮ್ಮ ಅಣ್ಣನವರು SSLCಯಲ್ಲಿ ಓದುತ್ತಿದ್ದಾಗ ಅವರ ಇಬ್ಬರು ತಂಗಿಯರು ಅದೇ ಹೈಸ್ಕೂಲಿನಲ್ಲಿಯೇ ಓದುತ್ತಿದ್ದರು. ನಮಗೆ ಇಬ್ಬರು ಚಿಕ್ಕಪ್ಪನವರಿದ್ದರು. ಅವರಲ್ಲಿ ಒಬ್ಬರು ಶಿಕ್ಷಕರಾಗಿದ್ದರು. ಅವರು ಕೂಡ ನಮಗೆಲ್ಲರಿಗೂ ತುಂಬಾ ಮಾರ್ಗದರ್ಶಕರಾಗಿದ್ದರು. ನಮ್ಮ ಅಣ್ಣ ಮತ್ತು ನಾವು ಅವರನ್ನು ಕಂಡರೆ ತುಂಬಾ ಭಯ ಭಕ್ತಿಯಿಂದ ಇದ್ದೆವು. ನಮ್ಮ ತಂದೆಯವರೂ ಕೂಡ ಮಕ್ಕಳಲ್ಲಿ ಸಲಿಗೆಯಿಂದ ಇರುತ್ತಿರಲಿಲ್ಲ. ಏನು ಬೇಕಾದರೂ ನಮ್ಮ ತಾಯಿಯವರಲ್ಲಿಯೇ ಕೇಳಬೇಕಾಗುತ್ತಿತ್ತು. ಎದುರು ಮಾತನಾಡಲು ಹೆದರುತ್ತಿದ್ದೆವು. ಒಟ್ಟಿನಲ್ಲಿ ನಮ್ಮ ತಂದೆಯವರಿಗೆ ಮಕ್ಕಳು ಚೆನ್ನಾಗಿ ಓದಬೇಕು ಮುಂದುವರೆಯಬೇಕು ಎನ್ನುವ ಆಸೆ ಪ್ರಬಲವಾಗಿದ್ದು ಬೇರೆಯವರಲ್ಲಿ ಹೇಳಿ ಹೊಗಳುತ್ತಿದ್ದರು. ನಮ್ಮ ಅಣ್ಣನವರಿಗೆ SSLC ಮುಗಿದ ಮೇಲೆ ತುಮಕೂರಿನಲ್ಲಿ ಓದಲು ಕಾಲೇಜಿಗೆ ಸೇರಿಸಿದರು. ನಂತರ ಎಂ.ಎ. ಓದಲು ಮೈಸೂರು ಯೂನಿವರ್ಸಿಟಿಗೆ ಸೇರಿಸಿದರು. ಅಲ್ಲಿ ಅವರಿಗೆ ಅನೇಕರು ಸ್ನೇಹಿತರಾದರು. ಅಲ್ಲಿಂದಲೇ ಅವರು ಸಾಹಿತ್ಯದಲ್ಲಿ ಮುಂದುವರೆದರು. ದೊಡ್ಡ ದೊಡ್ಡ ಸಾಹಿತಿಗಳ ಪರಿಚಯವನ್ನು ಮಾಡಿಕೊಂಡಿದ್ದರು. ಮೈಸೂರಿನಲ್ಲಿಯೇ ಕೆಲವಾರು ತಿಂಗಳುಗಳು ಖಾಸಗಿ ಪ್ರೌಢಶಾಲೆಯಲ್ಲಿ ಕೆಲಸ ನಿರ್ವಹಿಸಿದರು. ಅದಾದ ನಂತರ ನಮ್ಮ ಸ್ವಂತ ಊರಾದ ಹೊಸೂರಿನಲ್ಲಿ ಹೆಚ್. ನರಸಿಂಹಯ್ಯನವರು ಸ್ಥಾಪಿಸಿದ ನ್ಯಾಷನಲ್ ಪ್ರೌಢಶಾಲೆಯಲ್ಲಿ ಕೆಲಸ ಮಾಡಿದ್ದರು. ಇವರ ಪಾಠ ಪ್ರವಚನಗಳ ಬೋಧನೆಯಿಂದ ವಿದ್ಯಾರ್ಥಿಗಳೆಲ್ಲರೂ ಪ್ರಶಂಸಿಸಿ ಶ್ಲಾಘನೆ ಮಾಡುತ್ತಿದ್ದರು.

ಅವರ ಹೆಚ್ಚಿನ ಶ್ರೇಣಿಯಿಂದ ಚಿಂತಾಮಣಿ ಕಾಲೇಜಿಗೆ ವರ್ಗಾಯಿಸಲ್ಪಟ್ಟರು. ಅಲ್ಲಿಯೂ ನಿಸ್ವಾರ್ಥತೆಯಿಂದ ಸೇವೆ ಮಾಡಿದರು. ಅವರ ಶಿಷ್ಯರು ಅನೇಕರು ಹೆಚ್ಚಿನ ಪದವಿಗಳನ್ನು ಪಡೆದುಕೊಂಡು ಉನ್ನತ ಉದ್ಯೋಗಿಗಳಾಗಿದ್ದಾರೆ. ಈಗಲೂ ನಮ್ಮ ಅಣ್ಣನವರನ್ನು ಸ್ಮರಿಸಿಕೊಳ್ಳದ ದಿನವೇ ಇಲ್ಲ. ಆ ಊರಿನಲ್ಲಿದ್ದಾಗಲೇ ಅವರು ಸರಳ ರೀತಿಯಿಂದ ವಿವಾಹ ಮಾಡಿಕೊಂಡರು. ಇವರ ಸರಳತೆಗೆ ತಕ್ಕ ಹಾಗೆಯೇ ಸಹಧರ್ಮಿಣಿ ಕೂಡ ಸರಳತೆಯಿಂದ ಜೀವನ ಮಾಡುತ್ತಿದ್ದರು. ಚಿಂತಾಮಣಿಯಿಂದ ಬಾಗೇಪಲ್ಲಿಗೆ ಪ್ರಾಂಶುಪಾಲರಾಗಿ ವರ್ಗಾವಣೆಯಾದರು. ಅಲ್ಲಿಯೂ ಕೂಡ ಶಾಲಾ ಸಿಬ್ಬಂದಿಯೊಂದಿಗೆ ಸಹಕರಿಸಿ ವಿದ್ಯಾರ್ಥಿಗಳಲ್ಲೂ ಪ್ರೇಮಾನುರಾಗದಿಂದ ವರ್ತಿಸುತ್ತಿದ್ದರು. ನಂತರ ಗುಡಿಬಂಡೆ ಕಾಲೇಜಿನಲ್ಲೂ ಕೆಲಸ ಮಾಡಿದರು. ಅನೇಕ ಪೋಷಕರು ತಮ್ಮ ಮಕ್ಕಳನ್ನು ತೇರ್ಗಡೆ



ಮಾಡಿಸಲು ವಸ್ತು ಪದಾರ್ಥ ಹಣದೊಂದಿಗೆ ಬಂದು ಪಾಸು ಮಾಡಿರೆಂದು ಕೇಳಲು ಬಂದಾಗ ಅವರನ್ನು ಬಾಗಿಲಿನಿಂದ ಆಚೆಗೆ ಕಳುಹಿಸಿಬಿಡುತ್ತಿದ್ದರು. ನಿಸ್ವಾರ್ಥತೆಯಿಂದ ನಿಷ್ಠೆಯಿಂದ ಕೆಲಸ ಮಾಡುತ್ತಿದ್ದರೇ ಹೊರತು ಮೋಜಿನ ಜೀವನವಾಗಲಿ ಆಕರ್ಷಣೆಗೆ ಒಳಪಡುವುದಾಗಲಿ ಇಷ್ಟಪಡುತ್ತಿರಲಿಲ್ಲ. ಬಡ ವಿದ್ಯಾರ್ಥಿಗಳಿಗೆ ಧನ ಸಹಾಯ ಮಾಡುತ್ತ ಹಿಂದುಳಿದ ಮಕ್ಕಳಿಗೆ ಪ್ರೋತ್ಸಾಹಿಸುತ್ತಿದ್ದರು. ವೃತ್ತಿಯಲ್ಲಿದ್ದಾಗಲೂ ಕೂಡ ಆಡಂಬರದ ಉಡುಪುಗಳನ್ನು ತೊಡುತ್ತಿರಲಿಲ್ಲ. ಮೋಜಿಗೆ ಒಳಪಡುತ್ತಿರಲಿಲ್ಲ. ಹೀಗಿತ್ತು ಅವರ ಸರಳ ಜೀವನ. ಇನ್ನು ಅವರು ಸೇವೆಯಿಂದ ನಿವೃತ್ತಿಯಾಯಿತು ಎಂದು ಎಲ್ಲರಂತೆ ಮನೆಯಲ್ಲಿ ಕುಳಿತು ವಿಶ್ರಾಂತಿ ಪಡೆಯಬೇಕಿತ್ತು. ಆದರೆ ಆ ವಿಶ್ರಾಂತಿಗೆ ತಿಲಾಂಜಲಿ ಕೊಟ್ಟು ಸಮಾಜಸೇವೆಗಾಗಿ ಮುನ್ನುಗ್ಗಿದ್ದರು. ಹಲವಾರು ಕಾಯಿಲೆಗಳಿಗೂ ಗುರಿಯಾಗಿದ್ದರು. ಸಕ್ಕರೆ ಕಾಯಿಲೆ, ಬಿ.ಪಿ. ಮತ್ತು ಹೃದಯ ಆಪರೇಷನ್ ಇನ್ನೂ ಮುಂತಾದ ಕಾಯಿಲೆಗಳಿಂದ ನರಳುತ್ತಿದ್ದಾಗ್ಯೂ ಕೂಡ ಅವನ್ನು ಲೆಕ್ಕಿಸದೆ, ಹಿಂದುಳಿದ ಜನಾಂಗದವರಿಗೆ ಒಳಿತು ಮಾಡಲು ಶ್ರಮಿಸಿದರು. ಇವರು ನಾಯಕ ಜನಾಂಗದವರಾಗಿದ್ದು, ಆ ಜನಾಂಗದ ಹಿಂದುಳಿದ ಹಾಗೂ ಮುಂದುವರೆದ ಮಕ್ಕಳಿಗೆ ಪ್ರೋತ್ಸಾಹ ಕೊಟ್ಟು ವಾಲ್ಮೀಕಿ ಸಂಘದ ವತಿಯಿಂದ ಕಾರ್ಯಕ್ರಮಗಳನ್ನು ಏರ್ಪಡಿಸಿ, ಆ ಕಾರ್ಯಕ್ಕೆ ಆ ಜನಾಂಗದ ಹಿರಿಯ ಹಾಗೂ ಉನ್ನತ ಅಧಿಕಾರಿಗಳನ್ನು ಆಹ್ವಾನಿಸಿ ಅಂದಿನ ದಿನ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳನ್ನು ಆಹ್ವಾನಿಸಿ ಉನ್ನತ ಅಧಿಕಾರಿಗಳಿಂದ ಹಿತವಚನಗಳನ್ನು ಆ ಮಕ್ಕಳಿಗೆ ಭಾಷಣಗಳ ಮೂಲಕ ತಿಳಿಸಿ SSLC, PUC ಹಾಗೂ ಡಿಗ್ರಿಯವರೆಗೆ ಓದಿದ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾದವರಿಗೆ ಸನ್ಮಾನ ಮಾಡಿ ಪ್ರೈಜುಗಳನ್ನು ಕೊಡುವಂತೆ ಮಾಡುತ್ತಿದ್ದರು. ಇಷ್ಟೇ ಅಲ್ಲದೆ ಬಡಜನರಿಗೆ ದಾನವಾಗಿ ಕುರಿ ಮೇಕೆಗಳನ್ನು ಕೊಡುತ್ತಿದ್ದರು. ಇದೇ ಅಲ್ಲದೆ ಜನರ ಹಿತಕ್ಕಾಗಿ ನೀರಿನಲ್ಲಿರುವ ಫ್ಲೋರೇಸಿಸ್‌ನಿಂದ ಆಗುವ ಅನಾಹುತಗಳನ್ನು ತಪ್ಪಿಸಲು ಊರು ಊರಿಗೆ ಹೋಗಿ ಪ್ರಚಾರ ಮಾಡುತ್ತಿದ್ದರು. ಇದರಿಂದ ಕೆಲವು ಖಾಯಿಲೆಗಳು ಬಾರದೆ ಇರುವ ಹಾಗೆ ಎಚ್ಚರಿಕೆ ಕೊಡುತ್ತಿದ್ದರು. ರೈತರಿಗೆ ವ್ಯವಸಾಯ ಮಾಡಲು ಒಳ್ಳೊಳ್ಳೆ ಬೀಜಗಳನ್ನು ಬಿತ್ತನೆ ಮಾಡಲು ಹಾಗೂ ಪೌಷ್ಠಿಕಾಂಶವಿರುವ ಬೆಳೆಯನ್ನು ಬೆಳೆಯಲು ಪ್ರೋತ್ಸಾಹಿಸುತ್ತಿದ್ದರು. ಅಲ್ಲದೆ ಅನೇಕ ಶಾಲೆಗಳಲ್ಲಿ ಬೇಸಿಗೆಯ ರಜಾ ಕಾಲದಲ್ಲಿ ವಿದ್ಯಾರ್ಥಿಗಳಿಗೆ ಮನರಂಜನಾ ಕಾರ್ಯಗಳನ್ನು ಏರ್ಪಡಿಸುತ್ತಿದ್ದರು. ಅನೇಕ ಶಾಲೆಗಳ ಆವರಣದಲ್ಲಿ ಗಿಡಗಳು ನೆಡುವ ಕಾರ್ಯಗಳನ್ನು ಏರ್ಪಡಿಸುತ್ತಿದ್ದರು. ಸ್ವಾರ್ಥಕ್ಕಾಗಿ ಎಂದೂ ಆಸೆ ಪಡದೆ ಪರೋಪಕಾರ್ಯಗಳನ್ನೇ ಈಗಲೂ ಮಾಡುತ್ತಿದ್ದಾರೆ ಅಂದರೆ ಅಚ್ಚರಿಯೇ ಸರಿ.





04

# ಹೆಮ್ಮೆಯ ಬಂಧು

– ಕೆ.ಜಿ. ಲಕ್ಷ್ಮೀನಾರಾಯಣ
ಕೆವಿನ್ನೆಸ್‌ರವರ ಭಾವ ಮೈದುನ

ಶ್ರೀಯುತ ಕೆ. ನಾರಾಯಣಸ್ವಾಮಿಯವರು ನನಗೆ ಬಾಲ್ಯದಿಂದಲೂ ಚಿರಪರಿಚಿತರು. ಅವರು ನನಗೆ ಬಂಧುಗಳೂ ಆಗಿದ್ದರು. 1947ರಲ್ಲಿ ಪ್ರಾಥಮಿಕ 5ನೇ ತರಗತಿಯಲ್ಲಿ ಅವರೂ ನಾನು ಹೊಸೂರಿನ ಮಾಧ್ಯಮಿಕ ಶಾಲೆಯಲ್ಲಿ ಒಂದು ವರ್ಷ ಮಾತ್ರ ಜೊತೆಯಲ್ಲಿಯೇ ವ್ಯಾಸಂಗ ಮಾಡಿ 6ನೇ ತರಗತಿಗೆ ನಾನು ಗೌರಿಬಿದನೂರಿನ ಕೋಟೆ ಮಾಧ್ಯಮಿಕ ಶಾಲೆಯಲ್ಲಿ ವ್ಯಾಸಂಗ ಮುಂದುವರಿಸಿದೆವು. ಆಚಾರ್ಯ ಪ್ರೌಢಶಾಲೆಯಲ್ಲಿ ಓದಿ SSLC ನಂತರ ತುಮಕೂರಿನ ಫಸ್ಟ್‌ಗ್ರೇಡ್ ಕಾಲೇಜಿನಲ್ಲಿ ಬಿ.ಎ. ಪದವಿಯನ್ನು ಮುಗಿಸಿ ಶಿಕ್ಷಕರ ಹುದ್ದೆಗೆ ಸೇರಿಕೊಂಡೆನು.

ದಿನಾಂಕ 29-06-1964ರಲ್ಲಿ ಶ್ರೀ ನಾರಾಯಣಸ್ವಾಮಿ ಯವರ ಸಹೋದರಿಯವರಾದ ಚಿ.ಸೌ. ವೆಂಕಟಲಕ್ಷ್ಮಮ್ಮನವರೊಂದಿಗೆ ವಿವಾಹ ಮಾಡಿಕೊಟ್ಟರು. ಅಂದಿನಿಂದ ಅವರು ನನಗೆ ಭಾವನವರಾದರು. ಸಂಬಂಧ ಬೆಳೆದ ನಂತರ ನಮ್ಮ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತಿದ್ದರು. ಅನೇಕ ವಿಚಾರಗಳಲ್ಲಿ ನಮಗೂ ನಮ್ಮ ಮಕ್ಕಳಿಗೂ ಮಾರ್ಗದರ್ಶನ ಕೊಡುತ್ತಿದ್ದಾರೆ.

ದಿನಾಂಕ 23-8-1967ರಲ್ಲಿ ನನ್ನ ತಂಗಿಯವರಾದ ಚಿ.ಸೌ. ಜಿ. ಜಯಕುಮಾರಿಯವರನ್ನು ಅವರ ತಂದೆ ತಾಯಿಯವರ ವಿರೋಧ ಕಟ್ಟಿಕೊಂಡು ಇಷ್ಟಪಟ್ಟು ವಿವಾಹವಾದರು. ಕೆಲವು ವರ್ಷಗಳು ಅವರು ತಂದೆಯವರಿಗೂ ನಮ್ಮ ತಂದೆಯವರಿಗೂ ಅವಿಶ್ವಾಸ



ಉಂಟಾಗಿ ದೂರ ದೂರ ಉಳಿದುಬಿಟ್ಟರು. ದಿನ ಕ್ರಮೇಣ ದ್ವೇಷ ದೂರವಾಗಿ ಮತ್ತೆ ಒಂದಾಗಿ ಅನ್ಯೋನ್ಯವಾಗಿಯೇ ಇದ್ದೆವು.

1993ರಲ್ಲಿ ಅವರ ಏಕೈಕ ಪುತ್ರಿ ಚಿ.ಸೌ. ಪದ್ಮರವರನ್ನು ನನ್ನ ಹಿರಿಯ ಮಗನಾದ ಚಿ. ಕೆ.ಎಲ್. ವೇಣುಗೋಪಾಲ್‌ರವರೊಂದಿಗೆ ವಿವಾಹ ಮಾಡಿಕೊಟ್ಟರು. ಈಗ ಅವರು BWSSBನಲ್ಲಿ AEE ಆಗಿ ಕೆಲಸ ಮಾಡುತ್ತಿದ್ದಾರೆ. ಮೂರು ಕಡೆ ಸಂಬಂಧದಿಂದ ಅವರಿಗೂ ನಮಗೂ ಪ್ರೀತಿ ವಿಶ್ವಾಸ ಮತ್ತಷ್ಟು ಹೆಚ್ಚಾಯಿತು.

ಶ್ರೀ ಕೆ. ನಾರಾಯಣಸ್ವಾಮಿಯವರು ಆಗಿನ ಕಾಲಕ್ಕೆ ತಕ್ಕಂತೆ ಉನ್ನತ ಶಿಕ್ಷಣ ಪಡೆದು, ಶಿಕ್ಷಕರಾಗಿ ಉಪನ್ಯಾಸಕರಾಗಿ, ಪ್ರಾಂಶುಪಾಲರಾಗಿ, ಉಪನಿರ್ದೇಶಕರಾಗಿ ಕೊನೆಯಲ್ಲಿ ಜಂಟಿ ನಿರ್ದೇಶಕರಾಗಿ ಸೇವೆ ಸಲ್ಲಿಸಿ 1995ರ ಏಪ್ರಿಲ್ ಮಾಹೆಯಲ್ಲಿ ನಿವೃತ್ತಿ ಹೊಂದಿ ಸಮಾಜ ಸೇವೆಯಲ್ಲಿ ನಿರತರಾಗಿದ್ದಾರೆ. ದಲಿತರ ಏಳಿಗೆಗಾಗಿ ಶ್ರಮಿಸುತ್ತಿದ್ದಾರೆ.

ಶ್ರೀ ನಾರಾಯಣಸ್ವಾಮಿಯವರ ಆರೋಗ್ಯ ಸ್ಥಿತಿ ಉತ್ತಮವಾಗಿಲ್ಲದಿದ್ದರೂ ಕೂಡ ಅವರು ಆಗಾಗ್ಗೆ ಹಳ್ಳಿಗಳಿಗೆ ಹೋಗಿ ರೈತರನ್ನು ಭೇಟಿ ಮಾಡಿ ಫ್ಲೋರೈಡ್ ನೀರಿನ ಬಗ್ಗೆ, ಬೆಳೆಗಳಾದ ಸಜ್ಜೆ, ನವಣೆ, ಜೋಳ, ರಾಗಿ ಇತ್ಯಾದಿ ಬೆಳೆಗಳ ಬಗ್ಗೆ ತಿಳಿಸುತ್ತಾರೆ. ಅವರ ಕಾರ್ಯಕ್ರಮಗಳನ್ನು ಮೆಚ್ಚಿ ಅನೇಕ ಸಂಘ ಸಂಸ್ಥೆಗಳಿಂದ ಪ್ರಶಂಸಾ ಪತ್ರಗಳು ಹಾಗೂ ಬಹುಮಾನಗಳನ್ನು ಪಡೆದಿದ್ದಾರೆ. ಕೊನೆಯದಾಗಿ ಹೇಳುವುದಾದರೆ ಬೆಳಗಾದರೆ ಸಾಕು ಅವರ ದಿನಚರಿಯಲ್ಲಿ ಸಮಾಜದ ಕೆಲಸಗಳು ಹತ್ತಾರು ಕಾದಿರುತ್ತವೆ.



05

# ಕೆ.ಎನ್.ಎಸ್. ಕಿರುಪರಿಚಯ

– ಡಾ. ಕೆ.ಪಿ. ನಾರಾಯಣಪ್ಪ
ಕನ್ನಡ ಪ್ರಾಧ್ಯಾಪಕರು ಹಾಗೂ ಹವ್ಯಾಸಿ ಪತ್ರಕರ್ತರು

ಕೆ. ನಾರಾಯಣಸ್ವಾಮಿಯವರು ಅವಿಭಜಿತ ಕೋಲಾರ ಜಿಲ್ಲೆಯಲ್ಲಿನ ದಲಿತ ಸಮುದಾಯದಲ್ಲಿ ದಲಿತ ಪ್ರಜ್ಞೆಯನ್ನು ಮೂಡಿಸಿದವರಲ್ಲಿ ಪ್ರಮುಖರು. ಶಿಕ್ಷಣ ಇಲಾಖೆಯಲ್ಲಿ ಅಧ್ಯಾಪಕರಾಗಿ, ಪ್ರಾಂಶುಪಾಲರಾಗಿ, ಉಪನಿರ್ದೇಶಕರಾಗಿ, ಸಹ ನಿರ್ದೇಶಕರಾಗಿ (ಜಂಟಿ ನಿರ್ದೇಶಕರು) ಸೇವೆ ಸಲ್ಲಿಸುತ್ತಲೇ ಸಮಾಜದಲ್ಲಿನ ಶೋಷಣೆ, ಅನಿಷ್ಟ ಪದ್ಧತಿಗಳ ವಿರುದ್ಧ ಜನ ಜಾಗೃತಿಯನ್ನು ಮೂಡಿಸಿದರು. ಸಾಮಾನ್ಯ ಜನರೊಡನೆ ಬೆರೆತು ಅವರ ಸಮಸ್ಯೆಗಳನ್ನು ಸಮಗ್ರವಾಗಿ ಅರಿತುಕೊಂಡು ಶೋಷಣೆಯನ್ನು ಕಂಡಾಗ ಮನದಲ್ಲೇ ಸಿಡಿದೆದ್ದವರು. ಸರ್ಕಾರದ ನಿಯಮಗಳ ಜಾಲದಲ್ಲಿ ಸಿಲುಕಿರುವ ತಾವು ಏನೂ ಮಾಡಲಾಗುತ್ತಿಲ್ಲವಲ್ಲ ಎಂದು ವಿಲಿವಿಲಿ ಒದ್ದಾಡಿದರು. ಬಡವರ ಕಷ್ಟಗಳನ್ನು ಕಂಡು ಕನಿಕರಿಸಿ ಮಮ್ಮಲ ಮರುಗಿದರು.

## ಬಾಲ್ಯ

ಕೆ. ನಾರಾಯಣಸ್ವಾಮಿಯವರು ಅವಿಭಜಿತ ಕೋಲಾರ ಜಿಲ್ಲೆಯಲ್ಲಿ KNS ಎಂದೇ ಚಿರಪರಿಚಿತರು. ಇವರು 1937ರ ಏಪ್ರಿಲ್ 2ರಂದು ಗೌರಿಬಿದನೂರು ತಾಲ್ಲೂಕು ಹೊಸೂರು ಗ್ರಾಮದ ಶಿಕ್ಷಕ ಕಂಬಯ್ಯ ಮತ್ತು ತಿಮ್ಮಕ್ಕ ದಂಪತಿಯ ಪುತ್ರರಾಗಿ ಜನಿಸಿದರು. ಈ ದಂಪತಿಗೆ KNS ಒಬ್ಬರೇ ಮಗನಾದರೂ ನಾಲ್ಕು ಮಂದಿ ಹೆಣ್ಣು ಮಕ್ಕಳಿದ್ದರು. ತಂದೆ ಕಂಬಯ್ಯ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದು,

ತಮ್ಮ ಎಲ್ಲಾ ಮಕ್ಕಳಿಗೆ ಶಿಕ್ಷಣ ಕೊಡಿಸಿದರು. (ಆದರೆ ಒಬ್ಬ ಮಗಳಿಗೆ ಮಾತ್ರ ಯಾವುದೋ ಕಾರಣಕ್ಕೆ ಶಿಕ್ಷಣ ಕೊಡಿಸಲಿಲ್ಲ) ಶಿಕ್ಷಣ ಪಡೆದ ಮಕ್ಕಳೆಲ್ಲರೂ ಶಿಕ್ಷಕರಾಗಿಯೇ ಸೇವೆಯನ್ನು ಸಲ್ಲಿಸಿ 'ಉತ್ತಮ ಶಿಕ್ಷಕ' ಪ್ರಶಸ್ತಿಯನ್ನು ಪಡೆದಿದ್ದಾರೆ.

ತಂದೆ ಕಂಬಯ್ಯನವರು ಬ್ರಿಟಿಷರ ಕಾಲದ ಶಿಕ್ಷಣವನ್ನು ಪಡೆದಿದ್ದರು. ಅಂತೆಯೇ ಸ್ವಭಾವತಃ ಶಿಸ್ತುಬದ್ಧ ಮನುಷ್ಯರು. ಶಾಲೆಗೆ ಹೋಗುವುದನ್ನು ಒಂದು ದಿನವೂ ತಪ್ಪಿಸಿದವರಲ್ಲ. ಆಗಿನ ಕಾಲದಲ್ಲಿ ವಾಹನ ಸೌಕರ್ಯ ಇರಲಿಲ್ಲ. ಆದ್ದರಿಂದ ನಡೆದುಕೊಂಡು (ಹತ್ತಾರು ಮೈಲಿ) ಹೋಗಿ ಬರುತ್ತಿದ್ದರು. ಮಳೆಗಾಲದಲ್ಲೂ ಶಾಲೆಯನ್ನು ತಪ್ಪಿಸಿದವರಲ್ಲ. ಇವರು ಮಳೆಗಾಲದ ಒಂದು ದಿನ ಶಾಲೆಗೆ ಕೊಡೆ ಹಿಡಿದುಕೊಂಡು ಹೋಗುತ್ತಿದ್ದಾಗ ನಡೆದ ಘಟನೆಯೊಂದನ್ನು KNSರವರ ಖಾಸಾ ಚಿಕ್ಕಪ್ಪ ಕೆ.ಎಚ್. ಕದಿರಪ್ಪ ಮೇಸ್ಟ್ರು ನೆನಪಿಸಿಕೊಂಡು ಬಹಳ ಸ್ವಾರಸ್ಯಕರವಾಗಿ ಹೇಳುತ್ತಿದ್ದರು. 'ಮಳೆಗಾಲದ ಒಂದು ದಿನ ಧಾರಾಕಾರವಾಗಿ ಮಳೆ ಸುರಿಯುತ್ತಿತ್ತು. ಕಂಬಯ್ಯ ಮೇಸ್ಟ್ರು ಛತ್ರಿ ಹಿಡಿದುಕೊಂಡು ಶಾಲೆಗೆ ಹೊರಟೇ ಬಿಟ್ಟರು. ಅರ್ಧ ದಾರಿಗೆ ಬಂದಿರಬೇಕು, ಅದು ಬಟಾಬಯಲು ಪ್ರದೇಶ. ಮಳೆಯ ಜೊತೆಗೆ ಬಿರುಗಾಳಿಯೂ ಪ್ರಾರಂಭವಾಗಿ ಅವರು ಹಿಡಿದಿದ್ದ ಛತ್ರಿ ಗಾಳಿಗೆ ಮೇಲಕ್ಕೆ ಹಾರಿತು. ಇವರು ಬಿಡಲಿಲ್ಲ. ಆದರೆ ಅದು ಮೇಲ್ಮುಖವಾಗಿ ಹಾರಿ ಇವರು ನೇತಾಡುವಂತಾಯಿತು. ಅದರ ಎಳೆದಾಟ ಜಗ್ಗಾಟದಲ್ಲಿ ಬಿದ್ದು ಬಟ್ಟೆಯೆಲ್ಲಾ ಕೆಸರಾಗಿ ಪರದಾಡುವಂತಾಯಿತು" ಎಂದು ಹಿಂದಿನದನ್ನು ನೆನಪಿಸಿಕೊಂಡು ಕದಿರಪ್ಪ ಮೇಸ್ಟ್ರು ತಮ್ಮ ಇಳಿವಯಸ್ಸಿನಲ್ಲೂ ಅಣ್ಣನ ಶಿಸ್ತು ಬದ್ಧ ಜೀವನವನ್ನು ಹಾಸ್ಯ ಮಾಡುತ್ತಿದ್ದರು.

ಅಪ್ಪನ ಈ ಶಿಸ್ತುಬದ್ಧ ಜೀವನ ಮಕ್ಕಳ ಬದುಕಿನ ಮೇಲೂ ಪ್ರಭಾವ ಬೀರಿತು. ಆದ್ದರಿಂದಲೇ ಕಂಬಯ್ಯ ಮೇಸ್ಟ್ರ ಮೂರು ಮಂದಿ ಹೆಣ್ಣು ಮಕ್ಕಳು 'ಉತ್ತಮ ಶಿಕ್ಷಕ' ಪ್ರಶಸ್ತಿಯನ್ನು ಪಡೆದಿದ್ದಾರೆ. ಇವರು ಸೇವೆ ಸಲ್ಲಿಸಿದ ಶಾಲೆಗಳಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳು ಇಂದಿಗೂ ಇವರನ್ನು ನೆನಪಿಸಿಕೊಳ್ಳುತ್ತಿದ್ದಾರೆ.

ನಾಲ್ಕು ಮಂದಿ ಹೆಣ್ಣು ಮಕ್ಕಳ ಮಧ್ಯೆ ಒಬ್ಬನೇ ಗಂಡು ಮಗ KNSರವರು. ಆದ್ದರಿಂದಲೇ ಅಪ್ಪ ಕಂಬಯ್ಯರಿಗೆ KNS ಬಗ್ಗೆ ತುಂಬಾ ಕಾಳಜಿ. ಈ ಕಾಳಜಿ ಅನೇಕ ಸಂದರ್ಭಗಳಲ್ಲಿ ಅತಿಯಾಗಿ KNSರವರ ಸ್ವಾತಂತ್ರ್ಯವನ್ನು ಮೊಟುಕುಗೊಳಿಸಿದ್ದೂ ಉಂಟು. ಜೊತೆಗೆ ಮನಸ್ಸಿನ ಭಿತ್ತಿಯಲ್ಲಿ ಭೀತಿಯು ನೆಲೆಯೂರಿತು. ಇದರಿಂದ ತಮ್ಮಲ್ಲಿ ಈಗಲೂ ಸಂಕೋಚ, ಹಿಂಜರಿಕೆ ಭಾವನೆಗಳು ಮನೆ ಮಾಡಿಕೊಂಡಿವೆ ಎಂದು ಇವರು ಅಪ್ಪನ ಅತಿ ಶಿಸ್ತಿನ ಬಗ್ಗೆ ನೆನಪಿಸಿಕೊಳ್ಳುತ್ತಾರೆ.

ಅಪ್ಪ ಅಮ್ಮ ಮತ್ತು ಸಹೋದರಿಯರು ತಮ್ಮ ಮೇಲೆ ಅತಿಯಾಯಿತು ಎಂಬಷ್ಟು ಪ್ರೀತಿಯ ಇಟ್ಟಿದ್ದರೂ ಸಹ ಇವರು ವ್ಯಾಸಂಗದಲ್ಲಿ ಎಂದೂ ಹಿಂದುಳಿಯಲಿಲ್ಲ. ಅಕ್ಕ-ತಂಗಿಯರು SSLCಯವರೆಗೆ ಓದಿದ ನಂತರ ಶಿಕ್ಷಣವನ್ನು ಮೊಟುಕುಗೊಳಿಸಿ ಉದ್ಯೋಗಕ್ಕೆ ಸೇರಿದರು. ಆದರೆ ಇವರು ಮಾತ್ರ ಸ್ನಾತಕೋತ್ತರ ಪದವಿಯವರೆಗೆ ಶಿಕ್ಷಣ ಮುಂದುವರೆಸಿದರು.

ಶಿಸ್ತು, ಸಂಯಮಗಳು ತಂದೆಯಿಂದ ಬಳುವಳಿಯಾಗಿ ಬಂದವಾದರೂ ಬದುಕನ್ನು ವಿಶಿಷ್ಟ ರೀತಿಯಲ್ಲಿ ಕಟ್ಟಿಕೊಳ್ಳುವುದಕ್ಕೆ ಪೂರಕವಾಗಿ ಸಮಾಜಮುಖಿ ಆಲೋಚನೆಗಳನ್ನು ಬೆಳೆಸಿಕೊಳ್ಳುವಂತಹ ಭಾವನೆಯನ್ನು ಬಿತ್ತಿ ಬೆಳೆಸಿದವರು ಅವರ ಚಿಕ್ಕಪ್ಪ ಕೆ.ಹೆಚ್. ಕದಿರಪ್ಪ ಮೇಷ್ಟ್ರು. ಇವರು ಮಾಧ್ಯಮಿಕ ಶಾಲಾ ಶಿಕ್ಷಕರಾಗಿದ್ದರು. ಇವರು KNSರವರಿಗೆ ಕೇವಲ ಚಿಕ್ಕಪ್ಪ ಆಗಿರದೆ, ಗುರುಗಳು, ಮಾರ್ಗದರ್ಶಕರೂ ಆಗಿದ್ದರು. ತಂದೆಯ ಬಳಿ ಹಂಚಿಕೊಳ್ಳದ ಎಷ್ಟೋ ವಿಷಯಗಳನ್ನು ಇವರ ಬಳಿ ಹಂಚಿಕೊಳ್ಳುತ್ತಿದ್ದರು. ತಂದೆಗಿಂತಲೂ ಹೆಚ್ಚಾಗಿ ಅವರನ್ನು ಗೌರವಿಸುತ್ತಿದ್ದರು. ಅವರು ನಿಧನರಾದ ದಿನದಂದು ತಮ್ಮ ವಯಸ್ಸನ್ನು ಮರೆತು ಗಳಗಳನೆ ಅತ್ತುಬಿಟ್ಟರು.

## ಶಿಕ್ಷಣ

ಇವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ತಮ್ಮ ಹುಟ್ಟೂರಾದ ಹೊಸೂರಿನಲ್ಲಿ ಪಡೆದರು. ನಂತರ ಪ್ರೌಢಶಾಲಾ ಶಿಕ್ಷಣವನ್ನು ಗೌರಿಬಿದನೂರಿನ ಆಚಾರ್ಯ ಪ್ರೌಢಶಾಲೆಯಲ್ಲಿ, ತುಮಕೂರಿನಲ್ಲಿ ಸಿದ್ಧಗಂಗಾ ಮಠದಲ್ಲಿದ್ದುಕೊಂಡು ಇಂಟರ್‌ಮಿಡಿಯಟ್ ತರಗತಿಯನ್ನು ವ್ಯಾಸಂಗ ಮಾಡಿದರು. ಬಿ.ಎ. ಆನರ್ಸ್‌ನ್ನು ಮೈಸೂರಿನಲ್ಲಿ ಅಧ್ಯಯನ ಮಾಡಿದರು. ಈ ಸಮಯದಲ್ಲಿ ಅವರು ಹಿಂದಿ ಲೇಖನಗಳನ್ನು ಕನ್ನಡಕ್ಕೆ ಅನುವಾದ ಮಾಡಿ, ಅದರಿಂದ ಬಂದ ಹಣವನ್ನು ತಮ್ಮ ವ್ಯಾಸಂಗಕ್ಕೆ ಬಳಸಿಕೊಂಡರು. ಇವರ ಇಂತಹ ಹಲವು ಅನುವಾದಿತ ಲೇಖನಗಳು ಪ್ರಜಾವಾಣಿ, ಸಂಯುಕ್ತ ಕರ್ನಾಟಕ ಮತ್ತು ಪುಸ್ತಕ ಪ್ರಪಂಚ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹೀಗೆ ಇವರು ವಿದ್ಯಾರ್ಥಿ ದೆಸೆಯಲ್ಲೇ ಅನುವಾದದಲ್ಲಿ ಅಭಿರುಚಿಯನ್ನು ಬೆಳೆಸಿಕೊಂಡು ಮೊದಮೊದಲ ಹಣಗಳಿಕೆಗಾಗಿ ಮಾಡುತ್ತಿದ್ದ ಅನುವಾದ ನಂತರದ ದಿನಗಳಲ್ಲಿ ಸಾಹಿತ್ಯ ಕೃಷಿಗಾಗಿ ಮಾಡತೊಡಗಿದರು. ಇದರಿಂದಾಗಿ ಹಲವು ಕೃತಿಗಳು ಹಿಂದಿ-ತೆಲುಗಿನಿಂದ ಇವರ ಮೂಲಕ ಕನ್ನಡಕ್ಕೆ ಬಂದವು.

ಮೈಸೂರಿನಲ್ಲಿ ಮೂರು ವರ್ಷಗಳ ಬಿ.ಎ. ಆನರ್ಸ್ ಕೋರ್ಸು ಮುಗಿದ ಮೇಲೆ ಒಂದು ವರ್ಷ ಕನ್ನಡ ಎಂ.ಎ. ತರಗತಿಯನ್ನು ಮೈಸೂರು ಮಹಾರಾಜ ಕಾಲೇಜಿನಲ್ಲಿ



ವ್ಯಾಸಂಗ ಮಾಡಿದರು. ಇಲ್ಲಿ ಹೆಸರಾಂತ ಲೇಖಕರಾದ ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಸಿ.ಪಿ. ಕೃಷ್ಣಕುಮಾರ್‌ರವರು ಇವರ ಸಹಪಾಠಿಗಳಾಗಿದ್ದರು. ಡಿ.ಎಲ್. ನರಸಿಂಹಾಚಾರ್, ಎಲ್. ಬಸವರಾಜು, ತೀ.ನಂ.ಶ್ರೀ., ದೇಜಗೌ, ಹಾ.ಮಾ. ನಾಯಕ, ಎಸ್. ಶ್ರೀಕಂಠಯ್ಯ, ಕೆ. ಸುಬ್ಬರಾಮಪ್ಪ ಮುಂತಾದ ಸಾಹಿತಿಗಳು ಗುರುಗಳಾಗಿದ್ದರು.

## ಉದ್ಯೋಗ

ಎಂ.ಎ. ಪದವಿಯ ನಂತರ ಮೈಸೂರಿನ ಸೆಂಟ್ ಮೇರಿಸ್ ಕಾನ್ವೆಂಟ್, ಚಾಮುಂಡಿ ಪುರದಲ್ಲಿ ಶಿಕ್ಷಕ ವೃತ್ತಿ ಪ್ರಾರಂಭಿಸಿದರು. ಇಲ್ಲಿ 2 ವರ್ಷಗಳ ತರುವಾಯ ತಮ್ಮ ಸ್ವಗ್ರಾಮಕ್ಕೆ ಮರಳಿ ಆಗ ತಾನೆ ಹೊಸೂರಿನಲ್ಲಿ ಪ್ರಾರಂಭವಾಗಿದ್ದ ಡಾ. ಎಚ್ಚೆನ್ ನ್ಯಾಷನಲ್ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಸೇವೆಯನ್ನು ಪ್ರಾರಂಭಿಸಿದರು. ಆದರೆ ಅಲ್ಲಿ ಹುದ್ದೆ ಖಾಯಂ ಆಗುವ ಸಾಧ್ಯತೆಗಳು ಇಲ್ಲ ಎಂಬ ಉದ್ದೇಶದಿಂದ ಅದನ್ನು ಬಿಟ್ಟು ಚಿಂತಾಮಣಿಯ ಮುನಿಸಿಪಲ್ ಪ್ರಥಮ ದರ್ಜೆ ಕಾಲೇಜಿನ ಕನ್ನಡ ಅಧ್ಯಾಪಕರ ಹುದ್ದೆಗೆ ಸೇರಿಕೊಂಡರು. ಹೊಸೂರಿನ ಹೈಸ್ಕೂಲ್‌ನಿಂದ ಇಲ್ಲಿಗೆ ಬಂದದ್ದು ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು. ಅವರಲ್ಲಿ ಅಡಗಿದ್ದ ಸುಪ್ತ ಪ್ರತಿಭೆಗೆ ಇಲ್ಲಿ ವಿಶಾಲವಾದ ಆವರಣ ದೊರೆತು, ಅದು ಅಂಕುರಿಸಿ ಪುಟ ನೆಗೆದು ಹೆಮ್ಮರವಾಯಿತು. ಜಿಲ್ಲೆಯಾದ್ಯಂತ ವ್ಯಾಪಿಸಿಕೊಳ್ಳುವಂತಾಯಿತು.

KNSರವರು ಒಂದು ದಿನ ಚಿಂತಾಮಣಿಯಿಂದ ಶ್ರೀನಿವಾಸಪುರ ಬಸ್ಸಿನಲ್ಲಿ ಹೋಗುತ್ತಿದ್ದಾಗ ಚಿಂತಾಮಣಿ ತಾಲ್ಲೂಕಿನ ಕೊಡದವಾಡಿ ಗ್ರಾಮದ ಬಳಿ ರಸ್ತೆ ಬದಿಯಲ್ಲಿ ತಲೆಯ ಮೇಲೆ ಸೌದೆ ಹೊರೆಯನ್ನು ಹೊತ್ತುಕೊಂಡು ಬರುತ್ತಿದ್ದ ಯುವಕನನ್ನು ಕಂಡರು. ಅಸ್ಪಷ್ಟವಾಗಿ ಗುರುತು ಸಿಕ್ಕಿತು. ಅದರ ಜೊತೆಗೆ ಮನಸ್ಸಿನಲ್ಲಿ ಹಲವು ಪ್ರಶ್ನೆಗಳು ಮೂಡಿದವು. ಹೀಗೆ ಇರುವಾಗಲೇ ಸದರಿ ಯುವಕ ಒಂದು ದಿನ ಚಿಂತಾಮಣಿ ಪಟ್ಟಣದ ಬೀದಿಯಲ್ಲಿ ಕಾಣಿಸಿದನು. ಅವನ ಬಾಡಿದ ಮುಖ, ತಾರಿದ ತಲೆಕೂದಲು, ಮಾಸಿದ ಬಟ್ಟೆ, ಕೃಶವಾದ ದೇಹವನ್ನು ಕಂಡು ಕರುಳು 'ಚುರುಕ್' ಎಂದಿತು. ತಡೆದು ನಿಲ್ಲಿಸಿ ಅವರ ವಿವರಗಳನ್ನು ಕೇಳಿದರು.

ಅವರು ಚಿಂತಾಮಣಿ ತಾಲ್ಲೂಕಿನ ಗ್ರಾಮವೊಂದರ ದಲಿತ ಯುವಕ. ಹೆಸರು ಮುನಿವೆಂಕಟಪ್ಪ. ಅವರ ತಂದೆ-ತಾಯಿ ಇಬ್ಬರೂ ತೀರಿಕೊಂಡಿದ್ದಾರೆ. ಆದ್ದರಿಂದ ಚಿಕ್ಕಪ್ಪ - ಚಿಕ್ಕಮ್ಮನ ಮನೆಯಲ್ಲಿ ಆಶ್ರಯ ಪಡೆದಿದ್ದಾರೆ. ಅವರು ಷರತ್ತಿನ ಮೇರೆಗೆ ಊಟ ಹಾಕುತ್ತಿದ್ದಾರೆ. ಆ ಷರತ್ತು 'ಏನಪ್ಪಾ ಅಂದರೆ, ಇವರು ಪ್ರತಿದಿನ ಒಂದು ಸೌದೆ ಹೊರೆಯನ್ನು ಬೆಟ್ಟದಿಂದ ತಂದು ಪೇಟೆಯಲ್ಲಿ ಮಾರಿ, ಅದರ ಹಣವನ್ನು ಅವರಿಗೆ

ನೀಡಿದರೆ ಮಾತ್ರ ಊಟ ಹಾಕುತ್ತಾರೆ. ಇಲ್ಲವಾದರೆ ಉಪವಾಸ ಕೆಡವುತ್ತಾರೆ. ಆದ್ದರಿಂದಲೇ PUC ಫೇಲಾಗಿದ್ದ ಮುನಿವೆಂಕಟಪ್ಪ ಅದನ್ನು ಮತ್ತೊಮ್ಮೆ ಕಟ್ಟಿ ಪಾಸ್ ಮಾಡಿಕೊಳ್ಳಲು ಆಗಿಲ್ಲ (PUC ಓದುವಾಗಲೇ ಮುನಿವೆಂಕಟಪ್ಪ KNSರವರಿಗೆ ವಿದ್ಯಾರ್ಥಿಯಾಗಿದ್ದರು) ಸತ್ಯಸಂಗತಿಯನ್ನು ತಿಳಿದುಕೊಂಡ ಇವರು 'ಮುನಿವೆಂಕಟಪ್ಪರಿಗೆ ಕೇಳಿದರು, ಈಗ ಓದುವುದಕ್ಕೆ ಮತ್ತು ಊಟಕ್ಕೆ ಅನುಕೂಲ ಮಾಡಿಕೊಟ್ಟರೆ PUC ಪರೀಕ್ಷೆ ಕಟ್ಟಿ ಪಾಸ್ ಮಾಡಿಕೊಳ್ಳುತ್ತೀಯಾ?' ಎಂದು ಅದಕ್ಕೆ ಮುನಿವೆಂಕಟಪ್ಪ 'ಮಾಡುತ್ತೇನೆ ಸಾರ್' ಎಂದರು.

ತಾವು ಆಡಿದ ಮಾತಿನಂತೆ KNSರವರು ಮುನಿವೆಂಕಟಪ್ಪರವರಿಗೆ ವಾಸಕ್ಕೆ ಬಾಡಿಗೆ ರೂಂ ಮಾಡಿಕೊಟ್ಟರು. ಜೊತೆಗೆ ನಿತ್ಯ ಮನೆಯಲ್ಲಿ ಉಚಿತವಾಗಿ ಊಟ ಹಾಕಿದರು. ಇವುಗಳನ್ನು ಸದ್ಬಳಕೆ ಮಾಡಿಕೊಂಡ ಮುನಿವೆಂಕಟಪ್ಪ PUC ಪರೀಕ್ಷೆ ಪಾಸ್ ಮಾಡಿದರು. PUC ಪಾಸ್ ಆದ ಮೇಲೆ ಅಂಚೆ ಇಲಾಖೆಯಿಂದ ಅರ್ಜಿ ಕರೆಯಲಾಗಿತ್ತು. ಆ ವಿಷಯವನ್ನು ಮುನಿವೆಂಕಟಪ್ಪರಿಗೆ ತಿಳಿಸಿದ KNS ಹಣ ನೀಡಿ ಅಂಚೆ ಇಲಾಖೆಯ ನೌಕರಿಗೆ ಅರ್ಜಿ ಹಾಕಿಸಿದರು. ಅದರಲ್ಲಿ ಆಯ್ಕೆಯಾಗಿ ಇವರಿಗೆ ನೌಕರಿಯೂ ದೊರೆಯಿತು. ನೌಕರಿ ದೊರೆತ ಮೇಲೆ ಹಲವು ವರ್ಷಗಳು ಮುನಿವೆಂಕಟಪ್ಪ ಸಂಪರ್ಕದಲ್ಲಿದ್ದರು. ಇತ್ತೀಚೆಗೆ ಸಂಪರ್ಕ ಕಡಿದು ಹೋಗಿದೆ ಎನ್ನುವ KNS 'ನನ್ನಲ್ಲಿ ದಲಿತ ಪ್ರಜ್ಞೆಯನ್ನು ಮೂಡಿಸಿದ ವಿದ್ಯಾರ್ಥಿ ಮುನಿವೆಂಕಟಪ್ಪ ಒಂದು ರೀತಿಯಲ್ಲಿ ನನಗೆ ಗುರುವಾಗಿದ್ದಾರೆ' ಎನ್ನುತ್ತಾರೆ.

ಚಿಂತಾಮಣಿ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದ ಅವಧಿಯಲ್ಲೇ ಇವರ ತಂಗಿಯ ನಾದಿನಿಯಾಗಿದ್ದ ಗೌರಿಬಿದನೂರು ತಾಲ್ಲೂಕು ಕಲ್ಲೂಡಿ ಗ್ರಾಮದ ಜಿ. ಜಯಕುಮಾರಿರವರನ್ನು ಇಷ್ಟಪಟ್ಟು ಮದುವೆಯಾಗಲು ಬಯಸಿದರು. ತಂದೆ ಕಂಬಯ್ಯರವರಿಗೆ ವಿಷಯ ತಿಳಿದು, 'ಹೆಣ್ಣು ಕೊಟ್ಟು ಮನೆಯಿಂದ ಹೆಣ್ಣು ತರುವುದು ಬೇಡ' ಎಂದು ಆ ಸಂಬಂಧವನ್ನು ಬೇಡವೆಂದರು. ಆದರೆ ಅಪ್ಪನ ಆ ನಂಬಿಕೆಯನ್ನು ಮುರಿದು ಜಯಕುಮಾರಿ ಅವರನ್ನು ಮೆಚ್ಚಿ ಕೈ ಹಿಡಿದರು. ಶ್ರೀಮತಿ ಅವರನ್ನು ಇವರು ಅಂದು ಮಾತ್ರ ಮೆಚ್ಚದೆ, ಇಂದೂ ಸಹ ಮೆಚ್ಚುವ ಹಾಗೆ ಅವರು ಇವರ ಸಾಧನೆಗಳಿಗೆ ಬೆನ್ನೆಲುಬಾಗಿ ನಿಂತಿದ್ದಾರೆ. KNS ನಿರ್ವಹಿಸುವ ಕಾರ್ಯಗಳು, ತೆಗೆದುಕೊಳ್ಳುವ ಎಲ್ಲಾ ತೀರ್ಮಾನಗಳಿಗೆ ಒಕ್ಕೊರಳ ಬೆಂಬಲವನ್ನು ವ್ಯಕ್ತಪಡಿಸುತ್ತಿದ್ದಾರೆ. KNS ಇಂದು ನಮಗೆಲ್ಲಾ ಮಾದರಿ ವ್ಯಕ್ತಿಯಾಗಿದ್ದರೆ, ಅದರಲ್ಲಿ ಇವರಿಗೂ ಸಮಪಾಲು ಇದೆ' ಸತಿಪತಿ ಒಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬ ಜೇಡರದಾಸಿಮಯ್ಯ ಉಕ್ತಿಯಂತೆ ಇವರಿಬ್ಬರ ಬದುಕು ನಡೆದು ಬಂದಿದೆ. KNSರವರ ಸ್ನೇಹಿತರು, ಸಹೋದ್ಯೋಗಿಗಳು ಮನೆಗೆ ಬಂದಾಗ ಊಟ ಉಪಚಾರಗಳಿಗೆ ಕುಂದುಂಟಾಗದಂತೆ ನೋಡಿಕೊಂಡು ಅವರ ಕೆಲಸಗಳಿಗೆ ಬೆಂಬಲವಾಗಿ ಇರುವ ಪರಿಯಂತೂ ಅನನ್ಯವಾದುದು.



## ಜಾಗೃತಿ ಕಾರ್ಯಕ್ರಮಗಳು

ಇದು ಕೌಟುಂಬಿಕ ಸಂಗತಿಯಾದರೆ, ಇನ್ನು ಸೈದ್ಧಾಂತಿಕ ಸಂಗತಿಯತ್ತ ಹೊರಳಿದಾಗ ತೆರೆದುಕೊಳ್ಳುವ ಪುಟವು ಮತ್ತಷ್ಟು ಆಕರ್ಷಕವಾಗಿದೆ. ವಿದ್ಯಾರ್ಥಿ ಮುನಿವೆಂಕಟಪ್ಪರಿಂದ ಇವರಲ್ಲಿ ಜಾಗೃತಗೊಂಡ ದಲಿತ ಪ್ರಜ್ಞೆಯನ್ನು ಅಷ್ಟಕ್ಕೆ ಚಿವುಟಿ ಹಾಕದೆ, ಅದಕ್ಕೆ ನೀರೆರೆದು ಪೋಷಿಸಿ ಸಂವೃದ್ಧವಾಗಿ ಬೆಳೆಯುವಂತೆ ಮಾಡಿದರು. ಇದರ ಫಲವಾಗಿ ಚಿಂತಾಮಣಿಯಲ್ಲಿದ್ದ ಹೈಸ್ಕೂಲ್ ಹಾಸ್ಟೆಲ್‌ಗಳಿಗೆ ಭೇಟಿ ಕೊಡತೊಡಗಿದರು. ಇದರ ಮೂಲಕ ದಲಿತರ ವಸ್ತುಸ್ಥಿತಿಯನ್ನು ಅರಿತುಕೊಂಡು ಅವರ ದುಸ್ಥಿತಿಯನ್ನು ತೊಡೆದು ಹಾಕಲು 'ಹರಿಜನ-ಗಿರಿಜನ ವಿದ್ಯಾರ್ಥಿ ಸಂಘ'ವನ್ನು ಸ್ಥಾಪಿಸಿದರು. ಸಂಘದಡಿಯಲ್ಲಿ ಹಲವು ಕಾರ್ಯಕ್ರಮಗಳನ್ನು ರೂಪಿಸಿದರು. ಇಂತಹ ಕಾರ್ಯಕ್ರಮಗಳಲ್ಲಿ ನಾಯಕರಾಗಿ ರೂಪಗೊಂಡವರು ದಸಂಸದ ರಾಜ್ಯ ಸಂಚಾಲಕ ಗಡ್ಡಂ ವೆಂಕಟೇಶ್, ದಿವಂಗತ ಎನ್. ಶಿವಣ್ಣ, ಇವರ ಸಹೋದರ ಜಿ.ಪಂ. ನಿವೃತ್ತ ಮುಖ್ಯ ಕಾರ್ಯದರ್ಶಿ ನಾರಾಯಣಸ್ವಾಮಿ, ತಾ.ಪಂ. ಇ.ಓ. ಟಿ.ಕೆ. ಬಸವರಾಜ್, ಶಿಕ್ಷಕ ಗುಡಿಯಪ್ಪ, ಇಂಜಿನಿಯರ್ ಪಿ.ವಿ. ನಾಗಪ್ಪರವರು. ಹರಿಜನ - ಗಿರಿಜನ ವಿದ್ಯಾರ್ಥಿ ಸಂಘದ ಮೂಲಕ ಹಮ್ಮಿಕೊಂಡ ವಿಶಿಷ್ಟ ಕಾರ್ಯಕ್ರಮವೆಂದರೆ, ಹರಿಜನರ ಮನೆಗಳಿಗೆ ಸವರ್ಣೀಯರು, ಸವರ್ಣೀಯ ಮನೆಗಳಿಗೆ ಹರಿಜನರು ಹೋಗಿ ಊಟ ಮಾಡುವುದು, ಇದು ಇಂದಿಗೆ ಬಾಲಿಶ ಕಾರ್ಯಕ್ರಮ ಎನಿಸಿದರೂ, 1970ರಲ್ಲಿ ಇದು ತುಂಬಾ ಪ್ರಭಾವ ಬೀರಿತು. ಇದು ಪ್ರಮುಖ ಸುದ್ದಿ ಎಂಬಂತೆ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಇದಾದ ಮೇಲೆ ಸ್ವಲ್ಪ ಸುಧಾರಿಸಿದ ಕಾರ್ಯಕ್ರಮ ಎಂಬಂತೆ 'ಹರಿಜನರಿಗೆ ಎಂತಹ ಶಿಕ್ಷಣಬೇಕು? ಎಂಬ ವಿಷಯದ ಬಗ್ಗೆ ರಾಜ್ಯಮಟ್ಟದ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಯಿತು. ಇದಕ್ಕೆ ಪ್ರಬಂಧಗಳ ಮಹಾಪೂರವೇ ಹರಿದು ಬಂದಿತು. ಇವುಗಳನ್ನೆಲ್ಲಾ ಮೈಸೂರು ವಿಶ್ವವಿದ್ಯಾಲಯದ ಸಮಾಜಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಪಾರ್ವತಮ್ಮನವರಿಗೆ ನೀಡಿ, ತೀರ್ಪು ನೀಡಲು ಕೋರಲಾಯಿತು. ಅವುಗಳ ರಚನೆ, ವಿಷಯವನ್ನು ನೋಡಿ ಅವರು ದಂಗು ಬಡಿದರು. ಅದನ್ನು ಅವರು KNSರ ಬಳಿ ವ್ಯಕ್ತಪಡಿಸಿದರು.

ಅವರು ಚಿಂತಾಮಣಿಯಲ್ಲಿ ಉಪನ್ಯಾಸಕ ವೃತ್ತಿಯ ಜೊತೆ ಜೊತೆಯಲ್ಲೇ ಸಮಾಜದಲ್ಲಿ ಮೌನಕ್ರಾಂತಿಯನ್ನು ಮಾಡುತ್ತಿದ್ದರೆ, ಅತ್ತ ರಾಜ್ಯದಲ್ಲಿ ಸಚಿವ ಬಿ. ಬಸವಲಿಂಗಪ್ಪ ಕನ್ನಡ ಸಾಹಿತ್ಯವನ್ನು 'ಬೂಸಾ ಸಾಹಿತ್ಯ' ಎಂದು ಜರಿದು ವೈಚಾರಿಕ ಬಿರುಗಾಳಿಯನ್ನು ಮೂಡಿಸಿದ್ದರು. ಅದನ್ನು ಬೆಂಬಲಿಸಿ ಇವರು ಚಿಂತಾಮಣಿಯಲ್ಲಿ ಪತ್ರಿಕಾ ಹೇಳಿಕೆಯನ್ನು ನೀಡಿದರು. ಇದರ ಮುಂದುವರೆದ ಭಾಗವಾಗಿ ದಲಿತರ ಹಕ್ಕುಗಳಿಗೆ ಒತ್ತಾಯಿಸಿ ಸ್ವಾತಂತ್ರ್ಯ ದಿನಾಚರಣೆಯಲ್ಲಿ ಕಪ್ಪು ಬಾವುಟ ಪ್ರದರ್ಶಿಸಲಾಗುವುದು



ಎಂದೂ ಪತ್ರಿಕಾ ಹೇಳಿಕೆಗಳನ್ನು ನೀಡಲಾಯಿತು. ಆದರೆ ಅದು ಕಾರಣಾಂತರಗಳಿಂದ ನಡೆಯಲಿಲ್ಲ.

ಈ ಅವಧಿಯಲ್ಲೇ ಚಿಂತಾಮಣಿಯಲ್ಲಿ ಒಂದು ಪ್ರಶಂಸನೀಯವಾದ ಕಾರ್ಯವನ್ನು ಹರಿಜನ - ಗಿರಿಜನ ವಿದ್ಯಾರ್ಥಿ ಸಂಘ ನಿರ್ವಹಿಸಿತು. ಇದು ಕೇವಲ ಪ್ರಶಂಸನೀಯವಾದ ಕೆಲಸ ಮಾತ್ರವಾಗಿರದೆ, ಸವಾಲಿನ ಕಾರ್ಯವೂ ಆಗಿತ್ತು. ಚಿಂತಾಮಣಿಯಲ್ಲಿ ಕೃಷ್ಣಸ್ವಾಮಿ ಎಂಬ BDO ಇದ್ದರು. ಇವರು ಖಡಕ್ ಅಧಿಕಾರಿ. ಕಾನೂನಿನ ಚೌಕಟ್ಟನ್ನು ಬಿಟ್ಟು ಒಂದಿಷ್ಟು ಆ ಕಡೆ ಈ ಕಡೆ ಅಲುಗಾಡುತ್ತಿರಲಿಲ್ಲ. ಆದ್ದರಿಂದಲೇ ಅಧಿಕಾರಸ್ಥರಿಗೆಲ್ಲಾ ಇವರು ಅಪ್ರಿಯರು. ಇಂತಹ ಇವರಿಗೆ ವರ್ಗಾವಣೆ ಆಯಿತು. ಅವರಿಗೆ ಬೀಳ್ಕೊಡಲು ಯಾರೊಬ್ಬರೂ ಮುಂದೆ ಬರಲಿಲ್ಲ. ಜನ ಸಾಮಾನ್ಯರಿಗೆ ಅವರ ಬಗ್ಗೆ ಮೆಚ್ಚುಗೆಯಿದೆ. ಆದರೆ ಅಧಿಕಾರಸ್ಥರನ್ನು ಎದುರು ಹಾಕಿಕೊಂಡು ಅವರಿಗೆ ಬೀಳ್ಕೊಡುಗೆ ಕೊಡುವ ಚೈತನ್ಯ ಅವರಿಗೆ ಇರಲಿಲ್ಲ. ಇಂತಹ ವಿಷಮ ಸ್ಥಿತಿಯನ್ನು ಅರಿತುಕೊಂಡ KNSರವರು ಸಮಸ್ಯೆಯನ್ನು ಸವಾಲಾಗಿ ಸ್ವೀಕರಿಸಿ BDO ಕೃಷ್ಣಸ್ವಾಮಿಯವರಿಗೆ ಬೀಳ್ಕೊಡುಗೆ ಸಮಾರಂಭವನ್ನು ಏರ್ಪಡಿಸಿದರು. ಆ ಸಮಾರಂಭಕ್ಕೆ ಅಂದು 'ಚಿಂತಾಮಣಿ ಹುಲಿ' ಎಂದೇ ಪ್ರಖ್ಯಾತರಾಗಿದ್ದ ಶಾಸಕ ಮತ್ತು ಇವರ ಕಾಲೇಜು ಆಡಳಿತ ಮಂಡಳಿಯ ಅಧ್ಯಕ್ಷ ಆಂಜನೇಯರೆಡ್ಡಿಯವರನ್ನು ಅಧ್ಯಕ್ಷರನ್ನಾಗಿ ಮಾಡಿದರು. ಕೃಷ್ಣಸ್ವಾಮಿ ಆಂಜನೇಯರೆಡ್ಡಿಯವರಿಗೂ ಅಪ್ರಿಯರಾಗಿದ್ದವರು. ಆದರೂ ಕರೆದಾಕ್ಷಣ ಒಪ್ಪಿಕೊಂಡು ಬಂದರು. ಕಾರ್ಯಕ್ರಮವೂ ಅದ್ದೂರಿಯಾಗಿ ನಡೆಯಿತು. ಆದರೆ ಕಾರ್ಯಕ್ರಮವು ಕಾಲೇಜಿನ ಆಡಳಿತ ಮಂಡಲಿಯ ಅಧ್ಯಕ್ಷರ ಇಚ್ಛೆಗೆ ವಿರುದ್ಧವಾದುದು. ಇದನ್ನು ಇವರು ನಡೆಸಬಾರದಾಗಿತ್ತು. ಇದರಿಂದ ಇವರಿಗೆ ಮುಂದೆ ತೊಂದರೆ ಆಗಬಹುದು' ಎಂದು ಹಲವು ಮಂದಿ ಅವರಿವರ ಕಿವಿಕಿವಿಗಳಲ್ಲಿ ಗುಸುಗುಸು ಮಾತನಾಡಿಕೊಂಡರು. ಇದು ಇವರ ಕಿವಿಗೂ ಬಿದ್ದಿತ್ತು. ಆದರೆ ಇವರು ಅದನ್ನು ಲೆಕ್ಕಿಸಲಿಲ್ಲ. ಏನಾಗುತ್ತದೆಯೋ ನೋಡಿಯೇ ಬಿಡೋಣ! ಎಂಬ ಮೊಂಡು ಧೈರ್ಯ ತಾಳಿದರು.

ಬೀಳ್ಕೊಡುಗೆ ಸಮಾರಂಭದ ನಂತರದ ಸಾಧಕ ಬಾಧಕಗಳ ಬಗ್ಗೆ ಅಷ್ಟೇನು ತಲೆಕೆಡಿಸಿಕೊಳ್ಳದೆ, ದಲಿತ ಕೇರಿಗಳಿಗೆ ಭೇಟಿ ಕೊಟ್ಟು, ಅಲ್ಲಿ ಜಾಗೃತಿ ಸಭೆಗಳನ್ನು ನಡೆಸುವುದು. ಅವರ ಸಮಸ್ಯೆಗಳ ಬಗ್ಗೆ ಚರ್ಚಿಸಿ ಪರಿಹಾರಕ್ಕೆ ಪ್ರಯತ್ನಿಸುವುದು ನಡೆಯುತ್ತಿತ್ತು. ಹೀಗೆ ನಡೆದ ಕಾರ್ಯಕ್ರಮಗಳಿಗೆ ಸಾಹಿತಿ ದೇವನೂರು ಮಹಾದೇವ, ಪತ್ರಕರ್ತ ವಿ.ಟಿ. ರಾಜಶೇಖರ್ ಆಗಮಿಸಿದ್ದರು. ಚಿಂತಾಮಣಿಯಲ್ಲಿ ನಡೆಯುತ್ತಿದ್ದ ದಲಿತ ಪರ ಚಿಂತನಾ ಶಿಬಿರಗಳ ಬಗ್ಗೆ ಇಂಗ್ಲೀಷ್ ದೈನಿಕವೊಂದರಲ್ಲಿ ವಿ.ಟಿ. ರಾಜಶೇಖರ್‌ರವರು ವಿವರವಾದ ಲೇಖನವೊಂದನ್ನು ಬರೆದು ಅದರಲ್ಲಿ KNSರವರ ಕಾರ್ಯಗಳನ್ನು ಉಲ್ಲೇಖ ಮಾಡಿ ಶ್ಲಾಘಿಸಿದ್ದಾರೆ.



ದಲಿತರಲ್ಲಿ ಜಾಗೃತಿ ಮೂಡಿ ಸಂಘಟಿತರಾಗಿ, ಹೋರಾಟಕ್ಕೆ ಅಣಿಯಾಗುತ್ತಿರುವ ಸಂದರ್ಭದಲ್ಲಿ ಅದನ್ನು ಸರಿದಾರಿಯಲ್ಲಿ ಕೊಂಡೊಯ್ಯಬೇಕೆಂಬ ಆಲೋಚನೆ KNSರವರಲ್ಲಿ ಮೂಡಿತು. ಇದರ ಫಲವಾಗಿ 'ದಲಿತ ಕೈಪಿಡಿ' ಕಿರುಹೊತ್ತಿಗೆ ಸಿದ್ಧವಾಯಿತು. ಹಸಿದ ಹೆಬ್ಬುಲಿಗೆ ಬೇಟೆಯೊಂದು ದೊರೆತಂತಾಗಿ, ಈ ಪುಸ್ತಕ ಕಡಿಮೆ ಅವಧಿಯಲ್ಲಿ ಎರಡು ಮುದ್ರಣಗಳನ್ನು ಕಂಡು ಬಿಸಿ ಬಿಸಿ ದೋಸೆಯಂತೆ ಮಾರಾಟವಾಯಿತು. ಇದು ದಲಿತ ವಿದ್ಯಾರ್ಥಿಗಳಲ್ಲಿ ವಿಚಾರ ಕ್ರಾಂತಿಯನ್ನು ಮೂಡಿಸಿತು. ಇದೇ ಸಮಯದಲ್ಲಿ ಕೋಲಾರದಲ್ಲಿ ದಲಿತ ವಿದ್ಯಾರ್ಥಿ ಮುನಿವೆಂಕಟಪ್ಪನ ಕೊಲೆಯಾಯಿತು. ಒಂದು ಕಡೆ ವಿಚಾರ ಸಾಹಿತ್ಯ, ಮತ್ತೊಂದು ಕಡೆ ತಮ್ಮ ಗೆಳೆಯನೊಬ್ಬನ ಕಗ್ಗೊಲೆ - ಈ ಎರಡು ಘಟನೆಗಳು ಸೇರಿ ಕೋಲಾರದಲ್ಲಿ ದಲಿತ ವಿದ್ಯಾರ್ಥಿ ಚಳುವಳಿ ಭುಗಿಲೆದ್ದಿತು. ಅದಕ್ಕೆ ಸ್ಪಷ್ಟರೂಪವೊಂದನ್ನು ನೀಡುವ ಸಲುವಾಗಿ ಸಿ. ಮುನಿಯಪ್ಪ, ಗಡ್ಡಂ ವೆಂಕಟೇಶ್, ಕೋಟಗಾನಹಳ್ಳಿ ರಾಮಯ್ಯ, ಎನ್. ಶಿವಣ್ಣ, ರಾಮದೇವ ರಾಕೆ, ದೇವನೂರು ಮಹಾದೇವ, ಶಿವಾಜಿ ಗಣೇಶನ್ ಎಚ್. ಗೋವಿಂದಯ್ಯ, ಕೋಲಾರ ಜಿಲ್ಲೆಯಲ್ಲಿ ಪ್ರವಾಸ ಮಾಡಿ ಸಂಘಟನೆಗೆ ಗಟ್ಟಿ ತಳಹದಿಯನ್ನು ಹಾಕಿದರು. ಕಾಲದ ಪರಿಪಕ್ವತೆಯನ್ನು ಅರಿತುಕೊಂಡ KNSರವರು 'ಅಂಬೇಡ್ಕರ್ ವಾಣಿ' ಕಿರುಹೊತ್ತಿಗೆ ಹೊರತಂದರು. ಎಚ್ಚೆತ್ತ ದಲಿತ ವಿದ್ಯಾರ್ಥಿಗಳು ಅದನ್ನು ಓದಿಕೊಂಡು ತಮ್ಮ ಬದುಕು - ಬವಣೆಗಳನ್ನು ತಾತ್ವಿಕವಾಗಿ ಅರ್ಥೈಸಿಕೊಂಡು ಬಿಡುಗಡೆಗಾಗಿ ಸೆಣಸತೊಡಗಿದರು.

* * *

**ಪ್ರಾಂಶುಪಾಲರಾಗಿ**

ಬಾಗೇಪಲ್ಲಿ ಅವಿಭಜಿತ ಕೋಲಾರ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಈಗ ಚಿಕ್ಕಬಳ್ಳಾಪುರ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದೆ. ಊರಿನ ಹೆಸರಿನಲ್ಲೇ 'ಪಲ್ಲಿ' (ಹಳ್ಳಿ) ಎಂಬ ನಾಮಪದವಿದ್ದು, ಇದು ಇಲ್ಲಿನ ತೆಲುಗುಮಯ ವಾತಾವರಣವನ್ನು ಸೂಚಿಸುತ್ತದೆ. ಇದು ಆಂಧ್ರಪ್ರದೇಶ ರಾಜ್ಯದ ಗಡಿಗೆ ಹೊಂದಿಕೊಂಡಿದೆ. ಇಲ್ಲಿನ ಜಮೀನ್ದಾರರು ಗ್ರಾಮ ವ್ಯವಸ್ಥೆಯ ಮೇಲೆ ಹಿಡಿತವನ್ನು ಹೊಂದಿರುವ ಹಾಗೆ ಸರ್ಕಾರಿ ನೌಕರರು ಸಹ ತಮ್ಮ ಸುತ್ತಲಿನ ಪರಿಸರದ ಮೇಲೆ ಹಿಡಿತವನ್ನು ಹೊಂದಿದ್ದಾರೆ. ಇದಕ್ಕೂ ಕಾರಣವುಂಟು. ಸರ್ಕಾರಿ ನೌಕರರು ಒಮ್ಮೆ ಇಲ್ಲಿಗೆ ನೇಮಕಗೊಂಡು ಅಥವಾ ವರ್ಗಾವಣೆಗೊಂಡು ಬಂದರೆ, ಅವರು ತಾವಾಗಿ ಇಲ್ಲಿಂದ ವರ್ಗಾವಣೆ ಮಾಡಿಸಿಕೊಳ್ಳುವವರೆಗೆ ಅವರಿಗೆ ವರ್ಗಾವಣೆಯಾಗುವುದಿಲ್ಲ. ಅಪರೂಪದ ಪ್ರಸಂಗಗಳಲ್ಲಿ ಇದು ಸುಳ್ಳಾಗಬಹುದಷ್ಟೇ.

ಇಂತಹ ಪರಿಸರವನ್ನು ಹೊಂದಿರುವ ಬಾಗೇಪಲ್ಲಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಕೆ. ನಾರಾಯಣಸ್ವಾಮಿಯವರು ಪ್ರಿನ್ಸಿಪಾಲರಾಗಿ ನೇಮಕಗೊಂಡು ಬಂದರು.



(ಹಿಂದೆ ಕೆಪಿಎಸ್‌ಸಿಯಿಂದ ಪಿಯುಸಿ ಕಾಲೇಜುಗಳಿಗೆ ಪ್ರಿನ್ಸಿಪಾಲರನ್ನು ನೇರವಾಗಿ ನೇಮಕ ಮಾಡಲಾಗುತ್ತಿತ್ತು.) ಕೆಎನ್‌ಎಸ್‌ರವರಿಗೆ ಆಗಿನ್ನೂ 38 ವರ್ಷ. ಹದಿಹರೆಯದ ವಯಸ್ಸು, ಜೊತೆಗೆ ಉಕ್ಕಿ ಹರಿಯುವ ಉತ್ಸಾಹ. ಇಂತಹ ಉತ್ಸಾಹದ ಚಿಲುಮೆಯಾಗಿದ್ದ ಇವರು ಇಲ್ಲಿಗೆ ಪ್ರಿನ್ಸಿಪಾಲರಾಗಿ ವರ್ಗಾವಣೆಯಾಗಿ ಬಂದರು. ಆಗ ಇಲ್ಲಿನ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಹಲವು ವರ್ಷಗಳಿಂದ ಬೀಡು ಬಿಟ್ಟಿದ್ದ ಹೈಸ್ಕೂಲ್ ಶಿಕ್ಷಕರು. ಕಾಲೇಜು ಉಪನ್ಯಾಸಕರು ಇದ್ದರು. ಅವರೆಲ್ಲರೂ ಬಹುತೇಕ ಮೇಲ್ವರ್ಗದವರು, ಅನುಭವಿಗಳೂ, ವಯಸ್ಸಿನಲ್ಲಿ ಹಿರಿಯರೂ ಆಗಿದ್ದರು. ಅವರಿಗೆ ಶೂದ್ರ ವರ್ಗದ, ಕನ್ನಡ ಎಂಎ ಓದಿಕೊಂಡಿರುವ ಈ ಹದಿಹರೆಯದ ವಯಸ್ಸಿನ ಪ್ರಿನ್ಸಿಪಾಲರನ್ನು ಕಂಡು ಗೌರವ ಮೂಡುವ ಬದಲಿಗೆ ಅಸಡ್ಡೆ, ತಿರಸ್ಕಾರಗಳು ಮೂಡಿದವು. ಜೊತೆಗೆ ಅನನುಭವಿ ಈ ಪ್ರಿನ್ಸಿಪಾಲರಿಂದ ಏನು ತಾನೆ ಮಾಡಲು ಸಾಧ್ಯ ಎಂಬ ತಾತ್ಸಾರ ಮನೋಭಾವ ಬೇರೆ. ಇದನ್ನು ಅವರು ತಮ್ಮ ಮಾತಿನಲ್ಲಿ ವ್ಯಕ್ತಪಡಿಸದಿದ್ದರೂ ಕೃತಿಯಲ್ಲಿ ಸೂಚಿಸುತ್ತಿದ್ದರು.

ಇದರಿಂದಾಗಿ ಇವರಿಗೆ ಮೊದ ಮೊದಲು ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯಿಂದ ದೊರೆಯಬೇಕಾಗಿದ್ದ ಸಹಕಾರ ದೊರೆಯಲಿಲ್ಲ. ಆದರೂ ಎದೆಗುಂದದೆ ಆಡಳಿತವನ್ನು ಪ್ರಾರಂಭಿಸಿದರು. ಕಚೇರಿಯ ಹಳೆಯ ಕಡತಗಳನ್ನು ಕೂಲಂಕುಶವಾಗಿ ಅಧ್ಯಯನ ಮಾಡಿ ಆಡಳಿತವನ್ನು ಅರಿತುಕೊಳ್ಳಲು ಪ್ರಯತ್ನಿಸಿದರು. ಈ ಸಮಯದಲ್ಲಿ ಮೂಡಿದ ಸಂಶಯಗಳನ್ನು ಪರಿಹರಿಸಿಕೊಳ್ಳಲು ಪರಿಚಿತ ಅನುಭವಿ ಆಡಳಿತಗಾರರನ್ನು ರಜಾ ದಿನಗಳಲ್ಲಿ ಭೇಟಿ ಮಾಡಿ ಅವರೊಂದಿಗೆ ಚರ್ಚಿಸಿದರು. ಆಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು ಅರಿತುಕೊಂಡು ಆಡಳಿತದಲ್ಲಿ ನಿಧಾನವಾಗಿ ಶಿಸ್ತು ಮೂಡಿಸಲು ಯತ್ನಿಸಿದರು. ಇದರ ನಡುವೆ ಇವರು ಸಂಗ್ರಹಾನುವಾದ ಮಾಡಿದ್ದ 'ಅಂಬೇಡ್ಕರ್ ವಾಣಿ' ಕಿರು ಹೊತ್ತಿಗೆಯ ಬಿಡುಗಡೆ ಸಮಾರಂಭವು ಬೆಂಗಳೂರಿನಲ್ಲಿ ಆಯೋಜಿಸಲಾಗಿತ್ತು. ಸದರಿ ಕಾರ್ಯಕ್ರಮಕ್ಕೆ ಅಂದಿನ ಮುಖ್ಯ ಮಂತ್ರಿ ದೇವರಾಜ ಅರಸು, ಸಚಿವ ಬಿ.ಬಸವಲಿಂಗಪ್ಪರವರು ಆಗಮಿಸಲಿದ್ದರು. ಈ ಸಂಬಂಧ ಸಿದ್ಧವಾಗಿದ್ದ ಆಹ್ವಾನ ಪತ್ರಿಕೆಯೊಂದು ಇವರಿಗೆ ತಲುಪಿತ್ತು. ಅದನ್ನು ಕಾಲೇಜಿನ ಎಲ್ಲಾ ಸಿಬ್ಬಂದಿಗೆ ತಲುಪಿಸಿ ಕಾರ್ಯಕ್ರಮಕ್ಕೆ ಆಗಮಿಸಬೇಕೆಂದು ವಿನಂತಿಸಿದರು. ವಾಸ್ತವವಾಗಿ ಕಾಲೇಜಿನ ಎಲ್ಲಾ ಸಿಬ್ಬಂದಿಯನ್ನು ಕಾರ್ಯಕ್ರಮಕ್ಕೆ ಆಹ್ವಾನಿಸುವ ಉದ್ದೇಶ ಇವರಿಗೆ ಇರಲಿಲ್ಲವಾದರೂ ಈ ಮೂಲಕ ತಾವು ಹೊಂದಿರುವ ಪ್ರಭಾವವನ್ನು ತಮ್ಮ ಬಗ್ಗೆ ತಾತ್ಸಾರ ಮನೋಭಾವ ಹೊಂದಿದ್ದವರಿಗೆ ಪರಿಚಯಿಸುವುದು ಇವರ ತಂತ್ರವಾಗಿತ್ತು. ತಂತ್ರ ಫಲಿಸಿತು. ಅಂದಿನಿಂದ ಇವರ ಬಗ್ಗೆ ಎಚ್ಚರಿಕೆಯಿಂದ ನಡೆದುಕೊಳ್ಳುವುದನ್ನು ವಿರೋಧಿಗಳು ಕಲಿತುಕೊಂಡರು. ಕಲಿತುಕೊಳ್ಳಲು ಇಚ್ಛಿಸದ ಕೆಲವರು ಅಲ್ಲಿಂದ ವರ್ಗಾವಣೆ ಮಾಡಿಸಿಕೊಂಡು ಬೇರೆಡೆಗೆ ಹೋದರು.

ಕೆ. ನಾರಾಯಣಸ್ವಾಮಿಯವರು 1975 ರಲ್ಲಿ ಬಾಗೇಪಲ್ಲಿಗೆ ಪ್ರಿನ್ಸಿಪಾಲರಾಗಿ ಆಗಮಿಸಿದರು. ಇವರ ಇಲ್ಲಿನ ಕೆಲಸ ಕಾರ್ಯಗಳು ಇವರ ಬದುಕಿನಲ್ಲಿ ಒಂದು



ಮೈಲಿಗಲ್ಲಾಗಿರುವ ಹಾಗೆಯೇ ಇಲ್ಲಿನ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಇತಿಹಾಸದ ಪುಟಗಳಲ್ಲಿ ಮಹತ್ತರವಾದ ದಿನಗಳಾಗಿವೆ. ಅವರು ಇಲ್ಲಿಗೆ ಬಂದಾಗ ಕಾಲೇಜು ಸಮಸ್ಯೆಗಳ ಆಗರವಾಗಿತ್ತು. ಇಲ್ಲಿ 'ಇವೆ' ಎಂಬುದಕ್ಕಿಂತಲೂ 'ಇಲ್ಲ'ಗಳೇ ರಾರಾಜಿಸುತ್ತಿದ್ದವು. ಆ ಕಾಲೇಜಿಗೆ ಅಗತ್ಯವಾದ ಸಿಬ್ಬಂದಿ, ಕೊಠಡಿಗಳು, ಕುಡಿಯುವ ನೀರು, ಆಟದ ಮೈದಾನ, ಗುಣಮಟ್ಟದ ಬೋಧನೆ ಇರಲಿಲ್ಲ – ಹೀಗೆ ಇಲ್ಲಗಳ ಸರಮಾಲೆ ಕಾಲೇಜನ್ನು ಅಲಂಕರಿಸಿತ್ತು.

**ಕೊಠಡಿಗಳ ನಿರ್ಮಾಣ**

ಇಂತಹ ಕಾಲೇಜಿಗೆ ಕಾಯಕಲ್ಪವನ್ನು ಒದಗಿಸಬೇಕೆಂದು ಕಾಲೇಜಿಗೆ ಕಾಲಿಟ್ಟ ದಿನವೇ ಇವರು ತೀರ್ಮಾನಿಸಿದರು. ಅದರಂತೆ ಕಾರ್ಯೋನ್ಮುಖರಾದರು. ಸಮಸ್ಯೆಗಳನ್ನು ಆದ್ಯತೆಯ ಮೇರೆಗೆ ಪರಿಹರಿಸಲು ಮುಂದಾದರು. ಮೊದಲಿಗೆ ಕೊಠಡಿಗಳ ಸಮಸ್ಯೆಯ ಪರಿಹಾರಕ್ಕೆ ಮುಂದಾದರು. ಇದಕ್ಕಾಗಿ ಕಾಲೇಜು ಅಭಿವೃದ್ಧಿ ಸಮಿತಿಯ ಬಿ.ನಾರಾಯಣಪ್ಪ ಮತ್ತು ಯಲ್ಲೋಡು ವಿಜಯರಾಘವರೆಡ್ಡಿಯವರ ಸಹಕಾರ ಕೇಳಿದರು. ಅವರು ಇವರ ಮಾತಿಗೆ ಒಪ್ಪಿ ಅಂದಿನ ಬಾಗೇಪಲ್ಲಿ ಶಾಸಕ ವಿ.ಕೃಷ್ಣರಾವ್‌ರವರ ಬಳಿಗೆ ತೆರಳಿ ಕಾಲೇಜಿನಲ್ಲಿ ಕೊಠಡಿಗಳನ್ನು ನಿರ್ಮಿಸಲು ಸರ್ಕಾರದಿಂದ ಹಣ ಮಂಜೂರು ಮಾಡಿಸಲು ಕಾಲೇಜಿನ ಪರವಾಗಿ ವಿನಂತಿಸಿದರು. ಅದಕ್ಕೆ ಒಪ್ಪಿದ ಶಾಸಕ ವಿ.ಕೃಷ್ಣರಾವ್ ಒಂದು ಲಕ್ಷ ರೂಪಾಯಿಗಳನ್ನು ಕಾಲೇಜಿನ ಕೊಠಡಿಗಳ ನಿರ್ಮಾಣಕ್ಕೆಂದು ಮಂಜೂರು ಮಾಡಿಸಿದರು. ಹಣ ಮಂಜೂರು ಆಯಿತಾದರೂ ಅವುಗಳನ್ನು ನಿರ್ಮಿಸಲು ಕಾಲೇಜಿನ ಆವರಣದಲ್ಲಿ ಸ್ಥಳವಿಲ್ಲ ಎಂದು ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳು ತಗಾದೆ ತೆಗೆದರು. ಇದನ್ನು ಪರಿಹರಿಸಲು ಕೆಎನ್‌ಎಸ್‌ರವರು ಮಾಡಿದ ಎಲ್ಲಾ ಪ್ರಯತ್ನಗಳು ವಿಫಲವಾದವು. ಕೊನೆಗೆ ಇವರಿಗೆ ಪರಿಚಯವಿದ್ದ ಲೋಕೋಪಯೋಗಿ ಇಲಾಖೆಯ ಸೂಪರಿಂಟೆಂಡೆಂಟ್ ಇಂಜಿನಿಯರ್ ಎಲ್.ಶಿವಲಿಂಗಯ್ಯರ ಬಳಿಗೆ ಹೋಗಿ ಸಮಸ್ಯೆಯನ್ನು ವಿವರಿಸಿದರು. ಸಮಸ್ಯೆಯನ್ನು ಮನವರಿಕೆ ಮಾಡಿಕೊಂಡ ಅವರು ಕಟ್ಟಡ ನಿರ್ಮಾಣದ ಹೊಣೆ ಹೊತ್ತಿದ್ದ ಇಲಾಖೆಯ ಎಕ್ಸಿಕ್ಯೂಟಿವ್ ಇಂಜಿನಿಯರ್‌ರನ್ನು ಕರೆದು ಕಾಲೇಜಿನ ಆವರಣದಲ್ಲಿ ಇರುವ ಸ್ಥಳದಲ್ಲೇ ಕೊಠಡಿಗಳನ್ನು ನಿರ್ಮಿಸಲು ಸೂಚಿಸಿದರು.

ಇದರಿಂದಾಗಿ ಕೊಠಡಿಗಳ ನಿರ್ಮಾಣ ಕಾರ್ಯ ಪ್ರಾರಂಭವಾಯಿತು. ಆದರೆ ಯೋಜನೆಯ ಪ್ರಕಾರ ಆರು ಕೊಠಡಿಗಳನ್ನು ನಿರ್ಮಾಣ ಮಾಡಲು ಸಾಧ್ಯವಿಲ್ಲ. ಐದು ಕೊಠಡಿಗಳನ್ನು ಮಾತ್ರ ನಿರ್ಮಿಸಿ ಕೊಡುತ್ತೇವೆ ಎಂದು ತಿಳಿಸಿದರು. 'ಆರು ಕೊಠಡಿಗಳು ಬೇಕೇಬೇಕು' ಎಂದು ತಿಳಿ ಹೇಳಲು ಇವರು ಮಾಡಿದ ಕಸರತ್ತು ವಿಫಲವಾಯಿತು. ಕೊನೆಗೆ ವಿಧಿಯಿಲ್ಲದೆ ಇವರು ಸೂಪರಿಂಟೆಂಡೆಂಟ್ ಇಂಜಿನಿಯರ್ ಬಳಿಗೆ ಮತ್ತೊಮ್ಮೆ ತೆರಳಿ ತಮ್ಮ ಬೇಡಿಕೆಯನ್ನು ಮಂಡಿಸಿದರು. ಬೇಡಿಕೆಯನ್ನು

ಸಾವಧಾನದಿಂದ ಆಲಿಸಿದ ಎಸ್‌ಇ ಜಿ.ಶಿವಲಿಂಗಯ್ಯನವರು ಸ್ಥಳ ತನಿಖೆಗೆಂದು ಕಾಲೇಜಿಗೆ ಆಗಮಿಸಿ ಪರಿಶೀಲನೆ ಮಾಡಿ ಸಮಸ್ಯೆಯನ್ನು ಅರ್ಥ ಮಾಡಿಕೊಂಡರು. ನಂತರ ಒಟ್ಟು ಆರು ಕೊಠಡಿಗಳನ್ನು ನಿರ್ಮಿಸಲು ಸ್ಥಳದಲ್ಲಿ ಹಾಜರಿದ್ದ ಇಕ್ಸಿಕ್ಯೂಟಿವ್ ಇಂಜಿನಿಯರ್ ರವರಿಗೆ ಆದೇಶಿಸಿದರು. ಅಲ್ಲದೆ ನಿರ್ಮಾಣಕ್ಕೆ ಕಡಿಮೆ ಬೀಳಲಿರುವ 20 ಸಾವಿರ ರೂಪಾಯಿಗಳನ್ನು ತಾವು ಬಿಡುಗಡೆ ಮಾಡುವುದಾಗಿ ತಿಳಿಸಿದರು. ಇದರಿಂದ ಕೊಠಡಿಗಳ ಸಮಸ್ಯೆ ತಾತ್ಕಾಲಿಕವಾಗಿ ಪರಿಹಾರವಾಗಿ ಪ್ರೌಢಶಾಲೆ ಮತ್ತು ಪಿಯುಸಿ ತರಗತಿಗಳನ್ನು ಸರಿದಿ ಪ್ರಕಾರ ನಡೆಸಲು ಅನುಕೂಲವಾಯಿತು.

ವಿಪರ್ಯಾಸದ ಸಂಗತಿ ಎಂದರೆ ಆ ಆರು ಕೊಠಡಿಗಳ ನಿರ್ಮಾಣಕ್ಕೆ ಶ್ರಮಿಸಿದ ಶಾಸಕ ವಿ.ಕೃಷ್ಣರಾವ್, ಸೂಪರಿಂಟೆಂಡೆಂಟ್ ಇಂಜಿನಿಯರ್ ಜಿ.ಶಿವಲಿಂಗಯ್ಯ ಮತ್ತು ಪ್ರಿನ್ಸಿಪಾಲ್ ಕೆಎನ್‌ಎಸ್‌ರವರನ್ನು ಅವುಗಳ ಉದ್ಘಾಟನಾ ಸಮಾರಂಭಕ್ಕೆ ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳು ಸೌಜನ್ಯಕ್ಕೂ ಆಹ್ವಾನಿಸಲಿಲ್ಲ. ಕಾಲೇಜಿನ ಸಿಬ್ಬಂದಿಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಾಗಿತ್ತು. ಆದರೆ ಕಟ್ಟಡ ನಿರ್ಮಾಣಕ್ಕೆ ಯಾವುದೇ ಕೆಲಸ ಮಾಡದ ರಾಜಕಾರಣಿಗಳು, ಕಟ್ಟಡ ನಿರ್ಮಾಣಕ್ಕೆ ತೊಡರುಗಾಲು ಹಾಕಿದ್ದ ರಾಜಕಾರಣಿಗಳು ಸಹ ಹಾರ ತುರಾಯಿಗಳನ್ನು ಹಾಕಿಸಿಕೊಂಡು ವೇದಿಕೆಯ ಮೇಲೆ ರಾರಾಜಿಸಿದರು.

ಇಲಾಖೆಯ ಯೋಜನೆಯಂತೆ ಆರು ಕೊಠಡಿಗಳು ನಿರ್ಮಾಣವಾದರೂ ಮಹಡಿಯಲ್ಲಿ ಕೇವಲ ಒಂದು ಕೋಣೆ ಮಾತ್ರವಿತ್ತು. ಇದರ ಪಕ್ಕದಲ್ಲಿ ಮತ್ತೆ ಮೂರು ಕೊಠಡಿಗಳನ್ನು ನಿರ್ಮಿಸಲು ಅವಕಾಶವಿತ್ತು. ಇದಕ್ಕಾಗಿ ಪ್ಲಾನ್ ಅಂಡ್ ಎಸ್ಟಿಮೇಟ್ ತಯಾರಿಸಿ ಕೊಡಲು ಲೋಕೋಪಯೋಗಿ ಇಲಾಖೆಗೆ ಕೇಳಿಕೊಳ್ಳಲಾಯಿತು. ಆದರೆ ಅವರು ಬಡಪೆಟ್ಟಿಗೆ ಒಪ್ಪಿಕೊಳ್ಳಲಿಲ್ಲ. ಮತ್ತೆ ಮತ್ತೆ ವಿನಂತಿಸಿಕೊಳ್ಳಲಾಯಿತು. ಕೊನೆಗೆ ಮೂರು ತಿಂಗಳ ನಂತರ 92 ಸಾವಿರ ರೂಪಾಯಿಗಳ ಪ್ಲಾನ್ ಅಂಡ್ ಎಸ್ಟಿಮೇಟ್ ತಯಾರಿಸಿಕೊಟ್ಟರು. ಅದನ್ನು ಇಲಾಖೆಯ ಮೇಲಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಒಪ್ಪಿಗೆ ಪಡೆದು ಮೂರು ಕೊಠಡಿಗಳನ್ನು ನಿರ್ಮಾಣ ಮಾಡಿಸಿಕೊಳ್ಳಲಾಯಿತು. 'ಈ ವಿಷಯದಲ್ಲಿ ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳ ಅಸಹಕಾರ ಜಿಗುಪ್ಸೆ ಬೇಸರ ಉಂಟು ಮಾಡಿದರೆ, ಕಾಲೇಜಿನ ಶಿಕ್ಷಕರು, ಸಿಬ್ಬಂದಿ ಮತ್ತು ಗುತ್ತಿಗೆದಾರ ಆದಿನಾರಾಯಣಪ್ಪರವರ ಸಹಕಾರ ಮನಸೂರೆಗೊಂಡಿತ್ತು. ಅದನ್ನು ನೆನೆಸಿದಾಗಲೆಲ್ಲಾ ಹೃದಯ ತುಂಬಿ ಬರುತ್ತದೆ' ಎನ್ನುತ್ತಾರೆ ಕೆಎನ್‌ಎಸ್‌ರವರು. ಇದರಿಂದ ಕಾಲೇಜನ್ನು ಕಾಡುತ್ತಿದ್ದ ಕೊಠಡಿಗಳ ಸಮಸ್ಯೆ ಸದ್ಯಕ್ಕೆ ಪರಿಹಾರವಾಯಿತು.

**ಆಟದ ಮೈದಾನ :**

ಕಾಲೇಜು ಅಂದ ಮೇಲೆ ಅದಕ್ಕೊಂದು ಆಟದ ಮೈದಾನವಿರಬೇಕೆಂದು ಹಿಂದಿನವರು ಯೋಜಿಸಿದಂತೆ ಇರಲಿಲ್ಲ. ಆದ್ದರಿಂದ ಮೈದಾನವೇ ಇರಲಿಲ್ಲ. ಕಾಲೇಜಿನ ಕೊಠಡಿಗಳು ಮತ್ತು ಅವುಗಳ ಮುಂದೆ ಒಂದಿಷ್ಟು ಸ್ಥಳಾವಕಾಶವಿತ್ತು. ಇಂತಹ



ಸ್ಥಿತಿಯಲ್ಲಿ ಕಾಲೇಜಿಗೆ ಆಟದ ಮೈದಾನವನ್ನು ಪಡೆಯಬೇಕೆಂಬ ಹಂಬಲ ಕೆಎನ್‌ಎಸ್‌ರವರಲ್ಲಿ ಚಿಗುರೊಡೆಯತೊಡಗಿತು. ಇದಕ್ಕೆ ಕಾರಣವೂ ಇತ್ತು. ಕಾಲೇಜಿಗೆ ಅಂಟಿಕೊಂಡಂತೆ ಖಾಸಗಿಯವರಿಗೆ ಸೇರಿದ 3.15 ಎಕರೆ ಜಮೀನು ಇತ್ತು. ಇದನ್ನು ಲೋಕೋಪಯೋಗಿ ಇಲಾಖೆ ವಶಪಡಿಸಿಕೊಂಡಿತ್ತು. ಆದರೆ ಅವರಿಗೆ ಆ ವಿಶಾಲವಾದ ಪ್ರದೇಶದ ಅವಶ್ಯಕತೆಯಿರಲಿಲ್ಲ. ಆದ್ದರಿಂದ ಅದನ್ನು ಅವರಿಂದ ಪಡೆಯಬೇಕೆಂದು ಯೋಜಿಸಿದರು. ಇದು ಎಣಿಸಿದಷ್ಟು ಸುಲಭದ ಕೆಲಸವಾಗಿರಲಿಲ್ಲ. ಈಗಾಗಲೇ ಲೋಕೋಪಯೋಗಿ ಇಲಾಖೆಗೂ ಕಾಲೇಜಿಗೂ ಅಷ್ಟಕ್ಕಷ್ಟೆ. ಹೀಗಿರುವಾಗ ಅವರು ವಶಪಡಿಸಿಕೊಂಡಿರುವ ಜಮೀನನ್ನು ಕಾಲೇಜಿಗೆ ಬಿಟ್ಟು ಕೊಡಿ ಎಂದು ಕೇಳುವುದು ಕೂಡ ದುಸ್ತರವಾದುದಾಗಿತ್ತು. ಆದರೂ ಪಟ್ಟು ಬಿಡದೆ ಪ್ರಯತ್ನವನ್ನು ಪ್ರಾರಂಭಿಸಿದರು. ಇಲಾಖೆಯಲ್ಲಿ ತಮಗೆ ಆತ್ಮೀಯವಾಗಿದ್ದ ನೌಕರರೊಬ್ಬರಿಂದ ಜಮೀನನ್ನು ಪಡೆದುಕೊಳ್ಳುವ ದಾರಿಗಳನ್ನು ತಿಳಿದುಕೊಂಡರು. ಅದರಂತೆ ಕಡತವನ್ನು ಸಿದ್ಧಪಡಿಸಿ ಬಾಗೇಪಲ್ಲಿಗೆ ಭೇಟಿ ನೀಡಿದ ಇಲಾಖೆಯ ಎಕ್ಸಿಕ್ಯೂಟಿವ್ ಇಂಜಿನಿಯರ್ ಮತ್ತು ಸೂಪರಿಂಟೆಂಡೆಂಟ್ ಇಂಜಿನಿಯರ್‌ರುಗಳಿಗೆ ಮನವಿ ಸಲ್ಲಿಸಿ, ಸ್ಥಳ ಪರಿಶೀಲನೆ ಮಾಡಬೇಕೆಂದು ವಿನಂತಿಸಿದರು. ಮನವಿಯನ್ನು ಪುರಸ್ಕರಿಸಿದ ಅವರು ಸ್ಥಳ ಪರಿಶೀಲನೆ ನಡೆಸಿ ಕಾಲೇಜಿಗೆ ಹೊಂದಿಕೊಂಡಿರುವ PWD ಇಲಾಖೆಯು ಖಾಸಗಿಯವರಿಂದ ಪಡೆದಿರುವ ಜಮೀನನ್ನು ಕಾಲೇಜಿನ ಆಟದ ಮೈದಾನಕ್ಕೆ ನೀಡಬಹುದು ಎಂದು ಅಭಿಪ್ರಾಯಪಟ್ಟು ಅದರಂತೆ ಕಡತವನ್ನು ತಯಾರಿಸಿ ತಮ್ಮ ಕಚೇರಿಗೆ ಕಳುಹಿಸುವಂತೆ ಸೂಪರಿಂಟೆಂಡೆಂಟ್ ಇಂಜಿನಿಯರ್‌ರವರು ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರಿಗೆ ಸೂಚಿಸಿದರು.

ಸೂಪರಿಂಟೆಂಡೆಂಟ್ ಇಂಜಿನಿಯರ್ ರವರ ಸೂಚನೆಯಂತೆ ಕಡತ ಸಿದ್ಧವಾಗಿ ಅವರ ಕಚೇರಿ ತಲುಪಿತು. ಅದನ್ನು ಪರಿಶೀಲಿಸಿ ಅವರು ಮುಖ್ಯ ಇಂಜಿನಿಯರ್‌ರವರ ಕಚೇರಿಗೆ ಕಳುಹಿಸಿ ಮಂಜೂರು ಮಾಡಲು ಕೋರಿದರು. ಕಡತವು ಎಲ್ಲೆಲ್ಲಿಗೆ ಹೋಗುತ್ತದೆಯೋ ಅಲ್ಲಲ್ಲಿಗೆ ಹೋಗಿ ಅದನ್ನು ಮುಂದಕ್ಕೆ ಕಳುಹಿಸುವ ಕಾರ್ಯವನ್ನು ಇವರು ಮಾಡುತ್ತಿದ್ದರು. ಎಲ್ಲೂ ವಿಳಂಬವಾಗದಂತೆ ಕಡತವನ್ನು ಹಿಂಬಾಲಿಸುತ್ತಿದ್ದರು. ಇದಕ್ಕಾಗಿ ವೈಯಕ್ತಿಕ ಹಣ, ಸಮಯ ಮತ್ತು ಶ್ರಮವನ್ನು ವಿನಿಯೋಗಿಸಿದರೆ ಹೊರತು ಕಾಲೇಜಿನ ಹಣದಲ್ಲಿ ಒಂದು ಬಿಡಿಗಾಸನ್ನೂ ಬಳಸಲಿಲ್ಲ. ತಾವಷ್ಟೇ ಅಲ್ಲದೆ, ತಮ್ಮ ಕಾಲೇಜಿನ ಶಿಕ್ಷಕರು\ಸಿಬ್ಬಂದಿ ಬೆಂಗಳೂರಿಗೆ ವೈಯಕ್ತಿಕ ಕಾರ್ಯ ನಿಮಿತ್ತ ಹೋದರೆ ಅವರನ್ನು ವಿನಂತಿಸಿಕೊಂಡು ಕಡತ ಮುಂದುವರೆಸಿ, ಅದು ಮಂಜೂರಾತಿ ಪಡೆದುಕೊಳ್ಳುವ ಹಂತವನ್ನು ತಲುಪುವಂತೆ ಮಾಡಿದರು. ಜಮೀನು ಮಂಜೂರು ಆಗುವವರೆಗೂ ಕಡತದ ಹಿಂದೆ ಕೆಎನ್‌ಎಸ್‌ರವರು ಅಲೆದಾಡಿದರು ಎಂದೇ ಹೇಳಬೇಕು. ಅಷ್ಟರ ಮಟ್ಟಿಗೆ ಆಸ್ಥೆ ವಹಿಸಿ ಕಾರ್ಯನಿರ್ವಹಿಸಿದರು.

ಆಟದ ಮೈದಾನಕ್ಕೆ ಜಮೀನನ್ನು ಮಂಜೂರು ಮಾಡುವ ಕಡತವು ಲೋಕೋಪಯೋಗಿ ಇಲಾಖೆಯಿಂದ ಶಿಕ್ಷಣ ಇಲಾಖೆಗೆ, ಶಿಕ್ಷಣ ಇಲಾಖೆಯಿಂದ



ಹಣಕಾಸು ಇಲಾಖೆಗೆ ತಿರುಗಾಡಿ ಒಪ್ಪಿಗೆ ಮತ್ತು ಹಣವನ್ನು ಮಂಜೂರು ಮಾಡಿಸಿಕೊಂಡಿತು. ಕೊನೆಯದಾಗಿ ಸರ್ಕಾರದ ಅನುಮತಿಗಾಗಿ ಕಡತವು ವಿಧಾನ ಸೌಧಕ್ಕೆ ಹೋಯಿತು. ಅಲ್ಲಿಗೂ ಹೋಗಿ ಅಧಿಕಾರಿಗಳಿಗೆ ಕಾಲೇಜಿನ ಸ್ಥಿತಿಗತಿಗಳನ್ನು ಕಣ್ಣಿಗೆ ಕಟ್ಟುವಂತೆ ಇವರು ವಿವರಿಸಿದರು. ಸರ್ಕಾರದ ಅಧೀನ ಕಾರ್ಯದರ್ಶಿಯಾಗಿದ್ದ ದಯಾಳು ಸುಬ್ಬರಾಯಶಾಸ್ತ್ರಿಯವರ ಬಳಿಗೆ ಕಡತ ಹೋದಾಗ ಅವರನ್ನು ಕೆಎನ್‌ಎಸ್‌ರವರು ಕಂಡು ಗ್ರಾಮೀಣ ಭಾಗದ ಕಾಲೇಜಿನ ವಸ್ತುಸ್ಥಿತಿಯನ್ನು ವಿವರಿಸಿದರು. ಗ್ರಾಮೀಣ ಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚು ಆಸ್ಥೆಯನ್ನು ಹೊಂದಿದ್ದ ಸುಬ್ಬರಾಯಶಾಸ್ತ್ರಿಯವರು ಮರು ಮಾತಾಡದೆ ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿರುವ ಜಮೀನನ್ನು ಕಾಲೇಜಿಗೆ ನೀಡಬಹುದು ಎಂದು ಬರೆದು ಸರ್ಕಾರಕ್ಕೆ ಕಳುಹಿಸಿದರು.

ಕೆಎನ್‌ಎಸ್‌ರವರು ಕಾಲೇಜಿನ ಶಿಕ್ಷಕರೊಂದಿಗೆ ನಡೆಸುತ್ತಿರುವ ಈ ಪ್ರಯತ್ನವನ್ನು ಗುಟ್ಟಾಗಿರಿಸಿದ್ದರು. ಆದರೆ ಇದು ಹೇಗೋ ಬಹಿರಂಗವಾಯಿತು. ಇದರಿಂದ ಕುಪಿತಗೊಂಡ ರಾಜಕಾರಣಿಗಳು ಸಿಡಿದೆದ್ದು, ಅವರು ನಮ್ಮನ್ನು ಬದಿಗೊತ್ತಿ ಈ ಕೆಲಸವನ್ನು ಅದು ಹೇಗೆ ಮಾಡಿಸಿಕೊಳ್ಳುತ್ತಾರೋ ನಾವು ನೋಡಿಯೇ ಬಿಡುತ್ತೇವೆ ಎಂದು' ಗುಟುರು' ಹಾಕಿದರು. ಆದರೆ 'ಕಾಲ ನಿಲ್ಲುವುದಿಲ್ಲ........! ಎಂಬಂತೆ ಯಾರ ಅಣತಿ ಅಪ್ಪಣೆಗೂ ಅದು ನಿಲ್ಲದೆ ಕೆಎಸ್‌ಎಸ್ ಮತ್ತು ಶಿಕ್ಷಕರ ಶ್ರಮಕ್ಕೆ ಪ್ರತಿಫಲ ಎಂಬಂತೆ ಸರ್ಕಾರವು ಕಾಲೇಜಿನ ಆಟದ ಮೈದಾನಕ್ಕೆ 2.19 ಎಕರೆ ಜಮೀನನ್ನು ಮಂಜೂರು ಮಾಡಿತು. ಇದಕ್ಕೆ ಪ್ರತಿಯಾಗಿ ಶಿಕ್ಷಣ ಇಲಾಖೆಯು ಸರ್ಕಾರಕ್ಕೆ 6500 ರೂಗಳನ್ನು ಸಂದಾಯ ಮಾಡಬೇಕಾಗಿತ್ತು. ಅದಕ್ಕೂ ಇಲಾಖೆಗೆ ಮನವಿ ಸಲ್ಲಿಸಿ ಮಂಜೂರು ಮಾಡಿಸಿಕೊಂಡು ಸರ್ಕಾರಕ್ಕೆ ಸಂದಾಯ ಮಾಡಲಾಯಿತು. ಇದರಿಂದ ದೊಡ್ಡದೊಂದು ಸಮರವನ್ನು ಗೆದ್ದಂತೆ ಆಯಿತು ಎಂದು ಅಂದಿನ ಘಟನೆಗಳನ್ನು ನೆನೆಪಿಸಿಕೊಂಡು ಕೆಎನ್‌ಎಸ್ ನಿಟ್ಟುಸಿರು ಬಿಡುತ್ತಾರೆ.

ಸತತ ಪ್ರಯತ್ನದಿಂದ ದೊರೆತ ಮೈದಾನವನ್ನು ಭದ್ರಪಡಿಸಿಕೊಳ್ಳಲು ಕಾಂಪೌಂಡನ್ನು ನಿರ್ಮಿಸಿಕೊಳ್ಳಲು ಯೋಜಿಸಿದರು. ಇದಕ್ಕಾಗಿ ವಿದ್ಯಾರ್ಥಿಗಳಿಂದ ತಲಾ 2 ರೂಪಾಯಿಯಂತೆ ಹಣ ಸಂಗ್ರಹ ಮಾಡಲಾಯಿತು. ಇದರಿಂದ ಕಾಂಪೌಂಡನ್ನು ನಿರ್ಮಾಣ ಕಾರ್ಯವನ್ನು ಪ್ರಾರಂಭಿಸಲಾಯಿತಾದರೂ ಅದು ಪೂರ್ಣಗೊಳ್ಳಲಿಲ್ಲ. ಕಾರಣಾಂತರಗಳಿಂದ ವಿದ್ಯಾರ್ಥಿಗಳಿಂದ ಹಣ ಸಂಗ್ರಹ ಮಾಡುವ ಕಾರ್ಯವನ್ನೂ ನಿಲ್ಲಿಸಲಾಯಿತು. ಅಪೂರ್ಣಗೊಂಡಿದ್ದ ಕಾಲೇಜಿನ ಕಾಂಪೌಂಡನ ಸ್ಥಿತಿಯನ್ನು ಕಂಡ ಡಿಡಿಪಿಐ ಕೃಷ್ಣಯ್ಯಶೆಟ್ಟಿಯವರು ಕಾಲೇಜನ್ನು ಇಲಾಖೆಗೆ ದತ್ತು ಸ್ವೀಕರಿಸಿ ಕಾಂಪೌಂಡನ್ನು ಪೂರ್ಣಗೊಳಿಸಿಕೊಟ್ಟರು. ಇದರ ಜೊತೆ ಜೊತೆಗೆ ಇಲಾಖೆಯೊಂದಿಗೆ ಸತತ ಪತ್ರ ವ್ಯವಹಾರ ನಡೆಸಿ ಕಾಲೇಜಿನಲ್ಲಿ ಖಾಲಿ ಉಳಿದಿದ್ದ ಶಿಕ್ಷಕರ ಹುದ್ದೆಗಳನ್ನು ಭರ್ತಿ ಮಾಡಿಸಿಕೊಳ್ಳಲಾಯಿತು.



## ನೀರಿನ ಬವಣೆ ನಿವಾರಣೆ

ಬಾಗೇಪಲ್ಲಿ ಅತಿ ಹಿಂದುಳಿದ ಪ್ರದೇಶವಾಗಿರುವುದರಿಂದ ತಾಲ್ಲೂಕು ಕೇಂದ್ರಕ್ಕೆ ಇರಬೇಕಾದ ಲಕ್ಷಣಗಳು, ಸೌಲಭ್ಯಗಳು ಆಗ ಪ್ರಾಪ್ತವಾಗಿರಲಿಲ್ಲ. ಹೀಗಾಗಿ ಇದು ತಾಲ್ಲೂಕು ಕೇಂದ್ರವಾಗಿದ್ದರೂ ಪಟ್ಟಣದ ಲಕ್ಷಣಗಳನ್ನು ಪಡೆದುಕೊಳ್ಳದೆ, ದೊಡ್ಡ ಹಳ್ಳಿಯ ಸ್ವರೂಪದಲ್ಲೇ ಉಳಿದುಕೊಂಡಿತ್ತು. ನೀರು ರಸ್ತೆ ಮೊದಲ್ಗೊಂಡಂತೆ ಎಲ್ಲಾ ತರಹದ ಸಮಸ್ಯೆಗಳು ಯಥೇಚ್ಚವಾಗಿದ್ದವು. ಇದರಿಂದಾಗಿ ಕಾಲೇಜಿನ ವಿದ್ಯಾರ್ಥಿಗಳು ಊಟದ ಸಮಯದಲ್ಲಿ ನೆರೆ ಹೊರೆ ಮನೆಗಳಿಗೆ ಹೋಗಿ ನೀರು ಕೇಳಿದರೆ, ಅವರು ನೀರು ಇಲ್ಲ ಎನ್ನಲಾರದೆ, ಕೊಡಲಾರದೆ ಪರದಾಡುತ್ತಿದ್ದರು. ಇದಕ್ಕೆ ಪರಿಹಾರವೆಂಬಂತೆ ಕೆಲವು ವಿದ್ಯಾರ್ಥಿಗಳು ಮನೆಯಿಂದ ಬುತ್ತಿ ತುರುವುದನ್ನು ನಿಲ್ಲಿಸಿಬಿಟ್ಟಿದ್ದರು. ಅದನ್ನು ಗಮನಿಸಿದ ಕೆಎನ್ಎಸ್‌ರವರು ಕಾಲೇಜಿನ ವಿದ್ಯಾರ್ಥಿಗಳ ನೀರಿನ ಬವಣೆಯನ್ನು ಪರಿಹರಿಸುವುದಕ್ಕಾಗಿ ಪಟ್ಟಣದ ಪುರಸಭೆಗೆ ಕೆವಿಡಬ್ಲ್ಯುಎಸ್‌ನವರು ನೀಡಿರುವ ನೀರಿನ ದೊಡ್ಡ ಟ್ಯಾಂಕ್‌ನ್ನು ನೀಡಬೇಕೆಂದು ವಿನಂತಿಸಿದರು. ಪುರಸಭೆಯವರು ಅದನ್ನು ಬಳಸಿಕೊಳ್ಳದೆ ಅದು ವ್ಯರ್ಥವಾಗಿತ್ತು. ಇದಕ್ಕೆ ಮೊದಲು ಪುರಸಭಾ ಅಧ್ಯಕ್ಷರು ಒಪ್ಪಲಿಲ್ಲ. ಕೊನೆಗೆ ಸರ್ಕಲ್ ಇನ್ಸ್‌ಪೆಕ್ಟರ್ ಪೃಥ್ವಿರಾಜ್ ಮೂಲಕ ಶಿಫಾರಸ್ಸು ಮಾಡಿಸಿ ಆ ಟ್ಯಾಂಕ್‌ನ್ನು ಪಡೆದುಕೊಂಡು ಕಾಲೇಜಿನ ಆವರಣದಲ್ಲಿ ಇರಿಸಿ ಅದಕ್ಕೆ ಪುರಸಭೆಯ ನೀರಿನ ಪೈಪುಗಳ ಮೂಲಕ ನೀರು ತುಂಬಿಸಿದರು. ಇದು ಕಬ್ಬಿಣದ್ದಾಗಿದ್ದರಿಂದ ಕಾಲಾನಂತರ ತುಕ್ಕು ಹಿಡಿದು ಸೋರ ತೊಡಗಿ ನೀರು ಪೋಲಾಗತೊಡಗಿದವು. ಇದನ್ನು ನಿವಾರಿಸುವುದಕ್ಕಾಗಿ ಕಾಲೇಜಿನ ಕಾರ್ಯಾಲಯದ ಬಳಿ ಸಿಮೆಂಟಿನ ನೀರು ಸಂಗ್ರಹ ಟ್ಯಾಂಕ್‌ನ್ನು ನಿರ್ಮಿಸಲಾಯಿತು. ಇದರ ಉಸ್ತುವಾರಿಯನ್ನು ಶಿಕ್ಷಕ ಶ್ರೀರಾಮುಲುರವರಿಗೆ ವಹಿಸಿಲಾಗಿತ್ತು. ಅವರು ಇಂಜಿನಿಯರ್‌ರವರ ಮಾರ್ಗದರ್ಶನದಲ್ಲಿ ಸುಭದ್ರವಾದ ಸಿಮೆಂಟು ನೀರಿನ ಸಂಗ್ರಹ ಟ್ಯಾಂಕ್‌ನ್ನು ನಿರ್ಮಾಣ ಮಾಡಿಸಿದರು. ಇದರಿಂದ ಕಾಲೇಜನ್ನು ಕಾಡುತ್ತಿದ್ದ ದಶಕಗಳ ನೀರಿನ ಸಮಸ್ಯೆಗೆ ಇತಿಶ್ರೀ ಹಾಡಿದಂತಾಯಿತು.

ಕಾಲೇಜು ಪ್ರಾರಂಭವಾದಾಗಿನಿಂದಲೂ ಸಂಗ್ರಹವಾಗಿದ್ದ ನಿರುಪಯುಕ್ತ ವಸ್ತುಗಳ ರಾಶಿ ಕಾಲೇಜಿನಲ್ಲಿ ತುಂಬಿತ್ತು. ಇದನ್ನು ವಿಲೇವಾರಿ ಮಾಡುವುದು ಒಂದು ದೊಡ್ಡ ಸಮಸ್ಯೆಯಾಗಿತ್ತು. ಇದನ್ನು ಸಹ ಸವಾಲಾಗಿ ಸ್ವೀಕರಿಸಿ ಇಲಾಖೆಯ ಮೇಲಾಧಿಕಾರಿಗಳಿಗೆ ಪತ್ರ ಬರೆದು, ಅದನ್ನು ಹಿಂಬಾಲಿಸಿಕೊಂಡು ಹೋಗಿ ಅನುಮತಿ ಪಡೆದು ನಿರುಪಯುಕ್ತ ವಸ್ತುಗಳನ್ನು ಹರಾಜಿನಲ್ಲಿ ವಿಲೇವಾರಿ ಮಾಡಲಾಯಿತು.

## ಲೆಕ್ಕಪತ್ರಗಳಲ್ಲಿನ ಶಿಸ್ತು

ಕಾಲೇಜು ಹಲವು ವರ್ಷಗಳಿಂದ ಎಸ್‌ಎಸ್‌ಎಲ್‌ಸಿ ಪರೀಕ್ಷಾ ಕೇಂದ್ರವಾಗಿತ್ತು. ಪರೀಕ್ಷೆ ಬರೆಯಲು ಕಾಲೇಜಿಗೆ ತಾಲ್ಲೂಕಿನ ವಿವಿಧ ಪ್ರೌಢಶಾಲೆಗಳಿಂದ ಆಗಮಿಸುವ ವಿದ್ಯಾರ್ಥಿಗಳಿಗೆ ಪರೀಕ್ಷೆಯು ನಡೆಯುವಷ್ಟು ದಿನಗಳು ಕಾಲೇಜಿನಲ್ಲೇ ಊಟದ



ವ್ಯವಸ್ಥೆ ಹಿಂದಿನಿಂದಲೂ ಮಾಡಲಾಗುತ್ತಿತ್ತು. ಇದಕ್ಕಾಗಿ ವಿದ್ಯಾರ್ಥಿಗಳಿಂದ ನೆಪಮಾತ್ರದ ಹಣವನ್ನು ಸಂಗ್ರಹ ಮಾಡಿ, ಉಳಿದ ಹಣವನ್ನು ದಾನಿಗಳಿಂದ ಪಡೆದು ಊಟದ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಇಲ್ಲಿಗೆ ಕೆಎನ್‌ಎಸ್‌ರವರು ಬರುವುದಕ್ಕೆ ಮುನ್ನ ಹೀಗೆ ಮಾಡಲಾಗುತ್ತಿತ್ತಾದರೂ, ಹಣ ವಸೂಲಿ ಮತ್ತು ಖರ್ಚು ಎರಡೂ ಸಮವಾಗಿ ಉಳಿಕೆಯಿಲ್ಲ ಎಂದು ಲೆಕ್ಕವನ್ನು ತೋರಿಸುತ್ತಿದ್ದರು. ಆದರೆ ಕೆಎನ್‌ಎಸ್‌ರವರು ಇಲ್ಲಿಗೆ ಪ್ರಿನ್ಸಿಪಾಲರಾಗಿ ಬಂದ ಮೇಲೆ ಹಿಂದಿನ ಪದ್ಧತಿಯನ್ನೇ ಮುಂದುವರೆಸುವುದರ ಜೊತೆಗೆ ಪ್ರತಿಯೊಂದು ಖರ್ಚನ್ನು ಲೆಕ್ಕವಿಡಲಾಯಿತು. ಮಕ್ಕಳಿಗೆ ರುಚಿಕರ ಊಟವನ್ನು ಸಹ ಹಾಕಲಾಯಿತು. ಹೀಗೆ ಧಾರಾಳವಾಗಿ ಖರ್ಚು ಮಾಡಿದ ಮೇಲೂ ಪ್ರತಿವರ್ಷ ಹಣ ಉಳಿಯುತಿತ್ತು. ಪ್ರತಿವರ್ಷ ಉಳಿಸಿದ ಹಣದ ಮೊತ್ತ 25 ಸಾವಿರ ರೂಪಾಯಿಗಳಾಗಿದ್ದವು.ಇವರು ಅಲ್ಲಿಂದ ವರ್ಗಾವಣೆಯಾದಾಗ ಹಣ ಬ್ಯಾಂಕ್‌ನಲ್ಲಿ ಠೇವಣಿ ಇಟ್ಟು ಅದರ ಬಡ್ಡಿ ಹಣವನ್ನು ಪರೀಕ್ಷೆಗೆ ಆಗಮಿಸುವ ವಿದ್ಯಾರ್ಥಿಗಳ ಊಟದ ವ್ಯವಸ್ಥೆಗೆ ಬಳಸಿಕೊಳ್ಳುವಂತೆ ಮಾಡಿದ್ದರು. 'ಇಂತಹ ಪ್ರಾಮಾಣಿಕ ಕಾರ್ಯದಲ್ಲಿ ತಮಗೆ ಶಿಕ್ಷಕರಾದ ಶ್ರೀರಾಮುಲು, ಎ.ಆದೆಪ್ಪ ಮತ್ತು ಜಿ.ಜಗನ್ನಾಥರವರು ನೆರವಾದರು' ಎಂದು ಅವರು ನೆನಪಿಸಿಕೊಳ್ಳುತ್ತಾರೆ. ಇವರ ಪ್ರಾಮಾಣಿಕತೆಯಿಂದಾಗಿ ಕಾಲೇಜಿಗೆ ಹಣ ಉಳಿದಿದ್ದು ಮಾತ್ರವಲ್ಲ ಕಾಲೇಜಿನ ಕೀರ್ತಿ ಬೆಳೆಯಿತು ಎನ್ನುತ್ತಾರೆ ಕೆಎನ್‌ಎಸ್‌ರವರು.

ಕಾಲೇಜನ್ನು ಕಾಡುತ್ತಿದ್ದ ಕೊಠಡಿಗಳ ಸಮಸ್ಯೆ, ನೀರಿನ ಸಮಸ್ಯೆ ಮತ್ತು ಮೈದಾನದ ಸಮಸ್ಯೆಯನ್ನು ಪರಿಹರಿಸಲು ಯಾವ ಪ್ರಮಾಣದ ಆದ್ಯತೆಯನ್ನು ನೀಡಿದ್ದರೋ ಅದೇ ಪ್ರಮಾಣದ ಆದ್ಯತೆಯನ್ನು ಇವರು ಕಾಲೇಜಿನ ಪ್ರಗತಿಗೆ ನೀಡಿದ್ದರು. 'ಶಿಕ್ಷಕರು ಸಮಯಕ್ಕೆ ಸರಿಯಾಗಿ ತರಗತಿಗಳನ್ನು ತೆಗೆದುಕೊಳ್ಳಬೇಕು. ನಿಯಮಿತವಾಗಿ ಪಾಠ ಪ್ರವಚನಗಳನ್ನು ಮುಗಿಸಬೇಕು' ಎಂದು ಕಟ್ಟು ಮಾಡಿದ್ದರು. ಈ ವಿಷಯದಲ್ಲಿ ಯಾರಿಗೂ ಯಾವುದೇ ರಿಯಾಯಿತಿ ಇರಲಿಲ್ಲ. ಇವರ ಇಂತಹ ಕ್ರಮದಿಂದ ಕೆಲವು ಶಿಕ್ಷಕರು ಅಲ್ಲಿಂದ ಬೇರೆಡೆಗೆ ವರ್ಗಾವಣೆ ಮಾಡಿಸಿಕೊಂಡು ಹೋದರು. ಆದರೆ ವಿದ್ಯಾರ್ಥಿಗಳು ಮತ್ತು ಪೋಷಕರು ಮಾತ್ರ ಇವರ ಕಾರ್ಯವನ್ನು ಮುಕ್ತ ಕಂಠದಿಂದ ಕೊಂಡಾಡಿದರು.

### ಲಘು ಪರೀಕ್ಷೆಗಳ ಪರಿಕಲ್ಪನೆ

ಒಂದು ತಿಂಗಳನಲ್ಲಿ ಮಾಡಿದ ಪಾಠಗಳ ಬಗ್ಗೆ ಒಂದೊಂದು ಲಘು ಪರೀಕ್ಷೆ ಮಾಡಬೇಕೆಂಬ ಹೊಸ ನಿಯಮವನ್ನು ಜಾರಿಗೆ ತಂದರು. ಇದರಿಂದ ಪ್ರತಿವಾರ ಒಂದೊಂದು ಟೆಸ್ಟ್ ನಡೆಸುವಂತಾಯಿತು. ವಿದ್ಯಾರ್ಥಿಗಳು ಎಲ್ಲಾ ವಿಷಯಗಳಿಗೆ ಒಂದೇ ನೋಟ್ ಬುಕ್ ಇಟ್ಟು, ಅದರಲ್ಲಿ ಎಲ್ಲಾ ವಿಷಯುಗಳ ಪರೀಕ್ಷೆ ಬರೆಯಬೇಕಾಯಿತು. ಪರೀಕ್ಷೆಯ ನಂತರ ಶಿಕ್ಷಕರು ನೋಟ್ ಬುಕ್‌ಗಳನ್ನು ಮನೆಗೆ ತೆಗೆದುಕೊಂಡು ಹೋಗಿ ಮುಂದಿನ ವಾರದ ಪರೀಕ್ಷೆ ನಡೆಯುವುದಕ್ಕೆ ಒಂದು ದಿನ



ಮುನ್ನ ಪರೀಕ್ಷೆಯ ಉತ್ತರಗಳನ್ನು ಮೌಲ್ಯಮಾಪನ ಮಾಡಿ ತಪ್ಪಿರುವ ಉತ್ತರಗಳನ್ನು ತಿದ್ದಿ ವಿದ್ಯಾರ್ಥಿಗಳಿಗೆ ಹಿಂತಿರುಗಿಸಬೇಕಾಗಿತ್ತು. ಇವರ ಈ ವಿನೂತನ ಪದ್ಧತಿಯಿಂದ ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಫುಲ್ ವರ್ಕ್ ಆಯಿತು. ಕೃಷಿಕ ಕುಟುಂಬದಿಂದ ಬರುತ್ತಿದ್ದ ವಿದ್ಯಾರ್ಥಿಗಳಿಗಂತೂ ಪರದಾಡುವಂತಾಯಿತು. ಭಾನುವಾರದ ರಜಾದಲ್ಲಿ ಹೊಲದ ಕೆಲಸಕ್ಕೆ ಹೋಗದೆ ಅಪ್ಪ-ಅಮ್ಮನ ಕೈಯಲ್ಲಿ ಬೈಯಿಸಿಕೊಂಡು ಪುಸ್ತಕ ಹಿಡಿದುಕೊಂಡು ಕೂತು ಓದುವಂತಾಯಿತು. ಕೆಲವು ಮುಗ್ಧ ಪೋಷಕರು ಕಾಲೇಜಿಗೆ ಬಂದು ಮಕ್ಕಳು ಓದುವ ಪರಿಯ ಬಗ್ಗೆ ಬೇಸರ ವ್ಯಕ್ತಪಡಿಸಿ, ರಜಾದಿನದಂದು ಮಕ್ಕಳು ಹೊಲದ ಕೆಲಸ ಮಾಡದೆ, ಪುಸ್ತಕವನ್ನು ಹಿಡಿದುಕೊಂಡು ಕುಳಿತು ಬಿಡುತ್ತಾರೆ, ನಿಮ್ಮ ವಾರದ ಪರೀಕ್ಷಾ ಪದ್ಧತಿಯನ್ನು ಬದಲಾಯಿಸಿಕೊಳ್ಳಿ ಎಂದು ಜೋರು ಮಾಡಿದರು. ಅವರ ಮುಗ್ಧತೆಯನ್ನು ಅರ್ಥ ಮಾಡಿಕೊಂಡು ನೂತನ ಪರೀಕ್ಷಾ ಪದ್ಧತಿಯ ಬಗ್ಗೆ ತಿಳಿ ಹೇಳಲಾಯಿತು.

ಇಂತಹ ವಿನೂತನ ಕ್ರಮದಿಂದ ಶಾಲೆಯ ಎಸ್ಎಸ್ಎಲ್ಸಿ ಪರೀಕ್ಷಾ ಫಲಿತಾಂಶವು ಶೇ. 20 ರಿಂದ 48ಕ್ಕೇರಿತು. ಇವರು ಪ್ರಿನ್ಸಿಪಾಲರಾಗಿದ್ದ ಅವಧಿ(1979)ರಲ್ಲಿ ಇವರ ಶಾಲೆಯ ವಿದ್ಯಾರ್ಥಿ ಬಿ.ಜಿ.ಸತ್ಯಮೂರ್ತಿ ಎಸ್ಎಸ್ಎಲ್ಸಿ ಪರೀಕ್ಷೆಯಲ್ಲಿ ಜಿಲ್ಲೆಗೆ ಪ್ರಥಮ ಸ್ಥಾನವನ್ನು ಪಡೆದರು. ಪಿಯುಸಿ ಪರೀಕ್ಷಾ ಫಲಿತಾಂಶವು ಪ್ರತಿವರ್ಷ ಶೇ. 50ಕ್ಕಿಂತಲೂ ಹೆಚ್ಚಾಗಿರುತ್ತಿತ್ತು. ಎಸ್ಎಸ್ಎಲ್ಸಿ ಮತ್ತು ಪಿಯುಸಿ ಪರೀಕ್ಷಾ ಫಲಿತಾಂಶವನ್ನು ಉತ್ತಮ ಪಡಿಸಿದ್ದರ ಜೊತೆಗೆ ವಿದ್ಯಾರ್ಥಿಗಳಿಗೆ ಉದ್ಯೋಗಾವಕಾಶವನ್ನು ಒದಗಿಸಿಕೊಡುವ ಪಿಯುಸಿಯಲ್ಲಿ ಶಿಕ್ಷಣ ಕೋರ್ಸ್‌ನ್ನು ಮೊದಲ ಬಾರಿಗೆ ಪ್ರಾರಂಭಿಸಿದರು. ಈ ಕೋರ್ಸ್‌ನ್ನು ವ್ಯಾಸಂಗ ಮಾಡಿದ ಹಲವು ಮಂದಿ ಶಿಕ್ಷಕರಾಗಿ ಬದುಕು ಕಟ್ಟಿಕೊಂಡಿದ್ದಾರೆ. ಕಡಿಮೆ ಶುಲ್ಕದಲ್ಲಿ ದೊರೆತ ಶಿಕ್ಷಕ ತರಬೇತಿ ಕೋರ್ಸ್ ಇದಾಗಿತ್ತು. ಜೊತೆಗೆ ಇಡೀ ಜಿಲ್ಲೆಗೇ ಪ್ರಥಮವಾಗಿತ್ತು. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿರುವ ಬಾಗೇಪಲ್ಲಿ ತಾಲ್ಲೂಕಿನ ಜನತೆಗೆ ಇದು ನಿಜವಾಗಿಯೂ ಒಂದು ವರದಾನವೇ ಆಗಿತ್ತು. ಇದರ ಉಪಯೋಗವನ್ನು ಪಡೆದು ಬದುಕು ಕಟ್ಟಿಕೊಂಡಿರುವ ಹಲವು ಮಂದಿ ಶಿಕ್ಷಕರು ಕೆಎನ್ಎಸ್‌ರವರನ್ನು ಇಂದಿಗೂ ಕೃತಜ್ಞತೆಯಿಂದ ಸ್ಮರಿಸುತ್ತಾರೆ.

ಆಡಳಿತಗಾರರಿಗೆ ಸಾಮಾಜಿಕ ಕಳಕಳಿಯಿದ್ದರೆ ವ್ಯವಸ್ಥೆಯಲ್ಲಿ ಏನೆಲ್ಲವನ್ನು ಬದಲಾವಣೆ ತರಬಹುದು ಎಂಬುದಕ್ಕೆ ಇವರು ನಿದರ್ಶನವಾಗಿದ್ದಾರೆ. ಇವರು ಪ್ರಿನ್ಸಿಪಾಲರಾಗಿ ನೇಮಕಗೊಂಡು ಇಲ್ಲಿಗೆ ಬಂದಿದ್ದರೇ ಹೊರತು. ಸಂಪೂರ್ಣವಾಗಿ ತರಬೇತಿಯನ್ನು ಪಡೆದಿರಲಿಲ್ಲ. ಆದರೆ ಉತ್ತಮ ಆಡಳಿತ ನಡೆಸಬೇಕು. ಶಿಕ್ಷಣದ ಮೂಲಕ ಸಮಾಜ ಸುಧಾರಣೆ ಮಾಡಬೇಕು ಎಂಬ ಕನಸನ್ನು ಹೊಂದಿದ್ದರು. ಈ ಕನಸನ್ನು ನನಸು ಮಾಡುವುದಕ್ಕೆ ತಮಗೆ ದೊರೆತ ಸಣ್ಣ ಅವಕಾಶವನ್ನೂ ಬಿಡದೆ ಸದುಪಯೋಗಪಡಿಸಿಕೊಂಡರು. ವೈಯಕ್ತಿಕ ಸುಖಕ್ಕೆ ಆದ್ಯತೆ ನೀಡಿ ಐಷರಾಮಿ

ಜೀವನದಲ್ಲಿ ಕಾಲಹರಣ ಮಾಡದೆ, ತಮ್ಮ ಧ್ಯೇಯ ಸಾಧನೆಗಾಗಿ ನಿರಂತರ ಶ್ರಮಿಸಿದರು. ಸರ್ಕಾರದ ಕೆಲಸ ದೇವರ ಕೆಲಸ ಎಂದು ಬೋರ್ಡ್ ಹಾಕಿಕೊಂಡು ಕಾಲಹರಣ ಮಾಡುವವರು ಇಲ್ಲಿ ಸಾಕಷ್ಟು ಮಂದಿ ಇದ್ದಾರೆ. ಆದರೆ ಇವರಿಗೆ ಅಂತಹ ನಂಬಿಕೆಯೂ ಇಲ್ಲ, ಅದಕ್ಕಿಂತಲೂ ಮಿಗಿಲಾಗಿ ಅಂತಹ ಸೋಗಲಾಡಿ ಮನೋಭಾವದವರೂ ಅಲ್ಲ. ತಾವು ಮಾಡುವುದು ತಮ್ಮ ತೃಪ್ತಿಗಾಗಿ, ದೀನ ದುರ್ಬಲರಿಗೆ ಅನುಕೂಲವಾಗಲಿ ಎಂಬ ತತ್ವವನ್ನು ನಂಬಿದವರು. ಆದ್ದರಿಂದಲೇ ಸ್ಥಳೀಯ ಸ್ವಾರ್ಥ ರಾಜಕಾರಣಿಗಳನ್ನೂ ಎದುರು ಹಾಕಿಕೊಂಡು ಕಾಲೇಜಿಗೆ ಕಾಯಕಲ್ಪ ನೀಡಿದರು. ಕಾಲೇಜಿನ ನವ ನಿರ್ಮಾತೃ ಎನಿಸಿಕೊಂಡರು, ಅದರ ನಿಜವಾದ ಶಿಲ್ಪಿ ಎನಿಸಿಕೊಂಡರು. ಆದರೆ ಇವರ ಈ ನಿಸ್ವಾರ್ಥ ಕೆಲಸವನ್ನು ಯಾರೂ ಗುರುತಿಸಲಿಲ್ಲ. ಈ ಬಗ್ಗೆ ಇವರಲ್ಲಿ ವಿಷಾದದ ಛಾಯೆ ಇದೆಯಾದರೂ ಅದನ್ನು ಲೆಕ್ಕಿಸದೆ ತಮ್ಮ ಪಾಲಿನ ಕೆಲಸವನ್ನು ಪ್ರಾಮಾಣಿಕವಾಗಿ ನಿರ್ವಹಿಸುತ್ತಾ ಬಂದಿದ್ದಾರೆ. ಇದರಿಂದಲೇ ಅತಿಹಿಂದುಳಿದ ಪ್ರದೇಶವೆಂದು ಸರ್ಕಾರಿ ದಾಖಲೆಗಳಲ್ಲೂ ನಮೂದಿಸಲ್ಪಟ್ಟಿರುವ ಬಾಗೇಪಲ್ಲಿ ತಾಲ್ಲೂಕಿನಲ್ಲಿ ಬಡ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ದೊರೆಯುವಂತಾಯಿತು.

**ಗುಡಿಬಂಡೆ ಕಾಲೇಜಿಗೆ**

ಪ್ರಿನ್ಸಿಪಾಲರಾಗಿ ನೇಮಕಗೊಂಡ ಮೇಲೆ ನೌಕರಿಯ ಕಡೆಗೆ ಹೆಚ್ಚು ಗಮನವನ್ನು ನೀಡಿದರಾದರೂ ದಲಿತ ಸಂಘರ್ಷ ಸಮಿತಿಯೊಂದಿಗೆ ಒಡನಾಟಕ್ಕೆ ಕಿಂಚಿತ್ತೂ ಕೊರತೆ ಉಂಟಾಗಲಿಲ್ಲ. ಆದರೆ ಭದ್ರಾವತಿಯಲ್ಲಿ ನಡೆದ ದಲಿತ ಲೇಖಕರ ಕಲಾವಿದರ ಅಧಿವೇಶನದಲ್ಲಿ ಭಾಗವಹಿಸಲಾಗಲಿಲ್ಲ. ಇವರ ಸಹಪಾಠಿ, ದಲಿತ ಸಂಘರ್ಷ ಸಮಿತಿಯ ಸಂಸ್ಥಾಪಕ ಪ್ರೊ|| ಬಿ.ಕೃಷ್ಣಪ್ಪನವರು ಸ್ವತಃ ಬಾಗೇಪಲ್ಲಿಗೆ ಆಗಮಿಸಿ ದಲಿತ ಸಮಾವೇಶಕ್ಕೆ ಆಹ್ವಾನಿಸಿದರೂ ಸಹ ಪ್ರಿನ್ಸಿಪಾಲರ ಹೊಸ ಹೊಣೆಗಾರಿಕೆಯಿಂದಾಗಿ ಇವರಿಗೆ ಅಲ್ಲಿಗೆ ಹೋಗಲಾಗಲಿಲ್ಲ. ಇಂತಹ ಒಂದೆರಡು ಕಾರ್ಯಕ್ರಮಗಳನ್ನು ಬಿಟ್ಟರೆ ಉಳಿದ ಬಹುತೇಕ ಎಲ್ಲಾ ಕಾರ್ಯಕ್ರಮಗಳಿಗೆ ಬಿಡುವು ಮಾಡಿಕೊಂಡು ಭಾಗವಹಿಸಿದ್ದರು. 1984ರಲ್ಲಿ ದಲಿತ ಸಂಘರ್ಷ ಸಮಿತಿಯ ಸಂವಿಧಾನ ರಚನಾ ಸಮಿತಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ, ಸಂಘಟನೆಗೆ ದೂರದೃಷ್ಟಿಯನ್ನುಳ್ಳ ಸಂವಿಧಾನವೊಂದನ್ನು ರಚಿಸಿಕೊಟ್ಟರು. ಸರಿ ಸುಮಾರು ಇದೇ ಸಮಯಕ್ಕೆ ಇವರಿಗೆ ಸಕ್ಕರೆ ಕಾಯಿಲೆಯು ಕಾಣಿಸಿಕೊಂಡದ್ದರಿಂದ ಆತಂಕಗೊಂಡರು. ಬಾಗೇಪಲ್ಲಿ ಕಾಲೇಜಿನಲ್ಲಿ ವರ್ಷದಿಂದ ವರ್ಷಕ್ಕೆ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿ ಕೆಲಸದ ಒತ್ತಡ ಹೆಚ್ಚಾಗತೊಡಗಿತು. ಇದರಿಂದ ಕಾಯಿಲೆಯು ಮುಂದೆ ಸಮಸ್ಯೆಯಾಗಿ ಪರಿಣಮಿಸಬಹುದು ಎಂದು ಭಾವಿಸಿ, ಕಡಿಮೆ ಸಂಖ್ಯೆಯ ವಿದ್ಯಾರ್ಥಿಗಳನ್ನು ಹೊಂದಿರುವ ಚಿಕ್ಕ ಕಾಲೇಜಿಗೆ ವರ್ಗಾವಣೆ ಮಾಡಿಸಿಕೊಂಡು ಹೋಗಬೇಕೆಂದು ತೀರ್ಮಾನಿಸಿದರು. ಅದರಂತೆ ನೆರೆಯ ತಾಲ್ಲೂಕು ಕೇಂದ್ರವಾದ ಗುಡಿಬಂಡೆ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಹೋಗಲು ತೀರ್ಮಾನಿಸಿದರು. ಗುಡಿಬಂಡೆ ಕಾಲೇಜಿನಲ್ಲಿ ತಮ್ಮ ಹಳೆಯ ಸಹೋದ್ಯೋಗಿಯೊಬ್ಬರು ಬಡ್ತಿ ಪಡೆದು



ಪ್ರಿನ್ಸಿಪಾಲರಾಗಿ ಕೆಲಸ ಮಾಡುತ್ತಿದ್ದರು. ಅವರು ಬಾಗೇಪಲ್ಲಿಗೆ ವಾಪಸ್ಸು ಬರಲು ಬಯಸಿದ್ದರು. ಆದರೆ ಇಬ್ಬರ ಸೇವೆಯೂ ಪ್ರಿಮೆಚ್ಯೂರ್ ಆಗಿದ್ದರಿಂದ ವರ್ಗಾವಣೆಗೆ ಅರ್ಹರಾಗಿರಲಿಲ್ಲ. ವರ್ಗಾವಣೆ ಮಾಡುವುದಾದರೆ ಮುಖ್ಯ ಮಂತ್ರಿಗಳೇ ಮಾಡಬೇಕಾಗಿತ್ತು. ಇದಕ್ಕೆ ದಸಂಸ ಮುಖಂಡರು ಯೋಜನೆ ರೂಪಿಸಿ ಶಾಸಕ ಕೆ.ಆರ್.ರಮೇಶ್‌ಕುಮಾರ್‌ರವರ ಮೂಲಕ ಅಂದಿನ ಮುಖ್ಯಮಂತ್ರಿ ರಾಮಕೃಷ್ಣಹೆಗ್ಗಡೆಯವರ ಬಳಿಗೆ ತೆರಳಿ ವರ್ಗಾವಣೆ ಮಾಡಿಸಿದರು.

ಕೆಪಿಎಸ್‌ಸಿಯಿಂದ ಪ್ರಿನ್ಸಿಪಾಲರಾಗಿ ನೇರವಾಗಿ ಆಯ್ಕೆಯಾಗಿ ಬಾಗೇಪಲ್ಲಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ನೇಮಕಗೊಂಡ ಮೇಲೆ 1975 ರಿಂದ 1982ರ ವರೆಗೆ ಕೆಲಸ ನಿರ್ವಹಿಸಿದರು. ತದನಂತರ ಬೆಂಗಳೂರಿನ ಬಾಪೂಜಿ ವಿದ್ಯಾ ಸಂಸ್ಥೆಗಳಲ್ಲಿ ಕೆಲಸ ಮಾಡುವುದಕ್ಕೆ ನಿಯೋಜನೆಯ ಮೇಲೆ ಅಲ್ಲಿಂದ ಬಿಡುಗಡೆಯಾಗಿ ಬಂದರು. ಆದರೆ ಇಲ್ಲಿಯ ವೃತ್ತಿ ಜೀವನ ತೃಪ್ತಿ ನೀಡದ ಪ್ರಯುಕ್ತ ಮರಳಿ ಪ್ರಿನ್ಸಿಪಾಲರಾಗಿ ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ತೆರಳಿದರು. ಇಲ್ಲಿ ಎರಡು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು. ಇಲ್ಲೂ ಸಹ ಹಲವು ಬಗೆಯ ಸಮಸ್ಯೆಗಳು ಎದುರಾದವು. ಆದರೆ ಹಿಂದಿನ ಅನುಭವದಿಂದಾಗಿ ಅವುಗಳನ್ನು ಸುಲಲಿತವಾಗಿ ಪರಿಹರಿಸಿಕೊಂಡರು. ಆದ್ದರಿಂದ ಸಮಸ್ಯೆಗಳು ಗಂಭೀರವಾದ ಸ್ವರೂಪವನ್ನು ತಾಳಲಿಲ್ಲ. ಆದರೆ ಅಲ್ಲಿನ ಅಂದಿನ ಶಾಸಕ ಕೆ.ಆರ್.ರಮೇಶ್‌ಕುಮಾರ್‌ರಿಗೆ ಚಾಡಿಕೋರರು ಇಲ್ಲಸಲ್ಲದ ದೂರುಗಳನ್ನು ನೀಡಿ ತಮ್ಮ ಬಗ್ಗೆ ತಪ್ಪು ಕಲ್ಪನೆ ಬರುವಂತೆ ಮಾಡುತ್ತಿದ್ದಾರೆ ಎಂಬ ಸುಳಿವು ದೊರೆತು ಅಲ್ಲಿಂದ ಮರಳಿ ಬಾಗೇಪಲ್ಲಿಗೆ ವರ್ಗಾವಣೆ ಮಾಡಿಸಿಕೊಂಡು ಬಂದರು. ಈ ಅವಧಿಯಲ್ಲಿ ಅಲ್ಲಿನ ಕಾಲೇಜಿನ ಕಟ್ಟಡಕ್ಕೆ ಒಂದು ಕೋಟಿ ರೂಪಾಯಿಗಳ ಮಂಜೂರಾತಿಗಾಗಿ ಸರ್ಕಾರಕ್ಕೆ ಸಲ್ಲಿಸಲು ಪ್ರಸ್ತಾವನೆಯನ್ನು ಸಿದ್ಧಪಡಿಸಿದ್ದರು. ಅದನ್ನು ಮಂಜೂರು ಮಾಡಿಸಿಕೊಳ್ಳುವುದಕ್ಕೆ ಪ್ರಯತ್ನಗಳನ್ನು ಮಾಡುವ ಗೋಜಿಗೆ ಹೋಗದೆ ಸುರಕ್ಷಿತ ಸ್ಥಳವೆಂದು ಭಾವಿಸಿದ್ದ ಬಾಗೇಪಲ್ಲಿ ಕಾಲೇಜಿಗೆ ವಾಪಸ್ಸಾದರು.

ಬಾಗೇಪಲ್ಲಿ ಕಾಲೇಜಿಗೆ ಎರಡನೆಯ ಬಾರಿಗೆ (1984) ಆಗಮಿಸಿದ ಮೇಲೆ ಮೊದಲ ಅವಧಿಯಲ್ಲಿ ಅರ್ಧಕ್ಕೆ ನಿಂತಿದ್ದ ಅಭಿವೃದ್ಧಿ ಕಾರ್ಯಗಳನ್ನು ಪೂರ್ಣಗೊಳಿಸಲು ಅವರಿಗೆ ಸಹಕಾರಿಯಾಯಿತು.

ಸಕ್ಕರೆ ಕಾಯಿಲೆಯು ಕಾಣಿಸಿಕೊಂಡದ್ದರಿಂದ ಕೆಲಸದ ಒತ್ತಡವನ್ನು ಕಡಿಮೆ ಮಾಡಿಕೊಳ್ಳಬೇಕೆಂದು ಬಾಗೇಪಲ್ಲಿಯಿಂದ ಗುಡಿಬಂಡೆಯ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಕೆಎನ್‌ಎಸ್ ವರ್ಗಾವಣೆಗೊಂಡು ಬಂದರು. ಇಲ್ಲಿನ ಕಾಲೇಜು ಚಿಕ್ಕದಾದರೂ ಸಮಸ್ಯೆಗಳು ಹಿರಿದಾಗಿದ್ದವು. ಇಲ್ಲೂ ಯಥಾಪ್ರಕಾರ ಬಾಗೇಪಲ್ಲಿಯಲ್ಲಿದ್ದಂತೆ ಹಲವು ಮಂದಿ ಶಿಕ್ಷಕರು ಹಲವು ವರ್ಷಗಳಿಂದ ಇಲ್ಲಿ ಬೀಡು ಬಿಟ್ಟಿದ್ದರು. ಕೆಲವು ಸ್ಥಳೀಯರು ತಾವು ಹೇಳಿದ್ದೇ ನಡೆಯಬೇಕೆಂಬ ಧೋರಣೆಯನ್ನು ಹೊಂದಿದ್ದರು. ಇವರನ್ನು



ವಿಶ್ವಾಸಕ್ಕೆ ತೆಗೆದುಕೊಂಡು ಅಥವಾ ಹದ್ದುಬಸ್ತಿಗೆ ತೆಗೆದುಕೊಂಡು ಕೆಲಸ ಮಾಡಬೇಕಾಗಿತ್ತು. ಇದು ನಿಜವಾಗಿಯೂ ಸವಾಲಾಗಿತ್ತು. ತಮ್ಮ ಹತ್ತು ವರ್ಷಗಳ ಪ್ರಿನ್ಸಿಪಾಲ್‌ಗಿರಿಯ ಅನುಭವಕ್ಕೂ ಸವಾಲಾಗುವಂತಹ ಘಟನೆಗಳೂ ಇಲ್ಲಿ ಎದುರಾದವು. ಆದರೂ ಹಿಂಜರಿಯದೆ ಚಾಕಚಕ್ಯತೆಯಿಂದ ಪರಿಹರಿಸಿಕೊಂಡು ಕಾರ್ಯನಿರ್ವಹಿಸಿದರು. ಕಾಲೇಜಿನ ಆಡಳಿತ ಮತ್ತು ಫಲಿತಾಂಶವನ್ನು ಸುಧಾರಣೆ ಮಾಡಿದರು.

ಕೆಎನ್‌ಎಸ್‌ರವರು ತಮ್ಮ ಬದುಕನ್ನು ಸರ್ಕಾರಿ ನೌಕರಿಗೆ ಮತ್ತು ದಲಿತ ಚಳವಳಿಗೆ ಮುಕ್ಕಾಲು ಭಾಗವನ್ನು ಅರ್ಪಿಸಿಕೊಂಡಿದ್ದರು. ಇನ್ನು ಉಳಿದ ಕಾಲು ಭಾಗವನ್ನು ಕುಟುಂಬಕ್ಕೆ ಮೀಸಲಿಟ್ಟಿದ್ದರು. ಆದ್ದರಿಂದ ಕುಟುಂಬ ನಿರ್ವಹಣೆ ತಮ್ಮ ಸರ್ಕಾರಿ ನೌಕರಿ ಮತ್ತು ಸೈದ್ಧಾಂತಿಕ ಕಾರ್ಯಗಳಿಗೆ ತೊಡಕಾಗಬಾರದು ಎಂಬ ಉದ್ದೇಶದಿಂದ ಮಿತ ಕುಟುಂಬ ಯೋಜನೆಯನ್ನು ಸ್ವಯಂ ಅಳವಡಿಸಿಕೊಂಡಿದ್ದರು. ಇದರಿಂದ ಹೆಣ್ಣಾಗಲಿ ಗಂಡಾಗಲಿ ತಮಗೆ 'ಒಂದೇ ಮಗು' ಸಾಕು ಎಂದು ತೀರ್ಮಾನಿಸಿಕೊಂಡಿದ್ದರು. ಇದಕ್ಕೆ ಮರು ಮಾತಾಡದೆ ಅವರು ಶ್ರೀಮತಿಯವರು ಸಂಪೂರ್ಣ ಸಮ್ಮತಿಯನ್ನು ನೀಡಿದ್ದರು. ಇಂತಹ ತೀರ್ಮಾನದಿಂದಾಗಿ ಅವರು ಪಡೆದಿರುವುದು ಏಕೈಕ ಪುತ್ರಿಯನ್ನು. ಈ ಏಕೈಕ ಪುತ್ರಿ ಪದ್ಮರವರು ಪದವಿ ಪೂರ್ವ ಶಿಕ್ಷಣವನ್ನು ಪೂರ್ಣಗೊಳಿಸಿದ್ದರು. ಅವರಿಗೆ ಪದವಿ ಶಿಕ್ಷಣವನ್ನು ಕೊಡಿಸಬೇಕಾಗಿತ್ತು. ಇದಕ್ಕೆ ಯಾವುದು ಸೂಕ್ತವಾದ ಸ್ಥಳವೆಂದು ಯೋಚಿಸುತ್ತಿದ್ದಾಗ ಹೊಳೆದದ್ದು ಗೌರಿಬಿದನೂರು ಪಟ್ಟಣದಲ್ಲಿನ ಕಾಲೇಜುಗಳು. ಈ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಿ ಗೌರಿಬಿದನೂರು ತಾಲ್ಲೂಕಿನ ಕೋಟಾಲದಿನ್ನೆಯಲ್ಲಿ ನೂತನವಾಗಿ ಪ್ರಾರಂಭಗೊಂಡಿದ್ದ ಸ್ವತಂತ್ರ ಪದವಿ ಪೂರ್ವ ಕಾಲೇಜಿಗೆ ದಸಂಸದ ಮುಖಂಡ ಎನ್.ಮುನಿಸ್ವಾಮಿಯವರ ಮೂಲಕ ವರ್ಗಾವಣೆ ಮಾಡಿಸಿಕೊಂಡರು. ಮಗಳನ್ನು ಗೌರಿಬಿದನೂರು ಪಟ್ಟಣದ ಆಚಾರ್ಯ ಮಹಿಳಾ ಪ್ರಥಮ ದರ್ಜೆ ಕಾಲೇಜಿನ ಪದವಿ ತರಗತಿಗೆ ದಾಖಲು ಮಾಡಿಸಿದರು.

## ಕೋಟಾಲದಿನ್ನೆ ಕಾಲೇಜಿಗೆ ಹೊಸರೂಪ

ಕೋಟಾಲದಿನ್ನೆ ಕಾಲೇಜು ಸಹ ಸಮಸ್ಯೆಗಳ ಆಗರವಾಗಿತ್ತು. ಇದಕ್ಕೆ ಸ್ವಂತ ಕಟ್ಟಡವಿರಲಿಲ್ಲ. ಖಾಸಗಿಯವರಿಗೆ ಸೇರಿದ ಕೋಳಿ ಫಾರಂನಲ್ಲಿ ಕಾಲೇಜು ನಡೆಯುತ್ತಿತ್ತು. ಅದು ಕಬ್ಬಿಣದ ಶೀಟುಗಳಿಂದ ಮಾಡಿದ ಮೇಲ್ಚಾವಣಿಯನ್ನು ಹೊಂದಿತ್ತು. ಆ ಶೀಟುಗಳು ಹಗಲಿನಲ್ಲಿ ಬಿಸಿಲಿಗೆ ಒಣಗಿ ಬಿಸಿ ಹವೆ ಕೊಠಡಿಯಲ್ಲಿ ತುಂಬಿಕೊಂಡು ಕೋಳಿಗಳ ಹಿಕ್ಕೆಯ ಗಮಲು ಮೂಗಿಗೆ ರಾಚಿ ವಾಕರಿಕೆ ಬರಿಸುತ್ತಿತ್ತು. ಆದರೂ ಕಾಲೇಜು ಹೇಗೋ ನಡೆಯುತ್ತಿತ್ತು! ಇದಕ್ಕೆ ಪೂರಕವೆಂಬಂತೆ ಸ್ಥಳೀಯರ ಅಸಹಕಾರ, ವಿದ್ಯಾರ್ಥಿಗಳ ಕೊರತೆ, ಕಾಲೇಜಿನ ಆಡಳಿತದ ನಿರಾಸಕ್ತಿಯಿಂದ ಕಾಲೇಜು ಮುಚ್ಚುವ ಹಂತವನ್ನು ತಲುಪಿತ್ತು. ಕೆಎನ್‌ಎಸ್‌ರವರು ಇಲ್ಲಿಗೆ ಬಂದ ಮೇಲೆ ಕಾಲೇಜಿನ ಸ್ಥಿತಿಯನ್ನು ಸುಧಾರಿಸಲು ಬಯಸಿದರು. ಮೊದಲ ಹಂತವಾಗಿ ಕಾಲೇಜಿಗೆ ಉತ್ತಮ ಕಟ್ಟಡ



ದೊರೆತರೆ ಕಾಲೇಜು ಸುಧಾರಣೆಯಾಗಬಹುದೆಂದು ಭಾವಿಸಿ, ಕೋಟಾಲದಿನ್ನೆಗೆ ಸಮೀಪದಲ್ಲಿದ್ದ ಹೊಸೂರು ಪದ್ಮಭೂಷಣ ಡಾ॥ ಹೆಚ್. ನರಸಿಂಹಯ್ಯ ನ್ಯಾಷನಲ್ ಹೈಸ್ಕೂಲ್ ಕಟ್ಟಡಕ್ಕೆ ತಾತ್ಕಾಲಿಕವಾಗಿ ವರ್ಗಾವಣೆ ಮಾಡಲು ಬಯಸಿದರು. ಇದಕ್ಕಾಗಿ ಸಂಸ್ಥೆಯ ಅಂದಿನ ಅಧ್ಯಕ್ಷ ಡಾ॥ ಹೆಚ್. ನರಸಿಂಹಯ್ಯರವರನ್ನು ವಿನಂತಿಸಿಕೊಂಡರು. ಆದರೆ ಅವರು ಹೈಸ್ಕೂಲ್‌ನ ವಾತಾವರಣ ಕೆಡುತ್ತದೆ ಎಂಬ ಭೀತಿಯಿಂದ ಅನುಮತಿಯನ್ನು ನಿರಾಕರಿಸಿದರು. ಕೊನೆಗೆ ಸಮೀಪದ ಮುದುಗೆರೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಕಟ್ಟಡಕ್ಕೆ ಸ್ಥಳಾಂತರಿಸಿ, ಅಲ್ಲಿ ಸರದಿಯ ಪ್ರಕಾರ ಕಾಲೇಜು ಮತ್ತು ಹಿರಿಯ ಪ್ರಾಥಮಿಕ ಶಾಲೆಯನ್ನು ನಡೆಸತೊಡಗಿದರು. ಇದಕ್ಕೆ ಕ್ಷೇತ್ರ ಶಿಕ್ಷಣಾಧಿಕಾರಿ ಅನುಮತಿ ನಿರಾಕರಿಸಿದಾಗ ಡಿಡಿಪಿಐರವರಿಂದ ಅನುಮತಿ ತಂದು ಕಾಲೇಜು ಸ್ಥಳಾಂತರಿಸಿದರು.

## ಕಾಲೇಜಿಗೆ ನಿವೇಶನ

ಕಾಲೇಜು ತಾತ್ಕಾಲಿಕವಾಗಿ ಮುದುಗೆರೆಗೆ ಸ್ಥಳಾಂತಗೊಂಡಿದ್ದರಿಂದ ವಿದ್ಯಾರ್ಥಿಗಳ ಸಂಖ್ಯೆ ಉತ್ತಮಗೊಂಡಿತು. ಕಾಲೇಜು ಸುಗಮವಾಗಿ ನಡೆದುಕೊಂಡು ಹೋಗುತ್ತಿತ್ತು. ಆದರೆ ಕಾಲೇಜಿಗೆ ಒಂದು ಶಾಶ್ವತ ಕಟ್ಟಡವನ್ನು ಪಡೆಯಬೇಕೆಂಬ ಹಂಬಲ ಇವರನ್ನು ಕಾಡುತ್ತಿತ್ತು. ಇದೇ ಸಮಯದಲ್ಲಿ ಕೋಟಾಲದಿನ್ನೆಯಲ್ಲಿ ದುರ್ಘಟನೆಯೊಂದು ನಡೆಯಿತು. ಆ ಘಟನೆಯಲ್ಲಿ ಗೌರಿಬಿದನೂರು ತಾಲ್ಲೂಕಿನ ರಮಾಪುರದ ಬಾಲಕನಿಗೆ ಹೊಸೂರು ಗ್ರಾಮದ ವರ್ತಕರ ಮಗನ ಬೈಕ್ ಡಿಕ್ಕಿ ಹೊಡೆದ ಪರಿಣಾಮ ಮೃತಪಟ್ಟಿದ್ದನು. ಈ ಸಂಬಂಧ ನಡೆದ ಮಾತುಕತೆಯಲ್ಲಿ ಅಪಘಾತವನ್ನುಂಟು ಮಾಡಿದ ವ್ಯಕ್ತಿಯು ಮೃತ ಬಾಲಕನ ಪೋಷಕರಿಗೆ ಪರಿಹಾರವಾಗಿ ಜಮೀನು ನೀಡಬೇಕೆಂದೂ, ಅದನ್ನು ಅವರು ಆ ಬಾಲಕನ ಹೆಸರಿನಲ್ಲಿ ದೇವಾಲಯಕ್ಕೆ ದಾನ ಮಾಡುವುದಾಗಿ ತಿಳಿಸಿದರು. ಸದರಿ ಸುದ್ದಿಯನ್ನು ತಿಳಿದುಕೊಂಡ ಕೆಎನ್‌ಎಸ್‌ರವರು ತಮ್ಮ ಚಿಕ್ಕಪ್ಪ ಕೆ.ಎಚ್.ಕದಿರಪ್ಪ ಮೇಸ್ಟ್ರಿಗೆ ವಿಷಯ ತಿಳಿಸಿ, ಬಾಲಕನ ಪೋಷಕರು ತಮಗೆ ಪರಿಹಾರವಾಗಿ ದೊರೆಯುವ ಜಮೀನನ್ನು ದೇವಾಲಯಕ್ಕೆ ನೀಡುವ ಬದಲಿಗೆ ಕಾಲೇಜಿಗೆ ನೀಡುವಂತೆ ಅವರ ಮನ ಒಲಿಸಬೇಕೆಂದು ಕೋರಿದರು. ಅದರಂತೆ ಕದಿರಪ್ಪ ಮೇಸ್ಟ್ರು ಮೃತ ಬಾಲಕನ ಪೋಷಕರ ಬಳಿಗೆ ತೆರಳಿ 'ಜಮೀನನ್ನು ದೇವಾಲಯಕ್ಕೆ ನೀಡುವ ಬದಲು ಕಾಲೇಜಿಗೆ ನೀಡಿದರೆ ಸಾವಿರಾರು ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವ ಸಂಸ್ಥೆಯಾಗುತ್ತದೆ. ಇದರಿಂದ ನಿಮ್ಮ ಮಗನ ಹೆಸರು ಶಾಶ್ವತವಾಗಿ ಉಳಿಯುತ್ತದೆ' ಎಂದು ತಿಳಿ ಹೇಳಿದರು. ಅವರು ಅದಕ್ಕೆ ಒಪ್ಪಿದರು. ಇದರಿಂದ ಕಾಲೇಜಿಗೆ 3.20 ಎಕರೆ ಜಮೀನು ದೊರೆಯಿತು. ಕದಿರಪ್ಪ ಮೇಸ್ಟ್ರು ಹೊಸೂರು ಸುತ್ತಮುತ್ತಲಿನ ಗ್ರಾಮಗಳಲ್ಲಿ ಉತ್ತಮ ಶಿಕ್ಷಕರು ಎಂದು ಹೆಸರು ಗಳಿಸಿದ್ದರು. ಅವರು ಗಳಿಸಿದ್ದ ಖ್ಯಾತಿಯನ್ನು ಬಳಸಿಕೊಂಡು ಕಾಲೇಜಿಗೆ ಜಮೀನನ್ನು ಪಡೆಯುವಲ್ಲಿ ಕೆಎನ್‌ಎಸ್ ಯಶಸ್ವಿಯಾದರು. ಸಂಸ್ಥೆಯೊಂದನ್ನು ಕಟ್ಟುವುದಕ್ಕಾಗಿ ತಮ್ಮ ಮತ್ತು ತಮ್ಮ ಸುತ್ತಲಿನ

ಪ್ರಭಾವದ ವಲಯವನ್ನು ಸಮರ್ಪಕವಾಗಿ ಬಳಸಿಕೊಳ್ಳುವುದರಲ್ಲಿ ಇವರು ಸಿದ್ಧ ಹಸ್ತರಾಗಿದ್ದರು. ಇದರ ಹಿಂದೆ ಇವರಿಗಿದ್ದ ಸಂಸ್ಥೆಗಳ ಅಭಿವೃದ್ಧಿಯ ಬಗೆಗಿನ ಕಾಳಜಿಯು ಸುಸ್ಪಷ್ಟವಾಗಿರುತ್ತಿತ್ತು.

ಕಾಲೇಜಿಗೆ 3.20 ಎಕರೆ ವಿಸ್ತೀರ್ಣದ ನಿವೇಶನ ದೊರೆಯಿತು. ಇದರಿಂದ ಕಟ್ಟಡ ನಿರ್ಮಾಣಕ್ಕೆ ಬೇಕಾಗಿದ್ದ ಮೂಲಭೂತ ಸೌಲಭ್ಯ ದೊರೆತಂತಾಯಿತು. ಇದರ ಜೊತೆಗೆ ಗೌರಿಬಿದನೂರು ತಾಲ್ಲೂಕಿಗೆ ಮಂಜೂರಾಗಿದ್ದ ಮುಚ್ಚುವ ಸ್ಥಿತಿಯಲ್ಲಿದ್ದ ಏಕೈಕ ಸರ್ಕಾರಿ ಕಾಲೇಜು ತಾಲ್ಲೂಕಿನಲ್ಲೇ ಉಳಿಯುವಂತಾಯಿತು. ಇದನ್ನು ಇಷ್ಟಕ್ಕೆ ಬಿಡದೆ ಕಾಲೇಜಿಗೆ ಕಟ್ಟಡವೊಂದನ್ನು ನಿರ್ಮಾಣ ಮಾಡಿಸಬೇಕೆಂಬ ಗುರಿಯನ್ನಿಟ್ಟುಕೊಂಡು ಅಂದಿನ ಶಾಸಕ ಎಸ್.ವಿ.ಅಶ್ವತ್ಥನಾರಾಯಣರೆಡ್ಡಿಯವರಿಗೆ ಮನವಿ ಸಲ್ಲಿಸಿದರು. ಅವರು ಇಲಾಖೆಯಿಂದ ಪ್ರಸ್ತಾವನೆಯೊಂದನ್ನು ತರಿಸಿಕೊಂಡು 60 ಲಕ್ಷ ರೂಪಾಯಿಗಳನ್ನು ಸರ್ಕಾರದಿಂದ ಮಂಜೂರು ಮಾಡಿಸಿದರು. ಇದರಿಂದ ಈಗ ಕೋಟಾಲದಿನ್ನೆಯಲ್ಲಿ ಮಧುಗಿರಿ–ಗೌರಿಬಿದನೂರು ರಸ್ತೆಯಲ್ಲಿ ಭವ್ಯವಾದ ಕಟ್ಟಡ ಎದ್ದು ನಿಂತಿದೆ. ತನಗೆ ಅಗತ್ಯವಿರುವ ಕಟ್ಟಡ ದೊರೆತ ಮೇಲೆ ಪ್ರಾರಂಭದಲ್ಲಿ ಕೇವಲ ಕಲಾ ವಿಭಾಗ ಮತ್ತು ವಾಣಿಜ್ಯ ವಿಭಾಗಗಳನ್ನು ಹೊಂದಿದ್ದ ಈ ಕಾಲೇಜು ನಂತರ ನೂತನವಾಗಿ ವಿಜ್ಞಾನ ವಿಭಾಗವನ್ನು ಮಂಜೂರು ಮಾಡಿಸಿಕೊಂಡಿತು. ಈಗ ಕಾಲೇಜು ವಿಜ್ಞಾನ ಪ್ರಯೋಗಾಲಯ, ಕಂಪ್ಯೂಟರ್ ಪ್ರಯೋಗಾಲಯ, ಗ್ರಂಥಾಲಯ ವಿಭಾಗಗಳನ್ನು ಹೊಂದಿದೆ. ಗೌರಿಬಿದನೂರು ತಾಲ್ಲೂಕಿನಲ್ಲಿ ಮೂರು ಸರ್ಕಾರಿ ಪದವಿ ಪೂರ್ವ ಕಾಲೇಜುಗಳು ಇವೆಯಾದರೂ ಅವುಗಳಲ್ಲಿ ಈ ಕಾಲೇಜೊಂದಕ್ಕೆ ಮಾತ್ರ ಸ್ವತಂತ್ರ ಕಟ್ಟಡವಿದೆ. ಅದೂ ಸುಸಜ್ಜಿತವಾಗಿದೆ. ವಿಶಾಲವಾದ ಆವರಣ, ಸುಂದರವಾದ ಪ್ರಕೃತಿಯ ಮಡಿಲಲ್ಲಿ ಕಾಲೇಜು ನೆಲೆಗೊಂಡಿದೆ. ಇದರ ಹಿಂದೆ ಇರುವ ಕೆ.ನಾರಾಯಣಸ್ವಾಮಿಯವರ ಶ್ರಮವನ್ನು ಗಮನಿಸಿದಾಗ ಶಿಕ್ಷಣ ಸಂಸ್ಥೆಗಳ ಬಗ್ಗೆ ಅವರಿಗಿದ್ದ ಬದ್ಧತೆ ನಮಗೆ ಅರಿವಾಗುತ್ತದೆ.

ಇಲ್ಲಿ ಕಾಲೇಜು ಉಳಿದದ್ದರಿಂದ ಈ ಭಾಗದ ಹಲವು ಮಂದಿ ಹಳ್ಳಿ ಹೆಣ್ಣು ಮಕ್ಕಳು ಕಾಲೇಜು ಶಿಕ್ಷಣ ಪಡೆಯುವಂತಾಯಿತು. ಅದರಲ್ಲೂ ಗ್ರಾಮೀಣ ಮಕ್ಕಳಿಗೆ ಅಲಭ್ಯವಾಗಿದ್ದ ವಿಜ್ಞಾನ ಶಿಕ್ಷಣ ದೊರೆತು, ಗ್ರಾಮೀಣ ಮಕ್ಕಳು ಸಹ ಇಂಜಿನಿಯರ್, ವೈದ್ಯಕೀಯ ಕೋರ್ಸುಗಳನ್ನು ವ್ಯಾಸಂಗ ಮಾಡುವಂತಾಯಿತು. ಹೆಣ್ಣು ಮಕ್ಕಳೂ ಸೇರಿದಂತೆ ಹಲವು ಮಂದಿ ಈ ಭಾಗದ ವಿದ್ಯಾರ್ಥಿಗಳು ಈಗ ವಿಜ್ಞಾನ ಶಿಕ್ಷಣವನ್ನು ಪಡೆದು ಇಂಜಿನಿಯರ್‌ಗಳು, ವೈದ್ಯರು, ಉಪನ್ಯಾಸಕರು ಇತ್ಯಾದಿ ಉನ್ನತ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಾ ಬದುಕು ರೂಪಿಸಿಕೊಂಡಿದ್ದಾರೆ. ಕೆಎನ್‌ಎಸ್‌ರವರು ಯಾವುದೇ ಊರಿಗೆ ಹೋದರೂ ಅಲ್ಲಿನ ಸಮಸ್ಯೆಗಳನ್ನು ಅರಿತುಕೊಂಡು ಅವುಗಳನ್ನು ಸೂಕ್ತ ರೀತಿಯಲ್ಲಿ ಪರಿಹರಿಸುತ್ತಿದ್ದರು. 'ಬೆಲ್ಲು ಬಿಲ್ಲು' ಎಂದು ಕೆಲಸ ಮಾಡಿದ ಶಿಕ್ಷಕರಲ್ಲ ಇವರು. ಯಾವ ಸಮಸ್ಯೆಗೆ ಯಾರಿಂದ ಪರಿಹಾರ ದೊರೆಯುತ್ತದೆ ಎಂದು ಸದಾ



ಚಿಂತಿಸುತ್ತಾ ಆ ನಿಟ್ಟಿನಲ್ಲಿ ಕೆಲಸ ಮಾಡುತ್ತಿದ್ದರು. ತಾವು ಕೆಲಸ ಮಾಡುತ್ತಿರುವ ಸಂಸ್ಥೆಗಳ ಕಾರ್ಯ ಸಾಧನೆಗಾಗಿ ತಮ್ಮ ಅಹಂ ಬದಿಗಿತ್ತು, ಸಂಕೋಚ ಬಿಟ್ಟು ಅಧಿಕಾರಸ್ಥರ ಬಳಿಗೆ ತೆರಳಿ ಸಮಸ್ಯೆಯನ್ನು ಮನಮುಟ್ಟುವ ಹಾಗೆ ವಿವರಿಸಿ ಕಾರ್ಯ ಸಾಧಿಸುತ್ತಿದ್ದರು. ಇದರಲ್ಲಿ ತಮ್ಮ ಸ್ವಾರ್ಥ ಎಂಬುದು ಲವ ಲೇಶವೂ ಇರುತ್ತಿರಲಿಲ್ಲ. ತಾವು ಕೆಲಸ ಮಾಡುತ್ತಿರುವ ಕಾಲೇಜಿನ ಕೆಲಸಗಳಿಗಾಗಿ ತಮ್ಮ ವೈಯಕ್ತಿಕ ಪ್ರಭಾವ ವಲಯವನ್ನು, ವರ್ಚಸ್ಸನ್ನು, ಹಿರಿಯ ವಿದ್ಯಾರ್ಥಿಗಳನ್ನು, ಗೆಳೆಯರ ಸಹಾಯವನ್ನು, ಕೆಲವೊಮ್ಮೆ ತಮ್ಮ ಸಂಬಂಧಿಕರ ಪ್ರಭಾವವನ್ನೂ ಬಳಸಿಕೊಳ್ಳುತ್ತಿದ್ದರು. ಆ ಸಂದರ್ಭದಲ್ಲಿ ಅದು ತಮ್ಮ ಸ್ವಂತ ಕೆಲಸ ಎಂದೇ ಭಾವಿಸುತ್ತಿದ್ದರು. ಕಾಲೇಜಿನ ಕೆಲಸ ಬೇರೆಯಲ್ಲ, ತಮ್ಮ ವೈಯಕ್ತಿಕ ಕೆಲಸ ಬೇರೆಯಲ್ಲ ಎಂದು ಭಾವಿಸುತ್ತಿದ್ದರು. ಆದ್ದರಿಂದಲೇ ಕಾಲೇಜಿನ ಕೆಲಸಗಳು ಇವರಿಗೆ 'ಹೂ ಎತ್ತಿದಷ್ಟು ಸುಲಭವಾಗಿ' ಆಗುತ್ತಿದ್ದವು. ಹೀಗೆ ಇವರು ಕಾಲೇಜಿನ ಕೆಲಸಗಳಲ್ಲಿ ಮುಳುಗಿ ಹೋಗಿ ತಮ್ಮ ಕುಟುಂಬದ ಕೆಲಸಗಳನ್ನು ಮರೆತವರಲ್ಲ. ಅವುಗಳಿಗೆ ನೀಡ ಬೇಕಾದಷ್ಟು ಪ್ರಾಮುಖ್ಯತೆ, ಆದ್ಯತೆಯನ್ನು ನೀಡುತ್ತಾ ಈ ಎರಡೂ ಹೊಣೆಗಾರಿಕೆಗಳನ್ನು ಜೊತೆಜೊತೆಯಲ್ಲಿ ಸಂಭಾಳಿಸಿಕೊಂಡು ಹೋಗುತ್ತಿದ್ದರು.

ಕೋಟಾಲದಿನ್ನೆಯಲ್ಲಿದ್ದಾಗಲೇ ಪ್ರಿನ್ಸಿಪಾಲರ ಹುದ್ದೆಯಿಂದ ಡಿಡಿಪಿಯು (ಪದವಿ ಪೂರ್ವ ಶಿಕ್ಷಣ ಇಲಾಖೆ ಉಪ ನಿರ್ದೇಶಕರು) ಆಗಿ ಬಡ್ತಿ ಪಡೆದು ಬೆಂಗಳೂರಿನ ಕೇಂದ್ರ ಕಚೇರಿಗೆ ತೆರಳಿದರು. ಇಲ್ಲಿ ಕಾರ್ಯನಿರ್ವಹಿಸುವ ಸಮಯಲ್ಲಿ ಬಿಡುವು ಮಾಡಿಕೊಂಡು ವಿಧಾನ ಸೌಧಕ್ಕೆ ತೆರಳಿ ಕೋಟಾಲದಿನ್ನೇ ಕಾಲೇಜಿನ ಕಟ್ಟಡದ ನಿರ್ಮಾಣ ಕಾರ್ಯಕ್ಕೆ ಬೇಕಾಗಿದ್ದ ಹಣವನ್ನು ಮಂಜೂರು ಮಾಡಿಸಿದರು. ಇವರು ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದಾಗ ಕಟ್ಟಡಕ್ಕೆ ಸಂಬಂಧಿಸಿದ ಹಣ ಮಂಜೂರಾತಿ ಕಡತವು ವಿಧಾನ ಸೌಧಕ್ಕೆ ಬಂದಿತ್ತು. ಅದಕ್ಕೆ ಮಂಜೂರಾತಿ ದೊರೆತಿರಲಿಲ್ಲ. ಟೇಬಲ್‌ನಿಂದ ಟೇಬಲ್‌ಗೆ ಅಲೆದಾಡುತ್ತಿತ್ತು. ಅದನ್ನು ಹಿಂಬಾಲಿಸಿಕೊಂಡು ಹೋಗಿ ಮಂಜೂರು ಮಾಡಿಸುವಲ್ಲಿ ಯಶಸ್ವಿಯಾದರು. ಕಾಲೇಜಿನ ಕಟ್ಟಡದ ಉದ್ಘಾಟನಾ ಸಮಾರಂಭದ ಭಾಷಣದಲ್ಲಿ ಇದನ್ನು ಅಂದಿನ ಶಾಸಕ ಎಸ್.ವಿ.ಅಶ್ವತ್ಥನಾರಾಯಣರೆಡ್ಡಿ ಪ್ರಸ್ತಾಪ ಮಾಡಿ ಇವರ ಸೇವೆಯನ್ನು ಶ್ಲಾಘಿಸಿದ್ದುಂಟು. ಡಿಡಿಪಿಯು ಆಗಿದ್ದ ಸಮಯದಲ್ಲಿ ಕಾಲೇಜುಗಳಿಗೆ ಭೇಟಿ ನೀಡಿ ಪರಿಶೀಲಿಸುವುದು, ಸೂಕ್ತ ಸಲಹೆ, ಮಾರ್ಗದರ್ಶ ನೀಡುವುದು ನಡೆಯುತ್ತಿತ್ತು. ಆದರೆ ಶಾಶ್ವತವಾದ ಕಾರ್ಯಗಳನ್ನು ನಿರ್ವಹಿಸಲು ಇಲ್ಲಿ ಅವಕಾಶಗಳೇ ಇರಲಿಲ್ಲ. ಇದಾದ ಬಳಿಕ ಇಲಾಖೆಯ (ವೃತ್ತಿ ಶಿಕ್ಷಣ) ಜಂಟಿ ನಿರ್ದೇಶಕರಾಗಿ ಬಡ್ತಿ ಪಡೆದು ನಿವೃತ್ತಿಯನ್ನು ಹೊಂದಿದರು. ಮೂಲತಃ ಪ್ರಾಥಮಿಕ ಶಾಲಾ ಶಿಕ್ಷಕರ ಮಗನಾಗಿರುವ ಕೆಎನ್‌ಎಸ್‌ರವರು ತಮ್ಮ ಸ್ವಂತ ಪ್ರತಿಭೆಯಿಂದ ಜಂಟಿ ನಿರ್ದೇಶಕರ ಹುದ್ದೆಗೇರಿ ಕಾರ್ಯನಿರ್ವಹಿಸಿ ನಿವೃತ್ತಿ ಹೊಂದಿದ ಸಂಗತಿ ನಿಜವಾಗಿಯೂ ಒಂದು ಸಾಧನೆಯೇ ಸರಿ. ಇವರ ಈ ಸುದೀರ್ಘ ಸೇವಾವಧಿಯಲ್ಲಿ ಎಲ್ಲೂ ಯಾರೊಬ್ಬರೂ ಇವರತ್ತ ಬೆರಳು ಮಾಡುವಂತ ಕಾರ್ಯವನ್ನು ಇವರು



ಮಾಡಲಿಲ್ಲ. ಸೇವೆಯಲ್ಲಿದ್ದಾಗ ಪ್ರಶಸ್ತಿ, ಪುರಸ್ಕಾರಗಳು ಬರಲಿಲ್ಲವಾದರೂ ಅಂತಹ ಗೌರವಗಳಿಗೆ ಅರ್ಹವಾದ ಕಾರ್ಯಗಳನ್ನೇ ಮಾಡಿದರು. ಅಪಾರ ಸಂಖ್ಯೆಯ ಹಳ್ಳಿಗಾಡಿನ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ದೊರೆಯುವಂತೆ ಮಾಡಿದರು. ಸಹೋದ್ಯೋಗಿಗಳ ಮನಸ್ಸಿನಲ್ಲಿ ತಾವು ಸೇವಾವಧಿಯಲ್ಲಿ ಪ್ರಾಮಾಣಿಕತೆಯನ್ನು ರೂಢಿಸಿಕೊಳ್ಳಬೇಕೆಂಬ ಭಾವನೆಯನ್ನು ಮೂಡುವಂತೆ ಮಾಡಿದರು. ಇವರ ಸಹೋದ್ಯೋಗಿಗಳಾಗಿದ್ದವರು ಬಡ್ತಿ ಪಡೆದು ಆಡಳಿತಾಧಿಕಾರಿಗಳಾಗಿ (ಪ್ರಿನ್ಸಿಪಾಲರು, ಬಿಇಓ, ಡಿಡಿಪಿಐ, ಮುಖ್ಯ ಶಿಕ್ಷಕ) ನೇಮಕಗೊಂಡಾಗ ಇವರನ್ನು ಮಾದರಿಯಾಗಿ ಸ್ವೀಕರಿಸಿ ಅಂತೆಯೇ ಕಾರ್ಯನಿರ್ವಹಿಸಿ ಹೆಸರು ಗಳಿಸಿದ್ದಾರೆ. ಇದನ್ನು ಕೆಲವರು ವ್ಯಕ್ತಪಡಿಸಿದ್ದಾರೆ. ಹೀಗೆ ವಿದ್ಯಾರ್ಥಿಗಳ ಮತ್ತು ಸಹೋದ್ಯೋಗಿಗಳ ಮೇಲೆ ಗಾಢವಾದ ಪ್ರಭಾವ ಬೀರಿದಂತಹ ದಿವ್ಯ ವ್ಯಕ್ತಿತ್ವ ಇವರದು.

ಸರ್ಕಾರಿ ಸೇವೆಯಲ್ಲಿರುವಾಗಲೇ ತಮ್ಮ ಬಿಡುವಿನ ಸಮಯದಲ್ಲಿ ಮತ್ತು ರಜಾ ದಿನಗಳಲ್ಲಿ ಇವರು ಅವಿಭಜಿತ ಕೋಲಾರ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿಗೆ ತಮ್ಮ ವಿಶಿಷ್ಟ ರೀತಿಯ ಕಾರ್ಯಗಳ ಮೂಲಕ ಸಾರಭರಿತವಾದ ನೀರೆರೆದು ಪೋಷಿಸಿದರು. ಸಭೆ ಸಮಾರಂಭಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ವಿಚಾರಾರ್ಹ ಭಾಷಣಗಳನ್ನು ಮಾಡಿದರು. ಸಂಘಟನೆಗೆ ಸೈದ್ಧಾಂತಿಕ ನೆಲೆಗಟ್ಟನ್ನು ರೂಪಿಸಿಕೊಳ್ಳಲು ತಮ್ಮದೇ ಆದ ಕೊಡುಗೆಯನ್ನು ನೀಡಿದರು. ಜಿಲ್ಲೆಯ ಸಭೆ ಸಮಾರಂಭಗಳ ಜೊತೆಗೆ ರಾಜ್ಯಮಟ್ಟದ ಸಭೆ ಸಮಾರಂಭಗಳಲ್ಲಿ, ವಿವಿಧ ಜಿಲ್ಲಾ ಸಮ್ಮೇಳನಗಳಲ್ಲಿ, ವಿಚಾರ ಸಂಕಿರಣಗಳಲ್ಲಿ ತಪ್ಪದೇ ಭಾಗವಹಿಸುತ್ತಿದ್ದರು. ಅಪಾರವಾದ ಓದಿನ ಹವ್ಯಾಸವನ್ನು ಹೊಂದಿದ್ದ ಇವರು ಸಂಘಟನೆಗೆ ಪೂರಕವಾಗಿ ಸಾಹಿತ್ಯವನ್ನು ಹಿಂದಿ, ತೆಲುಗು ಭಾಷೆಗಳಲ್ಲಿ ಕಂಡು ಬಂದಾಗ ಅದನ್ನು ಕನ್ನಡಿಸಿದರು. ಚಿಂತಾಮಣಿಯ ಪ್ರಥಮ ದರ್ಜೆ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದಾಗ ಅಂಬೇಡ್ಕರ್ ವಾಣಿ, ದಲಿತ ಕೈಪಿಡಿಗಳನ್ನು ರಚಿಸಿದ್ದರು. ಇವುಗಳು ಅಪಾರವಾದ ಜನಪ್ರಿಯತೆಯನ್ನು ಪಡೆದುಕೊಂಡು ದಲಿತರಲ್ಲಿ ಚಿಂತನಾ ಸಂಚಲನವನ್ನು ಉಂಟು ಮಾಡಿದವು.

**ಸಾಹಿತ್ಯ ಚಟುವಟಿಕೆ**

ನಂತರ ಚಿಂತಾಮಣಿ ಕಾಲೇಜಿನಲ್ಲಿ ಇವರ ಸಹೋದ್ಯೋಗಿಯಾಗಿದ್ದ ಆರ್‌ವಿಎಸ್ ಸುಂದರಂರವರೊಂದಿಗೆ ಸೇರಿ ತೆಲುಗು ಭಾಷೆಯ 'ದಿಗಂಬರ ಕವುಲು' ಪುಸ್ತಕವನ್ನು ಕನ್ನಡಕ್ಕೆ 'ದಿಗಂಬರ ಕವಿಗಳು' ಎಂದು ಅನುವಾದಿಸಿದರು. ಇದು ಆಂಧ್ರಪ್ರದೇಶದಲ್ಲಿ ಹೊಸ ಅಲೆಯನ್ನೇ ಉಂಟು ಮಾಡಿತ್ತು. ಕನ್ನಡಕ್ಕಂತೂ ಇದು ಹೊಸ ಬಗೆಯ ಸಾಹಿತ್ಯವಾಗಿತ್ತು. ವಿಚಾರ ಕ್ರಾಂತಿಯನ್ನು ಕನ್ನಡ ಸಾಹಿತ್ಯದಲ್ಲಿ ಮೂಡಿಸುವ ಸಾಧ್ಯತೆಗಳಿದ್ದವು. ಆದ್ದರಿಂದ ಇದರ ಬಿಡುಗಡೆ ಸಮಾರಂಭವನ್ನು ವಿಶೇಷ ರೀತಿಯಲ್ಲಿ ಆಯೋಜಿಸಬೇಕೆಂದು ಬಯಸಿದರು. ಅದರಂತೆ ಈ ಇಬ್ಬರು ಅನುವಾದಕರು ಇದರ ಮೊದಲ ಪ್ರತಿಯನ್ನು ಬೆಂಗಳೂರಿನಲ್ಲಿ ವೇಶ್ಯೆಯೊಬ್ಬರ ಕೈಯಲ್ಲಿ ಬಿಡುಗಡೆ ಮಾಡಿಸಲು



ತೀರ್ಮಾನಿಸಿದರು. ಅದರಂತೆ ಬೆಂಗಳೂರಿನ ರವೀಂದ್ರಕಲಾ ಕ್ಷೇತ್ರದ ಹಿಂಭಾಗದಲ್ಲಿದ್ದ ಕೊಳೆಗೇರಿಗೆ ತೆರಳಿ ಅಲ್ಲಿನ ಜನರ ಜೊತೆ ಮಾತನಾಡಿದರು. ಅವರು ಸಮಾರಂಭವನ್ನು ನಡೆಸಲು ಒಪ್ಪಿಕೊಂಡರು. ಸಮಾರಂಭದ ಮುನ್ನಾ ದಿನ ಕೇರಿಗೆ ಹೋಗಿ ವಿಷಯದ ತಿಳಿಸಿ ಬಂದರು. ಸಮಾರಂಭದ ದಿನ ಕೇರಿಗೆ ಹೋದಾಗ ಕೇರಿಯ ಮಧ್ಯದ ಪ್ರಮುಖ ಸ್ಥಳವೊಂದನ್ನು ಸಾರಿಸಿ, ಗುಡಿಸಿ ಶುಭ್ರಗೊಳಿಸಲಾಗಿತ್ತು. ಇವರು ಹೋಗುತ್ತಿದ್ದಂತೆ ಚಾಪೆಯೊಂದನ್ನು ತಂದು ಹಾಸಿದರು. ಅದರ ಮೇಲೆ ಕುಳಿತು ಸಮಾರಂಭವನ್ನು ನಡೆಸಿದರು. ಯೋಜನೆಯಂತೆಯೇ ವೇಶ್ಯೆಯೊಬ್ಬರು ಪುಸ್ತಕವನ್ನು ಲೋಕಾರ್ಪಣೆ ಮಾಡಿದರು. ಕಾರ್ಯಕ್ರಮಕ್ಕೆ ಚಿಂತಕ ಪ್ರೊ॥ ಜಿ.ರಾಮಕೃಷ್ಣ, ಪ್ರೊ॥ ಗೋಪಾಲಕೃಷ್ಣಯ್ಯ, ಪ್ರೊ॥ ರಮೇಶ್, ಪಿ.ಪಿ.ನಾಗರಾಜ, ಕೊರಟಿ ಶ್ರೀನಿವಾಸರಾವ್‌ಅವರು ಆಗಮಿಸಿದ್ದರು. ಡಾ॥ ಹೆಚ್. ನರಸಿಂಹಯ್ಯನವರನ್ನು ಕಾರ್ಯಕ್ರಮಕ್ಕೆ ಆಹ್ವಾನಿಸಲಾಗಿತ್ತು, ಆದರೆ 'ಪೂರ್ವ ನಿಗದಿ ಕಾರ್ಯಕ್ರಮಗಳ ಪ್ರಯುಕ್ತ ಬರಲಾಗುತ್ತಿಲ್ಲ' ಎಂದು ತಿಳಿಸಿದ ಅವರು ಕಾರ್ಯಕ್ರಮದ ಖರ್ಚಿಗೆಂದು 10 ರೂಪಾಯಿಗಳನ್ನು ನೀಡಿದರು.

ಪುಸ್ತಕವನ್ನು ವೇಶ್ಯೆಯ ಕೈಯಲ್ಲಿ ಬಿಡುಗಡೆ ಮಾಡಿಸಿದ ಕ್ರಾಂತಿಕಾರಿ ಕೆಲಸವನ್ನು ತಾವು ಮಾಡಿದೆವು ಎಂದು ಇವರು ಬೀಗಿದರಾದರೂ, ಆ ಪುಸ್ತಕವನ್ನು ಬಿಡುಗಡೆ ಮಾಡಿದ ಆಕೆಗೆ ಅದರ ಮಹತ್ವದ ಅರಿವಾಗಲಿಲ್ಲ. ಆದರೂ (ಪುಸ್ತಕದ ಬೆಲೆ) ಎರಡು ರೂಪಾಯಿಗಳನ್ನು ಕೊಟ್ಟು ಒಂದು ಪ್ರತಿಯನ್ನು ಖರೀದಿಸಿದರು. ಪುಸ್ತಕದ ಲೋಕಾರ್ಪಣೆ ಕಾರ್ಯಕ್ರಮ ಪತ್ರಿಕೆಗಳಲ್ಲಿ ಪ್ರಕಟಗೊಂಡು ದೊಡ್ಡ ಸುದ್ದಿ ಎಂಬಂತೆ ಪ್ರಚಾರ ಪಡೆಯಿತು. ಆಗಿನ ಕಾಲಕ್ಕೆ ಇದು ದೊಡ್ಡ ಬದಲಾವಣೆಯೇ ಆಗಿತ್ತು. ಈ ಕಾರ್ಯಕ್ರಮವನ್ನು ಅನುಸರಿಸಿ ಮೈಸೂರಿನ ಬಸ್ ನಿಲ್ದಾಣದಲ್ಲಿ ಸಾಹಿತಿ ದೇವನೂರು ಮಹಾದೇವರವರು ಹೋಟೆಲ್ ಸಪ್ಲೈಯರ್ ಕೈಯಲ್ಲಿ ಬಿಡುಗಡೆ ಮಾಡಿಸಿದರು. ಕಾರ್ಯಕ್ರಮಕ್ಕೆ ಖ್ಯಾತ ಕಾದಂಬರಿಕಾರ ಎಸ್.ಎಲ್.ಭೈರಪ್ಪ. ಚಿಂತಕ ಭಕ್ತರಾಮೇಗೌಡ, ಸಾಹಿತಿ ಶಿವರಾಮ ಐತಾಳ ಮತ್ತಿತರ ಪ್ರಮುಖರು ಭಾಗವಹಿಸಿದ್ದರು. ಗುಲ್ಬರ್ಗದಲ್ಲಿ ಕೆಎನ್‌ಎಸ್‌ರವರ ಬಾಲ್ಯದ ಗೆಳೆಯ ಇಂಗ್ಲೀಷ್ ಪ್ರಾಧ್ಯಾಪಕ ಡಾ॥ಬಲರಾಮಗುಪ್ತರವರು ಈ ಪುಸ್ತಕವನ್ನು ಬಿಡುಗಡೆ ಮಾಡಿಸಿದರು. ಕವನ ಸಂಕಲನದ ಬಿಡುಗಡೆ ಸಮಾರಂಭವು ಕರ್ನಾಟಕದಲ್ಲಿ ಹೊಸ ಅಲೆಯೊಂದನ್ನು ಉಂಟು ಮಾಡಿದಂತೆ ಕೃತಿಯು ಹೊಸ ಅಲೆಯೊಂದನ್ನು ಉಂಟು ಮಾಡಿತು. ಅದರ ಭಾಷೆ, ವಸ್ತು, ನಿರೂಪಣೆಯ ವಿಧಾನ ಕನ್ನಡಕ್ಕೆ ಹೊಸ ಬಗೆಯಾಗಿತ್ತು. ಇದರ ಮೂಲಕ ಕನ್ನಡ ಸಾಹಿತ್ಯಕ್ಕೆ ಹೊಸ ಕವಿಗಳಿಬ್ಬರು ಪರಿಚಯವಾದರು.

ಕೆಎನ್‌ಎಸ್ ಮತ್ತು ಆರ್ವಿಯಸ್ ಸುಂದರಂರವರ ಈ ಜೋಡಿಯ ಅನುವಾದ ಕಾರ್ಯದ ಮುಂದುವರಿಕೆಯ ಭಾಗವಾಗಿ ಯು.ಆರ್.ಅನಂತಮೂರ್ತಿಯವರ ಸಂಸ್ಕಾರ ಕಾದಂಬರಿಯು ತೆಲುಗಿಗೆ ಅನುವಾದಗೊಂಡಿತು. ಅದನ್ನು ಗುಂಟೂರಿನ ಹೋಟೆಲ್ (ಬ್ರಾಹ್ಮಣ) ಉದ್ಯಮಿಯೊಬ್ಬರು ಪ್ರಕಟಿಸಿದರು. ಅದು ಇನ್ನೇನು ಮಾರುಕಟ್ಟೆಗೆ ಬಿಡುಗಡೆಯಾಗಬೇಕು ಎನ್ನುವಷ್ಟರಲ್ಲಿ ಕಾದಂಬರಿ ವಸ್ತು ತಮ್ಮ ಜನಾಂಗದ



ವಿರುದ್ಧವಾಗಿದೆ ಎಂಬುದನ್ನು ಬೇರೊಬ್ಬರಿಂದ ಕೇಳಿ ತಿಳಿದುಕೊಂಡ ಪ್ರಕಾಶಕ ಅದನ್ನು ಮಾರಾಟಕ್ಕೆ ಬಿಡದೆ ಗೋದಾಮಿನಲ್ಲೇ ರಾಶಿ ಹಾಕಿದರು. ಅದನ್ನು ಮಾರಾಟಕ್ಕೆ ಬಿಡಬೇಕೆಂದು ಇವರು ಮಾಡಿಕೊಂಡ ಮನವಿ ಫಲ ಕೊಡಲಿಲ್ಲ. ಕೊನೆಗೆ ಯು.ಆರ್.ಅನಂತಮೂರ್ತಿಯವರಿಗೆ ಗೌರವಧನವೂ ಕೊಡಲಾಗದೆ, ಕೊನೆಯವರೆಗೂ ಅವರಿಂದ ಒತ್ತಾಯ ಮಾಡಿಸಿಕೊಳ್ಳುತ್ತಲೇ ಇರುವಂತಾಯಿತು. ಎನ್ನುವ ಕೆ.ಎನ್.ಎಸ್.ರವರು ತಮ್ಮ ಬಳಿ ಅನುವಾದದ ಪ್ರತಿಯೊಂದಿರಬೇಕೆಂಬ ಹಠಕ್ಕೆ ಬಿದ್ದು ತಮ್ಮ ಹಳೆಯ ವಿದ್ಯಾರ್ಥಿಯ ಮೂಲಕ ಎರಡು ಪ್ರತಿಗಳನ್ನು ಕೆಎನ್ಎಸ್.ರವರು ತರಿಸಿಕೊಂಡರು.

ಸಾಹಿತ್ಯ ಕೃಷಿ, ಸಂಘಟನೆ, ಆಡಳಿತ ಹೀಗೆ ಮೂರು ಹೊಣೆಗಾರಿಕೆಗಳನ್ನು ಹೊತ್ತಿದ್ದ ಕೆಎನ್ಎಸ್‌ರವರಿಗೆ ಬಾಗೇಪಲ್ಲಿಗೆ ಹೋದ ಮೇಲೆ ಸಾಹಿತ್ಯ ಚಟುವಟಿಕೆಗಳಿಗೆ ಹೆಚ್ಚು ಒತ್ತು ನೀಡಲು ಆಗಲಿಲ್ಲ. ಆದರೂ ಬಾಗೇಪಲ್ಲಿಯಲ್ಲಿ ಪ್ರಿನ್ಸಿಪಾಲರಾಗಿದ್ದಾಗಲೇ ಹಿಂದಿಯಿಂದ 'ಭಂಗಿಜನ ಕಥಾ'ವನ್ನು ಕನ್ನಡಕ್ಕೆ 'ಅಸ್ಪೃಶ್ಯನ ಆತ್ಮ ಕಥೆ' ಎಂದು ಅನುವಾದಿಸಿದರು. ತೆಲುಗಿನಿಂದ 'ನರಬಲಿ' ಕೃತಿಯನ್ನು ಅನುವಾದಿಸಿದರು.

ಬಾಗೇಪಲ್ಲಿಯಲ್ಲಿ ಪ್ರಿನ್ಸಿಪಾಲರಾಗಿದ್ದ ಸಮಯದಲ್ಲಿ ತುಮಕೂರಿನ ದೇವರಾಯನದುರ್ಗದಲ್ಲಿ ನಡೆದ ದಸಂಸದ ಶಿಬಿರದಲ್ಲಿ ಭಾಗವಹಿಸಿದ್ದರು. ಇದು ತುರ್ತುಪರಿಸ್ಥಿತಿಯ ಕಾಲವಾಗಿತ್ತು. ಸಿಕ್ಕ ಸಿಕ್ಕವರನ್ನು ಕಾರಣ ನೀಡದೆ ಜೈಲಿಗೆ ದೂಡುತ್ತಿದ್ದರು. ಇಂತಹ ಬಿಗುವಿನ ವಾತಾವಣದಲ್ಲೂ ಇವರು ದಸಂಸದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ತುಮಕೂರಿನಲ್ಲಿ ನಡೆದ ಪ್ರಥಮ ಜಿಲ್ಲಾ ಸಮ್ಮೇಳನದಲ್ಲಿ ಭಾಷಣಕಾರರಾಗಿ ಭಾಗವಹಿಸಿದ್ದರು. ಗುಡಿಬಂಡೆಯಲ್ಲಿ ಪ್ರಿನ್ಸಿಪಾಲರಾಗಿದ್ದಾಗ ಬೆಂಗಳೂರಿನ ಲಾಲ್‌ಬಾಗ್‌ಗಾಜಿನ ಮನೆಯಲ್ಲಿ ನಡೆದ ದಲಿತ ವಿದ್ಯಾರ್ಥಿ ಒಕ್ಕೂಟದ ರಾಜ್ಯ ಸಮ್ಮೇಳನದಲ್ಲಿ ಪ್ರಮುಖ ಭಾಷಣಕಾರರಾಗಿ ಭಾಗವಹಿಸಿ ವಿದ್ಯಾರ್ಥಿ ಸಮುದಾಯದಲ್ಲಿ ಸ್ಫೂರ್ತಿ ತುಂಬಿದರು. ಇವುಗಳ ಪಟ್ಟಿ ಕೊಡುತ್ತಾ ಹೋದರೆ, ಅದು ಬೆಳೆಯುತ್ತಾ ಹೋಗುತ್ತದೆ. ಒಟ್ಟಾರೆ ಹೇಳುವುದಾದರೆ ಇವರ ಬದುಕು ಅಂದಿನಿಂದ ಇಂದಿನವರೆಗೂ ದಸಂಸದ ಜೊತೆಯಲ್ಲಿ ಸಾಗಿ ಬಂದಿದೆ ಎಂದೇ ಹೇಳಬೇಕು. ಸಂಘಟನೆಗೆ ಹೊಸ ಹುರುಪು, ಹೊಸ ಚಿಂತನೆ ತುಂಬುವ ಕ್ರಿಯೆಯಲ್ಲಿ ಇವರು ಸದಾ ನಿರತರಾಗಿದ್ದರು. ಸಂಘಟನೆ ಸಹ ಇವರ ಚಿಂತನೆ, ಆಲೋಚನೆಗಳನ್ನು ಬಳಸಿಕೊಂಡು ಬೆಳೆದು ಬಂದಿತು. ಇವರು ಸೇವೆಯಿಂದ ನಿವೃತ್ತರಾದ ಮೇಲೆ ದಸಂಸದ ರಾಜ್ಯ ಸಂಘಟನಾ ಸಂಚಾಲಕರಾಗಿ ಕೆಲಸ ಮಾಡಿದರು. ಆದರೆ ಸಂಘಟನೆ ವಿಘಟನೆಗಳ ಹಾವಳಿಗೆ ಸಿಲುಕಿ ತತ್ತರಿಸಿದಾಗ ನೊಂದುಕೊಂಡರು. ಏನಾದರೂ ಮಾಡಲೇ ಬೇಕೆಂದು ಹಪಿಹಪಿಸಿದರು. ಆದರೂ ವಿಘಟನೆಗಳ ಪರಂಪರೆ ಮುಂದುವರೆಯುತ್ತಲೇ ಇತ್ತು. ಇದನ್ನು ಕಂಡು ಅಸಹಾಯಕರಾಗಿ ಆರೋಗ್ಯ, ಪರಿಸರ, ಕೃಷಿ, ನೆಲ, ಜಲದ ಸಂರಕ್ಷಣೆಯತ್ತ ಮನಸ್ಸು ಬಂದಿಷ್ಟು ಹೊರಳಿಸಿದರು.



## ಆಯಿಲ್ ಫುಲ್ಲಿಂಗ್ ಚಿಕಿತ್ಸಾ ಪದ್ಧತಿ

ಆಂಧ್ರ ಪ್ರದೇಶದ ತೆಲುಗು ದಿನಪತ್ರಿಕೆ ಆಂಧ್ರಜ್ಯೋತಿಯಲ್ಲಿ ಪ್ರಕಟವಾದ 'ಆಯಿಲ್ ಪುಲ್ಲಿಂಗ್' ಎಂಬ ಚಿಕಿತ್ಸಾ ವಿಧಾನವನ್ನು ಅಧ್ಯಯನ ಮಾಡಿ ಕರ್ನಾಟಕದಲ್ಲಿ ಪ್ರಚಾರ ಮಾಡಲು ಮುಂದಾದರು. ಇದರ ಬಗ್ಗೆ ಲೇಖನವೊಂದನ್ನು ಬರೆದು ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಪ್ರಕಟಿಸಿದರು. ಅದು ರಾಜ್ಯದಾದ್ಯಂತ ಪ್ರಚಾರ ಪಡೆದುಕೊಂಡು ಅದರ ಬಗ್ಗೆ ಮೂಡಿದ ಸಂಶಯಗಳಿಗೆ ಸಂಬಂಧಿಸಿದಂತೆ ಹಲವಾರು ಪತ್ರಗಳು ಇವರಿಗೆ ಬಂದವು. ಅವುಗಳಿಗೆಲ್ಲಾ ಸ್ವಂತ ಖರ್ಚಿನಲ್ಲಿ ಉತ್ತರಗಳನ್ನು ಬರೆದು ಸಂಶಯಗಳನ್ನು ಪರಿಹರಿಸಿದರು. ಕೆಲವು ಪ್ರದೇಶಗಳಿಂದ ಭಾಷಣ ಕಾರ್ಯಕ್ರಮಗಳಿಗಾಗಿ ಆಹ್ವಾನ ಬಂದಿತು. ಆಹ್ವಾನಗಳನ್ನು ಮನ್ನಿಸಿ ಇವರು ಮತ್ತು ಆಂಧ್ರಪ್ರದೇಶದ ತಮ್ಮುಲ ಕೋಟೇಶ್ವರಾವ್‌ರವರ ಜೊತೆ ಹೋಗಿ ಉಪನ್ಯಾಸ ನೀಡಿ ಬಂದರು. ಇದು ಕರ್ನಾಟಕದಲ್ಲಿ ಎಷ್ಟು ಜನಪ್ರಿಯವಾಯಿತೆಂದರೆ, ಇವರಿಗೆ 'ಆಯಿಲ್ ಪುಲ್ಲಿಂಗ್ ನಾರಾಯಣಸ್ವಾಮಿ' ಎಂಬ ಹೊಸ ಹೆಸರು ಬಂದಿತು.

ಆಯಿಲ್ ಪುಲ್ಲಿಂಗ್ ಚಿಕಿತ್ಸಾ ವಿಧಾನಕ್ಕೆ ಮಾರು ಹೋಗಿದ್ದ ಗದಗ್‌ನ ಧೀಮಂತ ರಾಜಕಾರಣಿ, ಸಹಕಾರಿ ಧುರೀಣ ಡಿ.ಆರ್.ಪಾಟೀಲ್‌ರವರು ಗದಗ್‌ನಲ್ಲಿ ಶಾಲಾ-ಕಾಲೇಜು, ಸಹಕಾರ ಸಂಘ ಸಂಸ್ಥೆಗಳಲ್ಲಿ ವಿಶೇಷ ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಿ, ಕೆಎನ್‌ಎಸ್‌ರವರನ್ನು ಆಹ್ವಾನಿಸಿದರು. ಸದರಿ ಆಹ್ವಾನದಂತೆ ಗದಗ್ ಸೇರಿದಂತೆ ಹುಬ್ಬಳ್ಳಿ, ಧಾರವಾಡ ಮುಂತಾದ ನಗರಗಳಿಗೆ ತೆರಳಿ ಇವರು ವಿಶೇಷ ಉಪನ್ಯಾಸ ಕಾರ್ಯಕ್ರಮಗಳನ್ನು ನೀಡಿ ಆಯಿಲ್ ಪುಲ್ಲಿಂಗ್ ಚಿಕಿತ್ಸಾ ವಿಧಾನವನ್ನು ಪ್ರಚಾರ ಮಾಡಿದರು. ಡಿ.ಆರ್.ಪಾಟೀಲರವರ ಸಹಾಯಕರಾಗಿದ್ದ ಜಮಾದಾರ್‌ರವರು ಇದರ ಬಗ್ಗೆ ಪುಸ್ತಕವೊಂದನ್ನು ಬರೆದು ಪ್ರಕಟಿಸಿದರು. ಅದರ ಸಾವಿರಾರು ಪ್ರತಿಗಳು ದಿನಬೆಳಗಾಗುವುದರಲ್ಲಿ ಮಾರಾಟವಾದವು. ಇದಕ್ಕೆ ಪೂರಕವಾಗಿ ಗದಗ್‌ನಲ್ಲಿ ಅಯಿಲ್ ಪುಲ್ಲರ್ಸ್ ಅಸೋಸಿಯೇಷನ್ ಎಂಬ ಹೆಸರಿನ ಸಂಸ್ಥೆಯೊಂದು ಸ್ಥಾಪನೆಯಾಯಿತು. ಇದರ ಪ್ರಚಾರದ ಭರಾಟೆಯಿಂದಾಗಿ ಗದಗ್‌ನಲ್ಲಿ ಆಸ್ಪತ್ರೆಗಳಿಗೆ ಹೋಗುವ ರೋಗಿಗಳ ಸಂಖ್ಯೆ ಕಡಿಮೆಯಾಯಿತು. ಖಾಸಗಿ ಆಸ್ಪತ್ರೆಗಳ ವೈದ್ಯರ ಆದಾಯ ಇಳಿಮುಖವಾಯಿತು. ಇದರಿಂದ ಆತಂಕಕ್ಕೆ ಒಳಗಾದ ಖಾಸಗಿ ವೈದ್ಯರು ಚಿಕಿತ್ಸಾ ವಿಧಾನದ ಬಗ್ಗೆ ಅಪಪ್ರಚಾರ ಮಾಡಿದರು.

ಇತ್ತ ಚಿಕ್ಕಬಳ್ಳಾಪುರ, ಬೆಂಗಳೂರು ಗ್ರಾಮಾಂತರ, ಮೈಸೂರು, ತುಮಕೂರು, ತಿಪಟೂರು, ಗುಬ್ಬಿ, ಮುಂತಾದ ಕಡೆಗಳಲ್ಲಿ ಉಪನ್ಯಾಸ ಕಾರ್ಯಕ್ರಮಗಳು ಏರ್ಪಾಟಾದವು. ಅವುಗಳಿಗೆಲ್ಲಾ ಹೋಗಿ ಉಪನ್ಯಾಸ ನೀಡಿ ಬಂದರು. ಹೀಗೆ ರಾಜ್ಯದ ಹಲವು ಭಾಗಗಳಿಗೆ ತೆರಳಿ ಉಪನ್ಯಾಸ ನೀಡಿದ್ದರಿಂದ ರಾಜ್ಯದಾದ್ಯಂತ ಚಿಕಿತ್ಸಾ ವಿಧಾನ ಪ್ರಚಾರವಾಯಿತು. ಇದರ ಬಗ್ಗೆ ಆರ್‌ವಿಯೆಸ್ ಸುಂದರಂ ಜೊತೆ ಸೇರಿ ಕಿರುಪುಸ್ತಿಕೆಯೊಂದನ್ನು ಹೊರ ತಂದರು. ಆದರೆ ಅಷ್ಟಕ್ಕಾಗಲೇ ಇದು ತನ್ನ ಪ್ರಚಾರದ



ಭರಾಟೆಯನ್ನು ಕಳೆದುಕೊಂಡಿತ್ತು. ಪುಸ್ತಕಗಳು ನಿರೀಕ್ಷಿತ ಪ್ರಮಾಣದಲ್ಲಿ ಮಾರಾಟವಾಗಲಿಲ್ಲ. ಆದರೂ ಹಲವು ಮಂದಿ ಇದರ ಪ್ರಯೋಜನ ಪಡೆದುಕೊಂಡಿದ್ದರು. ಇದರ ಬಗ್ಗೆ ಮಾಹಿತಿಯನ್ನು ಸಂಗ್ರಹ ಮಾಡುವ ಸಲುವಾಗಿ ಪತ್ರಿಕೆಗಳಿಗೆ ಪ್ರಕಟಣೆ ನೀಡಿ ಮಾಹಿತಿ ನೀಡುವಂತೆ ಕೋರಲಾಯಿತಾದರೂ ಅದಕ್ಕೆ ಸ್ಪಂದಿಸಿದ ಜನರ ಸಂಖ್ಯೆ ಅತಿ ಕಡಿಮೆ. 1995 ರಿಂದ 1997ರ ವರೆಗೆ ಅಂದರೆ ಎರಡು ವರ್ಷಗಳ ಕಾಲ ಕರ್ನಾಟಕದಲ್ಲಿ ಇದು ಮನೆ ಮಾತಾಗಿತ್ತು. ನಂತರ ಕಾಲ ಗರ್ಭದಲ್ಲಿ ಹೂತು ಹೋಯಿತು. ಆದರೂ ಇಂದಿಗೂ ಅಲ್ಲೊಬ್ಬರು ಇಲ್ಲೊಬ್ಬರು ಈ ಚಿಕಿತ್ಸಾ ವಿಧಾನವನ್ನು ಅನುಸರಿಸುತ್ತಿರುವುದಾಗಿ ಕೇಳಿ ಬರುತ್ತಿದೆ. ಹಲವು ಮಂದಿ ಇದರ ಪ್ರಯೋಜನ ಪಡೆದಿದ್ದಾರೆ. ಕಡಿಮೆ ಖರ್ಚಿನಲ್ಲಿ ಉತ್ತಮ ಆರೋಗ್ಯವನ್ನು ಹೊಂದುವುದಕ್ಕೆ ಪೂರಕವಾಗಿರುವ ಸರಳ ಚಿಕಿತ್ಸಾ ಪದ್ಧತಿಯನ್ನು ಕನ್ನಡದ ಜನತೆಗೆ ಇವರು ಪರಿಚಯಿಸಿ ಉಪಕರಿಸಿದರು.

ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕುಗಳ ಗ್ರಾಮಗಳಲ್ಲಿನ ಜನರಿಗೆ ಮೂಳೆಗಳ ಮತ್ತು ಹಲ್ಲುಗಳ ಸವೆತ, ಕೀಲುಗಳ ನೋವಿನಂತಹ ವಿಚಿತ್ರ ಕಾಯಿಲೆ ಕಾಣಿಸಿಕೊಂಡಿದೆ ಎಂಬ ಸುದ್ದಿ ಪತ್ರಿಕೆಗಳಲ್ಲಿ ಓದಿ ಕುತೂಹಲಗೊಂಡ ಕೆಎನ್ಎಸ್‌ರವರು ಅದಕ್ಕೆ ಕಾರಣವನ್ನು ಹುಡುಕತೊಡಗಿದರು. ಈ ಹುಡುಕಾಟಕ್ಕೆ ಹೊರಟ ಅವರಿಗೆ ದೊರೆತದ್ದು, ಸದರಿ ಕಾಯಿಲೆಗೆ ಕಾರಣ; ಅಲ್ಲಿನ ಕುಡಿಯುವ ನೀರು. ಈ ಎರಡೂ ತಾಲ್ಲೂಕುಗಳಲ್ಲಿ ನೀರಿನ ಅಂತರ್ಜಲಮಟ್ಟ ಕುಸಿದ್ದಿದ್ದು, ಆಳವಾದ ಭೂಮಿಯಿಂದ ದೊರೆಯುತ್ತಿರುವ ನೀರಿನಲ್ಲಿ ಫ್ಲೋರೈಡ್ ಅಂಶವಿದ್ದು, ಅದನ್ನು ಸೇವಿಸುವುದರಿಂದ ಫ್ಲೋರೋಸಿಸ್ ಎಂಬ ಕಾಯಿಲೆ ಬರುತ್ತಿದ್ದು, ಇದರ ದೆಸೆಯಿಂದ ಮನುಷ್ಯನ ಮೂಳೆಗಳು ಮತ್ತು ಹಲ್ಲುಗಳು ಸವೆಯುತ್ತಿವೆ. ಹದಿನಾರು ವರ್ಷದ ಯುವಕ\ಯುವತಿಯರು ಅರವತ್ತು ವರ್ಷದ ಮುದುಕರಂತಾಗುತ್ತಿದ್ದಾರೆ ಎಂಬುದು ತಿಳಿದು ಬಂದಿತು. ಮಾನವ ಕುಲಕ್ಕೆ ಮಾರಕವಾಗಿರುವ ಈ ಕಾಯಿಲೆಯಿಂದ ಅಲ್ಲಿನ ಜನರನ್ನು ರಕ್ಷಿಸಬೇಕೆಂಬ ಆಲೋಚನೆ ಮೂಡಿ, ಅವರನ್ನು ಜಾಗೃತಿಗೊಳಿಸಬೇಕೆಂಬ ತೀರ್ಮಾನಕ್ಕೆ ಬಂದರು. ಅದಕ್ಕೆ ಪೂರಕವಾಗಿ ಅವರ ವಾಸವನ್ನೇ ಸ್ಥಳಾಂತರಿಸಿದರು. ಬ್ಯಾಂಕ್ ಉದ್ಯೋಗಿಯಾಗಿರುವ ಅವರ ಮಗಳಿಗೆ ಗುಡಿಬಂಡೆಗೆ ವರ್ಗಾವಣೆ ಮಾಡಿಸಿಕೊಂಡರು. ಇಡೀ ಕುಟುಂಬ ಅಲ್ಲಿಗೆ ಸ್ಥಳಾಂತರಗೊಂಡಿತು.

## ಫ್ಲೋರೋಸಿಸ್ ಬಗ್ಗೆ ಜಾಗೃತಿ

ಗುಡಿಬಂಡೆಗೆ ಇವರು ತಮ್ಮ ನಿವಾಸವನ್ನು ಬದಲಾಯಿಸಿಕೊಂಡ ಮೇಲೆ, ಅಲ್ಲಿ ಬಿಇಓ ಆಗಿದ್ದ ಇವರ ಹಳೆಯ ಸಹೋದ್ಯೋಗಿ ನಂಜುಂಡಭಟ್ಟರ ಮೂಲಕ ತಾಲ್ಲೂಕಿನ ಶಾಲಾ ಶಿಕ್ಷಕರ ಸಹಕಾರ ಪಡೆದು ತಾಲ್ಲೂಕಿನ ಗ್ರಾಮಗಳ ಜನರಿಗೆ ಫ್ಲೋರೋಸಿಸ್ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡರು. ಶಾಲಾ ಮಕ್ಕಳಿಗೆ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಫ್ಲೋರೋಸಿಸ್‌ನ್ನು



ಪತ್ತೆ ಹಚ್ಚುವ ವಿಧಾನ ಮತ್ತು ಅದಕ್ಕೆ ತೆಗೆದುಕೊಳ್ಳಬೇಕಾದ ಜಾಗೃತಿಯನ್ನು ಅವರಿಗೆ ತಿಳಿಸಿಕೊಟ್ಟರು. ಇವರಿಂದ ತರಬೇತಿ ಪಡೆದ ಆ ವಿದ್ಯಾರ್ಥಿಗಳು ಗ್ರಾಮಗಳಿಗೆ ತೆರಳಿ ಮನೆ ಮನೆ ಸಮೀಕ್ಷೆ ನಡೆಸಿ ಮಾಹಿತಿ ಸಂಗ್ರಹ ಮಾಡಿದರು. ಸಮಸ್ಯೆಯಿರುವವರಿಗೆ ತಮಗೆ ತಿಳಿದ ಸಂಗತಿಯನ್ನು ತಿಳಿಸಿದರು. ತಮಗೆ ಎಟುಕದ ವಿಷಯಗಳು ಕಂಡಾಗ ಅವರನ್ನು ಕರೆದುಕೊಂಡು ಕೆ.ಎನ್.ಎಸ್.ರವರ ಬಳಿಗೆ ಬಂದರು. ತನ್ಮೂಲಕ ಬಾಗೇಪಲ್ಲಿ–ಗುಡಿಬಂಡೆಯನ್ನು ಕಾಡುತ್ತಿದ್ದ ಬೃಹತ್ ಸಮಸ್ಯೆಯನ್ನು ಪರಿಹರಿಸಲು ಯತ್ನಿಸಿದರು.

ಇವರು ಮೂಡಿಸಿದ ಜಾಗೃತಿಯ ಫಲವಾಗಿ ಇಂದು ಗುಡಿಬಂಡೆ ಮತ್ತು ಬಾಗೇಪಲ್ಲಿ ತಾಲ್ಲೂಕುಗಳಲ್ಲಿ ಫ್ಲೋರೋಸಿಸ್‌ನ ಹಾವಳಿ ಕಡಿಮೆ ಆಗುವಂತಾಯಿತು. ನೀರಿನಿಂದ ತಮಗೆ ಇಂತಹದೊಂದು ಕಾಯಿಲೆ ಬರುತ್ತದೆ. ತಾವು ನೀರನ್ನು ಬಳಸುವಾಗ ಎಚ್ಚರಿಕೆಯಿಂದ ಬಳಸಬೇಕು. ಫ್ಲೋರೈಡ್ ಮುಕ್ತ ನೀರನ್ನು ಬಳಸಬೇಕು ಎಂಬ ಜಾಗೃತಿ ಅಲ್ಲಿನ ಜನರಲ್ಲಿ ಮೂಡಿದೆ. ಶುದ್ಧ ಕುಡಿಯುವ ನೀರಿನ ಹಲವು ಯೋಜನೆಗಳು ಈ ಎರಡೂ ತಾಲ್ಲೂಕುಗಳಲ್ಲಿ ಪ್ರಾರಂಭವಾದವು. ಸಾಮಾನ್ಯವಾಗಿ ಬಡಪೆಟ್ಟಿಗೆ ಎಚ್ಚರಗೊಳ್ಳದ ಸರ್ಕಾರವು ಜನಾಂದೋಲನದ ರೂಪದಲ್ಲಿ ರೂಪಗೊಂಡ ಇವರ ಜಾಗೃತಿ ಕಾರ್ಯಕ್ರಮಗಳಿಂದ ಎಚ್ಚೆತ್ತುಕೊಂಡಿತು. ಈ ಸಂಬಂಧ ಇವರು ವಿವಿಧ ಮೂಲಗಳಿಂದ ವಿಷಯ ಮತ್ತು ಸಾಹಿತ್ಯವನ್ನು ಸಂಗ್ರಹ ಮಾಡಿದರು. ವಿವಿಧ ಸಂಘ ಸಂಸ್ಥೆಗಳನ್ನು ಭೇಟಿ ಮಾಡಿ ಚರ್ಚಿಸಿ ಪರಿಹಾರೋಪಾಯಗಳನ್ನು ಹುಡುಕಿ ಜನರಿಗೆ ತಿಳಿಸಿದರು. 'ಈ ವಿಷಯದಲ್ಲಿ ಶಿಕ್ಷಣ ಇಲಾಖೆಯ ಅಧಿಕಾರಿಗಳು, ಶಿಕ್ಷಕರು ಮತ್ತು ವಿದ್ಯಾರ್ಥಿಗಳು ನೀಡಿದ ಸಹಕಾರ ಅನನ್ಯವಾದುದು' ಎಂದು ಕೆಎನ್‌ಎಸ್‌ರವರು ಅಂದಿನ ದಿನಗಳ ಕಾರ್ಯಕ್ರಮಗಳನ್ನು ನೆನಪಿಸಿಕೊಳ್ಳುತ್ತಾರೆ. ಇವರ ಈ ಸೇವಾ ಕಾರ್ಯಗಳನ್ನು ಗಮನಿಸಿ ಪ್ರಾಯಶಃ ಇವರು ಮುಂದಿನ ದಿನಗಳಲ್ಲಿ ಚುನಾವಣೆಗೆ ಸ್ಪರ್ಧಿಸುವ ಆಲೋಚನೆಯನ್ನು ಇಟ್ಟುಕೊಂಡಿರಬಹುದು ಎಂದು ಹಲವು ಮಂದಿ ಸಂಶಯಗೊಂಡದ್ದೂ ಉಂಟು. ಆದರೆ ಅದ್ಯಾವುದರ ಅರಿವೂ ಇಲ್ಲದವರಂತೆ ನಿಷ್ಕಾಮ ಕರ್ಮ ಜೀವಿಯಾಗಿ ಕಾರ್ಯನಿರ್ವಹಿಸಿದರು.

### ಜಲ ಶಿಕ್ಷಕರಾಗಿ

ಜಲ ಸಂರಕ್ಷಣೆಗೆ ಸಂಬಂಧಿಸಿದಂತೆ ಮಹಾರಾಷ್ಟ್ರ ರಾಜ್ಯದಲ್ಲಿ ಅಣ್ಣಾ ಹಜಾರೆರವರು ಕೈಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ಪತ್ರಿಕೆಗಳಲ್ಲಿ ಓದಿ ತಿಳಿದುಕೊಂಡು, ರಾಜಸ್ತಾನದ ರಾಜೇಂದ್ರಸಿಂಗ್ ಅವರೊಂದಿಗೆ ನಿಕಟ ಸಂಪರ್ಕವನ್ನು ಬೆಳೆಸಿ ಅವರನ್ನು ಚಿಕ್ಕಬಳ್ಳಾಪುರ ಜಿಲ್ಲೆಗೆ ಆಹ್ವಾನಿಸಿ ದಸಂಸ ಮುಖಂಡ ಮತ್ತು ಚಿಂತಾಮಣಿಯ ನಗರಸಭೆಯ ಮಾಜಿ ಸದಸ್ಯ ಎನ್. ಮುನಿಸ್ವಾಮಿಯವರ ಸಹಕಾರದೊಂದಿಗೆ ಹಲವು ಸಭೆ ಸಮಾರಂಭಗಳನ್ನು ಜಿಲ್ಲೆಯಲ್ಲಿ ಏರ್ಪಡಿಸಿದ್ದರು. ಈ ಕಾರ್ಯಕ್ರಮಗಳ ಮೂಲಕ ಜಿಲ್ಲೆಯ ಜನರಲ್ಲಿ ಜಲ ಸಂರಕ್ಷಣೆ ಬಗ್ಗೆ ಜಾಗೃತಿ ಮೂಡಿಸಲು ಮುಂದಾದರು. ರಾಜಸ್ತಾನದಲ್ಲಿ ಜಲಬ್ರಹ್ಮ ರಾಜೇಂದ್ರಸಿಂಗ್‌ರವರು ಬತ್ತಿ ಹೋಗಿದ್ದ ಐದು ನದಿಗಳಿಗೆ



ಮರು ಜೀವ ನೀಡಿದ ರೀತಿಯಲ್ಲೇ ಜಿಲ್ಲೆಯಲ್ಲಿನ ನದಿಗಳಿಗೆ ಮರು ಜೀವ ನೀಡಬೇಕೆಂದು ಹೋದ ಹೋದ ಕಡೆಯೆಲ್ಲಾ ಕರೆ ನೀಡಿದರು. ತಾಲ್ಲೂಕು ರೈತ ಸಂಘದ ಕಾರ್ಯಕರ್ತರ ಜೊತೆಯಲ್ಲಿ ಸೇರಿಕೊಂಡು ಉತ್ತರ ಪಿನಾಕಿನಿ ಉಳಿಸಿ ಆಂದೋಲನವನ್ನು ನಡೆಸಿದರು. ನದಿಯ ಪಾತ್ರದಲ್ಲಿ ರೈತ ಸಂಘದ ಕಾರ್ಯಕರ್ತರೊಂದಿಗೆ ಕಾಲ್ನಡಿಗೆ ನಡೆಸಿದರು.

ನೆಲಜಲ ಸಂರಕ್ಷಣೆಯ ಹಲವು ಸಭೆ ಸಮಾರಂಭಗಳನ್ನು ಆಯೋಜಿಸಿದರು. ಇದಕ್ಕಾಗಿ ತಮ್ಮ ಪಿಂಚಣಿ ಹಣವನ್ನು ಧಾರಾಳವಾಗಿ ಖರ್ಚು ಮಾಡಿದರು. ಈ ಸಂಬಂಧದ ಸಾಹಿತ್ಯವನ್ನು ಸಂಗ್ರಹಿಸಿದರು. ಎಲ್ಲೆಲ್ಲಿ ಈ ಸಂಬಂಧ ಸಾಹಿತ್ಯ ಕೃತಿ ದೊರೆಯುತ್ತದೆ ಎಂದು ತಿಳಿಯುತ್ತದೆಯೋ ಅಲ್ಲಲ್ಲಿಗೆಲ್ಲಾ ಪತ್ರ ಬರೆದು ತರಿಸಿಕೊಂಡು ಬೆಟ್ಟದಂತೆ ರಾಶಿ ಹಾಕಿಕೊಂಡು ಹಗಲಿರುಳು ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಓದಿದರು. ಇದರ ಫಲವಾಗಿ ಜಲ ಸಮಸ್ಯೆಗಳ ಬಗ್ಗೆ, ಸಂರಕ್ಷಣೆಯ ಬಗ್ಗೆ, ಇವುಗಳ ಕಲುಷಿತಗೊಳ್ಳುವುದರಿಂದ ಉಂಟಾಗುವ ರೋಗಗಳ ಬಗ್ಗೆ, ಮಳೆ ಕೊಯ್ಲಿನ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಸಂಗ್ರಹಿಸಿದರು. ಈ ಕ್ಷೇತ್ರದಲ್ಲಿ ಅವರು ಗಳಿಸಿದ ಮಾಹಿತಿ ಮತ್ತು ಬೆಳೆಸಿಕೊಂಡ ಕಾಳಜಿಯ ದೆಸೆಯಿಂದಾಗಿ ಜಲಶಿಕ್ಷಕ ಎಂಬ ನೂತನ ಹೆಸರನ್ನು ಜನರು ನೀಡಿದರು.

ಈ ನಿಟ್ಟಿನಲ್ಲಿ ಕೈಗೊಂಡ ಕಾರ್ಯಕ್ರಮಗಳ ನಿಮಿತ್ತವಾಗಿ ಭೂಪಾಲ್ ಮುಂತಾದ ಕಡೆಗಳಲ್ಲಿ ಪ್ರವಾಸ ಮಾಡಿದರು. ಇದರ ಜೊತೆಗೆ ರಾಜ್ಯ ವಿವಿಧೆಡೆಗಳಲ್ಲಿ ಜಲಸಂರಕ್ಷಣೆಯ ಬಗ್ಗೆ ಕೈಗೊಂಡಿರುವ ಕಾರ್ಯಕ್ರಮಗಳ ವೀಕ್ಷಣೆಗೂ ತೆರಳಿದರು. ಇಂತಹ ಕಾರ್ಯಕ್ರಮಗಳ ಫಲವಾಗಿ ಹಲವು ಮಂದಿ ಜಲತಜ್ಞರ, ಜಲಶಿಕ್ಷಕರ ಪರಿಚಯವನ್ನು ಬೆಳೆಸಿಕೊಂಡರು.

ಭ್ರಷ್ಟಾಚಾರ ವಿರೋಧಿ ಚಳವಳಿಯ ನೇತಾರ ಅಣ್ಣಾ ಹಜಾರೆಯವನ್ನು ಸಹ ಭೇಟಿ ಮಾಡಿ ಗ್ರಾಮಗಳ ಅಭಿವೃದ್ಧಿ ಬಗ್ಗೆ ಚರ್ಚಿಸಿದರು. ಅಣ್ಣಾ ಹಜಾರೆಯವರ ಸ್ವಗ್ರಾಮವಾಗಿರುವ ಮಹಾರಾಷ್ಟ್ರದ ರಾಳೆಗಣಸಿದ್ದಿಗೆ ಖುದ್ದು ಭೇಟಿ ನೀಡಿ ಅವರೊಂದಿಗೆ ಕೂಲಂಕುಷವಾಗಿ ಚರ್ಚಿಸಿದರು. ಅಲ್ಲಿ ಇವರು ಪ್ರತ್ಯಕ್ಷವಾಗಿ ಕಂಡ ಸಂಗತಿಗಳನ್ನು ಇಲ್ಲಿನವರಿಗೆ ವಿವರಿಸಿ, ಅವರ ಹಾಗೆ ಗ್ರಾಮಗಳ ಅಭಿವೃದ್ಧಿಗೆ ಶ್ರಮಿಸಬೇಕೆಂದು ಕರೆ ನೀಡಿದರು.

ತಮ್ಮ ನಿವೃತ್ತಿಯ ಅವಧಿಯಲ್ಲೇ ಸುಭಾಷ್ ಪಾಳೇಕರ್ ನೈಸರ್ಗಿಕ ಕೃಷಿ ಪದ್ಧತಿ ಮತ್ತು ಒಂದು ಎಕರೆ ಬೇಸಾಯ ಪದ್ಧತಿಯನ್ನು ಪ್ರಚಾರ ಮಾಡಿದರು. ಈ ಪದ್ಧತಿಯನ್ನು ಅಳವಡಿಸಿಕೊಂಡಿರುವ ಹಲವು ರೈತರನ್ನು ಭೇಟಿ ಮಾಡಿದರು. ಅವರೊಂದಿಗೆ ತಮ್ಮ ಬಳಿಯಿದ್ದ ಮಾಹಿತಿಯನ್ನು ಹಂಚಿಕೊಂಡರು. ಅಲ್ಲಿಂದ ವಾಪಸ್ಸು ಬಂದ ಮೇಲೆ ಗೌರಿಬಿದನೂರು ತಾಲ್ಲೂಕಿನ ಪ್ರಗತಿಪರ ರೈತರನ್ನು ಭೇಟಿ ಮಾಡಿ ಸರಳ ಮತ್ತು ರಸಾಯನಿಕ ಮುಕ್ತ ನೈಸರ್ಗಿಕ ಕೃಷಿ ಪದ್ಧತಿಯನ್ನು ಅಳವಡಿಸಿಕೊಳ್ಳಲು ಪ್ರೇರೇಪಿಸಿದರು.



ಆಸಕ್ತಿ ತೋರಿದ ರೈತರನ್ನು ಮಾದರಿ ಕೃಷಿ ಫಾರಂಗಳಿಗೆ ಕರೆದುಕೊಂಡು ಹೋಗಿ ಪ್ರಾತ್ಯಕ್ಷಿಕೆಗಳ ಪರಿಚಯ ಮಾಡಿಕೊಳ್ಳುವಂತೆ ಮಾಡಿದರು. ರೈತ ಸ್ನೇಹಿ ಈ ಕೃಷಿ ಪದ್ಧತಿಯನ್ನು ಅಳವಡಿಸಿಕೊಳ್ಳಲು ತಾಲ್ಲೂಕಿನ ರೈತರಿಗೆ ತಿಳಿಸಬೇಕೆಂದು ತಾಲ್ಲೂಕು ಕೃಷಿ ಇಲಾಖೆಯನ್ನು ಕೋರಿದರಲ್ಲದೆ, ಈ ಸಂಬಂಧ ಸಮಾರಂಭಗಳನ್ನು ನಡೆಸುವಂತೆ ವಿನಂತಿಸಿದರು. ಇವರ ವಿನಂತಿಗೆ ಕಿವಿಗೊಟ್ಟು ಅವರು ಕಾರ್ಯಕ್ರಮಗಳನ್ನು ಏರ್ಪಡಿಸಿದಾಗ ತಾವೇ ಸಂಪನ್ಮೂಲ ವ್ಯಕ್ತಿಗಳನ್ನು ವಿವಿಧ ಭಾಗಗಳಿಂದ ಕರೆಸಿದರು. ಇಲ್ಲಿನ ರೈತರಿಗೆ ಅವರ ಸಂಪರ್ಕವನ್ನು ಏರ್ಪಡಿಸಿದರು. ರೈತರು ಸಾಲ ಬಾಧೆಯಿಂದ, ಬೆಳೆ ವಿಫಲತೆಯಿಂದ ಆತ್ಮಹತ್ಯೆಯನ್ನು ಮಾಡಿಕೊಂಡಾಗ ಮಮ್ಮಲ ಮರುಗಿದರು. ಅದನ್ನು ತಡೆಯಲು ಸರ್ಕಾರ ಕೈಗೊಳ್ಳಬೇಕಾದ ಕಾರ್ಯಕ್ರಮಗಳ ಬಗ್ಗೆ ಮತ್ತು ರೈತರು ತಾವು ಸಾಲದ ಬಾಧೆಗೆ ಗುರಿಯಾಗದೆ ಪಾರಾಗುವ ವಿಧಾನಗಳ ಬಗ್ಗೆ ತಿಳಿ ಹೇಳಲು ಜಾಗೃತಿ ಕಾರ್ಯಕ್ರಮಗಳನ್ನು ರೂಪಿಸಿದರು. ಈ ಸಂಬಂಧ 'ರೈತರ ಆತ್ಮ ನಿರಂತರ ಹತ್ಯೆಗಳು' ಕಿರು ಪುಸ್ತಕವನ್ನು ಪ್ರಕಟಿಸಿದರು.

### ದ.ಸಂ.ಸ.ದ ಸಕ್ರಿಯ ಕಾರ್ಯಕರ್ತರಾಗಿ

ಈ ನಡುವೆ ಗೌರಿಬಿದನೂರು ತಾಲ್ಲೂಕು ಸೇರಿದಂತೆ ಅವಿಭಜಿತ ಕೋಲಾರ ಜಿಲ್ಲೆಯಲ್ಲಿ ನಡೆದ ದಲಿತ ಸಂಘರ್ಷ ಸಮಿತಿಯ ಶಿಬಿರಗಳು, ಸಭೆ, ಸಮಾರಂಭಗಳು, ಕಾರ್ಯಕ್ರಮಗಳು ಹೋರಾಟಗಳಲ್ಲಿ ಭಾಗವಹಿಸಿದರು. ಅಗತ್ಯವಿದ್ದಾಗ ಕರಪತ್ರ ಮುಂತಾದ ಸಾಂದರ್ಭಿಕ ಸಾಹಿತ್ಯವನ್ನು ಒದಗಿಸಿಕೊಟ್ಟರು. ದಲಿತ ಸಂಘಟನೆಯ ವಿಘಟನೆಗೊಳಗಾದಾಗ ಅದನ್ನು ಪುನರ್ ಸಂಘಟಿಸಬೇಕೆಂಬ ತಪನದಲ್ಲೇ ಸಂಘಟನೆಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡರು. ದಲಿತ ಬದುಕಿನ ಬವಣೆಗಳನ್ನು ಪರಿಹರಿಸಬೇಕೆಂದು ತಹತಹಿಸತೊಡಗುತ್ತಲೇ ಇದ್ದಾರೆ. ಇದಕ್ಕಾಗಿ ದೊರೆಯುವ ಒಂದು ಸಣ್ಣ ಅವಕಾಶವನ್ನೂ ಬಿಟ್ಟು ಕೊಡದೆ ಪರಿಣಾಮಕಾರಿಯಾಗಿ ಬಳಸಿಕೊಳ್ಳುತ್ತಿದ್ದಾರೆ. ಇವರು ನಿವೃತ್ತಿ ಹೊಂದಿದ ಮೇಲೆ ಗೌರಿಬಿದನೂರು ತಾಲ್ಲೂಕಿನಲ್ಲಿ ನಡೆದ ಜೋಡಿಬಿಸಲಹಳ್ಳಿ ಭೂ ಹೋರಾಟದಲ್ಲಿ ಇವರು ಸಕ್ರಿಯವಾಗಿ ಭಾಗವಹಿಸಿದ್ದರು. ಇಲ್ಲಿನ ಜಮೀನ್ದಾರರಿಂದ ವಂಚನೆಗೊಳಗಾಗಿದ್ದ ದಲಿತರಿಗೆ ನ್ಯಾಯ ಪಡೆಯುವುದಕ್ಕಾಗಿ ಸಿ.ಜಿ. ಗಂಗಪ್ಪ, ಸಿ. ಚನ್ನಪ್ಪ ನೇತೃತ್ವದಲ್ಲಿ ನಡೆದ ಹೋರಾಟದಲ್ಲಿ ಕೆ.ಎನ್.ಎಸ್., ಪ್ರೊ. ಬಿ. ಗಂಗಾಧರಮೂರ್ತಿ, ಪ್ರೊ. ಶಿವಲಿಂಗಯ್ಯ, ಹ.ಮಾ. ರಾಮಚಂದ್ರ, ಡಾ. ಕೆ.ಪಿ. ನಾರಾಯಣಪ್ಪ, ಪಿ. ನರಸಿಂಹಮೂರ್ತಿ ಮುಂತಾದವರು ಭಾಗವಹಿಸಿದ್ದರು. ಇದರಲ್ಲಿ ದಸಂಸ ಯಶಸ್ವಿಯಾಯಿತು. ಜಮೀನ್ದಾರ ಇಸ್ತೂರಿ ಸುಬ್ಬಯ್ಯಶೆಟ್ಟಿ ದಲಿತರ ಹೋರಾಟಕ್ಕೆ ಮಣಿದು ತಮ್ಮಿಂದ ವಂಚಿಸಲ್ಪಟ್ಟಿದ್ದ ದಲಿತರಿಗೆ 160 ಎಕರೆ ಜಮೀನನ್ನು ಉಚಿತವಾಗಿ ಕ್ರಯ ಮಾಡಿಕೊಟ್ಟರು. ಕೇವಲ ಜಾಥಾ, ಮೆರವಣಿಗೆ, ಧರಣಿ ಸತ್ಯಾಗ್ರಹದಂತಹ ಶಾಂತಿಯುತ ಹೋರಾಟಗಳಲ್ಲೇ 160 ಎಕರೆ ಜಮೀನನ್ನು ಜಮೀನ್ದಾರರಿಂದ ಪಡೆಯಲಾಯಿತು. ಈ ಐತಿಹಾಸಿಕ ಹೋರಾಟಕ್ಕೆ ಕೆಎನ್ಎಸ್

ಸಂದರ್ಭೋಚಿತ ಸಲಹೆ ಸಹಕಾರ ನೀಡುವುದರ ಜೊತೆಗೆ ಸಕ್ರಿಯವಾಗಿ ಭಾಗವಹಿಸಿದ್ದರು.

ಕೆಎನ್‌ಎಸ್‌ರವರು ತಮ್ಮ ವೃತ್ತಿ ಜೀವನದಿಂದ ನಿವೃತ್ತಿ ಹೊಂದಿದ ಬಳಿಕ ಎಲ್ಲಾ ಸರ್ಕಾರಿ ನೌಕರರಂತೆ ಮಡದಿ ಮಕ್ಕಳೊಂದಿಗೆ ತೀರ್ಥ ಯಾತ್ರೆಗೆ ಹೋಗಿ ಗುಡಿ ಗುಂಡಾರಗಳನ್ನು ಸುತ್ತಲಿಲ್ಲ. ತಮ್ಮ ಬಿಡುವಿನ ಸಮಯವನ್ನು ಪೂಜೆ, ಭಜನೆ ಎಂದು ಆಧ್ಯಾತ್ಮ ಚಿಂತನೆ ಧ್ಯಾನದಲ್ಲಿ ಕಳೆಯಲಿಲ್ಲ. ಬದಲಿಗೆ ಮೊದಲಿನಿಂದಲೂ ಅವರಲ್ಲಿದ್ದ ಸಾಮಾಜಿಕ ಕಳಕಳಿಗೆ, ದಲಿತಪರ ಹೋರಾಟದ ತುಡಿತಕ್ಕೆ ಈಗ ಪೂರ್ಣ ಅವಕಾಶವನ್ನು ನೀಡಿದರು. ಸರ್ಕಾರಿ ನೌಕರರು ಎಂಬ ಚೌಕಟ್ಟಿನೊಳಗೆ ಎಷ್ಟು ಸಾಧ್ಯವೋ ಅಷ್ಟು ಸಮಯವನ್ನು ಸಂಘಟನೆಗೆ ವಿನಿಯೋಗಿಸುತ್ತಿದ್ದರು. ಆದರೆ ನಿವೃತ್ತಿ ಹೊಂದಿದ ಮೇಲೆ ಅಣೆಕಟ್ಟಿನೊಳಗೆ ಬಂಧಿಯಾಗಿದ್ದ ಜಲರಾಶಿ ಕಟ್ಟೆ ಒಡೆದು ಒಮ್ಮೆಗೇ ಹೊರನುಗ್ಗಿ ಬಂದಂತೆ ಸರ್ಕಾರದ ಎಲ್ಲಾ ಕಟ್ಟುಪಾಡುಗಳಿಂದ ಹೊರ ಬಂದು ಸಂಘಟನೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡರು. ಇದರ ಫಲವಾಗಿ ಅವರ ಮನೆ ಅನೇಕ ಸಂದರ್ಭಗಳಲ್ಲಿ ಸಭೆಗಳ ಸಭಾಂಗಣವಾಯಿತು. ಇಂತಹ ಸಭೆಗಳು ನಡೆದಾಗ ಅವರ ಶ್ರೀಮತಿಯವರಿಗೆ ಕಾಫಿ, ಟೀ ಇತ್ಯಾದಿಗಳ ಆತಿಥ್ಯವನ್ನು ನೀಡುವುದು ಪರಿಪಾಟವಾಗಿ ಹೋಯಿತು. ಅನೇಕ ಸಂದರ್ಭದಲ್ಲಿ ಕೆಎನ್‌ಎಸ್‌ರವರಿಗೆ ಹೀಗೆ ಪದೇ ಪದೇ ತೊಂದರೆ ಕೊಡಬಾರದಾಗಿತ್ತು ಎಂದು ಸಂಘಟನೆಯ ಪದಾಧಿಕಾರಿಗಳಿಗೆ ಅನಿಸಿದ್ದುಂಟು. ಆದರೆ ಅವರು ಮಾತ್ರ ಈ ಬಗ್ಗೆ ಒಮ್ಮೆಯೂ ಬೇಸರವನ್ನು ವ್ಯಕ್ತಪಡಿಸಿದ್ದಿಲ್ಲ. ಸಂಘಟನೆಯ ಕಾರ್ಯಕರ್ತರು ಅವರ ಮನೆಗೆ ಹೋದಾಗ ಅವರು ತುಂಬು ಮನಸ್ಸಿನಿಂದ ಬರಮಾಡಿಕೊಂಡು ಮುಕ್ತ ಮನಸ್ಸಿನಿಂದ ಚರ್ಚಿಸುತ್ತಿದ್ದರು.

## ಆರ್ಥಿಕ ಸಬಲೀಕರಣ

ಇದರ ನಡುವೆ ಇವರು ನಾಯಕ ಸಮುದಾಯದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪುರಸ್ಕಾರ ಮತ್ತು ನಾಯಕ ಸಮುದಾಯದ ಬಡವರ ಆರ್ಥಿಕ ಸಬಲೀಕರಣ ಕಾರ್ಯಕ್ರಮವನ್ನು ವಾಣಿಜ್ಯ ತೆರಿಗೆ ಇಲಾಖೆಯ ಉನ್ನತ ಅಧಿಕಾರಿಗಳಾದ ನಾಗರಾಜಪ್ಪ, ಹೆಚ್. ವೇಣುಗೋಪಾಲ್, ಶಿಕ್ಷಕರಾದ ಎನ್.ಗಂಗಾಧರಪ್ಪ, ಕೆ.ಜಿ.ಲಕ್ಷ್ಮಿನಾರಾಯಣಪ್ಪ, ವೆಂಕಟೇಶಪ್ಪ, ನ್ಯಾಷನಲ್ ಕಾಲೇಜು ರಂಗನಾಥ್‌ರವರೊಂದಿಗೆ ನಡೆಸಿದರು. ಇದು ಹತ್ತು ವರ್ಷಗಳ ಕಾಲ ಸತತವಾಗಿ ನಡೆದುಕೊಂಡು ಬಂದಿತು. ನೂರಾರು ವಿದ್ಯಾರ್ಥಿಗಳನ್ನು ಪುರಸ್ಕರಿಸಿ ಸ್ಫೂರ್ತಿ ತುಂಬಲಾಯಿತು. ಕಾರ್ಯಕ್ರಮಕ್ಕೆ ಬೆಂಗಳೂರು ನಗರ ಸೇರಿದಂತೆ ವಿವಿಧ ಭಾಗಗಳಿಂದ ಗಣ್ಯ ವ್ಯಕ್ತಿಗಳನ್ನು ಕರೆಸಿ ಅವರ ಮೂಲಕ ವಿದ್ಯಾರ್ಥಿಗಳಲ್ಲಿ ಓದಿನ ಹಸಿವನ್ನು ಮೂಡಿಸಿದರು. ಇದರ ಜೊತೆಗೆ ನಾಯಕ ಸಮುದಾಯದ ಬಡವರಿಗೆ ತಲಾ ಒಂದೊಂದು ಕುರಿ ಮೇಕೆಯನ್ನು ಉಚಿತವಾಗಿ ನೀಡಿ ಆರ್ಥಿಕವಾಗಿ ಸಬಲರಾಗಲು ಸಹಾಯ ಮಾಡಿದರು. ಈ ಯೋಜನೆಯಿಂದ ಹಿಂದೆ ಇದ್ದ ಸರಳ ಮತ್ತು ಪರಿಣಾಮಕಾರಿ ಆರ್ಥಿಕ ಚಿಂತನೆಯನ್ನು ಕಾರ್ಯಕ್ರಮಕ್ಕೆ



ಆಗಮಿಸಿದ್ದ ಗಣ್ಯ ವ್ಯಕ್ತಿಗಳು ಮುಕ್ತ ಕಂಠದಿಂದ ಶ್ಲಾಘಿಸಿದರು. ಜೊತೆಗೆ ಮಧುಗಿರಿಯ ಶಾಸಕ ಕೆ.ಎನ್.ರಾಜಣ್ಣರವರು 25 ಸಾವಿರ ರೂ.ಗಳನ್ನು ನೀಡಿ ಕುರಿಗಳನ್ನು ಖರೀದಿಸಿ ಉಚಿತವಾಗಿ ಕೊಡುವ ಯೋಜನೆಗೆ ಪ್ರೋತ್ಸಾಹ ನೀಡಿದರು. ಈ ಯೋಜನೆಯಲ್ಲಿ ಮೇಕೆ\ಕುರಿಯನ್ನು ಪಡೆದ ಹಲವು ಮಂದಿ ಫಲಾನುಭವಿಗಳು ಕುರಿ\ಮೇಕೆಗಳ ಸಂಖ್ಯೆಯನ್ನು ಹೆಚ್ಚಿಸಿಕೊಂಡು ಆರ್ಥಿಕವಾಗಿ ಸಬಲರಾಗಿದ್ದಾರೆ. ಯಶಸ್ವಿಯಾಗಿ ನಡೆಯುತ್ತಿದ್ದ ಈ ಯೋಜನೆಯನ್ನು ವಯೋಮಾನದ ಕಾರಣದಿಂದ ಮುಂದುವರೆಸಿಕೊಂಡು ಹೋಗಲಾಗಲಿಲ್ಲ. ಯೋಜನೆಗೆ ಸಹಾಯ ಮಾಡಲು ಹಲವು ಮಂದಿ ತಾವಾಗಿ ಮುಂದೆ ಬಂದರು. ಆದರೆ ಇಳಿವಯಸ್ಸಿನಲ್ಲಿ ಇಡೀ ಕಾರ್ಯಕ್ರಮದ ಹೊಣೆ ಹೊತ್ತು ಒತ್ತಡವನ್ನು ಅನುಭವಿಸಲು ಸಿದ್ಧರಿಲ್ಲದ ಕೆಎನ್ಎಸ್ ಕಳೆದ ಎರಡು–ಮೂರು ವರ್ಷಗಳಿಂದ ನಿಲ್ಲಿಸಿದ್ದಾರೆ.

**ಪುಸ್ತಕಗಳ ರಾಶಿ**

ಹೀಗೆ ಏನಾದರೂ ಒಂದನ್ನು ಮಾಡುತ್ತಾ ಸದಾ ಕ್ರಿಯಾಶೀಲರಾಗಿರುವ ಎಂಬತ್ತರ ವಯೋಮಾನದ ಕೆಎನ್ಎಸ್‌ರವರು ಹದಿಹರೆಯದ ವಯಸ್ಸಿನಲ್ಲೇ ಅರವತ್ತು ವರ್ಷದ ವೃದ್ಧರಂತೆ ಕ್ರಿಯಾಶೀಲತೆಯಿಂದ ವಿಮುಖರಾಗಿರುವ ಇಂದಿನ ಯುವ ಪೀಳಿಗೆಗೆ ಮಾದರಿಯಾಗಿದ್ದಾರೆ. ದಿನಪತ್ರಿಕೆಯಲ್ಲಿ ಓದಿದ ಜನಪರವಾದ ವಿಷಯಕ್ಕೆ ಮನ ಸೋತು, ಅದನ್ನು ತಮ್ಮ ಆಪ್ತವಲಯದಲ್ಲಿ ಹಂಚಿಕೊಂಡು ಅದನ್ನು ಜನರಿಗೆ ತಲುಪಿಸಬೇಕೆಂದು ಅಂದೇ ತಿರ್ಮಾನಿಸುತ್ತಾರೆ. ಸದರಿ ವಿಷಯಕ್ಕೆ ಸಂಬಂಧಿಸಿದ ಸಾಹಿತ್ಯ ಇನ್ನೂ ದೊರೆಯುತ್ತದೆಯೇ ಎಂದು ಹುಡುಕಾಟ ನಡೆಸುತ್ತಾರೆ. ಈ ಹುಡಕಾಟದಲ್ಲಿ ದೊರೆತೆಲ್ಲಾ ಪುಸ್ತಕಗಳನ್ನು ಕೊಂಡು ಕೊಂಡು ತಂದು ಮನೆಯಲ್ಲಿ ತುಂಬಿಕೊಳ್ಳುತ್ತಾರೆ. ಹೀಗೆ ತುಂಬಿಕೊಂಡದ್ದರ ಪರಿಣಾಮವಾಗಿ ಮನೆಯಲ್ಲಿ ಮಿನಿ ಗ್ರಂಥಾಲಯವೊಂದು ನಿರ್ಮಾಣವಾಗಿದೆ. ಮನೆಯಲ್ಲಿ(ಇವರ ಕೊಠಡಿಯಲ್ಲಿ) ಎಲ್ಲಿ ನೋಡಿದರೂ ಪುಸ್ತಕಗಳ ರಾಶಿ ಗೋಚರಿಸುತ್ತದೆ. ಪುಸ್ತಕಗಳ ಜೊತೆಗೆ ಹಿಂದಿ, ಇಂಗ್ಲೀಷ್, ಕನ್ನಡ, ತೆಲುಗು ಭಾಷೆಯ ದಿನಪತ್ರಿಕೆಗಳು, ನಿಯತಕಾಲಿಕೆಗಳು ತುಂಬಿ ತುಳುಕುತ್ತಿವೆ. ಇವುಗಳನ್ನು ಜೋಪಾನವಾಗಿ ಜೋಡಿಸಿಡಲು ಇವರ ಅಳಿಯ ವೇಣುಗೋಪಾಲರವರು ಇತ್ತೀಚೆಗೆ ಮರದ ಕಪಾಟುಗಳನ್ನು ಮಾಡಿಸಿಕೊಟ್ಟಿದ್ದಾರೆ. ಆದರೂ ಹಲವು ಪುಸ್ತಕಗಳು ಅವುಗಳಿಂದ ಹೊರ ಬಂದು ಕೊಠಡಿಯಲ್ಲಿ ಹರಡಿಕೊಂಡಿವೆ. ಹೀಗೆ ಹಲವು ವಿಷಯಗಳ ಬಗ್ಗೆ ಕುತೂಹಲದ ಗಣಿಯಾಗಿರುವ ದೀನ ದುರ್ಬಲರಿಗಾಗಿ ತುಡಿಯುವ ಹೃದಯವನ್ನು ಹೊಂದಿರುವ ಹರಿಯುವ ನದಿಯಂತೆ ಸದಾ ಕ್ರೀಯಾಶೀಲರಾಗಿರುವ ನಿವೃತ್ತ ಜಂಟಿ ನಿರ್ದೇಶಕ, ಜಲ ಶಿಕ್ಷಕ, ಆಯಿಲ್ ಪುಲ್ಲಿಂಗ್ ನಾರಾಯಣಸ್ವಾಮಿ, ದಲಿತ ಚಿಂತಕ ನಾರಾಯಣಸ್ವಾಮಿ ಮುಂತಾದ ಹೆಸರುಗಳಿಂದ ಗುರುತಿಸಲ್ಪಡುವ ಕೆಎನ್ಎಸ್‌ರವರ ವ್ಯಕ್ತಿ ಪರಿಚಯವನ್ನು ಮಾಡಿಕೊಟ್ಟು ಅವರು ಈ ಸಮಾಜಕ್ಕೆ ನೀಡಿದ ಕೊಡುಗೆಯನ್ನು ಸ್ಮರಿಸಬೇಕೆಂಬುದು



ನನ್ನ ಈ ಲೇಖನದ ಉದ್ದೇಶ. ಇದು ಪರಿಪೂರ್ಣವೆಂದು ಭಾವಿಸಿಲ್ಲ. ಆದರೂ ತಕ್ಕಮಟ್ಟಿಗೆ ಅವರ ವ್ಯಕ್ತಿ ಚಿತ್ರವನ್ನು ಕಟ್ಟಿಕೊಡುವಲ್ಲಿ ನಾನು ಯಶಸ್ವಿಯಾಗಿದ್ದೇನೆ ಎಂದು ಅಂದುಕೊಂಡಿದ್ದೇನೆ. ಇದು ನನ್ನ ಗ್ರಹಿಕೆಗೆ ಸಿಕ್ಕ ಚಿತ್ರವಷ್ಟೇ. ಇದನ್ನು ಮೀರಿದ ಚಿತ್ರವನ್ನು ಈ ಪುಸ್ತಕದಲ್ಲಿ ಹಲವು ಲೇಖಕರು ಕಟ್ಟಿಕೊಟ್ಟಿದ್ದಾರೆ. ಅವುಗಳೆಲ್ಲಾ ಸೇರಿ ಒಂದು ಪರಿಪೂರ್ಣತೆಯನ್ನು ತಂದುಕೊಡಬಹುದು ಅಥವಾ ಅದನ್ನು ಮೀರಿದ ಮತ್ತೊಂದು ಚಿತ್ರ ಈ ಸಮಾಜದ ಯಾವುದೋ ಮೂಲೆಯಲ್ಲಿ ಅಡಗಿರಬಹುದು. ಹಾಗೆ ಅಡಗಿದ್ದರೂ ಅದೂ ಸತ್ಯವೇ. ಕಾರಣ ಇವರ ವ್ಯಕ್ತಿತ್ವ ಹಾಗೆ ವೈಶಾಲ್ಯತೆಯನ್ನು ಹೊಂದಿರುವಂತಹದು.




06





# ಸರಳತೆಯ ಮತ್ತೊಂದು ಹೆಸರು ಶ್ರೀ ಕೆ. ನಾರಾಯಣಸ್ವಾಮಿ

– ನಾಡೋಜ ಪ್ರೊ. ಕಮಲಾ ಹಂಪನಾ

ಖ್ಯಾತ ಸಾಹಿತಿಗಳು

ಕೆಲವರನ್ನು ನೋಡಿದರೆ ಭಕ್ತಿ ಭಾವ ಮೂಡುತ್ತದೆ, ಕೆಲವರನ್ನು ಕಂಡರೆ ಗೌರವ ಭಾವ ಹುಟ್ಟುತ್ತದೆ. ಮತ್ತೆ ಕೆಲವರನ್ನು ಕಂಡರೆ ಪೂಜ್ಯ ಭಾವನೆ ಮೂಡುತ್ತದೆ. ಕೆಲವರನ್ನು ನೋಡಿದಾಗ ಈ ಭಾವಕ್ರಮಗಳೂ ಮುಪ್ಪುರಿಗೊಂಡು ಏಕತ್ರಯವಾಗುತ್ತದೆ.

ಆತ್ಮೀಯ ನಾರಾಯಣಸ್ವಾಮಿ ಅವರು ಹೀಗೆ ಹಲವರಲ್ಲಿ ಹಲವು ಭಾವನೆಗಳನ್ನು ಮೂಡಿಸುವ ಅಪರೂಪದ ವ್ಯಕ್ತಿಯಾಗಿದ್ದಾರೆ. ಕೆಲವರಿಗೆ ಅವರ ಸರಳತೆ ಪ್ರಿಯವಾಗಬಹುದು, ಮತ್ತೆ ಕೆಲವರಿಗೆ ಅವರ ಸಜ್ಜನಿಕೆ ಇಷ್ಟವಾಗಬಹುದು, ಇನ್ನು ಕೆಲವರಿಗೆ ಅವರೊಬ್ಬ ಸಾಮಾಜಿಕ ಅರಿವಿನ ಸರದಾರರಾಗಿ ಕಂಡರೆ ಮತ್ತೆ ಕೆಲವರಿಗೆ ಪರಿಸರ ಪ್ರೇಮಿಯಾಗಿ ಕಾಣಬಹುದು. ಆದರೆ ಎಲ್ಲರಿಗೂ ಅವರು ಇವೆಲ್ಲವನ್ನೂ ಮೂರ್ತಿರೂಪ ಪಡೆದ ಒಬ್ಬ ನಿಸ್ವಾರ್ಥ ಕಾಯಕಯೋಗಿಯಾಗಿ ಕಾಣುತ್ತಾರೆ. ಅತ್ಯಂತ ಸರಳ ವ್ಯಕ್ತಿ ಅವರು. ಸರಳತೆಯ ಮತ್ತೊಂದು ಹೆಸರೇ ನಾರಾಯಣಸ್ವಾಮಿ.

ನಾರಾಯಣಸ್ವಾಮಿ ಅವರನ್ನು ನಾನು ಕಿರಿಯ ವಯಸ್ಸಿನಿಂದಲೇ ನೋಡಿ ಬಲ್ಲೆ ಎಂದು ಹೇಳಿದರೆ ಕೆಲವರಿಗಾದರೂ ಆಶ್ಚರ್ಯ ಮೂಡೀತು! ಆದರೆ 1951ನೇ ಇಸವಿಯಿಂದ ನಾನೂ ನಾರಾಯಣಸ್ವಾಮಿ ಒಂದೇ ಟ್ರೇನಿನಲ್ಲಿ ಓಡಾಡುತ್ತಾ ಪ್ರೌಢಶಾಲಾ ಹಾಗೂ ಅಂದಿನ ಇಂಟರ್ ಮೀಡಿಯೇಟ್ ವಿದ್ಯಾಭ್ಯಾಸವನ್ನು

ಮುಗಿಸಿದವರು. ತುಮಕೂರು ಜಿಲ್ಲೆಯ ಕ್ಯಾತ್ಸಂದ್ರದ ಬಳಿ ಇರುವ ಶ್ರೀ ಸಿದ್ಧಗಂಗಾ ಮಠದಲ್ಲಿದ್ದುಕೊಂಡು ನಾರಾಯಣಸ್ವಾಮಿ ತುಮಕೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಹೋಗುತ್ತಿದ್ದರು. ನಾನು ಕ್ಯಾತ್ಸಂದ್ರದಿಂದ ತುಮಕೂರಿಗೆ ಬಂದು ಅಲ್ಲಿನ ಎಂಪ್ರೆಸ್ ಗರ್ಲ್ಸ್ ಹೈಸ್ಕೂಲಿನಲ್ಲಿ ಓದುತ್ತಿದ್ದೆನು.

ಪ್ರೌಢಶಾಲಾ ಶಿಕ್ಷಣ ಮುಗಿದ ಮೇಲೂ ಇಂಟರ್ ಮೀಡಿಯೇಟ್ ತರಗತಿಗೆ ತುಮಕೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ನಾನು ಸೇರಿದೆ. ಮುಂದಿನ ವರುಷ (1954) ನಾರಾಯಣಸ್ವಾಮಿಯೂ ನನ್ನ ಜೂನಿಯರ್ ಆಗಿ ಅದೇ ಕಾಲೇಜಿಗೆ ಸೇರಿದರು. ಆಗಾಗ ಅವರು ನನ್ನ ಕಣ್ಣಿಗೆ ಕಾಣುತ್ತಿದ್ದರು.

ಈ ಸಹ ಓದಿನ ನಂಟು ತುಮಕೂರಿಗೇ ಮುಗಿಯಲಿಲ್ಲ. ನನ್ನ ಸೀನಿಯರ್ ಇಂಟರ್ ಮೀಡಿಯೇಟಿನ ವಿದ್ಯಾಭ್ಯಾಸ ಮುಗಿಯಿತು. ತುಮಕೂರಿನ ಅದೇ ಕಾಲೇಜಿನಲ್ಲಿ ನಾನು ಬಿ.ಎ. ತರಗತಿಗೆ ಸೇರಬಹುದಿತ್ತು. ಆದರೆ ಆ ವೇಳೆಗಾಗಲೇ ನಾನು ಅಂದಿನ ಹಿರಿಯ ಸಾಹಿತಿಗಳ ಪುಸ್ತಕಗಳನ್ನು ಓದಿಕೊಂಡಿದ್ದೆ. ಕುವೆಂಪು, ಶಿವರಾಮ ಕಾರಂತ, ಮಾಸ್ತಿ, ಅನಕೃ, ದ.ರಾ. ಬೇಂದ್ರೆ, ನಾ. ಕಸ್ತೂರಿ ವೊದಲಾದವರ ಸಾಹಿತ್ಯ ನನ್ನ ಮೇಲೆ ಪರಿಣಾಮಕಾರಿಯಾದ ಪ್ರಭಾವ ಬೀರಿತ್ತು. ಇಂಟರ್ ಮೀಡಿಯೇಟ್‌ನಲ್ಲಿ ನನ್ನ ಪಠ್ಯವಾಗಿ ಓದಿದ್ದ ನಾಗವರ್ಮನ 'ಕರ್ನಾಟಕ ಕಾದಂಬರಿ' - ಹರಿಹರನ 'ಗಿರಿಜಾಕಲ್ಯಾಣ' - ಈ ಚಂಪೂ ಕಾವ್ಯಗಳ ಅಧ್ಯಯನ ನಾನೇ ನನ್ನ ಕುತೂಹಲಕೆ ಓದಿಕೊಂಡಿದ್ದ ಜನ್ನನ ಯಶೋಧರ ಚರಿತೆ' - ಈ ಕಾವ್ಯಗಳ ಪ್ರಭಾವಕ್ಕೆ ಒಳಗಾಗಿ ಕನ್ನಡ ಸಾಹಿತ್ಯದ ಮೇಲಿನ ಒಲವು ದಟ್ಟವಾಗತೊಡಗಿತ್ತು.

ಮೈಸೂರು ವಿಶ್ವವಿದ್ಯಾಲಯದ ಮಹಾರಾಜ ಕಾಲೇಜಿನ ಅಂದಿನ ಪ್ರಿನ್ಸಿಪಾಲರಾಗಿದ್ದವರು (1955) ಕುವೆಂಪು ಅವರು. ಅವರ ಸಾಹಿತ್ಯದ ಗಾಢ ಪ್ರಭಾವಕ್ಕೆ ಒಳಗಾಗಿದ್ದ ನಾನು, ಕುವೆಂಪು ಅವರ ಶಿಷ್ಯೆಯಾಗಬೇಕು, ಅವರ ಮೂಲಕ ಕನ್ನಡ ಸಾಹಿತ್ಯವನ್ನು ಕಲಿಯಬೇಕು ಎನ್ನುವ ಉತ್ಕಟ ಅಪೇಕ್ಷೆಯಿಂದ ನಾನು ತುಮಕೂರನ್ನು ಬಿಟ್ಟು ಮೈಸೂರಿಗೆ ಪ್ರಯಾಣ ಬೆಳೆಸಿದೆನು. ಮಹಾರಾಜ ಕಾಲೇಜಿನ ಕನ್ನಡ ಬಿ.ಎ. ಆನರ್ಸ್ ತರಗತಿಗೆ ಸೇರುವ ಮೂಲಕ ನಾನು ಕುವೆಂಪು ಅವರ ಶಿಷ್ಯೆಯಾದೆನು. ಸ್ವಾರಸ್ಯವೆಂದರೆ ಅನಂತರದ ವರುಷಗಳಲ್ಲಿ ನಾರಾಯಣಸ್ವಾಮಿಯೂ ಅದೇ ಕಾಲೇಜಿನ ನನ್ನ ಜೂನಿಯರ್ ವಿದ್ಯಾರ್ಥಿಯಾದರು. ಹೀಗೆ ನನ್ನ ಹಾಗೂ ನಾರಾಯಣಸ್ವಾಮಿಯವರ ವಿದ್ಯಾಭ್ಯಾಸ ಹೈಸ್ಕೂಲಿನಿಂದ ಎಂ.ಎ. ತರಗತಿಯವರೆಗೂ ಎರಡು ಊರುಗಳಲ್ಲಿ, ಎರಡು ಕಾಲೇಜುಗಳಲ್ಲಿ ನಡೆದದ್ದು ಒಂದು ಸೋಜಿಗದ ಸಂಗತಿಯೇ ಸರಿ.



ಇಷ್ಟು ವರುಷಗಳು ನಾವು ಪರಸ್ಪರ ನೋಡಿದ್ದರೂ ಒಂದೇ ಒಂದು ಸಂಭಾಷಣೆಯೂ ನಮ್ಮಲ್ಲಿ ನಡೆಯಲಿಲ್ಲ. ಒಂದೇ ಒಂದು ಮಾತನ್ನು ನಾವು ಆಡಿರಲಿಲ್ಲ. ಎಂ.ಎ. ವಿದ್ಯಾಭ್ಯಾಸ ಮುಗಿದ ನಂತರ ನಾನು ಬೆಂಗಳೂರು ಮಹಾರಾಣಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕಿಯಾಗಿ (1959) ನೇಮಕಗೊಂಡೆ.

ಆ ನಂತರದ ವರುಷಗಳಲ್ಲಿ ನನ್ನ ಹಾಗೂ ನಾರಾಯಣಸ್ವಾಮಿಯವರ ಭೇಟಿ ಅನೇಕ ಬಾರಿ ಆಗಿದೆ. ಸಾರ್ವಜನಿಕ ವೇದಿಕೆಗಳಲ್ಲಿ, ಸಾಹಿತ್ಯಿಕ ಕಾರ್ಯಕ್ರಮಗಳಲ್ಲಿ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಒಂದೇ ವೇದಿಕೆ ಹಂಚಿಕೊಂಡಿದ್ದೇವೆ. ಅವರು ಬಾಗೇಪಲ್ಲಿಯ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದಾಗ ನಾನು ಒಂದು ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದೆ ಎನ್ನುವ ನೆನಪು ನನಗೆ ಇಂದಿಗೂ ಸಂತಸ ಉಂಟುಮಾಡುತ್ತದೆ. ಅವರ ಸಾರ್ವಜನಿಕ ಕಾರ್ಯಕ್ರಮಗಳನ್ನು ನಾನು ಶ್ಲಾಘಿಸಿದ್ದೇನೆ. ನನ್ನ ಹಾಗೂ ಹಂಪನಾ ಅವರ ಸಾಹಿತ್ಯಿಕ ಹಾಗೂ ಸಾಮಾಜಿಕ ಕಾರ್ಯಗಳನ್ನು ಅವರು ಮೆಚ್ಚಿಕೊಂಡಿದ್ದಾರೆ. ಹೀಗೆಯೇ ನಮ್ಮ ಅವರ ಕಾರ್ಯಕ್ರಮಗಳು ಇಂದಿನವರೆಗೂ ಮುಂದುವರೆದಿದೆ.

ನಾರಾಯಣಸ್ವಾಮಿಯವರು ಸರ್ಕಾರಿ ಸೇವೆ ಸಲ್ಲಿಸುತ್ತಲೇ, ಸುಮಾರು ನಲವತ್ತು ವರುಷಗಳಿಂದ ಸಾಮಾಜಿಕ ಚಟುವಟಿಕೆಗಳಲ್ಲಿಯೂ ತೊಡಗಿಸಿಕೊಂಡು ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದ್ದಾರೆ. ಅವರು ಶಿಕ್ಷಣ ಇಲಾಖೆಯಲ್ಲಿ ಅಧ್ಯಾಪಕರಾಗಿ, ಪ್ರಾಂಶುಪಾಲರಾಗಿ, ಜಂಟಿ ನಿರ್ದೇಶಕರಾಗಿ ಉತ್ತಮ ಆಡಳಿತಗಾರರಾಗಿ ಹೆಸರು ಗಳಿಸಿದ್ದಾರೆ. ಅವರ ಸೇವಾವೃತ್ತಿಯ ನಂತರದ ಅವರ ಬದುಕು ಸಂಪೂರ್ಣವಾಗಿ ಸಮಾಜಮುಖಿಯಾಗಿ ಜನಮುಖಿಯಾಗಿ ಹರಿಯಿತು.

ಡಾ. ಬಿ.ಆರ್. ಅಂಬೇಡ್ಕರ್‌ರು ಹೇಳಿದ ಮೂರು ಮಂತ್ರಗಳಂತಿರುವ educate, unite, aqitate , ಅಂದರೆ ಶಿಕ್ಷಣ, ಒಗ್ಗಟ್ಟು ಹಾಗೂ ಹೋರಾಟ - ಈ ಸಿದ್ಧಾಂತಗಳ ಮೂಲಕ ಮುಗ್ಧ, ಅಮಾಯಕ ವ್ಯಕ್ತಿಗಳಲ್ಲಿ ಅರಿವು ಮೂಡಿಸುವ ಕೆಲಸವನ್ನು ನಾರಾಯಣಸ್ವಾಮಿಯವರು ಪ್ರಾಂಜಲವಾಗಿ ಪ್ರಾಮಾಣಿಕವಾಗಿ ಮಾಡುತ್ತಿದ್ದಾರೆ. ತಾವು ಕೈಗೊಂಡ ಕಾರ್ಯಗಳನ್ನು ಕಾರ್ಯಗತಗೊಳಿಸಲು ಅವರು ಅಹರ್ನಿಶಿ ದುಡಿದಿದ್ದಾರೆ, ಈಗಲೂ ದುಡಿಯುತ್ತಿದ್ದಾರೆ.

ಜನತೆಗೆ, ಮಕ್ಕಳ ಬಗೆಗೆ ತಿಳುವಳಿಕೆ ಹೇಳಿ ದನಕಾಯುವ, ಕುರಿಮೇಯಿಸುವ, ಕೂಲಿನಾಲಿಗೆ ಹೋಗುತ್ತಿದ್ದ ಮಕ್ಕಳನ್ನು ಶಾಲಾ ಮುಖಿಯಾಗಿ ಕಳುಹಿಸಿ ಶಿಕ್ಷಣ ಪಡೆಯುವಂತೆ ಶ್ರಮಿಸಿದ್ದಾರೆ. ಜನತೆಯ ಆರೋಗ್ಯದ ಬಗ್ಗೆ ಎಚ್ಚರಿಕೆ ವಹಿಸಿ ನೀರಿನಲ್ಲಿರುವ ಪ್ಲೋರೋಸಿಸ್ ಬಗೆಗೆ ಅರಿವು ಮೂಡಿಸಿದ್ದಾರೆ. ಕೃಷಿಕರ ಹಾಗೂ ಕೃಷಿಯ ಕ್ಷೇತ್ರದಲ್ಲಿಯೂ ಆರೋಗ್ಯಕರ ಚಿಂತನೆಯಿಂದ ದುಡಿದಿದ್ದಾರೆ.



ನಾರಾಯಣಸ್ವಾಮಿಯವರು ತಮ್ಮ ಕಾರ್ಯಕ್ಷೇತ್ರದ ಕರ್ಮಭೂಮಿಯನ್ನಾಗಿ ಆಯ್ಕೆ ಮಾಡಿಕೊಂಡಿದ್ದು ತಮ್ಮ ತವರು ಜಿಲ್ಲೆ ಕೋಲಾರವನ್ನು. ಇಂದು ಅದು ಕೋಲಾರ ಹಾಗೂ ಚಿಕ್ಕಬಳ್ಳಾಪುರವೆಂದು ಎರಡು ಜಿಲ್ಲೆಗಳಾಗಿವೆ. ಆ ಜಿಲ್ಲೆಗಳಲ್ಲಿ ಅಸ್ಪೃಶ್ಯತೆ ತಾಂಡವವಾಡುತ್ತಿತ್ತು. ಆ ಶೋಷಣೆಯಿಂದ ನೊಂದು-ಬೆಂದು ಹೋಗಿದ್ದ ದಲಿತ ಸಮಾಜದ ಜನತೆಗೆ ಸ್ಪಂದಿಸಿ ಅವರಲ್ಲಿ ದಲಿತ ಪ್ರಜ್ಞೆ ಮೂಡಿಸುವಲ್ಲಿ ಯಶಸ್ವಿಯಾದರು. ಹಿಂದುಳಿದ ಎಲ್ಲಾ ಜನಾಂಗವನ್ನು ಒಂದುಗೂಡಿಸುವಲ್ಲಿ 'ಅಹಿಂದ' - ಸಂಘಟನೆಯಲ್ಲಿ ಕ್ರಿಯಾಶೀಲರಾಗಿ ದುಡಿದಿದ್ದಾರೆ.

ಅವರೊಬ್ಬ ಸಾಹಿತಿಯೂ ಅಹುದು. ಅವರು ತಮ್ಮ ಎಲ್ಲ ರೀತಿಯ ಕಾರ್ಯಯೋಜನೆಗಳಿಗಾಗಿ ಕೆಲವು ಮಾಹಿತಿಪೂರ್ಣ ಪುಸ್ತಕಗಳನ್ನು ರಚಿಸಿದರು. ಆ ಮೂಲಕ ಸಾಹಿತ್ಯ ಲೋಕದಲ್ಲಿಯೂ ಪ್ರವೇಶಪಡೆದರು. ಹೆಸರಿಸಲೇಬೇಕಾದ ಅವರ ಕೆಲವು ಕೃತಿಗಳು ಹೀಗಿವೆ. ಪೋಷಕರ ಕೈಪಿಡಿ, ಅಂಬೇಡ್ಕರರ ವಾಣಿ, ದಲಿತ ಕೈಪಿಡಿ, ಭಂಗಿಜನ ಕಥಾ ಹಾಗೂ ನರಬಲಿ, ಕೆಲವು ಕೃತಿಗಳನ್ನು ಅನುವಾದಿಸಿ, ಅನುವಾದಕರಾಗಿಯೂ ಹೆಸರು ಗಳಿಸಿದ್ದಾರೆ. ಜ್ಞಾನಪೀಠ ಪ್ರಶಸ್ತಿ ವಿಜೇತ ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' - ಕಾದಂಬರಿಯನ್ನು ಕನ್ನಡದಿಂದ ತೆಲುಗಿಗೆ ಹಾಗೆಯೇ 'ದಿಗಂಬರ ಕವಿಗಳು', ರಾವಣಕಾಷ್ಠ ಕೃತಿಗಳನ್ನು ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ.

ಶ್ರೀಮತಿ ಜಮೀಲಾ ಎಂಬ ಲೈಂಗಿಕ ಕಾರ್ಯಕರ್ತೆಯ ಆತ್ಮಚರಿತ್ರೆಯನ್ನು, ಮಲೆಯಾಳಂ ಭಾಷೆಯಿಂದ ಇಂಗ್ಲೀಷಿಗೆ ತರ್ಜುಮೆಗೊಂಡ ಕೃತಿಯನ್ನು ಕನ್ನಡಕ್ಕೆ ತರ್ಜುಮೆ ಮಾಡಿದ್ದಾರೆ. ಆ ಪುಸ್ತಕವನ್ನು ಅಂದಿನ ಕೇಂದ್ರ ಸರ್ಕಾರದ ಮಂತ್ರಿಗಳಾಗಿದ್ದ ಶ್ರೀ ವೀರಪ್ಪಮೊಯ್ಲಿ ಅವರು ಬಿಡುಗಡೆಗೊಳಿಸಿದರು. ನಾನು ಆ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದೆನು. ಆ ಸಮಾರಂಭ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಸೆನೆಟ್ ಹಾಲಿನಲ್ಲಿ ಅತ್ಯಂತ ಅರ್ಥಪೂರ್ಣವಾಗಿ ನಡೆಯಿತು. ಎಲ್ಲರೂ ಕೃತಿಗಾರ್ತಿಯನ್ನೂ ಅನುವಾದಕರನ್ನೂ ಕೊಂಡಾಡಿದರು. ಆದರೆ ಅನುವಾದಕರಾದ ಶ್ರೀ ನಾರಾಯಣಸ್ವಾಮಿಯವರು ಎಲೆಮರೆಯ ಕಾಯಿಯಂತೆ ಸಭೆಯ ಪ್ರೇಕ್ಷಕರಲ್ಲಿ ಒಬ್ಬರಾಗಿ ಕುಳಿತಿದ್ದರು. ಸಮಾಜ ಹಾಗೂ ಪ್ರಜೆಗಳಿಗೆ ಅನುಕೂಲವಾಗುವಂತೆ 'ಪ್ರಜೆಗೆ ಮಾಹಿತಿ ಹಕ್ಕು' - ಪುಸ್ತಿಕೆಯನ್ನು (Right to Information Act) ಹೊರತಂದಿದ್ದಾರೆ.

ನಾರಾಯಣಸ್ವಾಮಿಯವರು Oil Pulling ಚಿಕಿತ್ಸೆಯನ್ನು ಕುರಿತು ಒಂದು ಆಂದೋಲನವನ್ನೇ ಮಾಡಿದರು. ಕನ್ನಡ ಪ್ರಭ ದಿನಪತ್ರಿಕೆ ಈ ವಿಷಯವನ್ನು ಕುರಿತಾದ ನಾರಾಯಣಸ್ವಾಮಿಯವರ ಅಂಕಣ ಬರಹಗಳನ್ನು ಸುಮಾರು ಮೂರು ವರುಷಗಳ ಕಾಲ



ನಿರಂತರವಾಗಿ ಪ್ರಕಟಿಸಿತು. ಈ ಬರಹಗಳ ಹಿಂದಿನ ಶ್ರಮ ಹಾಗೂ ಕಾಳಜಿಯನ್ನು ಜನತೆ ಚೆನ್ನಾಗಿ ಅರ್ಥಮಾಡಿಕೊಂಡಿತು.

ನಾರಾಯಣಸ್ವಾಮಿಯವರು ತಮ್ಮ ಅರಿವಿನ ಕ್ಷೇತ್ರ ವಿಸ್ತರಿಸಲು ಕೆಲವು ಕೇಂದ್ರಗಳನ್ನು ತಮ್ಮ ಸ್ವಂತ ಹಣವನ್ನು ವ್ಯಯಿಸಿ, ತೆಗೆದರು. ಅವುಗಳಲ್ಲಿ 'ಫ್ಲೋರೋಸಿಸ್ ನಿಯಂತ್ರಣ ಕೇಂದ್ರ, ಜಲ ಶಿಕ್ಷಣ ಕೇಂದ್ರ, ಅಹಿಂದ ಸಂಘಟನೆಯನ್ನು ಬಲಗೊಳಿಸಲು 'ಅಹಿಂದ' ಕೇಂದ್ರ, ಹೀಗೆ ಹಲವಾರು ಕೇಂದ್ರಗಳನ್ನು ಸ್ಥಾಪಿಸಿ, ಕಾರ್ಯೋನ್ಮುಖರಾದರು.

ನಾರಾಯಣಸ್ವಾಮಿಯವರ ಮೂರ್ತಿ ಚಿಕ್ಕದು, ಕೀರ್ತಿ ದೊಡ್ಡದು, ಅವರೊಬ್ಬ ಗ್ರಾಮೀಣ ಪ್ರತಿಭೆ, ಹಳ್ಳಿಯಿಂದ ದಿಲ್ಲಿಯ ಕಡೆಗೆ ಓಡುವವರೇ ಹೆಚ್ಚಿನ ಸಂಖ್ಯೆಯಲ್ಲಿ ಇರುವಾಗ ಇವರು ದಿಲ್ಲಿಯನ್ನು ಬಿಟ್ಟು ಹಳ್ಳಿಯ ಕಡೆಗೆ ಮುಖ ಮಾಡಿದರು. ಗ್ರಾಮೀಣ ಜನರ ಬದುಕಿಗೆ ಬೆಳಕಾದವರು.

ಇವರು ಪ್ರಚಾರ ಪ್ರಿಯರಲ್ಲ. ಇವರು ಅಜ್ಞಾತ ಪ್ರಿಯರು. ಅಜಾತ ಶತ್ರುಗಳಿವರು. ಇವರು ಮಾಡಿದ ಮಾಡುತ್ತಿರುವ ಕಾರ್ಯಗಳು ಉತ್ತಮ ಪ್ರತಿಫಲಗಳನ್ನು ಕೊಟ್ಟಿದೆ, ಜನತೆಗೆ ನೆಮ್ಮದಿ, ಸಂತಸ ತಂದಿವೆ. ಕರ್ಮಯೋಗಿ ನಾರಾಯಣಸ್ವಾಮಿಯವರ ಜನಪರ ಸೇವೆ ಹೀಗೆ ಮುಂದುವರಿಯಲಿ, ಸಮಾಜಕ್ಕೆ ಒಳಿತಾಗಲಿ ಎನ್ನುವುದೇ ನನ್ನಂಥವರ ಹಾರೈಕೆ.








# ಗೌರಿಬಿದನೂರಿನ ಅನರ್ಘ್ಯ ರತ್ನ ಕೆ. ನಾರಾಯಣಸ್ವಾಮಿ

– ಡಾ. ಎಲ್. ಹನುಮಂತಯ್ಯ

ಸಾಹಿತಿಗಳು ಹಾಗೂ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ

ಕೆ. ನಾರಾಯಣಸ್ವಾಮಿಯವರು ಗೌರಿಬಿದನೂರಿನ ಅನರ್ಘ್ಯರತ್ನ. ಇಡೀ ತಮ್ಮ ಜೀವನವನ್ನು ಅಧ್ಯಾಪನದಲ್ಲಿ ತೊಡಗಿಸಿಕೊಂಡು ಸಾರ್ಥಕಪಡಿಸಿಕೊಂಡವರು. ಶ್ರೀಯುತರು ವಿದ್ಯಾರ್ಥಿಗಳನ್ನು ತಮ್ಮ ಆಸ್ತಿಯೆಂದು ಭಾವಿಸಿಕೊಂಡು ಅದನ್ನು ಬೆಳೆಸಿದವರು. ಅವರ ಎರಡನೆ ಆದ್ಯತೆಯ ಕ್ಷೇತ್ರ ಚಳವಳಿ. ಶೋಷಿತ ಸಮುದಾಯದ ಜೊತೆ ತಮ್ಮನ್ನು ಗುರುತಿಸಿಕೊಂಡು ಚಳವಳಿಯ ಭಾಗವಾಗಿ, ಅದರ ಚಿಂತಕರಾಗಿ ತೊಡಗಿಸಿಕೊಂಡ ಸಾವಿರಾರು ಯುವಕರಿಗೆ ಮಾರ್ಗದರ್ಶನ ಮಾಡಿದವರು. ಗೌರಿಬಿದನೂರು ಕರ್ನಾಟಕದ ಗಡಿಭಾಗ. ಆಂಧ್ರಪ್ರದೇಶದ ಗಡಿಭಾಗವಾದ್ದರಿಂದ ಕಮ್ಯುನಿಸ್ಟ್ ಚಳವಳಿಯ ಪ್ರಭಾವವಿದ್ದ ಪ್ರದೇಶ. ಎಪ್ಪತ್ತರ ದಶಕದಲ್ಲಿ ಅವಿಭಾಜ್ಯ ಕೋಲಾರ ಜಿಲ್ಲೆಯ ಭಾಗವಾಗಿದ್ದ ಗೌರಿಬಿದನೂರು ಚಿಕ್ಕಬಳ್ಳಾಪುರ ಸೇರಿದಂತೆ ಇಡೀ ಕೋಲಾರ ಜಿಲ್ಲೆಯ ದಲಿತ ಚಳವಳಿ ಕಮ್ಯುನಿಸ್ಟರಲ್ಲಿ ಮಾವೋವಾದಿಗಳ ಸೆರಗಿನಲ್ಲಿ ಸಿಕ್ಕಿಕೊಂಡಿತ್ತು. ಅದು ಮುಂದುವರಿದಿದ್ದರೆ ಕೋಲಾರದ ಆ ಭಾಗ ಕೆಂಪು ಪ್ರದೇಶವಾಗಿ ಮಾರ್ಪಡುತ್ತಿತ್ತು. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಕೆಲವು ಕ್ಷೇತ್ರಗಳಲ್ಲಿ ಆಗಾಗ ಕಮ್ಯುನಿಸ್ಟ್ ಶಾಸಕರು ಆಯ್ಕೆಯಾದರೂ ಚಳವಳಿಯಲ್ಲಿ ತೊಡಗಿಸಿಕೊಂಡಿದ್ದ ಯುವಕರು ಮಾವೋವಾದಿ ಚಿಂತನೆಯ ಪರವಾಗಿದ್ದರು. ವಿಶೇಷವಾಗಿ ದಲಿತ ಚಳವಳಿಯ ಸಹಸ್ರಾರು



ಯುವಕರು ಗದ್ದರ್ ಹಾಡಿಗೆ ಹೆಜ್ಜೆ ಹಾಕುತ್ತಿದ್ದರು. ಬಹುಶಃ ಕೆ. ನಾರಾಯಣಸ್ವಾಮಿಯಂತವರ ಪಾತ್ರ ಈ ಸಂದರ್ಭದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿತ್ತು. ಯುವಶಕ್ತಿಯನ್ನು ನಕ್ಸಲ್ ಚಿಂತನೆಯ ಕಡೆಗೆ ಕಳುಹಿಸದೆ ಪ್ರಜಾಹೋರಾಟಗಳಲ್ಲಿ ತೊಡಗಿಕೊಳ್ಳುವಂತೆ ಮಾಡುವಲ್ಲಿ ಅವರ ಪ್ರಭಾವವೂ ಇದೆ ಎಂಬುದರಲ್ಲಿ ಸಂಶಯವಿಲ್ಲ.

ನಾರಾಯಣಸ್ವಾಮಿಯವರು ಕೋಲಾರದ ಭಾಗದಲ್ಲಿ ಅತ್ಯಂತ ತುಟ್ಟಿಯಾದ ನೀರಿಗಾಗಿ ಹೋರಾಡಿದವರು. ಜಲತಜ್ಞರೆಂದೇ ಖ್ಯಾತಿ ಪಡೆದವರು. ನೂರಾರು ಕೆರೆಗಳನ್ನು ಹೊಂದಿದ್ದ ಕೋಲಾರ ಶ್ರಮಜೀವಿಗಳ ನಾಡು. ಹೈನುಗಾರಿಕೆಯಲ್ಲಿ ದಾಖಲೆಯ ಚರಿತ್ರೆ ಬರೆದ ಗಡಿನಾಡು. ತರಕಾರಿ ಬೆಳೆಯುವಲ್ಲಿ ಇಂದಿಗೂ ಕೋಲಾರ ಜಿಲ್ಲೆ ಮುಂಚೂಣಿಯಲ್ಲಿದೆ. ಆದರೆ, ನೀರಿನ ಸೆಲೆ ಬತ್ತಿ ಹೋಗುತ್ತಿದೆ. ಭೂದೇವಿಯ ಅಂತರಾಳದಿಂದ ನೀರು ಹುಡುಕುವ ಕೆಲಸ ಆರಂಭವಾದದ್ದೇ ಕೆರೆಗಳು ಬತ್ತಿ ಹೋದವು. ಆ ಭಾಗದಲ್ಲೆಲ್ಲಾ ಸಾವಿರದ ಐನೂರು ಅಡಿಯಷ್ಟು ಕೆಳಗಿನಿಂದ ನೀರು ಮೇಲೆತ್ತಿ ವ್ಯವಸಾಯ ಮಾಡಬೇಕಾದ ದೀನಸ್ಥಿತಿಯಿದೆ. ಬಡವರ್ಯಾರು ಬೋರ್‌ವೆಲ್ ಕೊರೆಸಿಕೊಳ್ಳಲಾಗದ ಪರಿಸ್ಥಿತಿ ನಿರ್ಮಾಣವಾಗಿದೆ. ಕೊರೆದರೂ ನೀರಿನ ಮೂಲ ಸೆಲೆಯೇ ಬತ್ತಿಹೋಗಿರುವ ದುರ್ಬರ ಪರಿಸ್ಥಿತಿ ಇದೆ. ಇದಕ್ಕೆ ಉತ್ತರ ಹುಡುಕುವ ಕೆಲಸದಲ್ಲಿ ತೊಡಗಿಕೊಂಡವರು ನಾರಾಯಣಸ್ವಾಮಿಯವರು. ಅನೇಕ ಆಧುನಿಕ ವಿಧಾನಗಳಿಂದ ನೀರನ್ನು ಬಳಸುವ ತಂತ್ರಜ್ಞಾನದ ಮೊರೆಹೋದವರೆಷ್ಟು? ಹಳೆಯ ನೀರಿನ ಮೂಲಗಳನ್ನು ಹುಡುಕುವಲ್ಲಿ ಕೆಲವರು ತೊಡಗಿಸಿಕೊಂಡರು. ಬೋರ್‌ವೆಲ್ ಮರುಪೂರೈಕೆಯಲ್ಲಿ ದಾರಿ ಕಂಡುಕೊಂಡವರು ಹಲವರು. ನೀರಿಗೆ ಹಾಹಾಕಾರ ಪ್ರಾರಂಭವಾದಾಗಿನಿಂದ ಈ ಸಮಸ್ಯೆ ನಿವಾರಿಸಿಕೊಳ್ಳಲು ಸರ್ಕಾರ ಮಾಡಬೇಕಾದ ಕಾರ್ಯಗಳೇನು ಎಂದು ಚಿಂತಿಸಿದವರೂ ಇದ್ದಾರೆ. ಈ ರೀತಿಯ ನೀರು ಹುಡುಕುವ, ನೀರನ್ನು ಮಿತವಾಗಿ ಬಳಸುವ, ನೀರನ್ನು ಸಂಗ್ರಹಿಸುವ ಅನೇಕ ಒಳದಾರಿಗಳನ್ನು ಯೋಚಿಸಿ ಕಾರ್ಯರೂಪಕ್ಕೆ ತಂದವರಲ್ಲಿ ನಾರಾಯಣಸ್ವಾಮಿ ಒಬ್ಬರು. ನಮ್ಮ ನಡುವೆ ಎಂದೂ ಪ್ರಚಾರಕ್ಕೆ ಬಾರದ, ಪ್ರಚಾರದಿಂದ ಪ್ರಶಸ್ತಿಗಳನ್ನು ಕೇಳದ ಕೆಲವೇ ಕೆಲವರಲ್ಲಿ ನಾರಾಯಣಸ್ವಾಮಿಯವರು ಒಬ್ಬರು. ಅವರನ್ನು ಕುರಿತು ತರುತ್ತಿರುವ ಅಭಿನಂದನಾ ಗ್ರಂಥಕ್ಕೆ ಬರೆಯುವುದು ಪುಣ್ಯದ ಕೆಲಸ. ಇಂತಹ ಮಾಲೆ ಹೆಣೆಯಲು ಅನೇಕರು ಶ್ರಮಿಸುತ್ತಿದ್ದಾರೆ. ಅದರಲ್ಲಿ ನನ್ನ ಬೆನ್ನುಹತ್ತಿ ಬರೆಸಿದವರು ಮ.ನಾ. ಕೃಷ್ಣಮೂರ್ತಿಯವರು. ಇದರಿಂದ ನನ್ನ ಕೆಲಸ ಸಾರ್ಥಕವಾಯಿತೆಂದು ಭಾವಿಸಿದ್ದೇನೆ. ವಯೋವೃದ್ಧರಾಗಿರುವ ಕೆ. ನಾರಾಯಣಸ್ವಾಮಿಯವರು ನೆಮ್ಮದಿಯ ಜೀವನ ಸಾಗಿಸಲಿ, ಯುವ ಜನಾಂಗಕ್ಕೆ ಮಾರ್ಗದರ್ಶನ ಮಾಡಲಿ. ನಾಡು ನುಡಿ ಕಟ್ಟುವಲ್ಲಿ ಅವರಿಗೆ ಶಕ್ತಿ ನೀಡಲಿ ಎಂದು ಹಾರೈಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.





08

# ಮನಮಂಥನದ ಮೌನಸಾಧಕ

– ಮ.ನಾ. ಕೃಷ್ಣಮೂರ್ತಿ
ಕಾದಂಬರಿಕಾರ ಹಾಗೂ ನಾಟಕಕಾರರು

ಮಹಾತ್ಮರ ಸಾನಿಧ್ಯ ಯಾವಾಗಲೂ ಸತ್ಪರಿಣಾಮಗಳನ್ನೇ ಉಂಟು ಮಾಡುತ್ತದೆ. ದಾರ್ಶನಿಕರ ಚಿಂತನೆಗಳು ಸಮಾಜವನ್ನು ತಿದ್ದಿ ತೀಡುತ್ತಾ ಸಮೃದ್ಧಿಯತ್ತ ಕೊಂಡೊಯ್ಯುತ್ತವೆ, ಸಂತರ ಮಾತುಗಳು ಯಾವಾಗಲೂ ತಂಪು ತಂಗಾಳಿಯ ಅನುಭವಗಳನ್ನು ನೀಡುತ್ತವೆ. ಸಾಧಕರ ನಡೆನುಡಿಗಳು ಸಮುದಾಯಕ್ಕೆ ಪ್ರೇರಣೆಗಳನ್ನು ನೀಡುತ್ತವೆ. ಮಾನವತಾವಾದಿಗಳ ದೃಷ್ಟಿಯು ಸದಾ ಅಂತಃಕರಣವನ್ನು ಸ್ಫುರಿಸುತ್ತಿರುತ್ತದೆ. ಮನುಕುಲದ ವಿಕಾಸದ ಹಾದಿಯಲ್ಲಿ ಇಂತಹ ಮಹಾತ್ಮರು, ದಾರ್ಶನಿಕರು, ಸಾಧುಸಂತರು, ಸಾಧಕರು, ಮಾನವತಾವಾದಿಗಳು ಆಯಾ ಕಾಲಘಟ್ಟಕ್ಕೆ ತಕ್ಕಂತೆ ವಿಭಿನ್ನ ಪ್ರದೇಶಗಳಲ್ಲಿ ಅವತರಿಸಿ ಸಮುದಾಯ ಪ್ರಜ್ಞೆಗಳನ್ನು ಬಿತ್ತುತ್ತಾ, ಸಮಾಜದ ಉನ್ನತೀಕರಣಕ್ಕೆ ಕಾರಣರಾಗುತ್ತಾ ಹೋಗುತ್ತಾರೆ. ಬಹುವಿಧತೆಯಲ್ಲಿ ಬಹುಪಕ್ವತೆಗಳನ್ನು ಪಸರಿಸುತ್ತಾ ಸಮಾಜದ ಏಳಿಗೆಯಲ್ಲಿ ಪ್ರಮುಖ ಪಾತ್ರಗಳನ್ನು ವಹಿಸುತ್ತಾರೆ. ಜೀವನ್ಮುಖತೆಯ ಪಾಠಗಳನ್ನು ಬೋಧಿಸುತ್ತಲೇ ಮಾನವೀಯತೆಯ ಸಿಂಚನವನ್ನು ಹರಡುತ್ತಾರೆ. ಆಯಾ ಪ್ರದೇಶದ ಭೌಗೋಳಿಕ, ಸಾಮಾಜಿಕ, ರಾಜಕೀಯ ಅವಶ್ಯಕತೆಗಳಿಗೆ ಅನುಗುಣವಾಗಿ ಉದಯವಾಗುವ ಇಂತಹ ಚೇತನಗಳು ಸಮಾಜದ ಬದುಕಿನಲ್ಲಿ ಬೆಳಕನ್ನು ಮೂಡಿಸುತ್ತವೆ. ಗಾಂಧಿ, ನೆಲ್ಸನ್ ಮಂಡೇಲ, ಕಾರ್ಲ್‌ಮಾರ್ಕ್ಸ್, ವಿವೇಕಾನಂದ, ಅರವಿಂದೋ ಘೋಷ್,



ಅಂಬೇಡ್ಕರ್, ಜ್ಯೋತಿ ಬಾಫುಲೆ, ನಾರಾಯಣ ಗುರು, ಪೆರಿಯಾರ್, ಕುವೆಂಪುರವರಂತಹ ಅದೆಷ್ಟೋ ಮಂದಿ ತಂತಮ್ಮ ಕ್ಷೇತ್ರಗಳಲ್ಲಿ ನಾನಾ ರೀತಿಯ ಚಿಂತನೆಗಳನ್ನು ಹರಡುವ ಮೂಲಕ ತಮ್ಮದೇ ಆದ ರೀತಿಯಲ್ಲಿ ಸಮಾಜೋದ್ಧಾರಕ್ಕೆ ಶ್ರಮಿಸಿದ್ದಾರೆ. ಹಾಗೆಯೇ ಒಂದು ಕುಗ್ರಾಮದಲ್ಲಿ ಹುಟ್ಟಿ, ಮಹಾನ್ ಚಿಂತಕರ, ಸಾಧಕರ, ದಾರ್ಶನಿಕರ ವಿಚಾರಧಾರೆಗಳನ್ನು ಆಳವಾಗಿ ಅಭ್ಯಸಿಸಿ, ಅವುಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಸರಳಾತಿಸರಳವಾಗಿ ಜೀವಿಸುತ್ತಿರುವ ಗಡಿನಾಡಿನ ಗಾಂಧಿ ಶ್ರೀಯುತ ಕೆ. ನಾರಾಯಣಸ್ವಾಮಿಯವರದು ಒಂದು ಅಪರೂಪದ ವ್ಯಕ್ತಿತ್ವ ಎನ್ನಲು ಅಡ್ಡಿಯಿಲ್ಲ. ಶ್ರೀಯುತ ಕೆ. ನಾರಾಯಣಸ್ವಾಮಿಯವರ ಕುರಿತಾಗಿ ಲೇಖನ ಬರೆಯಲು ಕುಳಿತಾಗ ಅವರ ವ್ಯಕ್ತಿತ್ವದ ಯಾವ ಅಂಶವನ್ನು ಮೊದಲು ಬರೆಯಬೇಕೆಂಬ ಜಿಜ್ಞಾಸೆ ಮೂಡಿ, ಹಲವು ದಿನಗಳ ಕಾಲ ಲೇಖನ ರಚನೆಯನ್ನು ಮುಂದೂಡುತ್ತಾ ಬಂದದ್ದು ಸುಳ್ಳಲ್ಲ.

ಹಿಂದೊಮ್ಮೆ ಗೆಳೆಯ ನಾಗರಾಜ ಗಾಣದ ಹುಣಸೆಯ ಒತ್ತಾಯದ ಮೇರೆಗೆ ವಾಲ್ಮೀಕಿಯ ಕುರಿತಾದ ಲೇಖನವೊಂದನ್ನು ಬರೆಯಲು ಕುಳಿತಾಗ ಇಂತದೇ ಜಿಜ್ಞಾಸೆ ಮನದಲ್ಲಿ ಮೂಡಿತ್ತು. ವಾಲ್ಮೀಕಿಯ ದಾರ್ಶನಿಕತೆ, ರಾಮರಾಜ್ಯ ಪರಿಕಲ್ಪನೆಯ ಅತ್ಯುತ್ಕೃಷ್ಟ ಆಡಳಿತ ಚತುರತೆ, ರಾಮನನ್ನೇ ಸೋಲಿಸುವ ಲವ-ಕುಶರನ್ನು ತಯಾರು ಮಾಡಿದ ಬಿಲ್ವಿದ್ಯಾ ಪಾರಂಗತ, ಆಚಾರ್ಯ, ವಿಶ್ವಕವಿ, ವಾಲ್ಮೀಕಿ ಬೆಳೆದರೂ ಹಠ ಬಿಡದೆ ತಪಸ್ಸು ಮಾಡಿದ ಹಠಯೋಗಿ, ಸೀತಾಮಾತೆಗೆ ಆಶ್ರಯ ನೀಡಿದ ಆಶ್ರಯದಾತ, ಇತ್ಯಾದಿ ಅನೇಕ ಅಂಶಗಳಲ್ಲಿ ಯಾವ ಅಂಶದತ್ತ ನನ್ನ ಲೇಖನಿ ಹರಿಸಬೇಕೆಂಬ ತಾಕಲಾಟದಲ್ಲಿ ಒಂದಷ್ಟು ದಿನಗಳು ಕಳೆದು ಹೋಗಿದ್ದವು. ಹಾಗೆಯೇ ಕೆ.ಎನ್ನೆಸ್‌ರವರ ಬಗೆಗೆ ಲೇಖನ ಬರೆಯಲು ಕುಳಿತಾಗ ಅವರ ಜೀವನ್ಮುಖತೆ, ಪ್ರತಿಭಾ ಶೋಧತೆ, ಕೆಲಸದ ಬದ್ಧತೆ, ಪ್ರೋತ್ಸಾಹಕತೆ, ಮಾರ್ಗದರ್ಶಿತ್ವ, ಜಲತಜ್ಞತೆ, ಪರಿಸರ ಪ್ರೇಮ, ಕೃಷಿ ಸಾಧಕತ್ವ, ಜಾಗೃತಿ ತತ್ವ, ದಲಿತ ಭ್ರಾತೃತ್ವ, ಸಂಘ ಸಖ್ಯತೆ, ಆಡಳಿತತತ್ವ, ಎಲ್ಲಕ್ಕಿಂತ ಹೆಚ್ಚಾಗಿ ಮಾನವೀಯ ಅಂತಃಕರಣ ಇವುಗಳಲ್ಲಿ ಯಾವ ಅಂಶವನ್ನು ಕುರಿತು ಲೇಖನ ಪ್ರಾರಂಭಿಸಬೇಕೆಂಬುದೇ ನನ್ನ ಹಲವು ದಿನಗಳ ಮನೋ ಹೋರಾಟಕ್ಕೆ ಕಾರಣವಾಗಿದ್ದದ್ದು ಸುಳ್ಳಲ್ಲ. ಆದರೂ "ಚಲನೆಯಿಲ್ಲದೆ ಗಮ್ಯ ತಲುಪದು, ಲೇಖನಿ ಹರಿಯದೆ ಕಾವ್ಯ ಮೂಡದು', ಹಾಗಾಗಿ ನನ್ನ ಅರಿವಿಗೆ ಸಿಲುಕಿದ, ಲೇಖನಿಗೆ ದಕ್ಕಿದ ಸಮುದ್ರದಷ್ಟು ಆಳ, ಹರಿವಿನ ನಾರಾಯಣಸ್ವಾಮಿಯವರ ಕುರಿತಾದ ಕೆಲವಷ್ಟೇ ಬಿಂದುಗಳನ್ನು ಈ ಲೇಖನದಲ್ಲಿ ಮೂಡಿಸಲು ಯತ್ನಿಸಿದ್ದೇನೆ. ಶ್ರೀಯುತ ಕೆ. ನಾರಾಯಣಸ್ವಾಮಿಯವರ ವ್ಯಕ್ತಿತ್ವ. ಆಲೋಚನಾ ವಿಧಾನ ಅದರ ಚಿಂತನೆಯ ಧಾಟಿ, ಕಾರ್ಯವೈಖರಿ, ನಡೆನುಡಿ, ಜೀವನ ವಿಧಾನ ಎಲ್ಲವೂ ನನ್ನ ಮೇಲೆ ಎಂತಹ ಗಾಢ ಪರಿಣಾಮ ಬೀರುತ್ತಾ ಹೋದವೆಂಬುದನ್ನು ಅಕ್ಷರಗಳಲ್ಲಿ ವಿವರಿಸಿ ಹೇಳಲು ಸಾಧ್ಯವಾಗುವುದಿಲ್ಲ.



ಪ್ರೀತಿಯ ಮೇಷ್ಟ್ರು ವ್ಯಕ್ತಿತ್ವವೇ ಹಾಗೆ, ತಮ್ಮ ವಿಚಾರಧಾರೆಗಳಿಂದ, ನಡೆನುಡಿಗಳಿಂದಲೇ ತಮ್ಮ ವಿದ್ಯಾರ್ಥಿಗಳಲ್ಲದವರಿಗೂ ಗುರುಗಳಾಗಿ ಬಿಡುತ್ತಾರೆ. ಮಾರ್ಗದರ್ಶಕರಾಗಿ ದಾರಿದೀಪವಾಗುತ್ತಾರೆ. ವಿದ್ಯಾರ್ಥಿ ಮತ್ತು ಶಿಕ್ಷಕರಿಗೆ ಮಾತ್ರವೇ ಅನ್ವಯಿಸುವ ಗುರು-ಶಿಷ್ಯ ಪರಂಪರೆಯನ್ನು ಮೀರಿನಿಲ್ಲುತ್ತಾರೆ. ಆ ಪರಂಪರೆಯ ಅರ್ಥವ್ಯಾಪ್ತಿಗಳ ಎಲ್ಲೆಗಳನ್ನು ದಾಟಿ ಸರ್ವವ್ಯಾಪಕತ್ವವನ್ನು ನೀಡುತ್ತಾರೆ. ಬುದ್ಧ-ಬಸವ, ಗಾಂಧಿ - ಅಂಬೇಡ್ಕರ್ ಇವರುಗಳು ಕೂಡಾ ತಮ್ಮ ವಿಚಾರಗಳನ್ನು ಎಲ್ಲರಿಗೂ ನೇರಾನೇರಿ ಬೋಧಿಸಲಿಲ್ಲ. ಆದರೆ ಅವರ ವಿಚಾರಧಾರೆಗಳು ಬೋಧಕ ಗುಣಗಳನ್ನು ಹೊಂದಿದ್ದರಿಂದ ಸಹಸ್ರಾರು ಮಂದಿ ಅವರ ಅನುಯಾಯಿಗಳಾದರು, ತಮ್ಮ ಗುರುಗಳೆಂದು ಸ್ವೀಕರಿಸಿದರು. ಮಹಾಭಾರತದಲ್ಲಿ ಕೂಡಾ ದ್ರೋಣಾಚಾರ್ಯ ನೇರವಾಗಿ ಏಕಲವ್ಯನಿಗೆ ವಿದ್ಯಾದಾನ ಮಾಡಲಿಲ್ಲ. ಆದರೆ ದ್ರೋಣನ ಮೂರ್ತಿಯನ್ನಿರಿಸಿಕೊಂಡೇ ಏಕಲವ್ಯ ಮಹಾನ್ ಬಿಲ್ಲುಗಾರನಾಗುತ್ತಾನೆ. ಈ ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಿದ ಅಗತ್ಯವೇನೆಂದರೆ ಶಾಲೆ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಎದುರಿಗೆ ನಿಂತು ಬೋಧನೆ ಮಾಡಿದರೆ ಮಾತ್ರವೇ ಗುರುಗಳಾಗುವುದಿಲ್ಲ. ತಮ್ಮ ಬಹುವಿಧ ವಿಚಾರಗಳಿಂದ ತಮ್ಮ ಶಿಷ್ಯರಲ್ಲದವರಿಗೂ ಕೂಡಾ ಗುರುಗಳಾಗಬಹುದು ಎಂಬುದನ್ನು ವಿವರಿಸಿ ಹೇಳಲು ಈ ಅಂಶಗಳನ್ನು ಪ್ರಸ್ತಾಪಿಸಬೇಕಾಯಿತು. ಹಾಗೆ ಶ್ರೀಯುತ ಕೆ. ನಾರಾಯಣಸ್ವಾಮಿಯವರು ಪ್ರತ್ಯಕ್ಷವಾಗಿ ಹಲವು ನೂರು ಮಂದಿಗೆ ಗುರುಗಳಾಗಿದ್ದರೂ, ಪರೋಕ್ಷವಾಗಿ ನನ್ನಂತಹ ಅದೆಷ್ಟೋ ಸಾವಿರ ಮಂದಿಗೆ ಗುರುಗಳಾಗಿ ಮಾರ್ಗದರ್ಶಕರಾಗಿ ನಿಲ್ಲುತ್ತಾರೆ. ಅವರ ಘನ ವ್ಯಕ್ತಿತ್ವದ ಕುರಿತು ಒಂದಿಷ್ಟು ಮಾತುಗಳನ್ನು ಹೇಳಲೇಬೇಕಿದೆ.

ನಾನು ಗೌರೀಬಿದನೂರು ತಾಲ್ಲೂಕಿನ ಕುಗ್ರಾಮವಾದ ಮಲ್ಲಸಂದ್ರದಲ್ಲಿ ಹುಟ್ಟಿ, ಗ್ರಾಮಾಂತರ ಪ್ರದೇಶದ ಅನಕ್ಷರಸ್ಥ ವಾತಾವರಣದಲ್ಲಿ ಬೆಳೆದವನು. ಅಕ್ಷರಗಳ ಕುರಿತಾಗಿ ಒಂದು ದಿವ್ಯ ಮೂಢತ್ವ ಇದ್ದಂತಹ ಪರಿಸರದಲ್ಲಿ ಬೆಳೆದ ನನಗೆ ಪ್ರಪಂಚದ ಎಂಟನೇ ಅದ್ಭುತದಂತೆ ಅದು ಹೇಗೋ ಸಾಹಿತ್ಯ ರಚನೆಯ ಹವ್ಯಾಸ ಅಂಟಿಕೊಂಡಿತು. ಕಾಲೇಜು ಅಭ್ಯಾಸ ಮುಗಿಸಿ ಬೆಂಗಳೂರು ಸೇರಿದ ನಂತರವಂತೂ ನನ್ನ ಲೇಖನಿ ಇನ್ನಷ್ಟು ವೇಗ ಪಡೆದುಕೊಂಡಿತ್ತು. ಹಾಗಾಗಿ ಹಲವಾರು ಕಾದಂಬರಿಗಳು, ಸಣ್ಣ ಕಥಾ ಸಂಕಲನಗಳು, ಕವನ ಸಂಕಲನಗಳು, ಮಕ್ಕಳ ಕಾದಂಬರಿಗಳು ನಾಟಕ ಸಂಕಲನ ಎಲ್ಲವೂ ರಚನೆಯಾಗಿ ರಾಜ್ಯಮಟ್ಟದಲ್ಲಿ ಒಂದಷ್ಟು ಹೆಸರು ತಂದುಕೊಟ್ಟವು. ನನ್ನ ಕಾದಂಬರಿಗಳನ್ನು ನಾಡಿನ ಪ್ರತಿಷ್ಠಿತ ಸಾಪ್ತಾಹಿಕಗಳು ಧಾರಾವಾಹಿಗಳಾಗಿ ಪ್ರಕಟಿಸಿದರೆ ನನ್ನ ಹಲವು ನಾಟಕಗಳನ್ನು ಆಕಾಶವಾಣಿ ಬೆಂಗಳೂರು ಕೇಂದ್ರವು ಧ್ವನಿ ಪ್ರಸಾರ ಮಾಡಿತು. ಆದರೆ ರಾಜ್ಯಮಟ್ಟದಲ್ಲಿ ನನ್ನ ಕಥೆ-ಕಾದಂಬರಿಗಳು ಏನೆಲ್ಲಾ ಸದ್ದು ಮಾಡಿದರೂ ನನ್ನ ಸ್ವಂತ ಹುಟ್ಟೂರಾದ



ಗೌರೀಬಿದನೂರಿನ ಮಟ್ಟಿಗೆ ನಾನು ಇನ್ನೂ ಅಪರಿಚಿತನಾಗಿಯೇ ಉಳಿದಿದ್ದೆ. ಇನ್ನಷ್ಟು ಮನಬಿಚ್ಚಿ ಹೇಳುವುದಾದರೆ ನನ್ನೂರಿನ ಜನ ನನ್ನನ್ನು ಗುರುತಿಸಲಿಲ್ಲ ಎಂಬ ಕೊರಗು ನನ್ನನ್ನು ಬಾಧಿಸುತ್ತಲೇ ಇತ್ತು! ಆಗಿನ್ನೂ ನನಗೆ ನಾರಾಯಣಸ್ವಾಮಿಯವರ ಆಪ್ತ ಪರಿಚಯ ಇರಲಿಲ್ಲ.

ಇದೇ ಸಮಯದಲ್ಲಿ ಕನ್ನಡ ಸಾಹಿತ್ಯ ವಲಯದ ದಿಗ್ಗಜರನೇಕರು ಸಾಹಿತ್ಯದ ಕಾರಣದಿಂದಾಗಿ ನನಗೆ ಪರಿಚಿತರಾಗುತ್ತಾ ಹೋದರು. ನಾಡೋಜ ಡಾ. ಕಮಲಾ ಹಂಪನಾ, ಹಂಪನಾಗರಾಜಯ್ಯ, ಡಾ. ಎಲ್. ಹನುಮಂತಯ್ಯ, ಜಾಣಗೆರೆ ವೆಂಕಟರಾಮಯ್ಯ, ದಲಿತಕವಿ ಡಾ. ಸಿದ್ಧಲಿಂಗಯ್ಯ, ಪ್ರೊ. ಕೆ. ಮರುಳಸಿದ್ದಪ್ಪ, ಡಾ. ರಾಜಪ್ಪ ದಳವಾಯಿ, ಡಾ. ನಾಗರಾಜ್ ಹೀಗೆ ಪಟ್ಟಿ ಬೆಳೆಯುತ್ತಾ ಹೋದಂತೆ ಈ ಎಲ್ಲ ಮಹನೀಯರೂ ಸಂದರ್ಭಾನುಸಾರವಾಗಿ ನಾರಾಯಣಸ್ವಾಮಿಯವರ ಹೆಸರನ್ನು ಪ್ರಸ್ತಾಪಿಸುತ್ತಿದ್ದರಾದರೂ, ನನಗೆ ಆ ಕ್ಷಣಕ್ಕೆ ನಾರಾಯಣಸ್ವಾಮಿಯವರ ಕುರಿತಾಗಿ ಸಣ್ಣ ಕುತೂಹಲ ಮೂಡಿ ಮರೆಯಾಗಿ ಬಿಡುತ್ತಿತ್ತು. ಆದರೆ ಅದೇ ಸಮಯದಲ್ಲಿ ಜಾಣಗೆರೆ ವೆಂಕಟರಾಮಯ್ಯನವರ ಒತ್ತಾಸೆಯಿಂದಾಗಿ ನಾನು ಬರೆದ ಒಂದಷ್ಟು ಪುಸ್ತಕಗಳನ್ನು ಮುದ್ರಿಸಿ, ಪುಸ್ತಕ ಬಿಡುಗಡೆ ಸಮಾರಂಭ ಮಾಡಬೇಕೆಂದು ನಿರ್ಧಾರ ಮಾಡಿದ್ದರಿಂದಾಗಿ ಆ ಪ್ರಯತ್ನದಲ್ಲಿ ಒಂದಷ್ಟು ಪ್ರಕಾಶರನ್ನು ಭೇಟಿಯಾದೆ. ಸಾಹಿತ್ಯ ವಲಯದಲ್ಲಿ ಅದಾಗಲೇ ಒಂದಷ್ಟು ಹೆಸರು ಓಡಾಡುತ್ತಿತ್ತಾದ್ದರಿಂದ ಹಲವು ಪ್ರಕಾಶಕರು ನನ್ನ ಪುಸ್ತಕಗಳನ್ನು ಮುದ್ರಿಸಿಕೊಟ್ಟರು. ಒಟ್ಟು ಏಳು ಪುಸ್ತಕಗಳನ್ನು ಬೆಂಗಳೂರಿನ ಯವನಿಕಾ ಸಭಾಂಗಣದಲ್ಲಿ ಬಿಡುಗಡೆ ಮಾಡಲು ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಅಂದಿನ ಶಾಸಕರಾದ ಹಾಗೂ ಇಂದಿನ ವಿಧಾನಸಭಾ ಉಪಸಭಾಧ್ಯಕ್ಷರಾದ ಎನ್.ಹೆಚ್. ಶಿವಶಂಕರರೆಡ್ಡಿ, ಜಾಣಗೆರೆ ವೆಂಕಟರಾಮಯ್ಯ, ಇಂದಿನ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ. ಎಲ್. ಹನುಮಂತಯ್ಯ, ಬೆಂಗಳೂರು ವಿ.ವಿ.ಯ ಸಮಾಜಶಾಸ್ತ್ರ ವಿಭಾಗದ ಮುಖ್ಯಸ್ಥೆ ಡಾ. ಸಮತಾ ಬಿ. ದೇಶಮಾನೆ ಎಲ್ಲರೂ ಒಟ್ಟಾಗಿ ಕೆ. ನಾರಾಯಣಸ್ವಾಮಿಯವರ ಹೆಸರನ್ನು ಪ್ರಸ್ತಾಪಿಸಿದಾಗ ನನಗೆ ಮತ್ತಷ್ಟು ಕುತೂಹಲ ಕೆರಳಿತ್ತು. ಡಾ. ಸಮತಾದೇಶಮಾನೆಯವರಂತೂ "ಅಣ್ಣಾಜೀ, ನೀವು ನಾರಾಯಣಸ್ವಾಮಿ ಸರ್‌ನ ಭೇಟಿ ಮಾಡ್ಲೇ ಬೇಕು" ಎಂದು ಆಗ್ರಹಪೂರ್ವಕವಾಗಿ ಹೇಳಿದಾಗ ಆ ಕ್ಷಣವೇ ನಾರಾಯಣಸ್ವಾಮಿಯವರನ್ನು ಭೇಟಿ ಮಾಡಲು ತೀರ್ಮಾನಿಸಿಬಿಟ್ಟಿದ್ದೆ. ಹಾಗೆ ಪುಸ್ತಕ ಬಿಡುಗಡೆ ಸಮಾರಂಭ ಮುಗಿದ ಎರಡು ದಿನಗಳಲ್ಲಿ ನಾರಾಯಣಸ್ವಾಮಿಯವರನ್ನು ಭೇಟಿ ಮಾಡುವ ಏಕೈಕ ಉದ್ದೇಶದಿಂದಲೇ ಬೆಂಗಳೂರಿನಿಂದ ಹೊರಟು ಗೌರೀಬಿದನೂರು ತಲುಪಿದೆ. ಬಿಡುಗಡೆಯಾದ ಏಳು ಪುಸ್ತಕಗಳು ನನ್ನ ಕೈಯಲ್ಲಿದ್ದವು.



ಒಂದು ರೀತಿಯ ಆತಂಕವಂತೂ ಇದ್ದೇ ಇತ್ತು. ನಾರಾಯಣಸ್ವಾಮಿಯವರು ಪರಿಚಯವೇ ಇಲ್ಲದ ನನ್ನನ್ನು ಹೇಗೆ ಸ್ವೀಕರಿಸುವರೋ, ಒಂದು ವೇಳೆ ಅವರು ಸಿಡುಕು ಸ್ವಭಾವದವರಾಗಿದ್ದರೆ? ಮನವೆಂಬ ಮರ್ಕಟ ಏನೇನನ್ನೋ ಶಂಕಿಸುತ್ತಿತ್ತು. ಕೊನೆಗೆ ಹೇಗಾದರಾಗಲಿ ಎಂದು ಹೆಚ್. ನಾಗಸಂದ್ರದ ಕರೇತಿಮ್ಮಯ್ಯನವರಿಗೆ ಕರೆ ಮಾಡಿ, ನಾರಾಯಣಸ್ವಾಮಿಯವರನ್ನು ಭೇಟಿ ಮಾಡಿಸಬೇಕೆಂದು ಕೋರಿದೆ, ಅದಾಗಿ ಅರ್ಧಗಂಟೆಯಲ್ಲಿ ನಾನು ಕೆ. ನಾರಾಯಣಸ್ವಾಮಿಯವರ ಮುಂದಿದ್ದೆ. ಪುಸ್ತಕ ಸಂಗ್ರಹದ ರಾಶಿಯ ನಡುವಿನಲ್ಲಿ ಕುರ್ಚಿಯ ಮೇಲೆ ಕುಳಿತಿದ್ದ ನಾರಾಯಣಸ್ವಾಮಿಯವರು ಒಬ್ಬ ಸಂತನಂತೆ ಅಂದು ನನ್ನ ಕಣ್ಣಿಗೆ ಗೋಚರಿಸಿದ್ದರು. ನಮ್ಮನ್ನು ಆ ಪುಸ್ತಕದ ಕೋಣೆಗೆ ಸ್ವಾಗತಿಸಿದ ನಾರಾಯಣಸ್ವಾಮಿಯವರಿಗೆ ಕರೇತಿಮ್ಮಯ್ಯನವರು ಸಾಂಪ್ರದಾಯಿಕವಾಗಿ ನನ್ನನ್ನು ಪರಿಚಯಿಸಿದ್ದರು. ನಾನು ಬಿಡುಗಡೆಯಾಗಿದ್ದ ನನ್ನ ಏಳು ಪುಸ್ತಕಗಳನ್ನು ಅವರ ಕೈಗಿಟ್ಟಿದ್ದೆ.

ಅಚ್ಚರಿಯಿಂದ ನನ್ನತ್ತ ನೋಡಿ ಅವರ ಕಣ್ಣುಗಳಲ್ಲಿ ಆಕಸ್ಮಿಕವಾಗಿ ನಿಧಿ ಸಿಕ್ಕಷ್ಟೇ ಸಂತೋಷ ಉಕ್ಕಿದ್ದನ್ನು ನಾನು ಗಮನಿಸಿದ್ದೆ. ಬಹುಶಃ ವಾಲ್ಮೀಕಿ ನಾಯಕ ಜನಾಂಗದಲ್ಲಿ ಅದೂ ಬರದ ನಾಡು ಗೌರೀಬಿದನೂರಿನ ಮಲ್ಲಸಂದ್ರದಂತಹ ಕುಗ್ರಾಮದಲ್ಲಿ ಇಂತಹ ಬರಹಗಾರನೊಬ್ಬನಿದ್ದಾನಲ್ಲ! ಎಂಬ ಅಂಶ ಅವರ ಸಂತಸಕ್ಕೆ ಕಾರಣವಾಗಿರಬಹುದು. ಅವರ ಸಂತಸ ಅಷ್ಟಕ್ಕೆ ನಿಲ್ಲಲಿಲ್ಲ. ನನ್ನ ಎಲ್ಲಾ ಪುಸ್ತಕಗಳನ್ನು ಗೌರೀಬಿದನೂರಿನ ಅವರ ಆಪ್ತವಲಯಕ್ಕೆಲ್ಲಾ ಪರಿಚಯಿಸಿದ್ದರು. ಅದಾದ ಕೆಲವೇ ದಿನಗಳಲ್ಲಿ ಗೌರಿಬಿದನೂರಿನ ಸೂರ್ಯಕಲ್ಯಾಣ ಮಂಟಪದಲ್ಲಿ ಸನ್ಮಾನ ಸಮಾರಂಭ ಏರ್ಪಡಿಸಿದರು. ಅಂದು ಸನ್ಮಾನಿತರಾದ ನಾಲ್ಕು ಮಂದಿಯಲ್ಲಿ ನಾನೂ ಒಬ್ಬನಾಗಿದ್ದೆ. ವಾಲ್ಮೀಕಿ ಸಮುದಾಯದ ಮುಖಂಡ ಹಾಗೂ ರಾಜಕೀಯ ಧುರೀಣ ಶ್ರೀ ಅಶೋಕ್‌ಕುಮಾರ್, ಶ್ರೀ ಕರೇತಿಮ್ಮಯ್ಯ ಮತ್ತು ತಾಲ್ಲೂಕು ಶಿಕ್ಷಕ ಸಂಘದ ಅಧ್ಯಕ್ಷ ಸಿದ್ಧರಾಮಯ್ಯ ಅಂದು ನನ್ನೊಂದಿಗೆ ಸನ್ಮಾನಿತರಾದ ಪ್ರಮುಖರು ಅಂದು ನನಗಾದ ಸನ್ಮಾನ ನನ್ನ ತವರು ನೆಲದಲ್ಲಿ ನನ್ನ ಜನರಿಂದ ಸ್ವೀಕರಿಸಿದ ಮೊಟ್ಟ ಮೊದಲ ಸನ್ಮಾನ! ಹಾಗೆಯೇ ನನ್ನ ನೆಲದ ಜನರಿಗೆ ನನ್ನೊಳಗಿನ ಸಾಹಿತಿಯ ಮೊಟ್ಟ ಮೊದಲ ಪರಿಚಯ!!

ಅದಾದ ನಂತರ ನಾರಾಯಣಸ್ವಾಮಿಯವರ ಪ್ರೋತ್ಸಾಹ ಗುಣದ ಆಳ ಅಗಲ ವಿಸ್ತಾರದ ಅರಿವು ನನ್ನ ಗಮನಕ್ಕೆ ಬರತೊಡಗಿತ್ತು. ನಾಡಿನ ಅದೆಷ್ಟೋ ಸಾಹಿತ್ಯ ದಿಗ್ಗಜರಿಗೆ ನನ್ನನ್ನು ಪರಿಚಯಿಸಿದ ಅವರು, ನನ್ನ ಅರಿವಿಗೇ ಬಾರದಂತೆ ನನ್ನನ್ನು ಮೇಲುಸ್ತರಕ್ಕೆ ಕೊಂಡೊಯ್ಯುವ ಕೆಲಸ ಮಾಡಿದ್ದರು, ಒಮ್ಮೆಯಂತೂ ನನಗೇ ತಿಳಿಯದಂತೆ ಕರ್ನಾಟಕ ಸರ್ಕಾರ ಕೊಡಮಾಡುವ "ವಾಲ್ಮೀಕಿ ಪ್ರಶಸ್ತಿ"ಗೆ ಚಿಕ್ಕಬಳ್ಳಾಪುರ ಜಿಲ್ಲೆಯಿಂದ ನನ್ನ ಹೆಸರನ್ನು



## ಅಂತರಂಗದ ಸಂತ

ಕೆ. ನಾರಾಯಣಸ್ವಾಮಿಯವರ ಮಾರ್ಗದರ್ಶನಗಳು ಹಲವು ರೀತಿಗಳಲ್ಲಿ ಹೇಗೆ ಸಹಕಾರಿಯಾಗುತ್ತವೆ ಎಂಬುದಕ್ಕೆ ಒಂದು ನಿದರ್ಶನವನ್ನು ಇಲ್ಲಿ ಹೇಳಲೇಬೇಕು ಎನಿಸುತ್ತಿದೆ. ಸುಮಾರು 2010ನೇ ಇಸವಿಯ ಜನವರಿ ತಿಂಗಳ ಒಂದು ದಿನ. ಶ್ರೀ ಚಂದ್ರಶೇಖರಸ್ವಾಮಿಯವರು ದಲಿತ ಸಂಘರ್ಷ ಸಮಿತಿಯ ಮಾತೃ ಸಂಘಟನೆಯ ಸಂಚಾಲಕರು. ಇವರಿಗೆ ನನ್ನ ಸಾಹಿತ್ಯ ಕೃಷಿಯ ಬಗ್ಗೆ ಬಹಳಷ್ಟು ಅರಿವಿತ್ತು. ಇವರು ಕಾರ್ಯನಿಮಿತ್ತ ಒಮ್ಮೆ ಬೆಂಗಳೂರಿನ ಸುದ್ದಿ ವಾಹಿನಿಯೊಂದಕ್ಕೆ ನನ್ನನ್ನು ಕರೆದೊಯ್ದರು. ಅವರು ತಮ್ಮ ಸಂಘಟನೆಯ ಕುರಿತಾಗಿ ಅಲ್ಲಿನ ಉನ್ನತ ಅಧಿಕಾರಿಯೊಬ್ಬರೊಂದಿಗೆ ಮಾತನಾಡುತ್ತಾ ಕುಳಿತಿದ್ದರು. ತಮ್ಮ ಮಾತುಕತೆಯ ನಡುವೆ ಚಂದ್ರಶೇಖರ ಸ್ವಾಮಿಯವರು ನನ್ನತ್ತ ತಿರುಗಿ ಇವರು ಮ.ನಾ. ಕೃಷ್ಣಮೂರ್ತಿ ಎಂತಲೂ, ಬಹಳಷ್ಟು ಕತೆ, ಕಾದಂಬರಿ, ಕವನ ಸಂಕಲನ, ಸಣ್ಣ ಕಥಾ ಸಂಕಲನ, ಹೀಗೆ ಸಾಹಿತ್ಯದ ಹಲವು ಮಜಲುಗಳಲ್ಲಿ ಕೆಲಸ ಮಾಡಿದ್ದಾರೆ ಎಂತಲೂ ವಾಹಿನಿಯ ಉನ್ನತ ಅಧಿಕಾರಿಗೆ ಪರಿಚಯವನ್ನು ಮಾಡಿಸಿದ್ದರು. ಇದರಿಂದ ಉತ್ತೇಜಿತರಾದ ಆ ಉನ್ನತ ಅಧಿಕಾರಿ ಅವರ ಸುದ್ದಿ ವಾಹಿನಿಯಲ್ಲಿ ನನ್ನದೊಂದು ಪರಿಚಯಾತ್ಮಕ ಸಂದರ್ಶನವನ್ನು ನಿಗದಿಮಾಡಿಬಿಟ್ಟರು. ಅದು ಕೆಲವೇ ದಿನಗಳಲ್ಲಿ ನೇರ ಪ್ರಸಾರವೂ ಆಗಿಬಿಟ್ಟಿತು. ಇದನ್ನು ಟಿ.ವಿ.ಯಲ್ಲಿ ನೋಡಿದ ನನ್ನ ಹಿತೈಷಿಯೊಬ್ಬರು ದೂರವಾಣಿ ಕರೆಯನ್ನು ಮಾಡಿ ಸಂದರ್ಶನ ಚೆನ್ನಾಗಿ ಪ್ರಸಾರವಾಯಿತೆಂದೂ, ಬಹಳ ಸೊಗಸಾಗಿತ್ತೆಂದೂ ತಿಳಿಸಿ, ಈ ಕಾರ್ಯಕ್ರಮ ಪ್ರಸಾರ ಮಾಡಲು ವಾಹಿನಿಯವರಿಗೆ ತಾವು ಎಷ್ಟು ಹಣ ನೀಡಿರುವಿರೆಂಬ ವಿಚಾರ ತಮಗೆ ತಿಳಿದಿದೆಯೆಂದು ತಿಳಿಸಿದರು. ದಲಿತ ಪ್ರಜ್ಞೆಯ ಹಿನ್ನೆಲೆಯ ಅಧಿಕಾರಿಯ ಸದಾಶಯದಿಂದ ಪ್ರಸಾರವಾದ ಕಾರ್ಯಕ್ರಮಕ್ಕೆ ಹಣದ ಲೇಪನದ ಸ್ಪರ್ಶ ನೀಡಿದ ಆ ಹಿತೈಷಿ?ಯ ಮಾತು ಕೇಳಿದ ನನಗೆ ಆ ಕ್ಷಣಕ್ಕೆ ಯಾವ ರೀತಿ ಪ್ರತಿಕ್ರಿಯಿಸಬೇಕೆಂದು ತಿಳಿಯಲಿಲ್ಲ. ಆ ತಕ್ಷಣಕ್ಕೆ ನನ್ನ ದುಗುಡವನ್ನು ತೋಡಿಕೊಳ್ಳಲು ನೆನಪಾದ ಹೆಸರು ಕೆ. ನಾರಾಯಣಸ್ವಾಮಿ. ಕೂಡಲೇ ಅವರಿಗೆ ದೂರವಾಣಿ ಕರೆ ಮಾಡಿ ನಡೆದ ವಿಷಯವನ್ನೆಲ್ಲಾ ತಿಳಿಸಿದಾಗ ಅವರು ತಿಳಿಸಿದ ವಿಚಾರವೆಂದರೆ 'ಮುಂದುವರೆಯುತ್ತಿರುವ ಮಂದಿಯ ಮೇಲೆ ಹಲವು ಜನರ ಕಣ್ಣಿರುತ್ತದೆ. ಈ ರೀತಿಯ ಟೀಕೆಗಳು ಸರ್ವೇಸಾಮಾನ್ಯ. ಧೈರ್ಯಗೆಡಬೇಡಿ. ನಿಮ್ಮನ್ನು ಟೀಕೆ ಮಾಡಿದ ವ್ಯಕ್ತಿಯ ವಿದ್ಯಾಭ್ಯಾಸ, ಹಿನ್ನೆಲೆ, ಸಾಮಾಜಿಕ ಕಳಕಳಿ, ನಿಮ್ಮನ್ನು ವಿಮರ್ಶಿಸುವ ಅರ್ಹತೆ ಅವರಿಗಿದೆಯೇ ಎಂಬುದರ ಮೇಲೆ ಅವರ ಮಾತುಗಳಿಗೆ ಮೌಲ್ಯ ನೀಡಬೇಕೇ ಬೇಡವೇ ಎಂಬುದನ್ನು ನಿರ್ಧರಿಸಬೇಕಾಗುತ್ತದೆ. ಧೈರ್ಯವಾಗಿ ಮುಂದುವರೆಯಿರಿ' ಎಂದ ಅವರ ಆ ಮಾತುಗಳು ಇಂದಿಗೂ ನನ್ನ ಕಿವಿಯಲ್ಲಿ ರಿಂಗಣಿಸುತ್ತಲೇ ಇವೆ. ಅಂದಿನಿಂದ ನಾನು ನನ್ನ ಕೃತಿಗಳ, ಕಾರ್ಯಗಳ ಕುರಿತಾಗಿ ಬರುವ ವಿಮರ್ಶೆಗಳನ್ನು ಸಮಚಿತ್ತದಿಂದ ಸ್ವೀಕರಿಸುವುದನ್ನು ಕಲಿತಿದ್ದೇನೆ. ಸಾಮಾಜಿಕ ಜೀವನದಲ್ಲಿ ಬರಬಹುದಾದ ಹೊಗಳಿಕೆ - ತೆಗಳಿಕೆಗಳನ್ನು ಸಮಾನವಾಗಿ ಸ್ವೀಕರಿಸಿ, ಪ್ರತಿಕ್ರಿಯಿಸುವ ಮನೋಭಾವವನ್ನು ಬೆಳೆಸಿಕೊಂಡಿದ್ದೇನೆ.

– ಮ.ನಾ. ಕೃಷ್ಣಮೂರ್ತಿ

ನಾಮಿನೇಟ್ ಮಾಡಿಸಿದ್ದರು. ಕಾರಣಾಂತರಗಳಿಂದ ಆ ವರ್ಷ ವಾಲ್ಮೀಕಿ ಪ್ರಶಸ್ತಿಯನ್ನು ಸರ್ಕಾರ ಯಾರಿಗೂ ನೀಡಲಿಲ್ಲ. ಆದರೆ ನನ್ನ ಅಚ್ಚರಿಗೆ ಕಾರಣವಾದ ಅಂಶವೆಂದರೆ ಆ ಪ್ರಶಸ್ತಿಗೆ ನನಗಿಂತಲೂ ನೂರುಪಟ್ಟು ಹೆಚ್ಚು ಅರ್ಹತೆಯನ್ನು ಹೊಂದಿದ್ದ ನಾರಾಯಣಸ್ವಾಮಿಯವರೇ ಆ ಪ್ರಶಸ್ತಿಯನ್ನು ನನಗೆ ದೊರಕಿಸಬೇಕೆಂದು ಪ್ರಯತ್ನಿಸಿದ್ದು ಅವರೊಳಗಿನ ಹುಟ್ಟು ಪ್ರೋತ್ಸಾಹಕನನ್ನು ಪರಿಚಯಿಸಿತ್ತು. ಆದರೆ, ನಾರಾಯಣಸ್ವಾಮಿಯವರ ನಡೆ ನುಡಿಗಳು, ಜೀವನ ಕ್ರಮಗಳು ಹಾಗೂ ಮಾರ್ಗದರ್ಶನಗಳು ಆ ವೇಳೆಗಾಗಲೇ ನನ್ನ ಮೇಲೆ ಅಗಾಧವಾದ ಪರಿಣಾಮಗಳನ್ನು




ಬೀರಿದ್ದರಿಂದಾಗಿ ಪ್ರಶಸ್ತಿಗಳ ಮೋಹ ನನ್ನಲ್ಲಿ ಮಾಯವಾಗಿ ಹೋಗಿತ್ತು. ಅದಾದ ನಂತರದ ದಿನಗಳಲ್ಲಿ ನನ್ನ ಅನೇಕ ಪುಸ್ತಕಗಳು ಪ್ರಕಟವಾದವು. ಪ್ರಕಟವಾದ ಪ್ರತಿಯೊಂದು ಪುಸ್ತಕವನ್ನೂ ತರಿಸಿಕೊಳ್ಳುತ್ತಿದ್ದ ನಾರಾಯಣಸ್ವಾಮಿಯವರು ನನ್ನ ಬರವಣಿಗೆಗಳು ಬಲಪಂಥೀಯತೆಯ ಕಡೆಗೆ ವಾಲದಂತೆ ಎಚ್ಚರದ ಮಾತುಗಳನ್ನು ಹೇಳುತ್ತಿದ್ದರು. ರಾಷ್ಟ್ರ ನಿರ್ಮಾಣದ ಪರಿಕಲ್ಪನೆಗಳು, ಆರ್ಥಿಕ ಅಸಮಾನತೆಗಳು, ಪರಿಸರ ಸಂರಕ್ಷಣೆ ಪ್ರಗತಿಪರ ಕೃಷಿ ಪದ್ಧತಿಯ ಅಳವಡಿಕೆ. ರಾಜಕಾರಣದ ನ್ಯೂನ್ಯತೆಗಳು, ಜಲಸಂರಕ್ಷಣೆಯ ವಿಧಾನಗಳು, ಸಾಮಾಜಿಕ ಸಮಸ್ಯೆಗಳು, ಸಮಾಜ ಉನ್ನತೀಕರಣದ ಮಾರ್ಗೋಪಾಯಗಳು, ಮೂಢನಂಬಿಕೆಗಳ ನಿವಾರಣೋಪಾಯಗಳು ಇತ್ಯಾದಿ ವಿಚಾರಗಳ ಬಗ್ಗೆ ಗಂಟೆಗಟ್ಟಲೆ ವಿವರವಾಗಿ ಮಾತನಾಡುತ್ತಾ ನನ್ನೊಳಗಿನ ಲೇಖಕನನ್ನು ಹರಿತಗೊಳಿಸುವ ನಿಜಯತ್ನಗಳನ್ನು ಮಾಡಿದರು. ಅದಾಗಲೇ ಜನಪ್ರಿಯ ಕಾದಂಬರಿಕಾರನಾಗಿ ನಾಡಿನ ಪ್ರತಿಷ್ಠಿತ ಸಾಪ್ತಾಹಿಕಗಳ ಮೆಚ್ಚುಗೆಯ ಲೇಖಕನಾಗಿದ್ದ ನನ್ನನ್ನು, ತನ್ನ ಸುತ್ತಲಿನ ಜನಗಳ ಕುರಿತು, ತನ್ನ ನೋವುಗಳ ಕುರಿತು ಬರವಣಿಗೆಗೆ ಹಚ್ಚಿದ ಜಾಣಗೆರೆ ಮತ್ತು ಎಲ್. ಹನುಮಂತಯ್ಯನವರಷ್ಟೇ ಪ್ರಮುಖರಾಗಿ ನಾರಾಯಣಸ್ವಾಮಿಯವರೂ ಕಾರಣರಾಗಿದ್ದಾರೆ. ನನ್ನ ಕಾದಂಬರಿ, ಕಥೆ, ಕವನಗಳ ವಸ್ತುಗಳು ಎಡಪಂಥೀಯ ಧೋರಣೆಗಳನ್ನು ಅಪ್ಪಿಕೊಳ್ಳಲು, ಆ ಮೂಲಕ ಸಾಹಿತ್ಯದ ಅಗಾದಾರ್ಥಗಳನ್ನು, ಅದರ ನಿಜನೆಲೆಗಳನ್ನು ಗಂಭೀರವಾಗಿ ನೋಡುವಂತಾದದ್ದು ಕೂಡಾ ಕೆಎನ್ನೆಸ್‌ರವರ ಪ್ರಭಾವದಿಂದಲೇ ಎಂದು ಹೇಳಬಹುದು.

ನಾರಾಯಣಸ್ವಾಮಿಯವರೊಂದಿಗೆ ಮಾತಿಗೆ ಕುಳಿತರೆ ಅದೊಂದು ಅದ್ಭುತ ವಿಚಾರ ಸಾಮರ್ಥ್ಯ, ಚಿಂತನೆಗಳ ಮಹಾಪೂರವೇ ಹರಿಯುವ ಮಹಾನದಿ, ಅವರಲ್ಲಿ ಉಕ್ಕಿಹರಿಯುವ ಉನ್ನತ ವಿಚಾರಧಾರೆಗಳ ಭೋರ್ಗರೆತ ಎಂದೂ ಮುಗಿಯದ ಅಗಣಿತಗಣಿ, ಸಹನಾಮೂರ್ತಿಯಾಗಿ ಶಾಂತಸರೋವರದಂತಿರುವ ಅವರಲ್ಲಿ ಸಮಾಜೋದ್ಧಾರ, ದಲಿತೋದ್ಧಾರದ ಕುರಿತಂತೆ ಅಸಂಖ್ಯ ಪರಿಕಲ್ಪನೆಗಳಿರುವುದನ್ನು ಕಂಡು ಎಷ್ಟೋ ಬಾರಿ ಅಚ್ಚರಿಗೆ ಒಳಗಾಗಿದ್ದೇನೆ. ಅವರೊಳಗಿನ ಪುಸ್ತಕ ಪ್ರೇಮಿ ಸದಾ ಜಾಗೃತ, ಹೊಸ ಪುಸ್ತಕಗಳ ಕುರಿತು ನಿರಂತರ ಅವಗಾಹನೆ ವಿಶಿಷ್ಟವಾದ, ವಿಶೇಷ ಪರಿಕಲ್ಪನೆಗಳ ಪುಸ್ತಕಗಳ ರಾಶಿಯನ್ನೇ ಸಂಗ್ರಹಿಸಿರುವ ನಾರಾಯಣಸ್ವಾಮಿಯವರು ನಿರಂತರ ಪುಸ್ತಕ ಅನ್ವೇಷಕರು, ನಾರಾಯಣಸ್ವಾಮಿಯವರ ಕುರಿತು ನನಗೆ ಅಚ್ಚರಿಯೆನಿಸುವ ಸಂಗತಿಯೆಂದರೆ 79ರ ಈ ಇಳಿವಯಸ್ಸಿನಲ್ಲಿಯೂ ಯುವಕರನ್ನೂ ನಾಚಿಸುವಂತಹ ಅವರ ಕಾರ್ಯಗಳು, ನಿರಂತರ ಸಂಘಟನೆ ಅವರಿಗೆ ಪ್ರಕೃತಿದತ್ತವಾಗಿ ಬಂದ ಗುಣ. ಜಿಲ್ಲೆಯಾದ್ಯಂತ ರಾಜ್ಯದಾದ್ಯಂತ ಪ್ರವಾಸ ಮಾಡುತ್ತಾ ಜಲ ಸಂರಕ್ಷಣೆ, ಫ್ಲೋರೋಸಿಸ್ ಕುರಿತ







ಜನಜಾಗೃತಿ, ಆಯಿಲ್‌ಪುಲ್ಲಿಂಗ್ ಕುರಿತ ಕಾರ್ಯಕ್ರಮಗಳು, ಚಳವಳಿಗಳು, ಸಭಾ ಕಾರ್ಯಕ್ರಮಗಳು, ಇದರೊಂದಿಗೆ ಅನೇಕ ಮೌಲ್ಯಾಧಾರಿತ ಕೃತಿಗಳ ಕನ್ನಡಾನುವಾದ, ಎಲ್ಲವನ್ನೂ ನಡೆಸಿಕೊಂಡು ಹೋಗುವ ಅವರ ಛಾತಿ ನಿಬ್ಬೆರಗಾಗುವಂತದ್ದು. 'ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ'ವನ್ನು ಕನ್ನಡಕ್ಕೆ ಅನುವಾದಿಸಿದ ನಾರಾಯಣಸ್ವಾಮಿಯವರ ತಾಯ್ತನದ ಕರುಳು ಮನಮಿಡಿಯುವಂತದ್ದು, ರೇವತಿಯವರು ಬರೆದ 'ಹಿಜ್ರಾ ಎ ಲೈಫ್ ಸ್ಟೋರಿ' ಕೃತಿಯ ಬಿಡುಗಡೆಯ ಸಮಾರಂಭಕ್ಕೆ ಕೆಎನ್ನೆಸ್‌ರವರೊಂದಿಗೆ ಹೋಗಿದ್ದ ನನಗೆ ರೇವತಿ ಮತ್ತು "ಜ್ಞಾನ್ ಲೈಂಗಿಕ ತೊಳಿಲಾಳಿ' (ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನದ ಮೂಲ ರೂಪ)ಯ ಲೇಖಕಿ ನಳಿನಿ ಜಮೀಲಾರನ್ನು ಭೇಟಿ ಮಾಡುವ ಅವಕಾಶ ಬಂದಿತ್ತು. ತೃತೀಯ ಲಿಂಗಿಗಳ ಮತ್ತು ಲೈಂಗಿಕ ಕಾರ್ಯಕರ್ತರ ಕ್ಲಿಷ್ಟ ಮನಃಸ್ಥಿತಿಗಳ ಮತ್ತೊಂದು ಮುಖ ಅಂದು ಪರಿಚಯವಾಗಿತ್ತು. ಈ ವರ್ಗಗಳ ಕುರಿತು ನಿಮ್ಮ ಬರಹಗಳಲ್ಲಿ ಒಂದು ಸ್ಥಾನವಿರಲಿ ಎಂದು ಅಂದು ಕೆಎನ್ನೆಸ್ ಹೇಳಿದ್ದು ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಆದರೆ ಕೆಎನ್ನೆಸ್‌ರವರೊಂದಿಗೆ ಬೆಂಗಳೂರಿನಲ್ಲಿನ ಲೈಂಗಿಕ ಅಲ್ಪಸಂಖ್ಯಾತರು ಅಥವಾ ತೃತೀಯ ಲಿಂಗಿಗಳ ಸಂಘಟನೆಯಾದ "ಸಂಗಮ" ಸಂಸ್ಥೆಗೆ ಭೇಟಿ ನೀಡುವ ನನ್ನ ಅಭಿಲಾಷೆ ಇನ್ನೂ ಹಾಗೆಯೇ ಉಳಿದಿದೆ. ಬಹುಶಃ ಮುಂದಿನ ದಿನಗಳಲ್ಲಿ ಅದು ಸಾಧ್ಯವಾಗುತ್ತದೆ.

ಕೆಎನ್ನೆಸ್‌ರವರದು ಸದಾ ಎಚ್ಚರದ ಮನಃಸ್ಥಿತಿ. ಆದರೆ ಮೂಲತಃ ನನ್ನನ್ನು ನಾನು ಒಬ್ಬ ಭಂಡ ಧೈರ್ಯವನ್ನು ಹೊಂದಿದವನು ಎಂದುಕೊಂಡಿದ್ದೇನೆ. ಏಕೆಂದರೆ ಖಾಲಿ ಕೈಯಲ್ಲಿ ಕಾರ್ಯಕ್ರಮಗಳನ್ನು ಆಯೋಜಿಸಲು ಹೊರಟು ಬಿಡುವುದು, ಇದ್ದಕ್ಕಿದ್ದ ಹಾಗೆ ಪುಸ್ತಕ ಮುದ್ರಣ ಮಾಡಿಸಲು ನಿಂತು ಬಿಡುವುದು, ಹಣಕಾಸಿನ ಮುಂದಾಲೋಚನೆಗಳಿಲ್ಲದೆ ಟಿ.ವಿ. ಧಾರಾವಾಹಿ ಚಲನಚಿತ್ರ ನಿರ್ಮಾಣ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವುದು, ರಂಗಭೂಮಿಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ತಂಡ ಕಟ್ಟಿ ಹೊರಟು ಬಿಡುವುದು - ಇವುಗಳೆಲ್ಲ ನನ್ನ ನೆಚ್ಚಿನ ಹವ್ಯಾಸಿಗಳು ಅಥವಾ ನನ್ನ ಭಂಡ ಧೈರ್ಯದ ಪರಮಾವಧಿಯ ಅತಿರೇಖಗಳೆನ್ನಬಹುದು, ಆದರೆ ಪ್ರತಿಬಾರಿಯೂ ಕೆಎನ್ನೆಸ್‌ರವರು "ಅದೆಲ್ಲಾ ಖರ್ಚಿನ ಬಾಬತ್ತಪ್ಪಾ, ಹುಷಾರು, ಕೈ ಸುಟ್ಕೊಂಡ್ರೆ ಹೇಗೆ? ಎಚ್ಚರಿಕೆಯಿಂದ ಮಾಡ್ರಪ್ಪಾ" ಎಂದು ಎಚ್ಚರದಿಂದ ಹೆಜ್ಜೆಯಿಡುವಂತೆ ಎಚ್ಚರಿಸುತ್ತಾರೆ. ಅಂತಹ ಸಮಯದಲ್ಲೆಲ್ಲಾ ಇಂತಹ ನಿಜ ಮಾರ್ಗದರ್ಶಕರು ನನ್ನ ಜೀವನದಲ್ಲಿ ಒಂದೆರಡು ದಶಕಗಳ ಹಿಂದೆಯೇ ಪ್ರವೇಶಿಸಬಾರದಿತ್ತೇ ಎನಿಸುತ್ತದೆ. ಅವರ ಆ ಮನಃಪೂರ್ವಕ ಪ್ರೀತಿಗೆ ಒಮ್ಮೆ ಮನದಲ್ಲಿಯೇ ವಂದಿಸಿ ಮುಂದಡಿಯಿಡುತ್ತೇನೆ.

ಸಮಾಜಕ್ಕೆ ಏನೇನೂ ಕೊಡುಗೆ ನೀಡದ ಢಾಂಬಿಕ ಮಂದಿ ಬಹು ದೊಡ್ಡ ಸಮಾಜಸೇವಕರಂತೆ ವರ್ತಿಸುತ್ತಾ ವಿಧಾನಸೌಧದ ಕಾರಿಡಾರುಗಳಲ್ಲಿ, ಅಧಿಕಾರಸ್ಥರ



ನೆರಳುಗಳಲ್ಲಿ ಓಡಾಡುತ್ತಾ ಆಯಕಟ್ಟಿನ ಸ್ಥಾನಗಳಿಗಾಗಿ ಹಾತೊರೆಯುವುದನ್ನು ಕಂಡಿದ್ದೇನೆ. ನಿಜಸಾಧಕರೂ ನಾಚುವಂತೆ ಶುಭ್ರ ಶ್ವೇತ ಖಾದಿ ವಸ್ತ್ರಗಳು, ಚಿತ್ರ ವಿಚಿತ್ರವಾಗಿ ಜಡೆ, ಗಡ್ಡಗಳನ್ನು ಧರಿಸಿ ಓಡಾಡುವುದನ್ನೂ ನೋಡಿದ್ದೇನೆ. ಅಧಿಕಾರಕ್ಕಾಗಿ ಅಧಿಕಾರಸ್ಥರ ಓಲೈಕೆ ಮಾಡುವ ಮಂದಿ, ಅಧಿಕಾರ ದೊರೆತ ನಂತರ ತಮ್ಮ ಧ್ಯೇಯೋದ್ದೇಶಗಳನ್ನು, ತತ್ವಾದರ್ಶಗಳನ್ನು ಗಾಳಿಗೆ ತೂರಿದ ಸಂದರ್ಭಗಳಿಗೂ ಮುಖಾಮುಖಿಯಾಗಿದ್ದೇನೆ. ಆದರೆ ಚಳವಳಿಗಳು, ರೈತ ಸಮಸ್ಯೆಗಳು, ಜಲಸಂರಕ್ಷಣೆ, ಪರಿಸರ, ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಕುರಿತಂತೆ ಏನೆಲ್ಲಾ ಕೆಲಸಗಳಲ್ಲಿ ತೊಡಗಿಸಿಕೊಂಡು ದುಡಿಯುತ್ತಿರುವ ನಾರಾಯಣಸ್ವಾಮಿಯವರು ಸರ್ಕಾರ, ಅಧಿಕಾರಸ್ಥರ ಓಲೈಕೆಗೆ ಎಂದೂ ಮುಂದಾಗಲಿಲ್ಲ. ಕಾಯಕವೇ ಕೈಲಾಸ ಎಂಬ ಬಸವತತ್ವಕ್ಕೆ ಅನುಗುಣವಾಗಿ ಇಂದಿಗೂ ಸಮಾಜಸೇವೆಯಲ್ಲಿ ತೊಡಗಿದ್ದಾರೆ. ಮಾಡುವ ಮನಸ್ಸಿದ್ದರೆ ದಾರಿಗಳು ನೂರೆಂಟು ಎಂಬ ಮಾತಿನಂತೆ 'ರಿಟರ್ನ್ ಟು ದಿ ಸೊಸೈಟಿ' ಎಂಬ ತತ್ವಾದರ್ಶವನ್ನು ನಿಷ್ಠೆಯಿಂದ ಪಾಲಿಸುತ್ತಾ, ತಾವು ಸಮಾಜದಿಂದ ಪಡೆದ ಬುದ್ಧಿಜ್ಞಾನ, ವಿದ್ಯೆ, ಕೀರ್ತಿ ಎಲ್ಲವನ್ನೂ ನಾನಾ ಹಾದಿಗಳ ಮೂಲಕ ಸಮಾಜಕ್ಕೆ ಹಿಂತಿರುಗಿಸುವ ಪ್ರಾಮಾಣಿಕ ಪ್ರಯತ್ನದಲ್ಲಿ ತೊಡಗಿಕೊಂಡಿದ್ದಾರೆ.

ನಾರಾಯಣಸ್ವಾಮಿಯವರ ಕುರಿತು ಬರೆಯುವಾಗ ಇನ್ನೊಂದು ಮಾತನ್ನು ಇಲ್ಲಿ ಹೇಳಲೇಬೇಕಿದೆ. ಅದೇನೆಂದರೆ ಇವರಲ್ಲಿ ಒಡಮೂಡುವ ಚಿಂತನೆಗಳನ್ನು ಕಾರ್ಯರೂಪಕ್ಕೆ ತರುವ ಗುಂಪು, ಅವರ ವಿಚಾರಗಳನ್ನು ಅರ್ಥೈಸಿಕೊಂಡು ಕೆಲಸ ಮಾಡುವ ಅದನ್ನು ಯಶಸ್ವಿಗೊಳಿಸುವ ನಿವೃತ್ತ ಶಾಲಾ ಶಿಕ್ಷಕ ಕದಿರಪ್ಪ, ಇವರ ಕೆಲಸ ಬಹಳ ದೊಡ್ಡದು, ಚಳವಳಿಗಳಿಗೆ ನೀಡಿದಷ್ಟೇ ಪ್ರಾಮುಖ್ಯತೆಯನ್ನು ವಿದ್ಯಾಭ್ಯಾಸಕ್ಕೂ, ವಿದ್ಯಾಭ್ಯಾಸಕ್ಕೆ ನೀಡಿದಷ್ಟೇ ಮಹತ್ವವನ್ನು ರೈತರ ಆರ್ಥಿಕ ವಿಕಾಸಕ್ಕೂ ನೀಡಿದವರು. ಬಹುಶಃ ಇಪ್ಪತ್ತು ವರ್ಷಗಳ ಹಿಂದೆ ಪ್ರತಿಭಾ ಪುರಸ್ಕಾರದ ಪರಿಕಲ್ಪನೆಯನ್ನು ರಾಜ್ಯಕ್ಕೆ ನೀಡಿದುದು ಶ್ರೀಯುತ ನಾರಾಯಣಸ್ವಾಮಿಯವರು, ಅವರ ಕುರಿತು ಬರೆಯುತ್ತಾ ಕುಳಿತರೇ ಅನೇಕ ವಿಚಾರಗಳು ಮನದಲ್ಲಿ ಸುಳಿದು ತುಳುಕಾಡುತ್ತವೆ. ಈ ಮೊದಲೇ ಹೇಳಿದಂತೆ ನಾರಾಯಣಸ್ವಾಮಿ ಎಂಬ ಹೆಸರು ಅಗಾಧವಾದ ಸಾಗರ, ಅದರಲ್ಲಿ ಒಂದಷ್ಟು ಬಿಂದುಗಳ ಬಗ್ಗೆಯೇ ಮಾತನಾಡುವುದು, ಬರವಣಿಗೆಗೆ ಸಿಕ್ಕುವರೆಂಬ ಹುಂಬ ಧೈರ್ಯವನ್ನು ತೋರುವುದು ಸರ್ವಥಾ ಸಾಧುವಲ್ಲ.

ನನ್ನ ಹಾಗೂ ಕೆ. ನಾರಾಯಣಸ್ವಾಮಿಯವರ ಮನೋವೈಚಾರಿಕ ಸಂಬಂಧಗಳನ್ನು ಹೊರತುಪಡಿಸಿ ಒಬ್ಬ ಸಾಹಿತ್ಯ ಚಿಂತಕನಾಗಿ ನನ್ನ ದೃಷ್ಟಿಕೋನದಲ್ಲಿ ನೋಡುವುದಾದರೆ ಶ್ರೀಯುತ ಕೆ. ನಾರಾಯಣಸ್ವಾಮಿಯವರು ಅಂಬೇಡ್ಕರ್ ವಿಚಾರಧಾರೆಗಳನ್ನು ಅಳವಡಿಸಿಕೊಂಡ ಒಬ್ಬ ಸರಳ ಸಾಧಕನಾಗಿ ಕಂಡುಬರುತ್ತಾರೆ. ಮೂಢನಂಬಿಕೆಗಳನ್ನು



ವಿರೋಧಿಸುವ, ಸಮಾಜದಲ್ಲಿನ ಮೌಢ್ಯತೆಗಳನ್ನು ದೂರಮಾಡುವ ಸಮಾಜಸುಧಾಕರನಾಗಿ, ಬುದ್ಧ-ಬಸವರ ವಿಚಾರಧಾರೆಗಳನ್ನು ಪ್ರಚಾರಪಡಿಸುವ ಕಾರ್ಯಕರ್ತನಾಗಿ ಕಂಡುಬರುವ ಕೆಎನ್ನೆಸ್‌ರವರು ತಮ್ಮ ಬಹುಮುಖಿ ವ್ಯಕ್ತಿತ್ವದ ಮೂಲಕ ಗಮನಸೆಳೆಯುತ್ತಾರೆ. ರಕ್ತಚರಿತ್ರೆಯ ಇತಿಹಾಸವನ್ನು ಹೊಂದಿದ ಆಂಧ್ರದ ರಾಯಲಸೀಮೆಯ ಗಡಿಯುದ್ದಕ್ಕೂ ಪಸರಿಸಿರುವ ಅವಿಭಜಿತ ಕೋಲಾರ ಜಿಲ್ಲೆಯಾದ್ಯಂತ ಸಂಚರಿಸುತ್ತಾ ರಾಯಲಸೀಮೆಯ ರಕ್ತ ಸಂಸ್ಕೃತಿ ಅವಿಭಜಿತ ಜಿಲ್ಲೆಗೆ ಹರಡದಂತೆ ಯುವಶಕ್ತಿಯನ್ನು ಚಳವಳಿಗಳೆಡೆಗೆ ತಿರುಗಿಸಿದ ಪ್ರಮುಖರು, ಕುಗ್ರಾಮಗಳಲ್ಲಿ ಜನಿಸಿ ತಮ್ಮ ಪ್ರತಿಭೆಯನ್ನು ಮೆರೆದ ವಿದ್ಯಾರ್ಥಿಗಳನ್ನು ವೇದಿಕೆಗಳಲ್ಲಿ ಸನ್ಮಾನಿಸಿ ಆತ್ಮವಿಶ್ವಾಸವನ್ನು ತುಂಬಿದ ಪ್ರತಿಭಾ ಪ್ರೋತ್ಸಾಹಕರು, ರಾಷ್ಟ್ರದ ಮಂಚೂಣಿ ಸಮಾಜ ಸುಧಾರಕರನ್ನು ಭೇಟಿ ಮಾಡಿ ಅವರ ವಿಚಾರಧಾರೆಗಳನ್ನು ಅವಿಭಜಿತ ಜಿಲ್ಲೆ ಮತ್ತು ರಾಜ್ಯಕ್ಕೆ ಹರಡಿದವರು, ಬರದ ಜಿಲ್ಲೆಗೆ ಜಲಜಾಗೃತಿಯನ್ನು ಮೂಡಿಸಿ ಜಲಶಿಲ್ಪಿಯಾದವರು, ಫ್ಲೋರೋಸಿಸ್ ಎಂಬ ಮಾರಕ ರೋಗದ ಕುರಿತು (ನೀರಿನಲ್ಲಿ ಫ್ಲೋರೈಡ್ ಅಂಶ ಹೆಚ್ಚಾದಾಗ ಕಂಡುಬರುವ ರೋಗ) ಜನಜಾಗೃತಿ ಮೂಡಿಸಿದವರು, ಗೌರಿಬಿದನೂರಿನಲ್ಲಿ ಅವ್ಯಾಹತವಾಗಿ ನಡೆಯುತ್ತಿದ್ದ ಮರಳು ಗಣಿಗಾರಿಕೆಯ ವಿರುದ್ಧ ದನಿಯೆತ್ತಿದವರು, ಒಬ್ಬ ಸಾಹಿತಿಯಾಗಿ ಭಂಗಿಜನಕಥಾ, ನರಬಲಿ, ಅಂಬೇಡ್ಕರ್ ವಾಣಿ, ದಲಿತ ಕೈಪಿಡಿ, ದಿಗಂಬರ ಕವಿಗಳು ಮುಂತಾದ ಕೃತಿಗಳನ್ನು ಯಶಸ್ವಿಯಾಗಿ ಕನ್ನಡಕ್ಕೆ ಅನುವಾದಿಸಿದವರು, ಕೇರಳದ ಒಬ್ಬ ಲೈಂಗಿಕ ಕಾರ್ಯಕರ್ತೆ ತನ್ನ ಜೀವನಗಾಥೆಯನ್ನು ಬರೆದುಕೊಂಡಾಗ (ನಳಿನಿ ಜಮೀಲಾ ಬರೆದ ಜ್ಞಾನ್‌ಲೈಂಗಿಕ ತೊಳಿಲಾಳಿ) ತಮ್ಮ ಎಲ್ಲ ವರ್ಚಸ್ಸುಗಳನ್ನು ಬದಿಗಿರಿಸಿ, ಹೆಣ್ಣುಮಗಳೊಬ್ಬಳು ದಿಟ್ಟತನದಿಂದ ಬರೆದ ಪುಸ್ತಕ ಎಂಬ ಕಾರಣಕ್ಕೆ ಕನ್ನಡಕ್ಕೆ ಅತ್ಯಂತ ಜತನದಿಂದ ಅನುವಾದಿಸಿದವರು. ಮಾನವೀಯ ಮೌಲ್ಯಗಳಿಗೆ ಅತ್ಯಂತ ಮಹತ್ವ ನೀಡುತ್ತಾ ಜೀವಿಸುತ್ತಿರುವವರು.

ಇಂತಹ ಮೌನಸಾಧಕರು ಸಮುದಾಯಕ್ಕೆ, ಸಮಾಜಕ್ಕೆ ಅತ್ಯವಶ್ಯಕವಾಗಿ ಬೇಕಾದವರು, ಇವರ ಕುರಿತು ಒಂದು ಅಭಿನಂದನಾ ಗ್ರಂಥವನ್ನು ಹೊರತರಬೇಕೆಂದು ನಾಗರಾಜಪ್ಪ, ವೇಣುಗೋಪಾಲ್, ಡಾ. ಕೆ.ಪಿ. ನಾರಾಯಣಪ್ಪ, ಬೈಚಾಪುರ ಗಂಗಾಧರ ಮತ್ತು ನಾನು ಸೇರಿದಂತೆ ಒಂದಷ್ಟು ಸಮಾನ ಮನಸ್ಕರು ಪ್ರಯತ್ನಗಳನ್ನು ಆರಂಭಿಸಿದಾಗ ಸವಿನಯವಾಗಿ ನಿರಾಕರಿಸುತ್ತಲೇ ಬಂದರು. ಪ್ರಚಾರ ವಿಮುಖರು ಎರಡು ವರ್ಷಗಳ ಹಿಂದೆ ಸರಳ ನಡೆ ನುಡಿಯ ಸಾಕಾರಮೂರ್ತಿಯಂತಿರುವ ಶ್ರೀಯುತ ಕೆ. ನಾರಾಯಣಸ್ವಾಮಿಯವರಿಗೆ ಸಮರ್ಪಿಸಲಾಗುತ್ತಿರುವ ಈ ಅಭಿನಂದನಾಗ್ರಂಥ ಅತ್ಯಂತ ಅರ್ಥಪೂರ್ಣ ಕೆಲಸವೆಂದು ನಾನು ಭಾವಿಸುತ್ತೇನೆ. ಸನ್ಮಾನಗಳು, ಅಭಿನಂದನಾ ಸಮರ್ಪಣೆಗಳು



ವಾಣಿಜ್ಯೀಕರಣಗೊಂಡು ಅರ್ಥಕಳೆದುಕೊಳ್ಳುತ್ತಿರುವ ಈ ದಿನಮಾನಗಳಲ್ಲಿ ನಿಜ ಸಾಧಕರಿಗೆ ಸನ್ಮಾನಗಳು, ಅಭಿನಂದನೆಗಳು ವಿರಳವಾಗುತ್ತಿರುವ ಈ ಸಂದರ್ಭಗಳಲ್ಲಿ ಶ್ರೀಯುತ ನಾರಾಯಣಸ್ವಾಮಿಯವಂತಹ ಸಮುದಾಯ ಸೇವಕರಿಗೆ ಅಭಿನಂದನೆಗಳನ್ನು ಸಮರ್ಪಿಸುವುದು ಅತ್ಯಂತ ಅರ್ಥಪೂರ್ಣ ಕೆಲಸ ಎಂಬುದು ನನ್ನ ಮತ್ತು ನನ್ನಂತಹ ಅಸಂಖ್ಯಾತ ಸಮಾನ ಮನಸ್ಕರ ಅನಿಸಿಕೆ. ಶ್ರೀಯುತ ಕೆ. ನಾರಾಯಣಸ್ವಾಮಿಯವರು ಇನ್ನಷ್ಟು ಸಮಾಜಮುಖಿ ಕಾರ್ಯಗಳನ್ನು ಕೈಗೊಳ್ಳಲಿ ಮತ್ತು ಯುವ ಶಕ್ತಿಗೆ ಮಾರ್ಗದರ್ಶನ ನೀಡಲಿ, ಅವರ ಬರಹ, ಚಿಂತನೆಗಳು, ವಿಚಾರ ಧಾರೆಗಳು ಸಮಾಜದ ಯುವನಾಡಿಗಳಲ್ಲಿ ಪ್ರೇರಣೆ ತುಂಬಲಿ ಎಂಬುದು ನನ್ನ ಆಶಯ.





09




# ಅಪರೂಪದ ಚಿಂತಕ – ಹೊಸ ಪ್ರಯೋಗಗಳ ರೂವಾರಿ

– ಜಾಣಗೆರೆ ವೆಂಕಟರಾಮಯ್ಯ
ಸಾಹಿತಿಗಳು ಹಾಗೂ ಪತ್ರಕರ್ತರು

ಸರಿಸುಮಾರು 30 ವರ್ಷಗಳ ಮುಂಚೆ ತಮ್ಮ 'ಭಂಗಿ ಜನ ಕಥಾ' ಎಂಬ ಮಹತ್ವದ ಕೃತಿಯೊಂದರ ಮುದ್ರಣಕ್ಕಾಗಿ ಭೇಟಿಯಾದ ಪ್ರೊ. ಕೆ. ನಾರಾಯಣಸ್ವಾಮಿಯವರು ಇಂದಿಗೂ ನನ್ನಲ್ಲಿ ಅಚ್ಚಳಿಯದ ನೆನಪನ್ನು ಉಳಿಸಿದ್ದಾರೆ. ಕಾಲೇಜಿನಲ್ಲಿ ಉಪನ್ಯಾಸಕರಾಗಿ, ಪ್ರಾಂಶುಪಾಲರಾಗಿ, ಪದವಿ ಪೂರ್ವ ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ ನಾರಾಯಣಸ್ವಾಮಿಯವರು ಸದಾ ಶೋಷಿತ ಸಮುದಾಯದ, ರೈತಾಪಿ ಜನರ, ವಿದ್ಯಾರ್ಥಿ ಬಳಗದ ಹಿತ ಚಿಂತನೆಯನ್ನು ಮಾಡುತ್ತಾ ಕಾರ್ಯತತ್ಪರರಾದುದನ್ನು ಹೆಮ್ಮೆಯಿಂದ ನೆನೆಯುವಂತಹ ಕಾರ್ಯವನ್ನು ಮಾಡಿರುವುದು ಹೆಗ್ಗಳಿಕೆಯಾಗಿದೆ.

ಚಿಕ್ಕಬಳ್ಳಾಪುರ ಜಿಲ್ಲೆಯ ಗುಡಿಬಂಡೆ, ಬಾಗೇಪಲ್ಲಿ, ಗೌರಿಬಿದನೂರಿನಂತಹ ಬರಪೀಡಿತ ತಾಲ್ಲೂಕುಗಳಲ್ಲಿ ಭೂಮಿಯ ಅಂತರ್ಜಲವು ಗಣನೀಯವಾಗಿ ಕುಸಿತ ಕಂಡು, ಕೊಳವೆ ಬಾವಿಗಳ ಆಳದಿಂದ ದೊರೆಯುತ್ತಿದ್ದ ನೀರು ಜನರಲ್ಲಿ ಫ್ಲೋರೋಸಿಸ್ ಕಾಯಿಲೆಯನ್ನು ತಂದು ಜನರ ಬದುಕನ್ನು ನರಕಮಯವಾಗಿಸುತ್ತಿದೆಯೆಂಬುದನ್ನು ತಿಳಿದು, ಅದಕ್ಕೆ ಪರಿಹಾರ ಮಾರ್ಗಗಳನ್ನು ಹುಡುಕುವಲ್ಲಿ ನಾರಾಯಣಸ್ವಾಮಿಯವರು ಪ್ರಾಮಾಣಿಕ ಪ್ರಯತ್ನ ನಡೆಸಿದ್ದು ಸಾಮಾನ್ಯ ವಿಷಯವಲ್ಲ. ಈ ತಾಲ್ಲೂಕುಗಳಲ್ಲಿ ಜಲ ಸಂರಕ್ಷಣೆ ಕುರಿತಂತೆ ಗಂಭೀರ ಅಧ್ಯಯನ



ನಡೆಸಿ, ವ್ಯಾಪಕ ಪ್ರವಾಸ ಮಾಡಿ ರೈತಾಪಿ ಜನರಲ್ಲಿ ನೀರಿನ ಮೂಲಗಳ ಅಭಿವೃದ್ಧಿ ಕುರಿತಂತೆ ಜಾಗೃತಿ ಮೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ರೂವಾರಿಯಾಗಿ ಕಾರ್ಯ ನಿರ್ವಹಿಸಿದ್ದು ಕೂಡಾ ಮಹತ್ವದ ಸಂಗತಿ. ಫ್ಲೋರೋಸಿಸ್ ಕಾಯಿಲೆ ಕುರಿತಂತೆ ಗೋಡೆ ಬರಹಗಳ ಮೂಲಕ ವ್ಯಾಪಕವಾದ ಜನ ಜಾಗೃತಿಯುಂಟು ಮಾಡಿರುವುದನ್ನು ಅಲ್ಲಿಯ ಜನತೆ ಇಂದಿಗೂ ಮರೆಯುವಂತಿಲ್ಲ.

ಆರಂಭದಲ್ಲಿ ತಮ್ಮ ಉಪನ್ಯಾಸಕ ವೃತ್ತಿಯ ಜೊತೆಗೆ ದಲಿತ ಸಂಘಟನೆಯನ್ನು ಕಟ್ಟುವಲ್ಲಿ ಪ್ರಮುಖ ಪಾತ್ರ ವಹಿಸಿದ್ದ ನಾರಾಯಣಸ್ವಾಮಿಯವರು ದಲಿತ ಸಂಘರ್ಷ ಸಮಿತಿಯ ಸಂವಿಧಾನ ರಚನೆಯಲ್ಲಿ ದೊಡ್ಡ ಪಾತ್ರ ವಹಿಸಿದ್ದರು. ಅವಿಭಜಿತ ಕೋಲಾರ ಜಿಲ್ಲೆಯಲ್ಲಿ ದಸಂಸ ಸಂಘಟನೆಯ ಕಾರ್ಯದಲ್ಲಿ ಪ್ರಾಮಾಣಿಕವಾಗಿ ದುಡಿದು, ಜಿಲ್ಲೆಯಲ್ಲಿ ಪ್ರಬಲವಾಗಿ ಬೆಳೆಯಲು ನೆರವಾದುದು ಇಂದಿಗೂ ಭದ್ರ ಬುನಾದಿಯನ್ನುಳಿಸಿಕೊಳ್ಳಲು ನೆರವಾಗಿದೆ.

ಕೆ. ನಾರಾಯಣಸ್ವಾಮಿಯವರು ಸದಾ ಹೊಸ ಪ್ರಯೋಗಗಳ ರೂವಾರಿಯಾಗಿರುತ್ತಿದ್ದರು ಎಂಬುದು ಮಹತ್ವದ ಸಂಗತಿ. ಶಾಲೆಯಿಂದ ಹೊರಗುಳಿಯುವ ಮಕ್ಕಳನ್ನು ಶಾಲೆಗಳಿಗೆ ಕರೆತರುವ, ಆ ಮೂಲಕ ಆ ಕುಟುಂಬಗಳಲ್ಲಿ ಜಾಗೃತಿ ಮೂಡಿಸುವ, ಮಾರ್ಗದರ್ಶನ ನೀಡುವ ಕೆಲಸವನ್ನು ಏಕಾಂಗಿಯಾಗಿಯೇ ಮಾಡಿದ್ದು ದೊಡ್ಡ ಸಾಧನೆಯಾಯಿತು. ರೈತಾಪಿ ಜನರಲ್ಲಿ ಒಣ ಬೇಸಾಯದ ಪ್ರಾಮುಖ್ಯತೆಯ ಬಗ್ಗೆ ಅರಿವು ಮೂಡಿಸುವ ಕಾರ್ಯವನ್ನು ಚಿಕ್ಕಬಳ್ಳಾಪುರ ಜಿಲ್ಲೆಯಾದ್ಯಂತ ಕೈಗೊಂಡು ರೈತರ ನಡುವಿನ ಜನಾನುರಾಗಿ ರೈತ ಬಂಧುವೆನಿಸಿಕೊಂಡರು. ಸಿರಿಧಾನ್ಯಗಳ ಕುರಿತಾಗಿ ಅಧ್ಯಯನ ಕೈಗೊಂಡ ನಾರಾಯಣಸ್ವಾಮಿಯವರು, ಮಳೆ ಪ್ರಮಾಣ ಕಡಿಮೆಯಿರುವ ಪ್ರದೇಶದಲ್ಲಿ ಪರ್ಯಾಯ ಧಾನ್ಯಗಳನ್ನು ಬೆಳೆಯುವ ಸಂಬಂಧ ಗಂಭೀರವಾಗಿ ಅಧ್ಯಯನ ನಡೆಸಿ ರೈತರ ಪಾಲಿನ ಆಪತ್ಬಾಂಧವರಾದರು. ಆಯಿಲ್ ಪುಲ್ಲಿಂಗ್ ಮೂಲಕ ಅನೇಕ ಕಾಯಿಲೆಗಳನ್ನು ತಡೆಗಟ್ಟಬಹುದು ಎಂಬ ವಿಚಾರದ ಬಗ್ಗೆ ಅಧ್ಯಯನಪೂರ್ಣವಾದ ಬರಹಗಳನ್ನು ರಚಿಸಿ ಜನತೆಯಲ್ಲಿ ವಿಶೇಷ ಅರಿವು ಮೂಡಿಸಿದ್ದು ನಾರಾಯಣಸ್ವಾಮಿಯವರ ಸಾಧನೆಗಳಲ್ಲಿ ಪ್ರಮುಖವೆನಿಸಿದೆ.

ಮಹತ್ತರವಾದ ಆಶಯಗಳನ್ನು ಹೊತ್ತುಕೊಂಡು ದಸಂಸ ಕಟ್ಟಲು ಪ್ರಮುಖವಾಗಿ ಕೈ ಜೋಡಿಸಿದ್ದ ನಾರಾಯಣಸ್ವಾಮಿಯವರು, ಸಂಘಟನೆಯು ಉತ್ತುಂಗಕ್ಕೇರಿ ದೊಡ್ಡ ಶಕ್ತಿಯಾಗಿ ರೂಪುಗೊಂಡಾಗ ಮನಸಾರೆ ಅದಕ್ಕೆ ಬೆಂಬಲ ನೀಡುತ್ತಾ, ತಮ್ಮ ವೈಚಾರಿಕ, ವೈಜ್ಞಾನಿಕ ವಿಚಾರಧಾರೆಯನ್ನು ಸಂಘಟನೆಗೆ ಧಾರೆಯೆರೆಯುತ್ತಾ ಬಂದಿದ್ದುಂಟು. ಅದೇ ದೊಡ್ಡ ಸಂಘಟನೆ ರಾಜ್ಯಾವ್ಯಾಪಿ ಶೋಷಿತ ಸಮುದಾಯದ ಜಾಗೃತಿಗೆ ಕಾರಣವಾಗಿ,



ನಂತರದಲ್ಲಿ ಅದು ದಿಕ್ಕು ತಪ್ಪಿ ಹೊರಟಾಗ ಆತಂಕವಾದರೂ, ನಿರಾಶರಾಗದೆ ಅದರ ಮುಂಚೂಣಿ ನಾಯಕರಿಗೆ ತಿಳಿ ಹೇಳುತ್ತಾ, ಅದರ ದುರಸ್ತಿಗೆ ಪ್ರಾಮಾಣಿಕವಾಗಿ ಶ್ರಮಿಸಿದ್ದಲ್ಲದೆ ಇಂದಿಗೂ ಅದರ ಮೂಲ ಆಶಯ ಮತ್ತು ಶಕ್ತಿಯ ಬಗ್ಗೆ ಭರವಸೆಯನ್ನಿಟ್ಟುಕೊಂಡಿರುವುದು ಅವರಲ್ಲಿರುವ ನೈಜ ಕಾಳಜಿಗೆ ಸಾಕ್ಷಿಯಾಗಿದೆ.

ಇದಲ್ಲದೆ, ಗ್ರಾಮಾಂತರ ಪ್ರದೇಶದ ಜನರಿಗಾಗಿ ಪ್ರತಿಭಾ ಪುರಸ್ಕಾರ, ಹಸಿರು ಗ್ರಾಮ ಯೋಜನೆಯಂತಹ ಹಲವಾರು ಕಾರ್ಯಕ್ರಮಗಳ ಮೂಲಕ ಇಂದಿಗೂ ಜನಸಾಮಾನ್ಯರ ಒಳಿತಿಗಾಗಿ ದುಡಿಯುತ್ತಲೇ ಮುಂದುವರಿದಿರುವುದು ಅದ್ಭುತವಾದ ಕಾರ್ಯವಾಗಿದೆ.

'ಅಂಬೇಡ್ಕರ್ ವಾಣಿ', 'ದಲಿತ ಕೈಪಿಡಿ', 'ಭಂಗಿ ಜನ ಕಥಾ', 'ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ'ವೂ ಸೇರಿದಂತೆ ಹಲವಾರು ಮಹತ್ವದ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ, ಕನ್ನಡ ಸಾರಸ್ವತ ಲೋಕಕ್ಕೆ ದೊಡ್ಡ ಕೊಡುಗೆಯನ್ನು ನೀಡಿ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಬಾಗೇಪಲ್ಲಿಯ ಕಾಲೇಜಿನಲ್ಲಿ ಉಪನ್ಯಾಸಕರಾಗಿ, ಪ್ರಾಂಶುಪಾಲರಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸಿದ ನಾರಾಯಣಸ್ವಾಮಿಯವರು, ತಮ್ಮ ಕಾರ್ಯವನ್ನು ಬರೀ ವೃತ್ತಿಗೆ ಮಾತ್ರವೇ ಮಿತಿಗೊಳಿಸದೆ, ಅದೇ ಕಾಲೇಜಿನಲ್ಲಿ ಹಲವು ಸುಧಾರಣೆ, ಬದಲಾವಣೆಗಳನ್ನು ತಂದು ಇಲಾಖೆಯ ಮತ್ತು ಸರ್ಕಾರದ ಕಣ್ಣು ತೆರೆಸಿದ ಪ್ರಯುಕ್ತ, 2013ರಲ್ಲಿ ಸರ್ಕಾರವು ನಾರಾಯಣಸ್ವಾಮಿಯವರಿಗೆ 'ರಾಜ್ಯೋತ್ಸವ ಪ್ರಶಸ್ತಿ'ಯನ್ನು ನೀಡಿ ಗೌರವಿಸಿರುವುದು ಅಭಿಮಾನಪಡುವ ಸಂಗತಿಯಾಗಿದೆ.

ಇಂತಹ ಅಪರೂಪದ ಚಿಂತಕ, ಸಾಧಕ ನಾರಾಯಣಸ್ವಾಮಿಯವರು ನಮ್ಮ ನಡುವೆ ಇಂದಿಗೂ ಯುವಕರನ್ನು ನಾಚಿಸುವಂತೆ ಸಾಮಾಜಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗಿರುವುದನ್ನು ಕಂಡರೆ ವಿಸ್ಮಯವುಂಟಾ ಗುತ್ತದೆ. ವೈಯಕ್ತಿಕ ಸುಖ-ಸಂತೋಷಗಳಿಗಿಂತ ಸಮಾಜದ ಒಳಿತು, ಪ್ರಗತಿ, ನೆಮ್ಮದಿಯನ್ನು ಸದಾ ಹಂಬಲಿಸುತ್ತಾ ಕಾರ್ಯೋನ್ಮುಖವಾಗಿರುವ ನಾರಾಯಣಸ್ವಾಮಿಯವರು ನೂರ್ಕಾಲ ಇನ್ನಷ್ಟು ಹುರುಪು - ಶಕ್ತಿ - ಚೈತನ್ಯಗಳೊಡನೆ ಆರೋಗ್ಯಪೂರ್ಣ ಸಮಾಜವನ್ನು ಕಟ್ಟಲು ಶ್ರಮಿಸುತ್ತಿರಲಿ ಎಂದು ಆಶಿಸೋಣ.





10

# "ಕೆವೆನ್ನೆಸ್" ಎಂಬ ಅದ್ಭುತ ಜಗತ್ತು ಮತ್ತು ನಾನು

– ನಾಗರಾಜಪ್ಪ
ಜಂಟಿ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ

ಬದುಕೆಂಬುದು ಬಹು ದೊಡ್ಡ ವಿಶ್ವವಿದ್ಯಾಲಯ. ಅದು ಎಲ್ಲರಿಗೂ ಎಲ್ಲವನ್ನು ಕಲಿಸುತ್ತದೆ. ಎಲ್ಲರ ಅವಶ್ಯಕತೆಗಳಿಗೂ ಸ್ಪಂದಿಸುತ್ತದೆ ಅಥವಾ ನಿಸರ್ಗ ಹಾಗೇ ಸ್ಪಂದಿಸುವ ಜನರನ್ನು ಉದಯಿಸುವಂತೆ ಮಾಡುತ್ತದೆ. ಸ್ವಾತಂತ್ರ್ಯಪೂರ್ವ ಭಾರತೀಯರಿಗೆ ಗಾಂಧಿ, ಕೋಟ್ಯಾಂತರ ನೀಗ್ರೋಗಳಿಗೆ ನೆಲ್ಸನ್ ಮಂಡೇಲಾ, ವಿಶ್ವದ ಕೋಟ್ಯಾಂತರ ಅನಾಥರಿಗೆ ಮದರ್ ತೆರೇಸಾ, ಭಾರತೀಯ ದಲಿತರಿಗೆ ಅಂಬೇಡ್ಕರ್, ಹೀಗೆ ಆಯಾ ಪ್ರದೇಶಗಳ ಅವಶ್ಯಕತೆಗಳಿಗೆ ನಿಸರ್ಗ ಒದಗಿಸಿದ ಉತ್ತರಗಳು. ಹಾಗೆಯೇ ಬಾಂಗ್ಲಾದೇಶದ ಬಡವರಿಗೆ, ಬಡ ಮಧ್ಯಮವರ್ಗದ ಜನ ಸಣ್ಣ ವ್ಯಾಪಾರಗಳಿಗೆ, ಅವರ ಅವಶ್ಯಕತೆಗಳಿಗೆ ಉತ್ತರವಾಗಿ ಬಂದದ್ದು ಸಣ್ಣ ಕಿರುಸಾಲ ಯೋಜನೆ, ಈ ಯೋಜನೆಯ ಸೃಷ್ಟಿಕರ್ತ ಮಹಮದ್ ಯೂನಸ್ 28-06-1940ರಲ್ಲಿ ಬಾಂಗ್ಲಾದೇಶದಲ್ಲಿ ಜನಿಸಿದ ಮೊಹಮದ್ ಯೂನುಸ್ ಬಾಂಗ್ಲಾದೇಶದಲ್ಲಿ ಗ್ರಾಮೀಣ ಬ್ಯಾಂಕ್ ಸ್ಥಾಪಿಸಿ ಆ ಮೂಲಕ ಬಡಜನರ ವ್ಯಾಪಾರ ಅವಶ್ಯಕತೆಗಳಿಗೆ ತಕ್ಕಂತೆ ಕಿರುಸಾಲ ಯೋಜನೆ ರೂಪಿಸುವ ಮೂಲಕ ಬಾಂಗ್ಲಾದೇಶದ ಆರ್ಥಿಕತೆಯನ್ನು ಸದೃಢಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಧೀಮಂತ ಆರ್ಥಿಕ ತಜ್ಞ. ಕಿರು ಸಾಲಯೋಜನೆಯ ಮೂಲಕ ಬಡಜನರಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ತರುವ ಮೂಲಕ ಅವರಲ್ಲಿ ಸ್ವಾಭಿಮಾನವನ್ನು ತುಂಬಿದ ಯತ್ನಕ್ಕಾಗಿ 2006ರಲ್ಲಿ ಮೊಹಮದ್ ಯೂನುಸ್‌ಗೆ



ನೊಬೆಲ್ ಪ್ರಶಸ್ತಿ ದೊರೆಯಿತು. ಈ ವಿಷಯುವನ್ನು ಇಲ್ಲಿ ಪ್ರಸ್ತಾಪಿಸಿದ ಉದ್ದೇಶವೇನೆಂದರೆ ಬರದ ನಾಡೆಂದೇ ಖ್ಯಾತಿ ಪಡೆದ ಗೌರಿಬಿದನೂರಿನಲ್ಲಿ ಇಂತಹುದೇ ಒಂದು ಪ್ರಯತ್ನವನ್ನು ಶ್ರೀಯುತ ಕೆ. ನಾರಾಯಣಸ್ವಾಮಿಯವರು ಪ್ರಾರಂಭಿಸಿದ್ದರು. ಆದರೆ ಇಲ್ಲಿ ಒಂದು ಬದಲಾವಣೆಯೆಂದರೆ ಬಾಂಗ್ಲಾದೇಶದಲ್ಲಿ ಆರ್ಥಿಕ ಸ್ವಾವಲಂಬನೆಗಾಗಿ ಬಡಜನರಿಗೆ ಕಿರುಸಾಲದ ರೂಪವಾಗಿ ಹಣವನ್ನು ನೀಡಿದರೆ, ಇಲ್ಲಿ ಬಡಜನರ ಸ್ವಾವಲಂಬಿ ಬದುಕಿಗಾಗಿ ಹಣದ ಬದಲು ಕುರಿ - ಮೇಕೆಗಳನ್ನು ನೀಡಲಾಗಿತ್ತು. ಕೆ. ನಾರಾಯಣಸ್ವಾಮಿಯವರ ಕನಸಿನ ಕೂಸಾದ ಈ ಯೋಜನೆಯಲ್ಲಿ ತಾಲ್ಲೂಕಿನ ಯಾವುದಾದರೂ ಒಂದು ಗ್ರಾಮದ ಬಡಕುಟುಂಬವನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೀಲಿಸಿದ ನಂತರ ಗುರುತಿಸಿ, ಆ ಕುಟುಂಬಕ್ಕೆ ಕುರಿ, ಮೇಕೆಯನ್ನು ಉಚಿತವಾಗಿ ನೀಡುವುದು ಮತ್ತು ನಿರಂತರವಾಗಿ ಆ ಕುಟುಂಬದೊಂದಿಗೆ ಸಂಪರ್ಕದಲ್ಲಿದ್ದು ಪರಿಶೀಲಿಸುವುದು, ತದನಂತರ ಕುರಿ ಅಥವಾ ಮೇಕೆ ಮರಿ ಹಾಕಿದ ನಂತರ ಅವರಿಂದ ಒಂದು ಮರಿಯನ್ನು ವಾಪಸ್ಸು ಪಡೆದು ನಂತರದ ವರ್ಷದಲ್ಲಿ ಗುರುತಿಸಲ್ಪಟ್ಟ ಮತ್ತೊಂದು ಬಡಕುಟುಂಬಕ್ಕೆ ಆ ಮರಿಯನ್ನು ನೀಡುವುದು. ಹೀಗೆ ಈ ಸರಣಿ ಮುಂದುವರೆಯುತ್ತಾ ಹೋದಂತೆ ಕಾಲಾನುಕ್ರಮದಲ್ಲಿ ಜನರಲ್ಲಿ ಕುರಿ, ಮೇಕೆಗಳ ಮೂಲಕವೇ ಸಣ್ಣದಾಗಿ ಸ್ವಾವಲಂಬನೆಯನ್ನು ಸಾಧಿಸುವುದು, ಇಲ್ಲಿ ಸಹಾಯ ಸಣ್ಣದಿದ್ದರೂ ಪ್ರತಿಫಲ ಮಾತ್ರ ದೊಡ್ಡದಿರುವುದರಿಂದ ಇಂತಹ ಪ್ರಯತ್ನಕ್ಕೆ ಕೆಎನ್ನೆಸ್‌ರವರು ಕೈ ಹಾಕಿದ್ದರು ಎಂಬ ವಿಚಾರವೇ ನನ್ನನ್ನು ಅವರತ್ತ ಹೆಚ್ಚು ಆಕರ್ಷಿತರಾಗುವಂತೆ ಮಾಡಿತ್ತು.

ಇಷ್ಟಕ್ಕೂ ಕೆಎನ್ನೆಸ್‌ರವರ ಪರಿಚಯ ನನಗಾದದ್ದು ಕೂಡ ಒಂದು ಅನೂಹ್ಯ ಪರಿಸ್ಥಿತಿಯಲ್ಲಿ ಎಂದರೆ ತಪ್ಪಾಗಲಾರದು. 1985ರಲ್ಲಿ ನಾನು ವಾಣಿಜ್ಯ ತೆರಿಗೆ ಇಲಾಖೆಯ ಪರೀಕ್ಷಾರ್ಥ ಅವಧಿಯನ್ನು ಮುಗಿಸಿದ ನಂತರ ಸರ್ಕಾರ ನನ್ನನ್ನು ಮಂಗಳೂರು ವಿಭಾಗಕ್ಕೆ ನಿಯೋಜನೆ ಮಾಡಿತ್ತು. ನಾನು ಮಂಗಳೂರಿನಿಂದ ಆಗಾಗ ನನ್ನ ಸ್ವಗ್ರಾಮವಾದ ಗೌರಿಬಿದನೂರು ತಾಲ್ಲೂಕು ಮುದುಗೆರೆ ಗ್ರಾಮಕ್ಕೆ ಬಂದು ಹೋಗುತ್ತಿದ್ದೆ. ಅದೇ ರೀತಿ ಒಂದು ಭಾನುವಾರ ಮುದುಗೆರೆ ಗ್ರಾಮಕ್ಕೆ ಭೇಟಿ ನೀಡಿದ್ದಾಗ, ಗ್ರಾಮದ ಪ್ರಮುಖರೆಲ್ಲಾ ಒಟ್ಟಾಗಿ ಭೇಟಿ ಮಾಡಿ ಗ್ರಾಮದಲ್ಲಿ ಒಂದು ಪದವಿಪೂರ್ವ ಕಾಲೇಜನ್ನು ಪ್ರಾರಂಭಿಸಬೇಕೆಂದೂ, ಅದಕ್ಕೆ ಅಗತ್ಯವಾದ ಕಟ್ಟಡವನ್ನು ನಿರ್ಮಿಸಲು ಸಹಾಯ ಮಾಡಬೇಕೆಂದೂ ಕೋರಿದ್ದರು. ಅದಕ್ಕೆ ಸಮ್ಮತಿಸಿದ ನಾನು ಗ್ರಾಮದ ಹಿರಿಯರೊಂದಿಗೆ ಸೇರಿ ಕಾಲೇಜಿಗೆ ಅವಶ್ಯಕತೆ ಇರುವ ಕಟ್ಟಡ ನಿರ್ಮಾಣ ಕಾರ್ಯದಲ್ಲಿ ತೊಡಗಿಕೊಳ್ಳಲು ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿದೆ. ಆದರೆ ಅದೇ ಸಮಯದಲ್ಲಿ ಮುದುಗೆರೆಗೆ

ಸಮೀಪದಲ್ಲಿರುವ ಕೋಟಾಲದಿನ್ನೆಯಲ್ಲಿದ್ದ ಸರ್ಕಾರಿ ಪದವಿಪೂರ್ವ ಕಾಲೇಜಿಗೆ ಸಂಕಷ್ಟದ ಸಮಯವೊಂದು ಪ್ರಾರಂಭವಾಗಿತ್ತು.

ಹೆಸರಾಂತ ಶಿಕ್ಷಣತಜ್ಞ ಡಾ. ಹೆಚ್. ನರಸಿಂಹಯ್ಯನವರ ಹುಟ್ಟೂರಾದ ಹೊಸೂರು, ಗೌರಿಬಿದನೂರು ತಾಲ್ಲೂಕಿನ ಒಂದು ಹೋಬಳಿ ಕೇಂದ್ರ, ಇಲ್ಲಿನ ಸುತ್ತಲಿನ ಹತ್ತಾರು ಹಳ್ಳಿಗಳ ವಿದ್ಯಾರ್ಥಿಗಳು ಕಾಲೇಜು ಶಿಕ್ಷಣಕ್ಕಾಗಿ ತಾಲ್ಲೂಕು ಕೇಂದ್ರವಾದ ಗೌರಿಬಿದನೂರು ಕಾಲೇಜುಗಳನ್ನೇ ಅವಲಂಬಿಸಿದ್ದರು. ಹಾಗಾಗಿ ಹೊಸೂರು ಹೋಬಳಿ ಕೇಂದ್ರಕ್ಕೆ ಒಂದು ಸರ್ಕಾರಿ ಪದವಿಪೂರ್ವ ಕಾಲೇಜು ಬೇಕೆಂಬ ಇಲ್ಲಿನ ಜನರ ಬೇಡಿಕೆಗೆ ಮಣಿದು ಸರ್ಕಾರ ಹೊಸೂರಿಗೆ ಹತ್ತಿರದ ಕೋಟಾಲದಿನ್ನೆಗೆ ಸರ್ಕಾರಿ ಕಾಲೇಜನ್ನು ಮಂಜೂರು ಮಾಡಿತ್ತು. ಇದು ಒಂದು ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿತ್ತು. ಆದರೆ ಕಾರಣಾಂತರಗಳಿಂದ ಕಟ್ಟಡದ ಮಾಲೀಕರು ಕಟ್ಟಡವನ್ನು ತೆರವು ಮಾಡಲು ಕೋರಿದ್ದರಿಂದಾಗಿ ಕಾಲೇಜನ್ನು ಬೇರೆಡೆಗೆ ಸ್ಥಳಾಂತರಿಸಲು ಸರ್ಕಾರ ಯೋಚಿಸುತ್ತಿರುವುದಾಗಿ ತಿಳಿದು ಬಂದಿತ್ತು.

ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಅವಾಗ ತಾನೇ ಆಗಮಿಸಿದ್ದ ಶ್ರೀಯುತ ಕೆ. ನಾರಾಯಣಸ್ವಾಮಿಯವರು ಶತಾಯಗತಾಯ ಕಾಲೇಜನ್ನು ಹೊಸೂರು ಹೋಬಳಿಯಲ್ಲಿಯೇ ಉಳಿಸಲು ಯತ್ನಿಸುತ್ತಿದ್ದರು. ಹಾಗಾಗಿ ಅವರ ಪ್ರಯತ್ನದ ಫಲವಾಗಿ ಸರ್ಕಾರಿ ಪದವಿ ಪೂರ್ವ ಕಾಲೇಜು ಕೋಟಾಲದಿನ್ನೆಯಿಂದ ನಮ್ಮ ಗ್ರಾಮವಾದ ಮುದುಗೆರೆಗೆ ಸ್ಥಳಾಂತರಗೊಂಡು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನಡೆಯತೊಡಗಿತ್ತು. ಶಾಲಾ ಮಕ್ಕಳ - ಕಾಲೇಜು ವಿದ್ಯಾರ್ಥಿಗಳ ಪಾಠ ಪ್ರವಚನಗಳಿಗೆ ತೊಂದರೆಯಾಗದಂತೆ ಸರದಿಯ ಪ್ರಕಾರ ಶಾಲೆ ಹಾಗೂ ಕಾಲೇಜುಗಳು ನಡೆಯತೊಡಗಿದವು. ಕೆ. ನಾರಾಯಣಸ್ವಾಮಿಯವರ ಭಗೀರಥ ಯತ್ನದಿಂದಾಗಿ ಇಂದು ಸರ್ಕಾರಿ ಪದವಿ ಪೂರ್ವ ಕಾಲೇಜು ಕೋಟಾಲದಿನ್ನೆಯಲ್ಲಿಯೇ ಉಳಿದು, ಇದೀಗ ಸ್ವತಂತ್ರ ಕಟ್ಟಡವನ್ನೂ ಹೊಂದಿದೆ.

ಹೀಗೆ ಕೋಟಾಲದಿನ್ನೆ ಕಾಲೇಜಿಗೆ ಬಂದ ನಾರಾಯಣಸ್ವಾಮಿಯವರನ್ನು ಹತ್ತಿರದಿಂದ ಕಂಡು ಮಾತನಾಡಿಸುವ, ವಿಚಾರ ವಿನಿಮಯ ಮಾಡಿಕೊಳ್ಳುವ ಅವಕಾಶ ನನಗುಂಟಾಗಿತ್ತು. ಈ ಹಿಂದೆ ನಾನು ಗೌರಿಬಿದನೂರಿನ ನ್ಯಾಷನಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ದಸಂಸ ಮತ್ತು ಸಮುದಾಯ ಸಂಘಟನೆಯ ಹಲವು ಮಂದಿ ಪರಿಚಿತರಾಗಿದ್ದರು. ಹಾಗೆಯೇ ಕೆವಿನ್ನೆಸ್‌ರವರ ಬಗ್ಗೆಯೂ ಕೇಳಿದ್ದೆನಾದರೂ ತೀರ ಹತ್ತಿರದಿಂದ ಅವರನ್ನು ನೋಡಿ ಸಂಭಾಷಿಸುವ ಅವಕಾಶ ಒದಗಿರಲಿಲ್ಲ. ಆದರೆ ಅವರು ಕೋಟಾಲದಿನ್ನೆಗೆ ಬಂದ ನಂತರ ಅವರ ನಿಕಟವರ್ತಿಯಾಗಿದ್ದ ಅವರೊಂದಿಗೆ ಸಂಭಾಷಿಸುತ್ತಾ ಅವರಲ್ಲಿನ ಸಮಾಜದ



ಕುರಿತಾದ, ದೀನ ದುರ್ಬಲರ ಕುರಿತಾದ ವಿಚಾರಧಾರೆಗಳನ್ನು, ಅವರ ಬಗೆಗಿನ ಕಾಳಜಿಗಳನ್ನು ಅರಿಯುತ್ತಾ ಹೋದಂತೆ ಕೆಎನ್ನೆಸ್ ಎಂಬ ಜಗತ್ತು ನನ್ನನ್ನು ಪ್ರಭಾವಿಸತೊಡಗಿತ್ತು.

ಅದೇ ಸಮಯದಲ್ಲಿ ಚಿಕ್ಕಬಳ್ಳಾಪುರ ತಾಲ್ಲೂಕಿನ ಗುಡಿಬಂಡೆ ಹಾಗೂ ಬಾಗೇಪಲ್ಲಿ ತಾಲ್ಲೂಕುಗಳಲ್ಲಿ ಅಂತರ್ಜಲ ಮಟ್ಟ ಕುಸಿದು ನೀರಿನಲ್ಲಿ ಫ್ಲೋರೈಡ್ ಅಂಶ ಹೆಚ್ಚಾಗತೊಡಗಿತ್ತು. ಇದರಿಂದಾಗಿ ಜನರಲ್ಲಿ ಫ್ಲೋರೋಸಿಸ್ ಎಂಬ ವಿಚಿತ್ರ ಕಾಯಿಲೆ ಹುಟ್ಟಿಕೊಂಡು ಆತಂಕ ಮೂಡಿಸಿತ್ತು. ಈ ರೋಗದ ಬಗ್ಗೆ ಕೆಎನ್ನೆಸ್ ಜನರಲ್ಲಿ ಮೂಡಿಸಿದ ಜಾಗೃತಿ ನನ್ನನ್ನು ಬೆರಗುಗೊಳಿಸಿತ್ತು. ಫ್ಲೋರೋಸಿಸ್ ನಿವಾರಣೆಗಾಗಿ ಈ ಎರಡೂ ತಾಲ್ಲೂಕಿನ ಹಳ್ಳಿಹಳ್ಳಿಗಳನ್ನು ಸುತ್ತಿ, ಹಳ್ಳಿಯ ಮುಗ್ಧ ಜನರಲ್ಲಿ ಫ್ಲೋರೋಸಿಸ್ ರೋಗದ ಬಗ್ಗೆ ಅರಿವು ಮೂಡಿ ಆ ಪ್ರದೇಶದ ಜನರನ್ನು ಫ್ಲೋರೋಸಿಸ್‌ನ ಕ್ರೂರ ಬಾಹುಗಳಿಂದ ಮುಕ್ತಗೊಳಿಸಲು ಶ್ರಮಿಸಿದರು. ಇವರ ಈ ಪ್ರಯತ್ನಗಳಿಂದಾಗಿ ಸರ್ಕಾರ ಕಣ್ತೆರೆದು ಹಲವು ಪರಿಹಾರ ಕಾರ್ಯಗಳನ್ನು ರೂಪಿಸಿತು. ಈ ಸಂದರ್ಭದಲ್ಲಿ ಫ್ಲೋರೋಸಿಸ್ ಕುರಿತ ಲೇಖನಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸುವ ಮೂಲಕ ಗೋಡೆ ಬರಹಗಳ ಮೂಲಕ ಆ ಭಾಗದ ಜನರಲ್ಲಿ ಜಾಗೃತಿ ಮೂಡಿಸಿದ ಕೀರ್ತಿ ಕೆಎನ್ನೆಸ್‌ರವರಿಗೆ ಸಲ್ಲಬೇಕು.

ಶ್ರೀಯುತ ಕೆಎನ್ನೆಸ್‌ರವರೊಂದಿಗೆ ಒಮ್ಮೆ ನಾನು ಬೆಂಗಳೂರಿನ ಶಾಸಕರ ಭವನಕ್ಕೆ ಹೋಗಿದ್ದಾಗ, ಅಲ್ಲಿನ ಗ್ರಂಥಾಲಯದಲ್ಲಿ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರ ಸಮಗ್ರ ಕವನ ಸಂಕಲನವನ್ನು ಖರೀದಿಸಿದ್ದನ್ನು ಕಂಡು ಅವರು ಅಚ್ಚರಿಯಿಂದ ನನ್ನನ್ನು ನೋಡಿದ್ದರು. ಅಲ್ಲದೆ ನನ್ನ ಅಭಿರುಚಿ ಮತ್ತು ಆಸಕ್ತಿಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದನ್ನು ಕಂಡು ನನಗೂ ಅಚ್ಚರಿಯಾಗಿತ್ತು. ಅದುವರೆವಿಗೂ ಅವರು ನನ್ನನ್ನು ಕಡತಗಳ ನಡುವೆ ಕಳೆದು ಹೋಗಿರಬಹುದಾದ ಉನ್ನತ ಸರ್ಕಾರಿ ಅಧಿಕಾರಿಯಾಗಿರಬಹುದೆಂದೂ ಸಾಹಿತ್ಯ ಹಾಗೂ ಅಧ್ಯಯನಗಳ ಬಗ್ಗೆ ನಿರಾಸಕ್ತಿ ಹೊಂದಿರಬಹುದೆಂದೂ ತಿಳಿದಿದ್ದರು. ಆಗ ನಾನು ಕೇವಲ ಕಡತಗಳ ಜಗತ್ತಿಗೆ ಸೀಮಿತವಾಗಿಲ್ಲವೆಂದೂ, ಮನಸ್ಸನ್ನು ಉಲ್ಲಾಸಿತಗೊಳಿಸುವ, ಉನ್ನತೀಕರಿಸುವ, ಆಲೋಚನಾ ವಿಧಾನಗಳನ್ನು ರೂಪಿಸುವ ಸಾಹಿತ್ಯಕೃತಿಗಳನ್ನು ಅಭ್ಯಸಿಸುತ್ತೇನೆ, ಇಂತಹ ಹಲವು ಪುಸ್ತಕಗಳು ನನ್ನ ಪುಸ್ತಕ ಖಜಾನೆಯಲ್ಲಿವೆ ಎಂದು ತಿಳಿಸಿದಾಗ ಮೇಷ್ಟ್ರು ತುಂಬಾ ಸಂತೋಷಪಟ್ಟರು.

ಇದಲ್ಲದೆ ಶಿಕ್ಷಣ ಕ್ಷೇತ್ರದಲ್ಲಿ ತಮ್ಮ ಬದುಕನ್ನು ಸವೆಸಿರುವ ಮೇಷ್ಟ್ರು ತಮ್ಮ ಮಿತಿಯಲ್ಲಿ ವಿದ್ಯಾರ್ಥಿಗಳ ಅನುಕೂಲಕ್ಕಾಗಿ, ಅವರ ಶೈಕ್ಷಣಿಕ ಉನ್ನತೀಕರಣಕ್ಕಾಗಿ ಹಲವು ಕ್ರಮಗಳನ್ನು ತೆಗೆದುಕೊಂಡಿದ್ದರು. ಹಾಗೆ ಚೆನ್ನಾಗಿ ಓದಿ ಒಳ್ಳೆಯ ಅಂಕಗಳನ್ನು ಪಡೆದ



ವಿದ್ಯಾರ್ಥಿಗಳಲ್ಲಿ ನೈತಿಕ ಸ್ಥೈರ್ಯವನ್ನು ತುಂಬಲು ಪ್ರತಿಭಾ ಪುರಸ್ಕಾರ ಕಾರ್ಯಕ್ರಮವನ್ನು ಹಲವು ದಶಕಗಳ ಹಿಂದೆಯೇ ಪ್ರಾರಂಭಿಸಿದ್ದರು. ಬಹುಶಃ ಇಂದು ನಾವು ಕಾಣುತ್ತಿರುವ ಪ್ರತಿಭಾ ಪುರಸ್ಕಾರ ಕಾರ್ಯಕ್ರಮಗಳು ಮೂಲ ಸ್ವರೂಪದ ಪರಿಕಲ್ಪನೆಯನ್ನು ತಾಲ್ಲೂಕಿನಲ್ಲಿ ಪ್ರಥಮ ಬಾರಿಗೆ ಆರಂಭಿಸಿದವರೇ ಕೆಎನ್ನೆಸ್ ಎಂದು ಭಾವಿಸಿದ್ದೇನೆ. ಇಂತಹ ಅನೇಕ ಕಾರ್ಯಕ್ರಮಗಳನ್ನು ಆಯೋಜಿಸಿ ವಿದ್ಯಾರ್ಥಿಗಳಲ್ಲಿ ಆತ್ಮಸ್ಥೈರ್ಯವನ್ನು ತುಂಬಿದರು. ಅವುಗಳಿಗೆಲ್ಲಾ ನನ್ನ ಸಹಕಾರವನ್ನು ಬಯಸುತ್ತಿದ್ದುದಲ್ಲದೆ ಆ ಕಾರ್ಯಕ್ರಮಗಳಲ್ಲಿ ನನ್ನನ್ನು ಕೂಡಾ ಭಾಗಿಯಾಗುವಂತೆ ಮಾಡುತ್ತಿದ್ದರು. ಆದರೆ ಅಚ್ಚರಿಯ ಸಂಗತಿಯೆಂದರೆ ಅವರು ಆ ಎಲ್ಲಾ ಕಾರ್ಯಕ್ರಮಗಳ ಮುಂದಾಳತ್ವವನ್ನು ವಹಿಸಿಕೊಂಡು ಅವುಗಳನ್ನು ಅಚ್ಚುಕಟ್ಟಾಗಿ ನಿರ್ವಹಣೆ ಮಾಡುತ್ತಿದ್ದ ರೀತಿ ಮಾದರಿಯಾಗಿತ್ತು.

ನಾರಾಯಣಸ್ವಾಮಿಯವರ ಆರ್ಥಿಕ ಚಿಂತನೆ, ಸಾಮಾಜಿಕ ಕಳಕಳಿ, ಶಿಕ್ಷಣದ ಬಗೆಗಿನ ತುಡಿತ, ಪರಿಸರ ಪ್ರೇಮ ಆದರ್ಶವಾದವುಗಳು. ಇವರ ಚಿಂತನೆಗಳನ್ನು ಸಮಾಜ ಅರಿತು ಅಳವಡಿಸಿಕೊಂಡರೆ ಉತ್ತಮ ಸಮಾಜ ನಿರ್ಮಾಣವಾಗುವುದರಲ್ಲಿ ಸಂಶಯವಿಲ್ಲ. ಶ್ರೀಯುತ ಕೆಎನ್ನೆಸ್‌ರವರು ಸದಾ ನಮಗೆ ಮಾರ್ಗದರ್ಶಕರಾಗಿದ್ದುಕೊಂಡು ನಮ್ಮಲ್ಲಿ ಸಮಾಜಮುಖಿ ಚಿಂತನೆಗಳನ್ನು ಮೂಡಿಸುತ್ತಿರಲಿ ಎಂದು ಆಶಿಸುತ್ತೇನೆ.








# ಪ್ರೊ. ನಾರಾಯಣಸ್ವಾಮಿಯವರು ನಮ್ಮ ಜನಾಂಗಕ್ಕೆ ಮತ್ತು ನನಗೆ ಗುರುಗಳು

- ಡಾ. ಭೀಮರಾವ ಗಸ್ತಿ
ಕನ್ನಡಪ್ರಭ ವರ್ಷ ವ್ಯಕ್ತಿ ಪ್ರಶಸ್ತಿ ವಿಜೇತರು

ಉತ್ತರ ಕರ್ನಾಟಕದ ಬೆಳಗಾವಿ, ಬಿಜಾಪೂರ, ಧಾರವಾಡ ಮತ್ತು ಕಾರವಾರ ಈ ಜಿಲ್ಲೆಗಳು ಮೊದಲು ಮುಂಬೈ ಪ್ರಾಂತ್ಯಕ್ಕೆ ಒಳಗೊಂಡಿದ್ದವು. ಬೆಳಗಾವಿಯ ಕೆಲವು ಅಂತರದಿಂದಲೇ ಮಹಾರಾಷ್ಟ್ರದ ಸೀಮೆ ಪ್ರಾರಂಭವಾಗುತ್ತದೆ. ಆದ್ದರಿಂದ ಬೆಳಗಾವಿಯಲ್ಲಿ ಮರಾಠಿಗಳ ಪ್ರಭಾವ ಅತಿ ಹೆಚ್ಚು. ಬೆಳಗಾವಿ, ಹುಕ್ಕೇರಿ ಹಾಗೂ ಚಿಕ್ಕೋಡಿ ತಾಲ್ಲೂಕಿನ ಬಹು ಜನರು ಮರಾಠಿ ಭಾಷಿಕರು ಇರುವುದರಿಂದ ಈ ಭಾಗದಿಂದ ಮರಾಠಿ ಭಾಷಿಕ ಶಾಸಕರು ಆರಿಸಿ ಬರುತ್ತಿದ್ದರು.

ಬೆಳಗಾವಿ ಸಮೀಪದಲ್ಲಿಯೇ ನಮ್ಮ ಊರು. ನಮ್ಮ ಊರಲ್ಲಿ ಹಾಗೂ ನಮ್ಮ ಸುತ್ತಮುತ್ತಲಿನ ಎಲ್ಲ ಹಳ್ಳಿಗಳಲ್ಲಿ ಮರಾಠಿ ಭಾಷಿಕರೇ ಇರುವುದರಿಂದ ಇಲ್ಲಿ ಎಲ್ಲ ಶಾಲೆಗಳು ಮರಾಠಿ ಶಾಲೆಗಳೇ ಇದ್ದವು. ಆದರೆ ನಮ್ಮ ಜನರ ಮಾತೃಭಾಷೆ ಕನ್ನಡ ಆದರೂ ಕೂಡ ನಾವು ಮರಾಠಿ ಶಾಲೆಗೆ ಹೋಗಬೇಕಾಯಿತು. ಬೆಳಗಾವಿ ಸಮೀಪದಿಂದ ಗುಡ್ಡಗಾಡು ಭಾಗ. ಅತಿ ಹೆಚ್ಚಿಗೆ ಹುಕ್ಕೇರಿ ತಾಲ್ಲೂಕಿನಲ್ಲಿ ಕೂಡಾ ಗುಡ್ಡಗಾಡು ಪ್ರದೇಶ ಹೆಚ್ಚು.

ಈ ಗುಡ್ಡಗಾಡು ಪ್ರದೇಶದಲ್ಲಿ ವಾಸಿಸುವ ಜನರು ಕೂಡಾ ನಮ್ಮ ಬೇಡರ ಜನಾಂಗದವರು. ಈ ಗುಡ್ಡಗಾಡು ಭಾಗದಲ್ಲಿರುವ ನಮ್ಮ ಜನರು ಆದಿ ಮಾನವರ ಹಾಗೆ ಇರುತ್ತಿದ್ದರು. ಅಲ್ಲಿ ಯಾವುದೇ



ಸೌಕರ್ಯ ಇರಲಿಲ್ಲ. ಈ ಬೇಡ ಜನಾಂಗದವರಿಗೆ ಪೋಲೀಸರ ತೊಂದರೆ ಅತಿಯಾಗಿ ಇತ್ತು. ಈ ನಮ್ಮ ಜನರ ಜೀವನವೆಂದರೆ ಪೊಲೀಸ್ ಠಾಣೆ, ಕೋರ್ಟ್, ಕಛೇರಿ ಮತ್ತು ಜೈಲು. ಇದರಲ್ಲಿ ಸಿಕ್ಕು ಅವರ ಜೀವನ ಮುಗಿಯುತ್ತಿತ್ತು. ನಮ್ಮ ಯಾವುದೇ ಜನರು, ಯಾವ ಒಂದು ಕಾಯಿಲೆಯಿಂದಲೂ ಸಾಯುತ್ತಿರಲಿಲ್ಲ. ಆದರೆ ಅವರು ಪೊಲೀಸರ ಕಾಟದಿಂದ ಸಾಯುತ್ತಿದ್ದರು. ಇದನ್ನು ನಾನು ಚಿಕ್ಕವನಿದ್ದಾಗಿನಿಂದಲೂ ನೋಡುತ್ತಿದ್ದೆ. ಈ ರೀತಿ ಜೀವನ ನಮ್ಮ ಜನರಿಗೆ ಮಾತ್ರ ಇತ್ತು. ಬೇರೆ ಜಾತಿಯವರಿಗೆ ಇಂತಹ ಜೀವನ ಇರಲಿಲ್ಲ. ಇದೇ ನನಗೆ ಪದೇ ಪದೇ ಕಾಡುತ್ತಿತ್ತು. ನಾನು ಮಹಾವಿದ್ಯಾಲಯದಲ್ಲಿ ಶಿಕ್ಷಣ ಪಡೆಯುತ್ತಿದ್ದಾಗ ಮರಾಠಿ ಭಾಷೆಯಲ್ಲಿರುವ ಅನೇಕ ಗ್ರಂಥಗಳನ್ನು ಓದುತ್ತಿದ್ದೆ. ಅದರಲ್ಲಿ ಸ್ವಾತಂತ್ರ ಹೋರಾಟದಲ್ಲಿ ನಮ್ಮ ಜನರು ಮಾಡಿದ ಶೌರ್ಯ, ಪರಾಕ್ರಮಗಳ ಬಗ್ಗೆ ಓದಿ ನಾನು ತುಂಬಾ ಹೆಮ್ಮೆ ಪಡುತ್ತಿದ್ದೆ.

ಸ್ವಾತಂತ್ರ್ಯ ಹೋರಾಟದಲ್ಲಿ ನಮ್ಮ ಜನರು ಬ್ರಿಟೀಷರ ವಿರುದ್ಧ ಮೇಲಿಂದ ಮೇಲೆ ಯುದ್ಧ ಮಾಡುತ್ತಿದ್ದರು. ಆದ್ದರಿಂದ ನಮ್ಮ ಜನರನ್ನು ಅವರು ಕ್ರಿಮಿನಲ್ ಟ್ರಾಯಬ್ ಎಂದು ಘೋಷಿಸಿದರು. ಆದರಿಂದ ನಮ್ಮ ಜನರಿಗೆ ದಿನಾಲು ಊರಲ್ಲಿರಲು ಚಾವಡಿಗೆ ಹೋಗಿ, ಮುಂಜಾನೆ, ಮಧ್ಯಾಹ್ನ ಮತ್ತು ರಾತ್ರಿ ಹಾಜರಿ ಕೊಡಬೇಕೆಂದು ಕಡ್ಡಾಯ ಮಾಡಿದ್ದರು. ಹಾಜರಿ ಕೊಡಲಿಲ್ಲವೆಂದರೆ ಪೋಲೀಸರು ಅವರನ್ನು ಬಂಧಿಸಿ ಜೈಲಿಗೆ ಹಾಕುತ್ತಿದ್ದರು. ಈ ತೊಂದರೆ ಬೆಳಗಾವಿ, ಹುಕ್ಕೇರಿ, ಚಿಕ್ಕೋಡಿ ಹಾಗೂ ಅಥಣಿ ಈ ಭಾಗದಲ್ಲಿರುವ ಬೇಡರಿಗೆ ಅತಿ ಹೆಚ್ಚಾಗಿತ್ತು. ಆದರೆ ಬೆಳಗಾವಿ ಜಿಲ್ಲೆಯಲ್ಲಿರುವ ಇನ್ನುಳಿದ ಗೋಕಾಕ, ಸವದತ್ತಿ, ಬೈಲಹೊಂಗಲ, ರಾಮದುರ್ಗ ತಾಲ್ಲೂಕಿನಲ್ಲಿರುವ ಬೇಡರಿಗೆ ಈ ತೊಂದರೆ ಇರಲಿಲ್ಲ. ಇದು ನಾನು ಮಹಾವಿದ್ಯಾಲಯದಲ್ಲಿ ವಿದ್ಯಾಭ್ಯಾಸ ಮಾಡುತ್ತಿರಬೇಕಾದಾಗ ಕಂಡು ಬಂತು.

ನೂರಾರು ಜನರು ಈ ಪೊಲೀಸರ ಕಾಟದಿಂದ ಸಾಯುತ್ತಿದ್ದರು. ಈ ಆಗುತ್ತಿರುವ ಅನ್ಯಾಯದ ವಿರುದ್ಧ ಧ್ವನಿ ಎತ್ತಬೇಕೆಂದು ಯಾರಿಗೂ ಕೂಡ ಅನಿಸುತ್ತಿರಲಿಲ್ಲ. ಪೋಲಿಸರ ಕಾಟದಿಂದ ಮುಕ್ತಿಯೇ ಇಲ್ಲವೆಂದು ಅನಿಸುತ್ತಿತ್ತು.

ಮಹಾರಾಷ್ಟ್ರದಲ್ಲಿ ಅನೇಕ ಭಾಗಗಳಲ್ಲಿ ಅನೇಕ ಸಾಮಾಜಿಕ ಚಳುವಳಿಗಳು ನಡೆಯುತ್ತಿದ್ದವು. ನನ್ನ ವಿದ್ಯಾಭ್ಯಾಸ ಮುಗಿದ ನಂತರ ನಾನು ಹೈದರಾಬಾದಿನಲ್ಲಿ ಇರುವ ಕೇಂದ್ರ ಸರ್ಕಾರದ ಪ್ರಯೋಗ ಶಾಲೆಯಲ್ಲಿ ಸಂಶೋಧಕನಾಗಿ ಕೇವಲ ಒಂದು ವರ್ಷ ಸೇವೆ ಸಲ್ಲಿಸಿದೆ. ಆದರೆ ನನಗೆ ನಮ್ಮ ಜನರ ಮೇಲೆ ಆಗುತ್ತಿರುವ ಅನ್ಯಾಯಗಳನ್ನು ನೋಡಿ ಆ ಕೆಲಸಕ್ಕೆ ರಾಜೀನಾಮೆ ಕೊಟ್ಟೆ. ಕ್ರಿ.ಶ. 1974ರಿಂದ ನಾನು ಸಾಮಾಜಿಕ



ಚಳುವಳಿಯನ್ನು ಪ್ರಾರಂಭ ಮಾಡಿದೆ. ಜನಾಂಗದ ಮೇಲೆ ಆಗುತ್ತಿರುವ ಅನ್ಯಾಯದ ವಿರುದ್ಧ ಹೋರಾಟ ಕೈಗೊಂಡೆ. ಆದರೆ ನಮ್ಮ ಜನರಿಗೆ ಆಗ ತಿಳುವಳಿಕೆ ಬಹಳ ಕಡಿಮೆ ಇತ್ತು. ಎಲ್ಲ ಕಡೆ ಅಜ್ಞಾನ, ಅಂಧಶ್ರದ್ಧೆ ಹಾಗೂ ಬಡತನ ಎಲ್ಲ ಕಡೆ ತುಂಬಿ ತುಳುಕುತ್ತಿತ್ತು.

ಮರಾಠಿ ಜನರಿಗೆ ನಮ್ಮ ಜನರನ್ನು ಸಂಘಟಿಸಿ ಜಾಗೃತಿ ಮಾಡುವುದು ಇಷ್ಟವಿರಲಿಲ್ಲ. ಅವರಿಂದ ತುಂಬ ತೊಂದರೆಗಳು ಉಂಟಾಗುತ್ತಿದ್ದವು. ಅದರಂತೆ ಬೆಳಗಾವಿಯಲ್ಲಿ ಕೆಲವು ಮಂದಿ ನಮ್ಮ ಜನಾಂಗದ ನೌಕರಸ್ತರು ಇದ್ದರು. ಅವರಿಗೂ ಕೂಡ ಈ ಹೋರಾಟದ ಬಗ್ಗೆ ಹಿಡಿಸುತ್ತಿರಲಿಲ್ಲ. ಅವರು ನನ್ನ ಬಗ್ಗೆ ಇನ್ನೊಬ್ಬರ ಮುಂದೆ ಚೇಷ್ಟೆಯನ್ನು ಮಾಡುತ್ತಿದ್ದರು. ಆದರೂ ಕೂಡ ನನ್ನ ಕೆಲಸವನ್ನು ಮುಂದುವರೆಸುತ್ತಾ ಹೋದೆ. ಅನೇಕ ಗ್ರಾಮಗಳಲ್ಲಿ ಇರುವ ನಮ್ಮ ಜನರ ಸಭೆಗಳು ನಡೆಯುತ್ತಿದ್ದವು. ಅದರಲ್ಲಿ ನಾವು ಪೋಲಿಸರ ಅತ್ಯಾಚಾರ ವಿರುದ್ಧ ಧ್ವನಿ ಎತ್ತಿದ್ದೆವು. ಅದರಂತೆ ದಿನಪತ್ರಿಕೆಗಳಲ್ಲಿ ಈ ವಿಷಯದ ಬಗ್ಗೆ ಬರೆಯುತ್ತಿದ್ದೆ ಮತ್ತು ಅಧಿಕಾರಿಗಳಿಗೆ ಹಾಗೂ ಮಂತ್ರಿಗಳಿಗೆ ನಮ್ಮ ಮನವಿಗಳನ್ನು ಸಲ್ಲಿಸುತ್ತಿದ್ದೆವು. ಇದು ಅಖಂಡವಾಗಿ ನಡೆಯುತ್ತಿತ್ತು.

ಮಹಾರಾಷ್ಟ್ರದಲ್ಲಿ ಗುಡ್ಡಗಾಡು ಭಾಗದ ಆದಿವಾಸಿ ಜನರಿಗೆ ಸರ್ಕಾರದಿಂದ ಅನೇಕ ಸೌಲಭ್ಯಗಳು ಸಿಗುತ್ತಿದ್ದವು. ಅದನ್ನು ನೋಡಿ ನಾವು ಕೂಡ ಕ್ರಿ.ಶ. 1978ರಿಂದ ನಮ್ಮಲ್ಲಿರುವ ಗುಡ್ಡಗಾಡು ಭಾಗದ ಬೇಡರ ಜನರಿಗೆ ಸೆಡ್ಯೂಲ್ ಟ್ರೈಬ್ (ST) ಸೌಲಭ್ಯಗಳು ಸಿಗಬೇಕೆಂದು ಹೋರಾಟ ನಡೆಸಿದ್ದೆವು. ಉತ್ತರ ಕರ್ನಾಟಕದಲ್ಲಿ ಬೇಡರು ಹೆಚ್ಚಿನ ಪ್ರಮಾಣದಲ್ಲಿ ಇರುವರು. ಇವರಲ್ಲಿ ಕ್ರಿ.ಶ. 1978ರವರೆಗೆ ಡಿನೋಟಿಫೈಡ್ ಟ್ರೈಬ್ಸದಲ್ಲಿದ್ದರು. ಇದರಿಂದ ಸ್ವಲ್ಪ ಪ್ರಮಾಣ ಸೌಲಭ್ಯಗಳು ಸಿಗುತ್ತಿದ್ದವು.

ಹಾವನೂರ ವರದಿಯಿಂದ ಈ ಡಿನೋಟಿಫೈಡ್ ಟ್ರೈಬ್ಸ ಹೋಗಿ ನಾವು ಬ್ಯಾಕ್‌ವರ್ಡ್ ಟ್ರೈಬ್ಸದಲ್ಲಿ ಬಂದೆವು. ಇದರಿಂದ ಏನಾಯ್ತು ಅಂದರೆ ಈ ಮುಂಚೆ ಸ್ವಲ್ಪ ಪ್ರಮಾಣದಲ್ಲಿ ಸಿಗುತ್ತಿದ್ದ ಸೌಲಭ್ಯಗಳು ತೀರಾ ಕಡಿಮೆಯಾಗಿ ಹೋದವು.

ದಕ್ಷಿಣ ಕರ್ನಾಟಕದಲ್ಲಿರುವ ನಾಯಕ ಜನಾಂಗದವರು ಸೆಡ್ಯೂಲ್ ಟ್ರೈಬ್‌ಗೆ ಸೇರಿದ್ದರು. ಆದರೆ ಉತ್ತರ ಕರ್ನಾಟಕದಲ್ಲಿರುವ ನಮ್ಮ ಜನಾಂಗಕ್ಕೆ ಯಾವುದೇ ಸೌಲಭ್ಯಗಳು ಸಿಗುತ್ತಿರಲಿಲ್ಲ. ಇದರ ಬಗ್ಗೆ ನಮ್ಮ ಹೋರಾಟ ಕ್ರಿ.ಶ. 1978ರಿಂದ ಪ್ರಾರಂಭವಾಯಿತು. ಬೆಳಗಾವಿ ಜಿಲ್ಲೆಯಲ್ಲಿರುವ ಗೋಕಾಕ ತಾಲ್ಲೂಕಿನಲ್ಲಿ ನಮ್ಮ ಜನಾಂಗ ಹೆಚ್ಚು ಇರುವುದರಿಂದ ಈ ವಿಧಾನಸಭಾ ಮತ ಕ್ಷೇತ್ರವು ಪರಿಶಿಷ್ಟ ಪಂಗಡದವರಿಗೆ ಮೀಸಲಾಯಿತು. ಪ್ರಾರಂಭದಲ್ಲಿ ಈ ಕ್ಷೇತ್ರದಿಂದ ಶ್ರೀ ಎಲ್.ಎಸ್. ನಾಯಕ ಅವರು ಆರಿಸಿ ಹೋದರು. ಇವರು ಕೂಡ ಬೇಡ ಜನಾಂಗದವರೇ. ಆದರೆ ಇವರು ಪರಿಶಿಷ್ಟ

ಪಂಗಡದ ಸರ್ಟಿಫಿಕೇಟ್ ತೆಗೆದುಕೊಂಡು ಈ ಕ್ಷೇತ್ರಕ್ಕೆ ಆರಿಸಿ ಬಂದರು. ನಂತರ ಅವರನ್ನು ನೋಡಿ ಶ್ರೀ ಸಿ.ಟಿ. ಗುಡ್ಡಾಕಾಯು ಈ ತರಹ ದಾಖಲೆ ಪಡೆದುಕೊಂಡು ಆ ಕ್ಷೇತ್ರಕ್ಕೆ ಆರಿಸಿ ಶಾಸಕರಾದರು.

ಆಗ ಗೋಕಾಕದಲ್ಲಿರುವ ಹಾಗೂ ಬೆಳಗಾವಿ ಜಿಲ್ಲೆಯಲ್ಲಿರುವ ಎಲ್ಲ ಬೇಡ ಜನಾಂಗದವರು ಬ್ಯಾಕವರ್ಡ್ ಟ್ರೈಬ್‌ಕ್ಕೆ (BT) ಸೇರಿದವರಾಗಿದ್ದರು. ಆದರೆ ಆರಿಸಿ ಬಂದ ಶಾಸಕರು ಮಾತ್ರ ಷೆಡ್ಯೂಲ್ ಟ್ರೈಬ್‌ನಲ್ಲಿ ಇದ್ದರು. ಇದೇ ರೀತಿ ಗೋಕಾಕದಲ್ಲಿರುವ ರಾಜಕೀಯ ವ್ಯಕ್ತಿಗಳು ಈ ರೀತಿ ದಾಖಲೆಗಳನ್ನು ಪಡೆದುಕೊಂಡು ಶಾಸಕರಾದರು.

ಈ ಶಾಸಕರು ಮಾತ್ರ ಷೆಡ್ಯೂಲ್ ಟ್ರೈಬ್‌ದ ಸೌಲಭ್ಯವನ್ನು ಪಡೆದುಕೊಳ್ಳುತ್ತಿದ್ದರು. ಆದರೆ ಇನ್ನುಳಿದ ಎಲ್ಲ ನಮ್ಮ ಬೇಡ ಜನಾಂಗದವರು ಬ್ಯಾಕ್‌ವರ್ಡ್ ಟ್ರೈಬ್ (BT)ನಲ್ಲೇ ಉಳಿದರು. ಮತ್ತು ಅವರು ಇವರ ಮತಗಳಿಂದಲೇ ಆರಿಸಿ ಬರುತ್ತಿದ್ದರು. ಇವರಿಗೆ ಅನುಕೂಲ ಮಾಡಿ ಕೊಡಲೇ ಇಲ್ಲ. ಆದ್ದರಿಂದ ನಮ್ಮ ಹೋರಾಟ ಅತಿ ದೊಡ್ಡ ಪ್ರಮಾಣದಲ್ಲಿ ಮುಂದುವರೆಯಿತು. ಆಗಿನ ಮುಖ್ಯಮಂತ್ರಿಯವರಾದ ಶ್ರೀ ಡಿ. ದೇವರಾಜ ಅರಸರು, ಶ್ರೀ ರಾಮಕೃಷ್ಣ ಹೆಗಡೆ ಅವರು, ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿ, ಶ್ರೀ ರಾಜೀವ್‌ಗಾಂಧಿ ಮತ್ತು ರಾಷ್ಟ್ರಪತಿಗಳಾದ ಶ್ರೀ ಆರ್. ವೆಂಕಟರಾಮನ್ ಇವರಿಗೆ ನಾವು ಸಾವಿರಾರು ಜನರ ಜೊತೆಗೆ ಮನವಿಯನ್ನು ಸಲ್ಲಿಸಿದ್ದೆವು.

ಈ ಹೋರಾಟ ನಡೆಯುತ್ತಿರುವಾಗ ನಮ್ಮದೇ ಕೆಲವು ಜನರು ನನ್ನನ್ನು ಕೊಲೆ ಮಾಡಲು ಪ್ರಯತ್ನ ಮಾಡುತ್ತಿದ್ದರು. ಆದರೂ ಕೂಡ ನಮ್ಮ ಹೋರಾಟ ಮುಂದುವರೆಯಿತು. ಕೊನೆಯದಾಗಿ ಕ್ರಿ.ಶ. 1991ರಲ್ಲಿ ನಮ್ಮ ಎಲ್ಲ ಬೇಡ ಜನಾಂಗದವರನ್ನು ಸೆಡ್ಯೂಲ್ ಟ್ರೈಬ್ (ST)ನಲ್ಲಿ ಸೇರಿಸಲಾಯಿತು. ಇದು ನಮ್ಮ ಚಳುವಳಿಗೆ ಸಿಕ್ಕ ಅತಿ ದೊಡ್ಡ ಯಶ.

ತದನಂತರ ನಮ್ಮದು ದೇವದಾಸಿ ಪದ್ಧತಿ. ಪ್ರತಿ ಹೋರಾಟ ನಡೆಯಿತು. ಈ ಚಳುವಳಿ ಮಹಾರಾಷ್ಟ್ರದಲ್ಲಿಯೂ ಕೂಡ ದೊಡ್ಡ ಪ್ರಮಾಣದಲ್ಲಿ ನಡೆಸಿದ್ದೆವು ಹಾಗೂ ರೈತರ ಸಮಸ್ಯೆಗಳ ಪ್ರತಿ ಚಳುವಳಿಯನ್ನು ಮಾಡಿದೆ. ಅದರಂತೆ ಇನ್ನುಳಿದ ಶೋಷಿತರ ಏಳ್ಗೆಗಾಗಿ ಚಳುವಳಿಯನ್ನು ಮಾಡುತ್ತಾ ಬಂದೆ. ಆದರೆ ಈ ಎಲ್ಲ ಚಳುವಳಿಗಳನ್ನು ರಾಜಕೀಯ ಕ್ಷೇತ್ರದಿಂದ ಬಹಳ ದೂರ ಇಟ್ಟಿದ್ದೆ. ಆದ ಕಾರಣ ಎಲ್ಲ ಚಳುವಳಿಗಳು ಯಶಸ್ವಿ ಆದವು.

ನಾನು ಮಾಡಿದ ಚಳುವಳಿಗಳ ಬಗ್ಗೆ ಅನೇಕ ಗ್ರಂಥ ಕೂಡ ಬರೆದೆ. ಇವೆಲ್ಲ ಗ್ರಂಥಗಳು ಮರಾಠಿ ಸಾಹಿತ್ಯದಲ್ಲಿ ಮೈಲಿಗಲ್ಲಾಗಿ ಹೋದವು. ಮಹಾರಾಷ್ಟ್ರ, ಗುಜರಾತ್ ಹಾಗೂ ಮಧ್ಯಪ್ರದೇಶದಲ್ಲಿರುವ ಅನೇಕ ಸಂಘ ಸಂಸ್ಥೆಗಳು ನನ್ನನ್ನು ಸನ್ಮಾನಿಸಿದವು. ಈ



ಗ್ರಂಥಗಳು ಅನೇಕ ವಿಶ್ವವಿದ್ಯಾಲಯದಲ್ಲಿ ಪಠ್ಯಪುಸ್ತಕಕ್ಕೆ ಒಳಗೊಂಡವು. ಕ್ರಿ.ಶ. 2007ರಲ್ಲಿ ನನಗೆ "ಕನ್ನಡ ಪ್ರಭ" ವರ್ಷದ ವ್ಯಕ್ತಿ ಅಂಥ ಪ್ರಶಸ್ತಿ ಸಿಕ್ಕಿತು. ಇದು ನನಗೆ ಕರ್ನಾಟಕದಲ್ಲಿಯೇ ಸಿಗುವ ಮೊದಲನೇ ಸನ್ಮಾನ. ಈ ಪ್ರಶಸ್ತಿ ಸಿಕ್ಕ ಮೇಲೆ ಕರ್ನಾಟಕದ ಮೂಲೆ ಮೂಲೆಯಿಂದ ಗಣ್ಯವ್ಯಕ್ತಿಗಳು ಪತ್ರಗಳನ್ನು ಬರೆದು ಹಾಗೂ ದೂರವಾಣಿ ಮೂಲಕ ನನ್ನನ್ನು ಹೊಗಳುತ್ತಿದ್ದರು.

ಗೌರಿಬಿದನೂರಿನಿಂದ ಪ್ರೊ. ನಾರಾಯಣಸ್ವಾಮಿ ಅವರು ನನಗೆ ದೂರವಾಣಿ ಮೂಲಕ ಹೊಗಳಿದರು. ಆ ನಂತರ ಅವರು ನನ್ನನ್ನು ಗೌರಿಬಿದನೂರಕ್ಕೆ ಕರೆಸಿ ದೊಡ್ಡ ಪ್ರಮಾಣದಲ್ಲಿ ಸನ್ಮಾನಿಸಿದರು. ಇದು ನನ್ನ ಜೀವನದಲ್ಲಿ ನಮ್ಮ ಜನರಿಂದ ಸಿಕ್ಕ ಅತಿ ದೊಡ್ಡ ಸನ್ಮಾನ. ಪ್ರೊ. ನಾರಾಯಣಸ್ವಾಮಿ ಇವರಿಂದಲೇ ನಾನು ದಕ್ಷಿಣ ಕರ್ನಾಟಕದಲ್ಲಿ ನಮ್ಮ ಜನರನ್ನು ನೋಡುವಂತಾಯಿತು. ಈ ಜನರಲ್ಲಿರುವ ಆತ್ಮೀಯತೆ ನೋಡಿ ನನಗೆ ಕನಸನ್ನೇ ಕಂಡಂತಾಯಿತು. ಏಕೆಂದರೆ ನಮ್ಮ ಭಾಗದಲ್ಲಿರುವ ಮುಖಂಡರಿಗೆ ಅತಿ ಅಹಂಕಾರವೇ ಹೆಚ್ಚು. ಅವರು ಇನ್ನೊಬ್ಬರ ಬಗ್ಗೆ ಗೌರವ ಕೊಡುವುದೇ ಇಲ್ಲ. ಇದನ್ನು ನಾನು ಮೊದಲಿನಿಂದಲೂ ನೋಡುತ್ತಾ ಬಂದಿದ್ದೇನೆ. ಆ ನಂತರ ಪ್ರೊ. ನಾರಾಯಣಸ್ವಾಮಿಯವರ ಪ್ರಯತ್ನದಿಂದ ನಿಡುಮಾಮಿಡಿ ಮಠದ ಪ್ರಶಸ್ತಿ ಸಿಕ್ಕಿತು. ಇವರಿಂದಲೇ ದಕ್ಷಿಣ ಕರ್ನಾಟಕದ ನಮ್ಮ ಜನರ ಪರಿಚಯವಾಯಿತು. ಆ ನಂತರವು ಕೂಡ ಕೆಲವು ಕಾರ್ಯಕ್ರಮಗಳಲ್ಲಿ ನಾವು ಭೇಟಿಯಾಗಿದ್ದೇವೆ. ಅವರನ್ನು ನೋಡಿದ ನಂತರ ನನಗೆ ನನ್ನ ಜನಾಂಗದ ಗುರುಗಳು ಎಂದು ಅನಿಸುತ್ತದೆ. ಆದ್ದರಿಂದ ಅವರ ಪಾದಸ್ಪರ್ಶ ಮಾಡುತ್ತಿದ್ದೆ.

ಜನಾಂಗದ ಏಳ್ಗೆ ಬರಿ ದುಡ್ಡಿನಿಂದ ಆಗುವುದಿಲ್ಲ. ಅದಕ್ಕೆ ಒಳ್ಳೆಯ ಗುರುಗಳ ಆಶೀರ್ವಾದ ಮತ್ತು ಮಾರ್ಗದರ್ಶನ ಕೂಡ ಬೇಕು. ಇಂತಹ ದೇವರಂತಹ ಗುರುಗಳಿದ್ದರೆ ಮಾತ್ರ ನಮ್ಮ ಜನಾಂಗಕ್ಕೆ ಒಳ್ಳೆಯ ಸಂಸ್ಕಾರಗಳು ಸಿಗುತ್ತದೆ. ಹಣಕ್ಕಿಂತಲೂ ನಮ್ಮ ಜನರಿಗೆ ಒಳ್ಳೆಯ ಸಂಸ್ಕಾರಗಳು ಮುಖ್ಯ. ಈ ಒಳ್ಳೆಯ ಸಂಸ್ಕಾರಗಳು ಪ್ರೊ. ನಾರಾಯಣಸ್ವಾಮಿ ಅಂತಹವರಿಂದ ಮಾತ್ರ ಸಿಗಬಹುದು ಎಂದು ಅನಿಸುತ್ತದೆ. ಅವರಿಗೆ ಒಳ್ಳೆಯ ಆಯುಷ್ಯ ಆರೋಗ್ಯ ಕೊಡಲಿ ಎಂದು ಭಗವಂತನಲ್ಲಿ ಬೇಡಿಕೊಳ್ಳುತ್ತೇನೆ.





# ಭಿತ್ತಿಯೊಳಗಿನ ಮುತ್ತು

– ಎಚ್. ವೇಣುಗೋಪಾಲ್
ಸಹಾಯಕ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ

ಶ್ರೀಯುತ ಕೆ. ನಾರಾಯಣಸ್ವಾಮಿಯವರು ಕೇವಲ ಒಬ್ಬ ವ್ಯಕ್ತಿಯಲ್ಲ. ಅವರೊಂದು ಮಹಾನ್ ಶಕ್ತಿ. ಶ್ರೇಷ್ಠ ವ್ಯಕ್ತಿತ್ವ, ಅದಮ್ಯ ಚೇತನ, ಅದೆಷ್ಟೋ ವಿದ್ಯಾರ್ಥಿಗಳ ಪಾಲಿಗೆ ಮಾನಸಿಕ ಸ್ಥೈರ್ಯ ತುಂಬಿದ ಮಾರ್ಗದರ್ಶಕ. ಅವರ ಗುರಿ ತಲುಪಲು ಎಲ್ಲ ರೀತಿಯಲ್ಲಿಯೂ ಸಲಹೆ, ಸಹಕಾರ ನೀಡುವ ಹಿತಚಿಂತಕ, ತಮ್ಮ ಅಧ್ಯಾಪನ ವೃತ್ತಿಯ ಜೊತೆಜೊತೆಗೆ ಸಮಾಜಮುಖಿ ಚಿಂತನೆಯಲ್ಲಿ ತೊಡಗಿಸಿಕೊಳ್ಳುವ ದಾರ್ಶನಿಕ. ಸರಳ ಸಜ್ಜನಿಕೆಯು ಸಾಕಾರರೂಪವಾದ ಶ್ರೀಯುತ ಕೆ. ನಾರಾಯಣಸ್ವಾಮಿ ಯವರು ತಮ್ಮ ಅಪಾರ ವಿದ್ಯಾರ್ಥಿ ಸಮೂಹದ ವಲಯದಲ್ಲಿ “ಪ್ರೀತಿಯ ಮೇಷ್ಟ್ರು” ಎಂದೇ ಅಕ್ಕರೆಯಿಂದ ಕರೆಸಿಕೊಂಡವರು. ಇವರನ್ನು “ಅಭಿನವ ಗಾಂಧಿ” ಎಂದು ಕರೆದರೂ ತಪ್ಪಾಗಲಾರದು. ಇದು ಖಂಡಿತ ಉತ್ಪ್ರೇಕ್ಷೆಯ ಮಾತಲ್ಲ. ಶ್ರೀ ಕೆ.ಎನ್.ಎಸ್.ರವರನ್ನು ಹತ್ತಿರದಿಂದ ಕಂಡ ಎಲ್ಲರಿಗೂ ಅವರ ವ್ಯಕ್ತಿತ್ವದ ಪರಿಚಯ ಇದ್ದೇ ಇರುತ್ತದೆ. ಅವರಿಗೆ ಬಡವ - ಬಲ್ಲಿದರೆಂಬ ಯಾವುದೇ ಭಾವವಿಲ್ಲ. ಬಡವನ ಗುಡಿಸಲು - ಸಿರಿವಂತನ ಮಹಲು ಎರಡೂ ಕೂಡಾ ನಾರಾಯಣಸ್ವಾಮಿಯವರ ದೃಷ್ಟಿಯಲ್ಲಿ ಸಮಾನವಾದವುಗಳು. ಅವರ ವ್ಯಕ್ತಿತ್ವ ಕೂಡಾ ಬಹುಮುಖಿಯಾದದ್ದು. ಪ್ರತಿಭೆಗಳನ್ನು ಗುರುತಿಸುವಿಕೆ ಪ್ರೋತ್ಸಾಹಿಸುವಿಕೆ, ಮಾರ್ಗದರ್ಶನ ನೀಡುವಿಕೆ, ಮೊದಲಾದವುಗಳಲ್ಲಿ ನಾರಾಯಣಸ್ವಾಮಿಯವರು ಸದಾ ಮುಂದು. ದಲಿತರ, ನಿಮ್ನ ವರ್ಗಗಳ ಶೋಷಿತರ ಪರವಾಗಿ ಸಾಕಷ್ಟು ಕೆಲಸ



ಮಾಡಿರುವ ಇವರು ದಲಿತ ಸಂಘರ್ಷ ಸಮಿತಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಅವಿಭಜಿತ ಕೋಲಾರ (ಚಿಕ್ಕಬಳ್ಳಾಪುರ) ಜಿಲ್ಲೆಯಲ್ಲಿ ದ.ಸಂ.ಸ. ಉತ್ಕರ್ಷಕ್ಕೇರಲು ಕಾರಣರಾದವರು. ರಾಜ್ಯಮಟ್ಟದ ದ.ಸಂ.ಸ. ಕಾರ್ಯಚಟುವಟಿಕೆಗಳಲ್ಲಿ ಪ್ರೊ. ಬಿ. ಕೃಷ್ಣಪ್ಪನವರೊಂದಿಗೆ ಸಕ್ರಿಯವಾಗಿ ಜೊತೆಯಾಗಿದ್ದವರು. ರೈತರ ಬವಣೆಗಳನ್ನು ಕಂಡು ಮರುಗಿದ ನಾರಾಯಣಸ್ವಾಮಿ ಯವರು ಬರದ ನಾಡಿನಲ್ಲಿ ಜಲಸಂರಕ್ಷಣೆಯನ್ನು ಕೈಗೊಂಡರೆ ರೈತನ ಬದುಕಿನಲ್ಲಿ ಮಂದಹಾಸ ಮೂಡಿಸಬಹುದೆನ್ನುವ ಮಹದಾಸೆ ಹೊತ್ತು ಜಲಸಂರಕ್ಷಣೆಯ ಕುರಿತಾಗಿ ಕಾರ್ಯಾಗಾರಗಳನ್ನು ನಡೆಸಿ ಜನರಲ್ಲಿ ಜಾಗೃತಿಯನ್ನು ಮೂಡಿಸಿದವರು. ಆಯಿಲ್‌ಪುಲ್ಲಿಂಗ್ ಚಿಕಿತ್ಸಾ ವಿಧಾನದ ಮೂಲಕ ಅನೇಕ ಕಾಯಿಲೆಗಳನ್ನು ಗುಣಪಡಿಸಬಹುದೆಂದು ಕನ್ನಡಪ್ರಭ ದಿನಪತ್ರಿಕೆಯಲ್ಲಿ ತಿಂಗಳುಗಟ್ಟಲೆ ಅಂಕಣ ಬರೆದವರು. ಬಾಗೇಪಲ್ಲಿ, ಗುಡಿಬಂಡೆ ತಾಲ್ಲೂಕುಗಳ ಕುಡಿಯುವ ನೀರಿನಲ್ಲಿ ಫ್ಲೋರೈಡ್ ಅಂಶ ಹೆಚ್ಚಾದರಿಂದ ಫ್ಲೋರೈಡ್‌ಯುಕ್ತ ನೀರನ್ನು ಕುಡಿಯಲು ಉಪಯೋಗಿಸದಂತೆ ಗೋಡೆ ಬರಹಗಳ ಮೂಲಕ ಸಮಾಜದಲ್ಲಿ ಅರಿವನ್ನು ಮೂಡಿಸಲು ನೆರವಾದವರು. ಹೀಗೆ ನಾರಾಯಣಸ್ವಾಮಿಯವರ ಚಿಂತನೆಗಳ ಅರಿವಿನ ಹರಿವು ಹಲವು ದಿಕ್ಕುಗಳಲ್ಲಿ ಹರಿಯುತ್ತಲೇ ಇರುತ್ತದೆ. ಹಾಗೇ ಶ್ರೀಯುತ ಕೆ. ನಾರಾಯಣಸ್ವಾಮಿಯವರ ಕುರಿತು ಬರೆಯಲು ಕುಳಿತರೆ ಅದಕ್ಕೆ ಕೊನೆಯೆಂಬುದಿಲ್ಲ. ಅವರದು ಅಕ್ಷರಗಳಲ್ಲಿ ಕಟ್ಟಿ ಹಾಕುವ ವ್ಯಕ್ತಿತ್ವವಲ್ಲ. ಬದಲಿಗೆ ಅವರ ವ್ಯಕ್ತಿತ್ವವನ್ನು ಹಿಡಿದಿಡುವ ಅಕ್ಷರಗಳ ಮೌಲ್ಯವೇ ಹೆಚ್ಚಾಗುತ್ತದೆ. ಈ ಎಲ್ಲ ವಿಚಾರಗಳ ತುಲನೆಯನ್ನು ಮಾಡಿ ಶ್ರೀಯುತ ಕೆ. ನಾರಾಯಣಸ್ವಾಮಿಯವರ ಅಭಿನಂದನಾ ಗ್ರಂಥಕ್ಕೆ ಒಂದು ಲೇಖನವನ್ನು ಬರೆಯಲು ಕುಳಿತಾಗ, ಯಾವುದನ್ನು ಬರೆಯಲಿ, ಯಾವುದನ್ನು ಬಿಡಲಿ ಎಂಬ ಗೊಂದಲ ಮೂಡಿದ್ದು ಸುಳ್ಳಲ್ಲ. ಅವರೊಂದಿಗೆ ಕಳೆದ 34 ವರ್ಷಗಳ ಒಡನಾಟದಲ್ಲಿ ನಾನವರನ್ನು ಅರಿಯಲು ಸಾಧ್ಯವಾಗಿದ್ದು ಅಲ್ಪ. ಅರಿವಿಗೆ ಬರಬೇಕಾದದ್ದು ಅಗಾಧ. ಈ ಲೇಖನದಲ್ಲಿ ನನ್ನರಿವಿಗೆ ಬಂದ ನಾರಾಯಣಸ್ವಾಮಿ ಯವರ ಕುರಿತಾಗಿ, ಅವರೊಂದಿಗಿನ ಒಡನಾಟದ ಕುರಿತಾಗಿ ಒಂದಷ್ಟು ಅನುಭವಗಳನ್ನು ದಾಖಲಿಸಲೇ ಬೇಕೆನಿಸುತ್ತಿದೆ.

ಶ್ರೀಯುತ ಕೆ. ನಾರಾಯಣಸ್ವಾಮಿಯವರು ಓದಿಗೆ ಅತ್ಯಂತ ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು. ವಿದ್ಯಾರ್ಥಿದೆಸೆಯಲ್ಲಿ ಅಧ್ಯಯನಶೀಲತೆ ಬಹುಮುಖ್ಯ ಎಂದು ಪ್ರತಿಪಾದಿಸುತ್ತಿದ್ದರು. ಆಗ ತಾನೇ ಪ್ರೌಢಶಾಲೆ ವ್ಯಾಸಂಗ ಮುಗಿಸಿ ಕಾಲೇಜಿಗೆ ಕಾಲಿಟ್ಟಿದ್ದ ನನಗೆ, ಇನ್ನು ಮುಂದೆ ಪ್ರೌಢಶಾಲೆಯಲ್ಲಿ ಇದ್ದಂತಹ ಕಟ್ಟುನಿಟ್ಟಾದ ಕಟ್ಟಳೆಗಳು ಇರುವುದಿಲ್ಲವೆಂಬುದೇ ಅತ್ಯಂತ ಖುಷಿ ತರುವ ವಿಚಾರವಾಗಿತ್ತು. ಆದರೆ ನಮಗೆ ಪ್ರಿನ್ಸಿಪಾಲರಾಗಿದ್ದ ನಾರಾಯಣಸ್ವಾಮಿಯವರು ಕಾಲೇಜಿನ ವಿದ್ಯಾರ್ಥಿಗಳೆಂದರೆ ಸ್ವತಂತ್ರ ಹಕ್ಕಿಗಳಂತೆ ಹಾರಾಡುವವರು ಎಂಬ ಕಲ್ಪನೆಗಳನ್ನೇ ಬದಲಿಸಿಬಿಟ್ಟಿದ್ದರು. ವಿದ್ಯಾರ್ಥಿಯ

ಪ್ರತಿ ತಿಂಗಳ ಅಧ್ಯಯನವನ್ನು ಪರೀಕ್ಷಿಸಲು ವಾರಕ್ಕೊಂದರಂತೆ 'ಟೆಸ್ಟ್' ನಡೆಸುವ ಪರಿಕಲ್ಪನೆಯನ್ನು ಮೂರು ದಶಕಗಳ ಹಿಂದೆಯೇ ಬಾಗೇಪಲ್ಲಿಯ ಸರ್ಕಾರಿ ಕಾಲೇಜಿನಲ್ಲಿ ಜಾರಿಗೆ ತಂದರು. ಇದು ಅಂದಿನ ಮಟ್ಟಿಗೆ ಒಂದು ಕ್ರಾಂತಿಕಾರಕ ಬೆಳವಣಿಗೆಯಾಗಿತ್ತು. ಅದುವರೆಗೂ ವರ್ಷದ ಕೊನೆಗೆ ಮಾತ್ರ ಪರೀಕ್ಷೆ ಎಂದಿದ್ದ ತಿಳುವಳಿಕೆಗಳು ಬದಲಾಗಿ ವಾರಕ್ಕೊಂದು ಪರೀಕ್ಷೆಯ ಕಲ್ಪನೆ ಜಾರಿಗೆ ತಂದಾಗ ಕೆಲವು ಪೋಷಕರು ಇದರ ಬಗ್ಗೆ ಆಕ್ಷೇಪ ಕೂಡಾ ಎತ್ತಿದ್ದರು. 'ನಮ್ಮ ಹುಡುಗ ಯಾವಾಗ ನೋಡಿದರೂ ಪುಸ್ತಕ ಹಿಡ್ಕೊಂಡ್ ಕೂತಿರ್ತಾನೆ. ಕೇಳಿದ್ರೆ ಟೆಸ್ಟ್ ಐತೆ ಅಂತಾನೆ, ನೀವು ವರ್ಷಕೊಂದ್ ಸಾರಿ ಪರೀಕ್ಷೆ ಇಟ್ಕೊಳ್ಳಿ, ವಾರಕ್ಕೊಂದು ಪರೀಕ್ಷೆ ಯಾಕೆ ಎಲ್ಲಿಯೂ ಇಲ್ಲದ ಪದ್ಧತಿಯನ್ನು ಇಲ್ಯಾಕೆ ಜಾರಿಗೆ ತಂದಿದ್ದೀರಿ, ಇತ್ಯಾದಿ ಪ್ರಶ್ನೆಗಳನ್ನು ಅವರು ಎದುರಿಸಬೇಕಾಯಿತಾದರೂ ಮುಂದೆ ಫಲಿತಾಂಶಗಳು ಬಂದಾಗ ಅದೇ ಪೋಷಕರು ನಾರಾಯಣಸ್ವಾಮಿಯವರನ್ನು ಅಭಿನಂದಿಸಿದ್ದರು. ಅಷ್ಟೇ ಅಲ್ಲ, ಇಂದು ನಾವು ಕಾನ್ವೆಂಟ್ ವಿದ್ಯಾಭ್ಯಾಸ ಪದ್ಧತಿಯಲ್ಲಿ ತಿಂಗಳಿಗೊಂದು ಟೆಸ್ಟ್ ಪದ್ಧತಿಯನ್ನು ಕಾಣುತ್ತಿದ್ದೇವೆ. ಆದರೆ ಇದೇ ಪದ್ಧತಿಯನ್ನು ಶ್ರೀಯುತ ನಾರಾಯಣಸ್ವಾಮಿ ಯವರು ಮೂವತ್ತು ವರ್ಷಗಳ ಹಿಂದೆಯೇ ಬಾಗೇಪಲ್ಲಿಯಲ್ಲಿ ಜಾರಿಗೆ ತಂದಿದ್ದರು. ಇದು ಶಿಕ್ಷಣತಜ್ಞರಾಗಿ ಅವರಿಗಿದ್ದ ದೂರದೃಷ್ಟಿತ್ವವನ್ನು ಎತ್ತಿ ತೋರಿಸುತ್ತದೆ.

ಇದು ಅವರ ಸಾರ್ವಜನಿಕ ಚಿಂತನೆಗಳ ಒಂದು ಮುಖವಾದರೂ, ಮತ್ತೊಂದು ಅವರ ಹೃದಯದ ಅಂತಃಕರಣದ ಪ್ರೀತಿ ಅವರ ಹೃದಯಾಂತರಾಳದಲ್ಲಿ ನಿರಂತರವಾಗಿ ತಾಯಿ ಹೃದಯದ ಪ್ರೀತಿಯೊಂದು ಹರಿಯುತ್ತಲೇ ಇರುತ್ತದೆ. ಅದು ಅಂತರ್ಗಾಮಿಯಾಗಿ ಹರಿದು ನನ್ನಂತಹ ಅದೆಷ್ಟೋ ಮಂದಿಯನ್ನು ತಲುಪುತ್ತಲೇ ಇರುತ್ತದೆ. ಅಸಹಾಯಕ ಸ್ಥಿತಿಯಲ್ಲಿದ್ದ ನಾನು ಇಂದು ಉನ್ನತ ಸ್ಥಾನಕ್ಕೇರುವಲ್ಲಿ ಶ್ರೀಯುತ ಕೆ. ನಾರಾಯಣಸ್ವಾಮಿ ಯವರ ಪಾತ್ರ ಹಿರಿದಾದುದು ಎನ್ನುವುದಕ್ಕಿಂತ ನನ್ನ ಇಂದಿನ ಉನ್ನತ ಸ್ಥಾನಮಾನಕ್ಕೆ ಅವರೇ ಕಾರಣಕರ್ತರು ಎನ್ನುವುದು ಅತ್ಯಂತ ಸೂಕ್ತವಾದುದು. ನನ್ನ ಬದುಕಿಗೆ ತಿರುವು ನೀಡಿದ ಆ ದಿನ ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತಿದೆ.

## ನನ್ನ ಜೀವನದ ತಿರುವು

ಅಂದು 1983ನೆಯ ಇಸವಿ ಡಿಸೆಂಬರ್ ತಿಂಗಳ 10ನೇ ತಾರೀಖು ಶನಿವಾರ ಸಂಜೆ 7-00 ಗಂಟೆ, ಗಾಂಧಿ ಕೃಷಿ ವಿಜ್ಞಾನ ಕೇಂದ್ರ (GKVK)ದಲ್ಲಿ ಬಿಎಸ್ಸಿ(ಅಗ್ರಿ)ಯ ಮೊದಲ ವರ್ಷದ ವಿದ್ಯಾರ್ಥಿಯಾಗಿದ್ದ ನಾನು ಜಿ.ಕೆ.ವಿ.ಕೆ.ಯ ಹಾಸ್ಟೆಲ್ಲಿನಲ್ಲಿ ಚಳಿಯಲ್ಲಿ ನಡುಗುತ್ತಲೇ ಓದಿನಲ್ಲಿ ತಲ್ಲೀನನಾಗಿದ್ದೆ. ಆಗಲೇ ಡಿಸೆಂಬರ್‌ನ ಚಳಿಯನ್ನೂ ಮೀರಿಸುವ ಎದೆನಡುಗಿಸುವಂತಹ ಸಂದೇಶವೊಂದು ಬಂದಿತ್ತು. ಸಂದೇಶವನ್ನು ತಂದಿದ್ದ ವ್ಯಕ್ತಿ ನನ್ನ



ತಂದೆಯವರ ಖಾಸಾ ಸ್ನೇಹಿತನ ಮಗ, ಅವರೊಟ್ಟಿಗೆ ನನ್ನ ಹಾಸ್ಟೆಲ್ಲಿನ ಮೇಲ್ವಿಚಾರಕರೂ, ನನ್ನ ತಂದೆಯ ನಿಕಟವರ್ತಿಗಳಲ್ಲಿ ಒಬ್ಬರೂ ಆಗಿದ್ದ ಶ್ರೀ ಲಕ್ಷ್ಮಯ್ಯ ಕೂಡಾ ಇದ್ದರು. ಇಬ್ಬರ ಮುಖಗಳಲ್ಲಿದ್ದ ದುಗುಡವನ್ನು ಕಂಡು ಎದೆತಣ್ಣಗೆ ನಡುಗಿತ್ತು. "ನೀನು ಕೂಡಲೇ ಊರಿಗೆ ಹೊರಡು" ಎಂದ ಲಕ್ಷ್ಮಯ್ಯನವರ ಮಾತುಗಳು ನನ್ನನ್ನು ಅಧೀರನನ್ನಾಗಿಸಿದ್ದವು. "ಯಾಕೆ, ಏನಾಯ್ತು ಅಣ್ಣ" ಎಂದ ನನ್ನ ಪ್ರಶ್ನೆಗೆ ಅವರಿಬ್ಬರೂ ಉತ್ತರ ಹೇಳಲಾರದೆ ತಡಕಾಡಿದ್ದರು. ನನ್ನಲ್ಲಿ ತಳಮಳ ಹೆಚ್ಚತೊಡಗಿತ್ತು. ಕೊನೆಗೆ ಲಕ್ಷ್ಮಯ್ಯನವರು "ನೀನು ಇವರ ಜೊತೆ ಊರಿಗೆ ಹೋಗು, ನಾನು ನಾಳೆ ಬರುತ್ತೇನೆ' ಎಂದು ಮಾತ್ರ ಹೇಳಿದ್ದರು. ನನಗೆ ಏನೊಂದೂ ಅರ್ಥವಾಗದೆ, ನನ್ನನ್ನು ಕರೊದೊಯ್ಯಲು ಬಂದಿದ್ದ ವ್ಯಕ್ತಿಯ ಜೊತೆಯಲ್ಲಿ ಊರಿಗೆ ಹೊರಟೆ. ಭಯ, ವಿಹ್ವಲತೆಗಳಿಂದ ಕೂಡಿದ್ದ ನನ್ನ ಪ್ರಶ್ನೆಗಳಿಗೆ ಉತ್ತರಿಸಲಾರದೆ ಆ ವ್ಯಕ್ತಿ ತಡವರಿಸುತ್ತಿದ್ದ. ಅಂತೂ ಬೆಂಗಳೂರಿನಿಂದ ಹೊರಟು ಬಾಗೇಪಲ್ಲಿ ತಲುಪುವ ವೇಳೆಗೆ ರಾತ್ರಿ 12-00 ಗಂಟೆ, ಮನೆಯ ಮುಂದೆ ಜನ ಸೇರಿದ್ದನ್ನು ಕಂಡು ನನ್ನ ಮನಸ್ಸು ಮತ್ತಷ್ಟು ತಲ್ಲಣಗೊಂಡಿತ್ತು. ದಾಪುಗಾಲಿಡುತ್ತಾ ಓಡುತ್ತಾ ಮನೆ ತಲುಪಿದ ನನಗೆ ಕಂಡದ್ದು ಎದೆಯೊಡೆಯುವ ದೃಶ್ಯ. ನನ್ನ ತಂದೆಯವರು ತೀರಿಕೊಂಡಿದ್ದರು. ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದ ನನ್ನ ತಂದೆಯವರಾದ ಎನ್. ಹನುಮಂತರಾಯಪ್ಪನವರು ಇದ್ದಕ್ಕಿದ್ದಂತೆ ತೀರಿಕೊಂಡದ್ದನ್ನು ಕಂಡು ಆಕಾಶ ಕಳಚಿ ಬಿದ್ದಂತಾಗಿತ್ತು. ದುಃಖದ ಕಟ್ಟೆಯೊಡೆದು ಕಣ್ಣೀರು ಧಾರೆಯಾಗಿ ಹರಿದು ಹೋಗಿತ್ತು. ಇಬ್ಬರು ತಂಗಿಯರು ಹಾಗೂ ಒಬ್ಬ ತಮ್ಮನನ್ನು ತಬ್ಬಿಕೊಂಡು ಅಳುತ್ತಿದ್ದ ತಾಯಿಯ ರೋಧನೆ ಮುಗಿಲು ಮುಟ್ಟಿತ್ತು.

ಮರುದಿನ ತಂದೆಯ ಸ್ನೇಹಿತರು, ಬಂಧುಗಳೆಲ್ಲ ಸೇರಿ ಮುಂದಿನ ವಿಧಿವಿಧಾನಗಳನ್ನೆಲ್ಲಾ ಮುಗಿಸಿ ಶವಸಂಸ್ಕಾರ ಕಾರ್ಯಗಳನ್ನು ಪೂರ್ಣಗೊಳಿಸಿದ್ದರು.

ಭಾನುವಾರ ಶವಸಂಸ್ಕಾರ ಮುಗಿಯುವ ವೇಳೆಗೆ ಸಂಜೆ ಆರು ಗಂಟೆಯಾಗಿತ್ತು. ಮರುದಿನ ಸೋಮವಾರ ನನ್ನ ಹತ್ತಿರದ ನೆಂಟರು, ಬಂಧುಗಳು ನನ್ನ ತಂದೆಯ ಆಪ್ತ ಸ್ನೇಹಿತರಲ್ಲಿ ಕೆಲವರು ನಮ್ಮ ಮನೆಯ ಬಳಿ ಸೇರಿ ನನಗೆ ಧೈರ್ಯ ತುಂಬಿದ್ದರು. ಅದರ ಜೊತೆಗೆ "ಮನೆಗೆ ಹಿರಿಯ ಮಗ ನೀನೇ ಆಗಿರುವುದರಿಂದ ಮನೆಯ ಜವಾಬ್ದಾರಿಯನ್ನು ನೀನೇ ಹೊರಬೇಕೆಂದೂ, ತಾಯಿ, ತಮ್ಮ ಮತ್ತು ತಂಗಿಯರನ್ನು ನೋಡಿಕೊಳ್ಳುವುದು ನಿನ್ನದೇ ಜವಾಬ್ದಾರಿಯೆಂದೂ, ಆದ್ದರಿಂದ ಬೆಂಗಳೂರಿನಲ್ಲಿ ಓದು ನಿಲ್ಲಿಸಿ ಬಾಗೇಪಲ್ಲಿಯಲ್ಲಿಯೇ ಉಳಿಯಬೇಕೆಂದೂ ಒತ್ತಡ ಹೇರಿದ್ದರು. ನನಗಾಗ ಕೇವಲ 20 ವರ್ಷ. ಅವರೆಲ್ಲ ಹಾಗೆ ಒತ್ತಡಹೇರುತ್ತಿದ್ದರೆ ಆ ಸನ್ನಿವೇಶದಲ್ಲಿ ಏನೊಂದೂ ನಿರ್ಧಾರ ತೆಗೆದುಕೊಳ್ಳಲಾರದ ಅಸಹಾಯಕ ಪರಿಸ್ಥಿತಿಯಲ್ಲಿ ತೊಳಲಾಡುತ್ತಿದ್ದೆ. ಅದರೊಟ್ಟಿಗೆ

ಬೆಂಗಳೂರಿಗೆ ಹೋಗಿ ಓದಲು ಹಣ ನೀಡುವವರು ಯಾರು? ಎಂಬ ಪ್ರಶ್ನೆಯೂ ಕಾಡಿ "ಇವರೆಲ್ಲಾ ಹೇಳಿದ್ದೇ ಸರಿ" ಎಂಬ ತೀರ್ಮಾನಕ್ಕೆ ನಾನೂ ಬಂದು ಬಿಟ್ಟಿದ್ದೆ. ಇನ್ನು ನನ್ನ ಜೀವನ ಮುಗಿದೇ ಹೋಯಿತು ಎನ್ನುವ ಹಂತಕ್ಕೆ ತಲುಪಿ ಬಿಟ್ಟಿದ್ದೆ. ಅತ್ತ ತಂದೆ, ಇತ್ತ ವಿದ್ಯೆ ಎರಡೂ ನನ್ನಿಂದ ಕಳೆದು ಹೋದವು ಎಂದು ಮನಸ್ಸು ಚೀರಿ ಚೀರಿ ಹೇಳುತ್ತಿತ್ತು.

ಮರುದಿನ ಮಂಗಳವಾರ, ಬೆಳಿಗ್ಗೆ ಆರು ಗಂಟೆಗೆ ಬಾಗಿಲು ಬಡಿದ ಸದ್ದಾಯಿತು. ದುಃಖದ ಮಡುವಿನಲ್ಲಿದ್ದ ನಾನು ಎದ್ದು ಬಾಗಿಲು ತೆರೆದೆ. ಎದುರಿಗೆ ನಿಂತಿದ್ದವರು ಶ್ರೀಯುತ ಕೆ. ನಾರಾಯಣಸ್ವಾಮಿಯವರು. ನಾನು ಎಂಟನೇ ತರಗಿತಯಲ್ಲಿ ಓದುತ್ತಿದ್ದಾಗ ನಮ್ಮ ಸರ್ಕಾರಿ ಜ್ಯೂನಿಯರ್ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಬಂದವರು ಕೆ. ನಾರಾಯಣಸ್ವಾಮಿಯವರು. ಇವರನ್ನು ಕಂಡರೆ ಎಲ್ಲ ವಿದ್ಯಾರ್ಥಿಗಳಂತೆ ನನಗೂ ಗೌರವ, ಭಯ, ಶಿಸ್ತು, ಗಾಂಭೀರ್ಯವೇ ಮೈವೆತ್ತಂತಿದ್ದ ಅವರು ಯಾರೊಂದಿಗೂ ಏನನ್ನೂ ಮಾತನಾಡುತ್ತಿರಲಿಲ್ಲ. ಒಂದೊಮ್ಮೆ ಅವರು ಎದುರಾದರೆ ಭಯ ಗೌರವಗಳಿಂದ ದೂರ ಸರಿದು ನಿಲ್ಲುತ್ತಿದ್ದೆವು. ಇಂತಹ ಘನ ಗಂಭೀರ ವ್ಯಕ್ತಿತ್ವವುಳ್ಳ ಪ್ರಿನ್ಸಿಪಾಲರು ನಮ್ಮ ಮನೆಯವರೆವಿಗೂ ಬಂದದ್ದು ಏಕೆ? ಮನಸ್ಸಿನಲ್ಲಿ ಹತ್ತಾರು ಪ್ರಶ್ನೆಗಳು ಮೂಡಿ ಕಕ್ಕಾಬಿಕ್ಕಿಯಾಗಿ ನಿಂತಿದ್ದೆ. ಅವತ್ತಿಗೆ ನಮ್ಮ ತಂದೆಯವರು ತೀರಿಕೊಂಡು ಮೂರು ದಿನಗಳಾಗಿದ್ದವು. ಬಹುಶಃ ನನ್ನನ್ನೂ, ನನ್ನ ಕುಟುಂಬವನ್ನೂ ಸಂತೈಸಲು ಬಂದಿರಬಹುದು ಎಂದು ಮನಸ್ಸು ಹೇಳಿತ್ತು. ಆದರೆ ನಾರಾಯಣಸ್ವಾಮಿಯವರು ಒಂದೆರಡು ಕ್ಷಣ ನನ್ನನ್ನು ನೋಡಿ ದೃಢವಾದ ದನಿಯಲ್ಲಿ ಹೇಳಿದ್ದರು.

"ನೀನು ಬೆಂಗಳೂರಿಗೆ ಹೊರಡು, ಬಸ್ಸಿಗೆ ತಡವಾಯ್ತು, ಬೆಂಗಳೂರಿಗೆ ಹೋಗಿ ಓದನ್ನು ಮುಂದುವರೆಸು" ಎಂದ ಅವರ ಮಾತಿಗೆ ನಾನು ಸ್ತಂಭೀಭೂತನಾಗಿ ನಿಂತುಬಿಟ್ಟೆ. ಸ್ವಲ್ಪ ಸಮಯದವರೆಗೆ ಏನು ಮಾತನಾಡಬೇಕೆಂಬುದೇ ತೋಚಲಿಲ್ಲ. ಕೆಲವು ಕ್ಷಣಗಳ ನಂತರ ಸಾವರಿಸಿಕೊಂಡು ನಿಧಾನವಾಗಿ ಹೇಳಿದೆ.

"ಸಾರ್, ಮನೆಗೆ ಹಿರಿ ಮಗ ನಾನು, ನಾನು ಬೆಂಗಳೂರಿಗೆ ಹೋದರೆ ಮನೆಯ ಕಡೆ ತಾಯಿ, ತಮ್ಮ ತಂಗಿಯರನ್ನು ನೋಡಿಕೊಳ್ಳುವವರು ಯಾರು?" ಸೋತ ದನಿಯಲ್ಲಿ ಹೇಳಿದ್ದೆ. ನಾರಾಯಣಸ್ವಾಮಿಯವರು ಕೂಡಲೇ ಹೇಳಿದ್ದರು.

"ನೀನು ಸುಮ್ಮನೆ ಬೆಂಗಳೂರಿಗೆ ಹೋಗಿ ಡಿಗ್ರಿ ಕಂಪ್ಲೀಟ್ ಮಾಡುವುದನ್ನು ನೋಡು. ಪ್ರತಿ ಭಾನುವಾರ ಬಾಗೇಪಲ್ಲಿಗೆ ಬಂದು ಹೋಗು. ಇಲ್ಲಿನ ಉಳಿದ ಮನೆ ವಿಚಾರಗಳನ್ನು ನಾನು ನೋಡಿಕೊಳ್ಳುತ್ತೇನೆ ಎಂದರು. ಸಂತನೊಬ್ಬನ ಬಾಯಿಂದ ಬಂದಂತಹ ಅಂಬಿಗನಂತಹ ಮಾತುಗಳು ನನ್ನ ಮನಸ್ಸಿನಾಳದಲ್ಲಿ ನಾಟಿದ್ದವು. ನಾನು ಮರು

ಮಾತನಾಡದೆ ಬುಧವಾರ ಬೆಂಗಳೂರಿಗೆ ಹೋದೆ. ಕಷ್ಟಪಟ್ಟು ಓದಿ ಜಿ.ಕೆ.ವಿ.ಕೆ.ಯ ಕೃಷಿ ವಿಜ್ಞಾನದಲ್ಲಿ ಪದವೀಧರನಾದೆ.

ನನ್ನ ವ್ಯಾಸಂಗದ ಅವಧಿಯಲ್ಲಿ ಪ್ರತಿ ಭಾನುವಾರ ತಪ್ಪದೇ ಬಾಗೇಪಲ್ಲಿಗೆ ಬಂದು ಹೋಗುತ್ತಿದ್ದೆ. ಆದರೂ ಈ ಅವಧಿಯಲ್ಲಿ ಕೆ.ಎನ್.ಎಸ್.ರವರು ಬೆಂಗಳೂರಿಗೆ ವಾರಕ್ಕೊಮ್ಮೆ ಪತ್ರ ಬರೆಯುತ್ತಿದ್ದರು. ಅವರ ಪತ್ರದ ಪ್ರತಿಯೊಂದು ಪದಗಳೂ ನನ್ನ ಮನಸ್ಸನ್ನು ನಾಟುತ್ತಿದ್ದವು. ಆ ಪತ್ರಗಳಲ್ಲಿ ಧೈರ್ಯ ತುಂಬುವ, ಪ್ರೋತ್ಸಾಹಿಸುವ ಮಾತುಗಳಿರುತ್ತಿದ್ದವು. ಜೀವನದ ಎಂತಹ ಘಟ್ಟದಲ್ಲಿಯೂ ಎದೆಗುಂದದೆ ಮುನ್ನಡೆಯುವ ಪ್ರೇರಣಾತ್ಮಕ ಮಾತುಗಳಿರುತ್ತಿದ್ದವು. ನಾನು ಪದೇಪದೇ ಆ ಪತ್ರಗಳನ್ನು ಓದಿ ಧೈರ್ಯ ತಂದುಕೊಳ್ಳುತ್ತಿದ್ದೆ. ಬಾಗೇಪಲ್ಲಿಗೆ ಬಂದ ಪ್ರತಿ ಬಾರಿಯೂ ಅವರನ್ನು ಭೇಟಿಯಾಗುತ್ತಿದ್ದೆ. ಆ ಸಂದರ್ಭದಲ್ಲಿ ಅವರು ಹೇಳುತ್ತಿದ್ದ ಹಿತವಚನಗಳು ನನಗೆ ದಾರಿದೀಪಗಳಾಗಿದ್ದವು. ಅವರಲ್ಲಿಗೆ ಬರುತ್ತಿದ್ದ ಗಣ್ಯವ್ಯಕ್ತಿಗಳನ್ನು ನನಗೆ ಪರಿಚಯಿಸುತ್ತಿದ್ದರು. ನನ್ನ ಬಗೆಗಿನ ಅವರ ಕಾಳಜಿಗಳಿಂದಾಗಿ ನಾನು ಮಾನಸಿಕವಾಗಿ ಸದೃಢನಾಗುತ್ತಿದ್ದೆ. ಆತ್ಮಬಲ, ಮನೋಧೈರ್ಯ, ಆತ್ಮಸ್ಥೈರ್ಯಗಳು ನನ್ನಲ್ಲಿ ತುಂಬಿಕೊಳ್ಳುತ್ತಿದ್ದವು. ಬಹಳಷ್ಟು ಸಲ ಅವರ ಸಹೋದ್ಯೋಗಿಗಳೊಂದಿಗೆ ಕುಳಿತುಕೊಳ್ಳಲು ಹೇಳುತ್ತಿದ್ದ ಅವರ ಪ್ರೀತಿಯನ್ನು ಕಂಡು "ಇವರು ನಿಮ್ಮ ಮಗನೇ" ಎಂದೊಬ್ಬರು ಕೇಳಿದ್ದರು. ತಂದೆಯನ್ನು ಕಳೆದುಕೊಂಡಿದ್ದ ನನಗೆ ಆ ಮಟ್ಟದಲ್ಲಿ ಪ್ರೀತಿ ತೋರಿ, ಪ್ರಾಪಂಚಿಕ ಜ್ಞಾನವನ್ನು ತುಂಬಿದ ಗುರುಗಳು ಶ್ರೀಯುತ ಕೆ. ನಾರಾಯಣಸ್ವಾಮಿಯವರು. ಅವರ ಸಲಹೆಯಂತೆ ನಾರಾಯಣಸ್ವಾಮಿಯವರ ಸ್ನೇಹಿತರಾದ ಡಾ. ಎಸ್. ಬಿಸಿಲಯ್ಯ, ಕೃಷಿ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿಗಳುರವರನ್ನು ಭೇಟಿಯಾಗಿ ಪರಿಚಯಿಸಿಕೊಂಡಾಗ ಡಾ. ಬಿಸಿಲಯ್ಯನವರು ಕೆ.ಎನ್.ಎಸ್.ರವರ ವಿದ್ಯಾರ್ಥಿ ಜೀವನದಲ್ಲಿನ ಸರಳತೆ, ನಿಖರತೆ, ಸಮಾಜಸೇವೆ, ದಲಿತ ಸಂವೇದನೆ, ಜನಪರ ಕಾಳಜಿಗಳ ಬಗ್ಗೆ ವಿವರವಾಗಿ ಹೇಳಿದ್ದರು. ಇಂದಿಗೂ ಡಾ. ಬಿಸಿಲಯ್ಯರವರು ನಾರಾಯಣಸ್ವಾಮಿಯವರ ಸರಳ, ಸೌಜನ್ಯಪೂರ್ಣ ನಡುವಳಿಕೆಗಳ ಕುರಿತು ಹೇಳುತ್ತಲೇ ಇರುತ್ತಾರೆ.

ನಮ್ಮ ತಂದೆಯವರು ಶಿಕ್ಷಣ ಇಲಾಖೆಯಲ್ಲಿ ಉಪಾಧ್ಯಾಯರಾಗಿ ಸೇವೆಯಲ್ಲಿರುವಾಗಲೇ ನಮ್ಮ ತಂದೆ ಮೃತರಾದ ನಂತರ ಸಿಗುವ ಸರ್ಕಾರಿ ಸವಲತ್ತುಗಳನ್ನೆಲ್ಲಾ ಕೆ.ಎನ್.ಎಸ್.ರವರೇ ನಮ್ಮ ಕೈಸೇರುವಂತೆ ಮಾಡಿದರು. ಇಂದಿಗೂ ಇವರ ಮಾರ್ಗದರ್ಶನದಲ್ಲಿ ನನ್ನ ಜೀವನ ಸಾಗಿದೆ. ಕಷ್ಟದಲ್ಲಿರುವಾಗ ಕುಸಿಯದ, ಎತ್ತರಕ್ಕೇರಿದಾಗ ಹಿಗ್ಗದ ಮನೋಭಾವವನ್ನು ನನ್ನಲ್ಲಿ ಹುಟ್ಟುಹಾಕಿ ಅದು ಸುಭದ್ರವಾಗಿ ನೆಲೆಯೂರುವಂತೆ ಮಾಡಿದ ಮಹನೀಯರು ಕೆ. ನಾರಾಯಣಸ್ವಾಮಿಯವರು. ಇವರ

ಮಾರ್ಗದರ್ಶನ ದಿಂದಾಗಿಯೇ ನನ್ನ ಜೀವನದಲ್ಲಿ ಎದುರಾಗುವ ಔದ್ಯೋಗಿಕ, ಸಾಮಾಜಿಕ, ಕೌಟುಂಬಿಕ ಸವಾಲುಗಳನ್ನೆಲ್ಲಾ ಸಮರ್ಥವಾಗಿ ಎದುರಿಸುತ್ತಾ ಮುನ್ನಡೆಯುತ್ತಿದ್ದೇನೆ. ಇವುಗಳನ್ನೆಲ್ಲಾ ಗಮನಿಸುತ್ತಿದ್ದ ಶ್ರೀಯುತರ ಧರ್ಮಪತ್ನಿಯೂ ಸಹ ಚಾಚೂತಪ್ಪದೆ ಎಲ್ಲಾ ಸನ್ನಿವೇಶಗಳಲ್ಲಿಯೂ ಸಹ ಸಂಪೂರ್ಣ ಬೆಂಬಲಿಸಿದ್ದಾರೆ.

ಇದೇ ಸಂದರ್ಭದಲ್ಲಿ ಇನ್ನಿಬ್ಬರು ಮಹನೀಯರನ್ನು ಇಲ್ಲಿ ಸ್ಮರಿಸಲೇಬೇಕಾಗಿದೆ. ಪಾತ ಬಾಗೇಪಲ್ಲಿಯ ಶ್ರೀಯುತ ಟಿ. ನರಸಿಂಹಾರೆಡ್ಡಿ ಮತ್ತು ಬಾಗೇಪಲ್ಲಿಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ಶ್ರೀಯುತ ನಂಜುಂಡಪ್ಪನವರು. ಇವರಿಬ್ಬರ ಕುರಿತು ಕೆ. ನಾರಾಯಣಸ್ವಾಮಿಯವರಿಗೆ ಒಳ್ಳೆಯ ಅಭಿಪ್ರಾಯವಿತ್ತು. ಇವರಿಗೂ ಕೂಡಾ ಕೆ.ಎನ್.ಎಸ್.ರವರನ್ನು ಕಂಡರೆ ಅಪಾರ ಗೌರವ, ಅಭಿಮಾನ, ಇವರಿಬ್ಬರೂ ನನ್ನ ಕಷ್ಟಕಾಲದಲ್ಲಿ ಸಂಜೀವಿನಿಯಾಗಿದ್ದವರು. ಟಿ. ನರಸಿಂಹರೆಡ್ಡಿಯವರಂತೂ ಆಗಾಗ ಹಣಕಾಸು ಸಹಾಯ ನೀಡಿ ನನ್ನ ಸಮಸ್ಯೆಗಳನ್ನು ಪರಿಹರಿಸುತ್ತಿದ್ದರು. ಈ ಇಬ್ಬರೂ ನನ್ನ ಕುಟುಂಬದ ಹಿತೈಷಿಗಳಾಗಿದ್ದ ಪ್ರಾತಃ ಸ್ಮರಣೀಯರು. ಈಗ ಇವರಿಬ್ಬರೂ ಇಲ್ಲ.

ಇನ್ನು ಕೆ. ನಾರಾಯಣಸ್ವಾಮಿಯವರಂತೂ ಸಂಪೂರ್ಣವಾಗಿ ನನ್ನತ್ತ ಗಮನಹರಿಸಿ ಪ್ರತ್ಯಕ್ಷ ಪೋಷಕ ಪಾತ್ರ ವಹಿಸಿ ನನ್ನನ್ನು ತಿದ್ದಿ ತೀಡಿ ಎತ್ತರೆತ್ತರಕ್ಕೆ ಬೆಳೆಸಿದವರು. ಇವರಿಂದಲೇ ಇಂದು ನಾನೊಬ್ಬ ಉನ್ನತ ಸರ್ಕಾರಿ ಅಧಿಕಾರಿಯಾಗಿ, ಯಶಸ್ವಿಯಾಗಿ ಮುನ್ನಡೆಯುತ್ತಿದ್ದೇನೆ. ಅನುಕ್ಷಣವೂ ನನ್ನ ಮನಸ್ಸಿನಲ್ಲಿರುವ ನಾರಾಯಣಸ್ವಾಮಿಯವರ ಪ್ರಭಾವ ನನ್ನ ನಿತ್ಯದ ಸರ್ಕಾರಿ ಸೇವೆಯ ಮೇಲೆ ಅಗಾಧ ಪರಿಣಾಮಗಳನ್ನು ಬೀರುತ್ತಲೇ ಇರುತ್ತದೆ. 34 ವರ್ಷಗಳಷ್ಟು ಸುದೀರ್ಘ ಅವಧಿಯ ನಿಕಟ ಸಂಪರ್ಕದಲ್ಲಿರುವ ನನಗೆ ಒಂದು ಕ್ಷಣವೂ ಅನಾಥ ಭಾವ ಕಾಡುವುದಿಲ್ಲ. ಇಂದಿಗೂ ಅವರನ್ನು ನಾನು ವಾರಕ್ಕೆ ಒಂದು - ಎರಡು ಬಾರಿಯಾದರೂ ದೂರವಾಣಿ ಮುಖೇನ ತಪ್ಪದೇ ಮಾತನಾಡುತ್ತೇನೆ.

ಶ್ರೀಯುತ ಕೆ. ನಾರಾಯಣಸ್ವಾಮಿಯವರು ಯಾವತ್ತಿಗೂ ಇನ್ನೊಬ್ಬರ ಕುರಿತು ಹಗುರವಾಗಿ ಮಾತನಾಡಿದ್ದನ್ನು ನಾನು ಕಂಡಿಲ್ಲ. ಇವರೊಟ್ಟಿಗೆ ಮಾತು ಪ್ರಾರಂಭಿಸಿದರೆ ಸಂಬಂಧಿತ ವಿಷಯದ ಕುರಿತು ಮಾತ್ರವೇ ಚರ್ಚೆಯಿರುತ್ತದೆ. ವಿಷಯಾಂತರ ಮಾಡುವುದಿಲ್ಲ. ಸಮಯ ಕಳೆಯಲೆಂದು ಮಾತನಾಡುವ ಪ್ರವೃತ್ತಿ ಇವರಲ್ಲಿ ಇಲ್ಲವೇ ಇಲ್ಲ. ಇವರ ಎಲ್ಲ ಮಾತುಗಳೂ ಎದುರಿಗೆ ಕುಳಿತವರನ್ನು ಪ್ರಭಾವಿತಗೊಳಿಸುತ್ತವೆಯೇ ಹೊರತು ಯಾರನ್ನೂ ಘಾಸಿಗೊಳಿಸುವುದಿಲ್ಲ. ಇಂತಹ ಮಹನೀಯರು ಅಘೋಷಿತ ಪೋಷಕರಾಗಿ ನನ್ನ ಜೀವನದಲ್ಲಿ ಪ್ರವೇಶಿಸಿದ್ದು ಒಂದು ರೀತಿಯ ಕರ್ಮ-ಧರ್ಮ ಸಂಯೋಗ. ಪ್ರತಿಯೊಬ್ಬ ವ್ಯಕ್ತಿಗೂ ಜೀವನದ ಸುದೀರ್ಘ ಪಯಣದಲ್ಲಿ ಜೀವನದ ತಿರುವುಗಳಲ್ಲಿ ಹಲವು ಮಾರ್ಗದರ್ಶನಗಳ ಅವಶ್ಯಕತೆಯಿರುತ್ತದೆ. ನನ್ನ ಜೀವನದ ಅನೇಕ



ಮಹತ್ವದ ಘಟ್ಟಗಳಲ್ಲಿ ಮಾರ್ಗದರ್ಶನ ನೀಡಿದ ಮಹನೀಯರು, ನನ್ನ ಜೀವನದ ತಿರುವಿಗೆ ಕಾರಣರಾದವರು ಶ್ರೀಯುತ ಕೆ. ನಾರಾಯಣಸ್ವಾಮಿಯವರು.

ಪ್ರಸ್ತುತ ದಿನಮಾನದಲ್ಲಿ ಸಮಾಜದಲ್ಲಿ ಸ್ವಾರ್ಥ, ಹಣದಾಸೆ, ಅಸೂಯೆ ಮುಂತಾದ ಅವಗುಣಗಳೇ ತುಂಬಿಕೊಂಡಿರುವುದನ್ನು ಕಾಣುತ್ತೇವೆ. ಕೀರ್ತಿದಾಹ, ಅಧಿಕಾರದಾಹಗಳು ಹಣದಾಹ ತುಂಬಿಕೊಂಡ ಜನರ ನಡುವೆ ನಿಸ್ವಾರ್ಥದಿಂದ ಯಾವುದೇ ಆಕಾಂಕ್ಷೆಗಳಿಲ್ಲದೆ, ಕೇವಲ ಸಾಮಾಜಿಕ ಕಾಳಜಿಗಳಿಗಾಗಿಯೇ ಜೀವನ ಸವೆಸುತ್ತಿರುವ ನಾರಾಯಣಸ್ವಾಮಿಯವರದ್ದು ಬಹಳ ಉನ್ನತ ವ್ಯಕ್ತಿತ್ವವಾಗಿ ಗೋಚರಿಸುತ್ತದೆ. ಹತ್ತಿರದ ಸಂಬಂಧಿಕರೂ ಕೂಡ ಸ್ವಾರ್ಥದ ನಿಶೆಯಲ್ಲಿ ತಮ್ಮ ಹತ್ತಿರದವರನ್ನು ಮೂಸು ನೋಡದವರು ಈ ದಿನಗಳಲ್ಲಿರುವಾಗ ಮಾನವೀಯತೆಯ ಅನುಕಂಪ ಸಂಬಂಧ ಹುಟ್ಟುಹಾಕಿ ಜನಸೇವೆ ಸಲ್ಲಿಸುತ್ತಿರುವವರು ಶ್ರೀ ಕೆ.ಎನ್.ಎನ್.ರವರು. ವಿದ್ಯಾರ್ಥಿಗಳಿಗೆ ಅವರು ನೀಡುವ ಸಲಹೆಗಳು, ಮಾರ್ಗದರ್ಶನಗಳು, ಸಂಘ - ಸಂಸ್ಥೆಗಳನ್ನು ಕಟ್ಟಿ ಬೆಳೆಸುವ, ಅದರ ರೂಪುರೇಷೆಗಳನ್ನು ಯೋಜನೆಗಳು ದೈನಂದಿನ ಜನಜೀವನದ ಆರೋಗ್ಯ ಕಾಪಾಡುವಂತಹ ಅವರ ಜನಜಾಗೃತಿ ಮೂಡಿಸುವ ಯತ್ನಗಳು ದಲಿತಪರ ಕಾಳಜಿಗಳು, ಮಹಿಳಾ ಜಗತ್ತಿನ ಕುರಿತ ಸ್ತ್ರೀ ಸಂವೇದನಾ ಬರಹಗಳು, ಇತ್ಯಾದಿಯಾಗಿ ಎಲ್ಲವನ್ನೂ ಒಬ್ಬ ವ್ಯಕ್ತಿಯಲ್ಲಿ ಕಾಣಬಹುದಾದರೆ ಅದು ಕೆ. ನಾರಾಯಣಸ್ವಾಮಿಯವರಲ್ಲಿ ಮಾತ್ರ ಎಂದು ನಿಸ್ಸಂದೇಹವಾಗಿ ಹೇಳಬಹುದು. ಇಂತಹ ಒಬ್ಬ ನಿಜವಾದ ಮಾತೃ ಸಂವೇದನೆಗಳುಳ್ಳ ವ್ಯಕ್ತಿ ನನಗೆ ಮಾರ್ಗದರ್ಶಕರಾಗಿ, ಹಿತೈಷಿಗಳಾಗಿ ಸಿಕ್ಕಿದ್ದು ನನ್ನ ಪೂರ್ವಜನ್ಮ ಸುಕೃತ. ಕೆ. ನಾರಾಯಣಸ್ವಾಮಿಯವರಂತಹ ಮಾನವೀಯ ಕಳಕಳಿಯುಳ್ಳ ವ್ಯಕ್ತಿತ್ವಗಳು ನೂರ್ಕಾಲ ಬಾಳುವ ಮೂಲಕ ಸಮಾಜವನ್ನು ಉನ್ನತಿಗೇರಿಸಲಿ, ನಮ್ಮೆಲ್ಲರ ಭಿತ್ತಿಯೊಳಗೆ ಮುತ್ತಾಗಿ ಶತಾಯುಷಿಯಾಗಲಿ ಎಂಬುದು ನನ್ನ ಹಾರೈಕೆ.








# ನಮ್ಮ ನಡುವಿನ ಮಾನವತಾವಾದಿ

– ಡಾ. ಎಂ. ಹನುಮಂತಪ್ಪ

ಪ್ರೊಫೆಸರ್ ಮತ್ತು ಛೇರ್‌ಮನ್, ಗಣಕಯಂತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ

ಕಳೆದ ಹದಿನೈದು ವರ್ಷಗಳಿಂದ ನಾನು ಕೆಎನ್ನೆಸ್‌ರವರನ್ನು ಗಮನಿಸುತ್ತಾ ಬಂದಿದ್ದೇನೆ. ಅವರು ಶಿಕ್ಷಣ ಇಲಾಖೆಯಲ್ಲಿ ಹಂತಹಂತವಾಗಿ ಮೇಲೇರಿ ಜಂಟಿ ನಿರ್ದೇಶಕರಾಗಿ ನಿವೃತ್ತರಾದವರು. ಸದಾ ಸಮಸಮಾಜದ ನಿರ್ಮಾಣಕ್ಕಾಗಿ ಶ್ರಮಿಸುತ್ತಾ ಬಂದ ಇವರ ಜೀವನಗಾಥೆ ಎಂತಹವರನ್ನೂ ಬೆರಗುಗೊಳಿಸುತ್ತಾರೆ. "ಆಡುಮುಟ್ಟದ ಸೊಪ್ಪಿಲ್ಲ" ಎಂಬಂತೆ ಕೆ. ನಾರಾಯಣಸ್ವಾಮಿ ಯವರು ಸಮಾಜದ ಒಳಿತಿಗಾಗಿ ಹಲವಾರು ವಿಚಾರಗಳಲ್ಲಿ ಸೇವೆ ಸಲ್ಲಿಸಿರುವುದನ್ನು ಗಮನಿಸಿದಾಗ ಇವರೊಬ್ಬ ವ್ಯಕ್ತಿಯಲ್ಲ. ಬದಲಿಗೆ ಒಂದು ಶಕ್ತಿ ಎನಿಸಿಬಿಡುವುದರಲ್ಲಿ ಅನುಮಾನವಿಲ್ಲ. ಶಿಕ್ಷಣ ಕ್ಷೇತ್ರ ಇವರ ಮೂಲಕ್ಷೇತ್ರವಾದರೂ ಪರಿಸರ, ಕೃಷಿ, ಜಲಸಂಪನ್ಮೂಲ, ಸಮಾಜದ ಸಮುದಾಯ ಆರೋಗ್ಯ ಮುಂತಾದ ಅನೇಕ ಕ್ಷೇತ್ರಗಳಲ್ಲಿ ಕೆಎನ್ನೆಸ್‌ರವರು ಗಣನೀಯ ಸೇವೆಯನ್ನು ಸಲ್ಲಿಸಿದ್ದಾರೆ. ಅವಿಭಜಿತ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಕುಡಿಯುವ ನೀರಿನಲ್ಲಿ ಅತ್ಯಾಧಿಕ ಪ್ರಮಾಣದಲ್ಲಿ ಫ್ಲೋರೈಡ್ ಅಂಶವಿರುವುದನ್ನು ಗಮನಿಸಿ, ಸರಕಾರ ಮತ್ತು ಜನರನ್ನು ಎಚ್ಚರಿಸುತ್ತಲೇ ಫ್ಲೋರೈಡ್‌ನಿಂದ ಉಂಟಾಗಬಹುದಾದ ಮಾರಕ ಖಾಯಿಲೆಗಳ ವಿರುದ್ಧ ಸಮರಸಾರಿದವರು ಕೆಎನ್ನೆಸ್, ಇವರ ಫ್ಲೋರೋಸಿಸ್ ವಿರುದ್ಧದ ಸಮರದಿಂದಾಗಿ ಎಚ್ಚೆತ್ತುಕೊಂಡ ಸರಕಾರ ಫ್ಲೋರೋಸಿಸ್ ನಿವಾರಣೆಗಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡದ್ದು ಚಿಕ್ಕಬಳ್ಳಾಪುರ ಜಿಲ್ಲೆಯ ಹಲವು ಭಾಗಗಳಲ್ಲಿನ ಜನರಿಗೆ ಪ್ರಯೋಜನವಾಯಿತು.



ಅಲ್ಲದೆ ಕೃಷಿ ಕ್ಷೇತ್ರದಲ್ಲಿ ಹಲವು ಯೋಜನೆಗಳನ್ನು ಪ್ರಾಯೋಗಿಕವಾಗಿ ಸಾದರಪಡಿಸಿದ ನಾರಾಯಣಸ್ವಾಮಿಯವರು ಒಂದು ಎಕರೆಯಲ್ಲಿ ಹಲವು ಬೆಳೆಗಳನ್ನು ಹೇಗೆ ಬೆಳೆಯಬಹುದು ಎಂಬುದರ ಬಗ್ಗೆ ಕೃಷಿತಜ್ಞರಿಂದ ಕಾರ್ಯಾಗಾರಗಳನ್ನು ಏರ್ಪಡಿಸಿ ರೈತರ ಬದುಕಿನಲ್ಲಿ ಆಶಾಕಿರಣವನ್ನು ತುಂಬಿದರು. ನೀರಿಲ್ಲದ ಬರದ ನಾಡಲ್ಲಿ ಹೆಚ್ಚು ನೀರನ್ನು ಬೇಡದ ಸಿರಿಧಾನ್ಯಗಳನ್ನು ಪರಿಚಯಿಸುವ ಮೂಲಕ ರೈತರ ಜಮೀನಿನಲ್ಲಿ ಸಿರಿಯನ್ನೇ ಬೆಳೆಸಲು ಯತ್ನಿಸಿದವರು.

ಅಪ್ಪಟ ಗಾಂಧಿವಾದಿಯಾದ ಕೆಎನ್ನೆಸ್‌ರವರು ತಮ್ಮ ಬದುಕಿನ ಉದ್ದಕ್ಕೂ ಸರಳಜೀವನವನ್ನು ನಡೆಸುತ್ತಲೇ ಸಮಾಜಕ್ಕೆ ಮಾದರಿಯಾಗಿ ನಿಂತವರು. ಗೌರೀಬಿದನೂರು ತಾಲ್ಲೂಕಿನ ಕುಡುಮಲಕುಂಟೆ ಎಂಬ ಆಂಧ್ರದ ಗಡಿಭಾಗಕ್ಕೆ ಹೊಂದಿಕೊಂಡಂತಿರುವ ಒಂದು ಕುಗ್ರಾಮದಲ್ಲಿ ಹುಟ್ಟಿದ ನಾನು ಮುಂದೆ ಬೆಂಗಳೂರು ವಿಶ್ವವಿದ್ಯಾಲಯದ ಗಣಕಯಂತ್ರ ವಿಭಾಗದ ಪ್ರೊಫೆಸರ್ ಮತ್ತು ಛೇರ್‌ಮನ್ ಆದಾಗ ತಮ್ಮ ಸಮುದಾಯದ ಗ್ರಾಮೀಣ ಹಿನ್ನೆಲೆಯ ಹುಡುಗ ಉನ್ನತ ಸ್ಥಾನಕ್ಕೇದನಲ್ಲ ಎಂದು ಅತ್ಯಂತ ಸಂಭ್ರಮಿಸಿದ ಸರಳ ಜೀವಿ. ನನ್ನಂತಹ ಅದೆಷ್ಟೋ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಕರೆದು ಪ್ರೋತ್ಸಾಹಿಸಿ, ಮೈದಡವಿ, ಸನ್ಮಾನಿಸುವ ಕೆಎನ್ನೆಸ್‌ರವರು ಸದಾ ಕಾಲ ವಿದ್ಯಾರ್ಥಿಗಳಲ್ಲಿ ಸ್ಫೂರ್ತಿಯನ್ನು ಉಕ್ಕಿಸುತ್ತಲೇ ಇದ್ದಾರೆ.

ಇವರ ಕುರಿತಾಗಿ ಒಂದು ಅಭಿನಂದನಾ ಗ್ರಂಥ ಹೊರಬರುತ್ತಿರುವ ವಿಚಾರ ತಿಳಿದು ಬಹಳ ಸಂತೋಷಪಟ್ಟ ಅವರ ಸಾವಿರಾರು ಅಭಿಮಾನಿಗಳಲ್ಲಿ ನಾನೂ ಒಬ್ಬ. ಅದರ ಕುರಿತಾಗಿ ಲೇಖನ ಕಳುಹಿಸಲು ಅಭಿನಂದನಾ ಸಮಿತಿ ಕೋರಿದಾಗ ನನ್ನಲ್ಲಿ ಸಂಭ್ರಮದ ಅಲೆಯೊಂದು ತೇಲಿಹೋಗಿದ್ದು ಸಹಜ. ಏಕೆಂದರೆ ಕೆಎನ್ನೆಸ್‌ರವರ ಕುರಿತಾಗಿ ಬರೆಯುವುದೆಂದರೆ ಅದೊಂದು ಸಮಾಜದ ಕಾರ್ಯ ಎಂದೇ ಭಾವಿಸುತ್ತೇನೆ.

ಕೆಎನ್ನೆಸ್‌ರವರು ಬರೆಯುತ್ತಾ ಕುಳಿತರೆ ಅದೊಂದು ಮುಗಿಯದ ಲೇಖನವಾಗಿ ಮುಂದುವರೆಯುತ್ತಲೇ ಇರುತ್ತದೆ. ಅವರದು ಪದಗಳಿಗೆ ನಿಲುಕದ ವ್ಯಕ್ತಿತ್ವ, ಸಮಾಜಕ್ಕೆಂದೇ ಸದಾತುಡಿಯುವ ಮನುಷ್ಯತ್ವ, ಇಂತಹ ವ್ಯಕ್ತಿಗಳು ಸಮಾಜಕ್ಕೆ ಮಾದರಿಯಾಗಿ, ಜೀವಂತಿಕೆಯ ಸಂಕೇತವಾಗಿ ಸದಾ ಮನಸ್ಸಿನಲ್ಲಿರುತ್ತಾರೆ. ಅವರ ಆಶಯಗಳು ಸದಾ ನಮ್ಮೊಂದಿಗಿರಲಿ.





14

# ಹಸಿರು ಕ್ರಾಂತಿಯ ಕಿಡಿ - ಕೆವೆನ್ನೆಸ್

**- ಎನ್. ಬಾಬಣ್ಣ,** ಐ.ಎ.ಎಸ್.
ಅಪರ ಆಯುಕ್ತರು (ನಿವೃತ್ತ)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು

ಶ್ರೀಯುತ ಕೆ. ನಾರಾಯಣಸ್ವಾಮಿಯವರು ಬಹಳ ಅಪರೂಪದ ವ್ಯಕ್ತಿತ್ವವನ್ನು ಹೊಂದಿದವರು. ಆಂಧ್ರ - ಕರ್ನಾಟಕದ ಗಡಿಭಾಗದ ಹೊಸೂರು ಎಂಬ ಸಣ್ಣ ಗ್ರಾಮದಲ್ಲಿ ಜನಿಸಿ, ಅತ್ಯಂತ ವಿಸ್ತಾರವಾಗಿ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡು, ಹಲವು ಸಾವಿರ ಮಂದಿಗೆ ದಾರಿದೀಪವಾದವರು. ಆಂಧ್ರಪ್ರದೇಶಕ್ಕೆ ಹೊಂದಿಕೊಂಡಂತಿರುವ ಕರ್ನಾಟಕದ ಅವಿಭಜಿತ ಕೋಲಾರ - ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿಯನ್ನು ಮುನ್ನಡೆಸಿ, ತಮ್ಮ ವಿಚಾರಧಾರೆಗಳ ಮೂಲಕ ದಲಿತ ಸಮುದಾಯದಲ್ಲಿ ಜಾಗೃತಿಯನ್ನು ಮೂಡಿಸಿದ ಹಿರಿಮೆ ಕೆ. ನಾರಾಯಣಸ್ವಾಮಿಯವರಿಗೆ ಸಲ್ಲುತ್ತದೆ. 1980ರ ದಶಕದಲ್ಲಿ ಇಡೀ ಜಿಲ್ಲೆಯಾದ್ಯಂತ ಸಂಚರಿಸಿ ದಲಿತರ ಮನೆಮನಗಳಲ್ಲಿ ವೈಚಾರಿಕ ಕಿಡಿಯನ್ನು ಹೊತ್ತಿಸಿ, ವ್ಯವಸ್ಥೆಯ ಒಳಗಿನಿಂದಲೇ ಜನಸಾಮಾನ್ಯರು ತಮ್ಮ ಹಕ್ಕುಗಳನ್ನು ಪಡೆಯುವ ಮಾರ್ಗೋಪಾಯಗಳನ್ನು ತಿಳಿಸಿಕೊಟ್ಟ ಶ್ರೀ ಕೆ. ನಾರಾಯಣಸ್ವಾಮಿಯವರು ಈ ಭಾಗದ ಗಾಂಧಿಯೆಂದೇ ಹೇಳಬಹುದು.

ಅಂತೆಯೇ ಶ್ರೀಯುತ ಕೆ. ನಾರಾಯಣಶ್ವಾಮಿಯವರು ಸಮಾಜದ ಹಲವು ಸಮುದಾಯಗಳಿಗೂ ಹಲವು ರೀತಿಗಳಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಹಿಂದುಳಿದ ಸಮುದಾಯದ ಪ್ರತಿಭಾವಂತ



ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ಸಲುವಾಗಿ ಸುಮಾರು 30 ವರ್ಷಗಳಿಂದ ತಾಲ್ಲೂಕು ಕೇಂದ್ರದಲ್ಲಿ ಪ್ರತಿಭಾ ಪುರಸ್ಕಾರ ಕಾರ್ಯಕ್ರಮವನ್ನು ಆಯೋಜಿಸುತ್ತಾ ಬಂದಿದ್ದಾರೆ. ಸುಮಾರು 30 ವರ್ಷಗಳ ಹಿಂದೆ ಇವರು ಪ್ರಾರಂಭಿಸಿದ ಪ್ರತಿಭಾ ಪುರಸ್ಕಾರ ಕಾರ್ಯಕ್ರಮವೇ ಇಂದು ನಾಡಿನಾದ್ಯಂತ ಪಸರಿಸಿದೆ ಎಂದೇ ನನ್ನ ಭಾವನೆ. ಪ್ರತಿಭಾ ಪುರಸ್ಕಾರ ಎಂಬ ಪರಿಕಲ್ಪನೆಯನ್ನು ನಾಡಿಗೆ ನೀಡಿದ ಶ್ರೇಷ್ಠ ಶಿಕ್ಷಣ ತಜ್ಞ ನಾರಾಯಣಸ್ವಾಮಿಯವರು ಅಪರೂಪದ ವ್ಯಕ್ತಿಗಳಲ್ಲಿ ಒಬ್ಬರು ಎನ್ನಲು ಅಡ್ಡಿಯಿಲ್ಲ.

ಇದಲ್ಲದೆ ಕೆಎನ್ನೆಸ್‌ರವರು ಶಿಕ್ಷಣ ಕ್ಷೇತ್ರವನ್ನು ಹೊರತುಪಡಿಸಿ ಕೃಷಿ ಕ್ಷೇತ್ರ, ಆರ್ಥಿಕ ಕ್ಷೇತ್ರ ಮುಂತಾದವುಗಳಲ್ಲಿಯೂ ನೆಲಮಟ್ಟದಲ್ಲಿ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಿರುವುದನ್ನು ಕಾಣಬಹುದು. ಒಂದು ಎಕರೆ ನೀರಾವರಿ ರಹಿತ ಪ್ರದೇಶದಲ್ಲಿ ಬೆಳೆಯಬಹುದಾದ ಸಿರಿಧಾನ್ಯಗಳನ್ನು ಪರಿಚಯಿಸಿದ ಕೆಎನ್ನೆಸ್ ನೀರಿಲ್ಲದ ಪ್ರದೇಶದಲ್ಲಿಯೂ ಬೆಳೆ ತೆಗೆಯುವ ವಿಧಾನಗಳನ್ನು ರೈತರಿಗೆ ಪ್ರಾತ್ಯಕ್ಷಿಕೆಗಳ ಮುಖಾಂತರ ತೋರಿಸಿಕೊಟ್ಟರು. ಇದಲ್ಲದೆ ಫಾದರ್ ಆಫ್ ಮೈಕ್ರೋ ಎಕನಾಮಿಕ್ಸ್ ಮೊಹಮ್ಮದ್ ಯೂನಸ್‌ರವರ ತತ್ವ ಸಿದ್ಧಾಂತಗಳಂತೆ ತಳ ಸಮುದಾಯದ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಕೋಳಿ, ಕುರಿ, ಮೇಕೆ ಮುಂತಾದ ಸಣ್ಣ ಪ್ರಾಣಿಗಳನ್ನು ಸಾಕುವ ಮೂಲಕ ಆರ್ಥಿಕ ಅಭಿವೃದ್ಧಿ ಸಾಧ್ಯವೆಂದು ಅನೇಕ ಕುಟುಂಬಗಳಿಗೆ ಇವುಗಳನ್ನು ಸಣ್ಣ ಪ್ರಮಾಣದಲ್ಲಿ ನೀಡಿ ಆರ್ಥಿಕ ಅಭಿವೃದ್ಧಿಗಾಗಿ ಶ್ರಮಿಸಿದರು. ಇವರು ಚಿಂತಾಮಣಿಯ ಸರ್ಕಾರಿ ಕಾಲೇಜಿನಲ್ಲಿ ಮೊದಲ ಬಾರಿಗೆ ಉಪನ್ಯಾಸಕರಾಗಿ ನೇಮಕಗೊಳ್ಳುವ ಮುಂಚೆನಿಂದಲೂ ನಾನು ನಾರಾಯಣಸ್ವಾಮಿಯವರನ್ನು ಹತ್ತಿರದಿಂದ ಬಲ್ಲೆ. ಶ್ರೀಯುತ ಕೆ. ನಾರಾಯಣಸ್ವಾಮಿಯವರ ಮಾವ ಕಲ್ಲೂಡಿಯ ಗಂಗಪ್ಪನವರೇ ನನ್ನ ಶಿಕ್ಷಣ ಮತ್ತು ಸಾಮಾಜಿಕ ಉನ್ನತಿಗೆ ಕಾರಣರಾದವರು, ಆಗಿನಿಂದಲೂ ನಾನು ಕೆಎನ್ನೆಸ್‌ರವರಲ್ಲಿನ ಸಾಮಾಜಿಕ ದೃಷ್ಟಿಕೋನಗಳನ್ನು ಕಾಣುತ್ತಾ ಬಂದಿದ್ದೇನೆ. ದಲಿತ ಸಂಘರ್ಷ ಸಮಿತಿಯ ನೇತಾರರಾಗಿ, ಹಲವು ಸಂಘ ಸಂಸ್ಥೆಗಳ ಸಂಘಟನಾಕಾರರಾಗಿ, ಹಲವು ಸಮಾಜಮುಖಿ ಕಾರ್ಯಗಳನ್ನು ಸಮರ್ಥವಾಗಿ ಮಾಡಿದ್ದಾರೆ. ಜಲಶಿಕ್ಷಕರಾಗಿ, ಶಿಕ್ಷಣ ತಜ್ಞರಾಗಿ ಇವರು ಮಾಡಿದ ಕಾರ್ಯಗಳು ವ್ಯಾಪಕ ಪ್ರಶಂಸೆಗೆ ಕಾರಣವಾಗಿವೆ.

ಇದಲ್ಲದೆ ಗೌರೀಬಿದನೂರು ತಾಲ್ಲೂಕಿನ ಅಸಂಘಟಿತ ದಲಿತ ಸಮುದಾಯವನ್ನು ಸಂಘಟಿತಗೊಳಿಸಿ, ಸಮುದಾಯದ ಜಾಗೃತಿ ಕಾರ್ಯಗಳನ್ನು ಕೈಗೊಳ್ಳುವಂತೆ ಮಾಡಿದ್ದು ನಾರಾಯಣಸ್ವಾಮಿಯವರ ಸಂಘಟನಾ ಚತುರತೆಗೆ ಸಾಕ್ಷಿ. ಸರ್ಕಾರದ ಹಲವು ಉನ್ನತ ಹುದ್ದೆಗಳನ್ನು ನಿಭಾಯಿಸಿದ ನನ್ನನ್ನು ಕರೆದು 'ನೀವು ನಾಯಕ ಸಂಘಕ್ಕೆ ಅಧ್ಯಕ್ಷರಾಗಬೇಕು' ಎಂದಾಗ ಇಲ್ಲವೆನ್ನಲಾಗದೆ ಗೌರೀಬಿದನೂರು ನಾಯಕ ಸಂಘದ ಅಧ್ಯಕ್ಷನಾಗಿ,



ಜವಾಬ್ದಾರಿಯುತವಾಗಿ ಕಾರ್ಯ ನಿರ್ವಹಿಸುತ್ತಿದ್ದೇನೆ. ಇದನ್ನು ನಾನು ಕೆಎನ್ನೆಸ್‌ರವರಿಗೆ ನೀಡುತ್ತಿರುವ ಗೌರವವೆಂದೇ ಭಾವಿಸುತ್ತೇನೆ. ಅವರ ಸಾಮಾಜಿಕ ಕಳಕಳಿ, ಜನಾಂಗದ ಕುರಿತಾಗಿ ಅವರಿಗಿರುವ ಕಾಳಜಿಗಳನ್ನು ಕಂಡು ಮೂಕವಿಸ್ಮಿತನಾಗಿದ್ದೇನೆ. ಅವರ ಅನೇಕ ಕಾರ್ಯಗಳಿಂದ ಪ್ರೇರಿತನಾಗಿದ್ದೇನೆ.

ಇವರ ಕುರಿತಾಗಿ ಅಭಿನಂದನಾ ಗ್ರಂಥ ಹೊರತರುತ್ತಿರುವ ಈ ಕಾರ್ಯದಲ್ಲಿ ಭಾಗಿಯಾಗಿರುವುದು ನನಗೆ ಅತ್ಯಂತ ಹೆಮ್ಮೆ ಎನಿಸುತ್ತಿದೆ. ಶ್ರೀಯುತ ಕೆ. ನಾರಾಯಣಸ್ವಾಮಿಯವರ ಸಾಮಾಜಿಕ ಚಿಂತನೆಗಳು, ವಿಚಾರಧಾರೆಗಳು ಮತ್ತು ಅವರ ಆಶಯಗಳಿಂದಾಗಿ ಇಂದಿನ ಯುವ ಸಮೂಹ ಪ್ರೇರಿತರಾಗಲಿ, ಯುವ ಜನರಿಗೆ ನಾರಾಯಣಸ್ವಾಮಿಯವರ ಮಾರ್ಗದರ್ಶನ ನೂರು ಕಾಲ ಸಿಗಲಿ ಎಂಬುದು ನನ್ನ ಆಶಯ.







15

# ಚಳವಳಿಯ ಹಿಂದಿನ ಪ್ರೇರಕ ಶಕ್ತಿ

**– ಶಿವಾಜಿ ಗಣೇಶನ್**
ಹಿರಿಯ ಪತ್ರಕರ್ತ

ಎಪ್ಪತ್ತು ಎಂಬತ್ತರ ದಶಕದಲ್ಲಿ ದಲಿತ ಸಂಘರ್ಷ ಸಮಿತಿಯು ಒಂದು ಸೈದ್ಧಾಂತಿಕ ಮತ್ತು ಜನಪರ ಚಳವಳಿಯಾಗಿ ಬೆಳೆಯುವಲ್ಲಿ ಅನೇಕರ ಬುದ್ಧಿಶಕ್ತಿ, ಬದ್ಧತೆ ಮತ್ತು ಅವರೊಳಗಿನ ವೈಚಾರಿಕತೆಯನ್ನು ಯುವಕರ ತಲೆಗೆ ತುಂಬುವ ಮೂಲಕ ಹಲವರ ಪರಿಶ್ರಮ ಕೆಲಸ ಮಾಡಿದೆ. ಅಂತಹ ಒಂದು ಕ್ರಾಂತಿಕಾರಕ ಮತ್ತು ಜನಪರ ಚಳವಳಿಗೆ ಮಿದುಳಾಗಿ ಕೆಲಸ ಮಾಡಲು ಸಮಾಜದ ಹಿನ್ನೆಲೆ, ಇತಿಹಾಸ, ಪ್ರಸ್ತುತ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಯ ಬಗೆಗೆ ತಿಳುವಳಿಕೆ, ಮತ್ತು ಚಳವಳಿಯನ್ನು ಯಾವ ದಿಕ್ಕಿನಲ್ಲಿ ಎಲ್ಲಿಗೆ ಕೊಂಡೊಯ್ಯಬೇಕೆನ್ನುವ ಬಗೆಗೆ ಸ್ಪಷ್ಟವಾದ ಅರಿವಿರಬೇಕು. ಅಂತಹವರ ಮಾರ್ಗದರ್ಶನವಿದ್ದರೆ ಅಂತಹ ಚಳವಳಿಯ ಮುನ್ನೋಟಕ್ಕೆ ಭವಿಷ್ಯವಿರುತ್ತದೆ. ದಲಿತ ಸಂಘಟನೆಯ ಆರಂಭದ ದಿನಗಳಲ್ಲಿ ದಲಿತ ಚಳವಳಿಗೆ ಇಂತಹದೊಂದು ಮಾರ್ಗದರ್ಶನ ಹಲವರಿಂದ ದೊರೆತದ್ದರಿಂದ ಅದು ಶೋಷಿತರ ದನಿಯಾಗಿ ರಾಜ್ಯದಲ್ಲಿ ಬೃಹತ್‌ಶಕ್ತಿಯಾಗಿ ಬೆಳೆಯಲು ಕಾರಣವಾಯಿತು.

ದಲಿತ ಚಳುವಳಿಗೆ ಒಂದು ದಿಕ್ಕು ತೋರುವಲ್ಲಿ ಆ ದಿನಗಳಲ್ಲಿ ಬಿ. ಕೃಷ್ಣಪ್ಪ, ದೇವನೂರ ಮಹಾದೇವ, ಸಿದ್ದಲಿಂಗಯ್ಯ ಮುಂತಾದವರ ಜೊತೆಗೆ ಡಾ. ಬಾಬಾ ಸಾಹೇಬ ಅಂಬೇಡ್ಕರ್ ಅವರ ಸಿದ್ಧಾಂತ, ಅವರು ನಡೆಸಿದ ಹೋರಾಟ ಮತ್ತು ನಕ್ಸಲೀಯ ಚಳವಳಿಯ ಹೆಜ್ಜೆಗಳು ಮತ್ತು ಅದರ ಚಿಂತನೆಗಳನ್ನು ಪರಿಚಯಿಸಿದವರು ಈಗ 70ರ ವಯೋಮಾನದ ಗಡಿದಾಟಿರುವ ನಾರಾಯಣ ಸ್ವಾಮಿ ಅವರು.




ಚಳವಳಿಯ ಆರಂಭದ ದಿನಗಳಲ್ಲಿ ಹಲವು ಹಿರಿಯರ ಜೊತೆ ಬೆಳೆದ ನನಗೆ ವಯಸ್ಸಿನಲ್ಲಿ ನನಗಿಂತ 10–15 ವರ್ಷ ಹಿರಿಯರಾದ ಕೃಷ್ಣಪ್ಪ ಮತ್ತು ನಾರಾಯಣಸ್ವಾಮಿ ಅವರು ಒಂದು ರೀತಿಯಲ್ಲಿ ಫಾದರ್ ಫಿಗರ್ (ತಂದೆ ಸಮಾನರು)ನಂತೆ ಕಾಣುತ್ತಿದ್ದರು. ನಾನು ಮೈಸೂರಿನ ಮಹಾರಾಜ ಕಾಲೇಜು ಮತ್ತು ಮಾನಸ ಗಂಗೋತ್ರಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಕೃಷ್ಣಪ್ಪನವರು ಬಂದಾಗಲೆಲ್ಲ ನಾನಿದ್ದ ಮಹಾರಾಜ ಕಾಲೇಜು ಹಾಸ್ಟೆಲ್‌ನ ನನ್ನ ರೂಂ ಕಾಯಂ ಆಗಿರುತ್ತಿತ್ತು. ಮೈಸೂರಿನಲ್ಲಿ ಸಭೆ ಸಮಾರಂಭ, ವಿಚಾರ ಸಂಕಿರಣಗಳಿದ್ದಾಗ ಮಾತ್ರ ನಾರಾಯಣಸ್ವಾಮಿ ಅವರು ಬರುತ್ತಿದ್ದರು.

ಮಾತು ಮತ್ತು ನಡತೆಯಲ್ಲಿ ಮೃಧು ಸ್ವಭಾವ, ಇತಿ ಮಿತಿಯ ಮಾತಿನ ನಾರಾಯಣ ಸ್ವಾಮಿ ಅವರು ಅಂಬೇಡ್ಕರ್ ಮತ್ತು ತೆಲುಗಿನ ಬೋಯಿ ಭೀಮಣ್ಣ ಅವರ ವಿಚಾರಗಳನ್ನು ಸಣ್ಣ ಸಣ್ಣ ಪುಸ್ತಕ ರೂಪದಲ್ಲಿ ಪ್ರಕಟಿಸಿ ತಂದು ನಮ್ಮ ತಲೆಯಲ್ಲಿ ವೈಚಾರಿಕ ದಾರಿ ದೀಪವನ್ನು ಹಚ್ಚಿದ ಕೀರ್ತಿ ನಾರಾಯಣಸ್ವಾಮಿ ಅವರಿಗೆ ಸಲ್ಲಬೇಕು. ನಮ್ಮ ಕೋಲಾರ ಜಿಲ್ಲೆಯ ದಲಿತ ಗೆಳೆಯರಿಗೆ ಮೇಸ್ಟ್ರು ಎಂದೇ ಆತ್ಮೀಯವಾಗಿರುವ ಅವರು ಬಂದರೆಂದರೆ ಅವರ ಬ್ಯಾಗಿನಲ್ಲಿ ಏನಾದರೊಂದು ಹೊಸ ಚಿಂತನೆಯ ಕ್ರಾಂತಿಕಾರಿ ಪುಸ್ತಕಗಳಿರುತ್ತವೆ. ಡಾ. ಬಾಬಾಸಾಹೇಬರ ಬಗೆಗೆ ಪುಸ್ತಕಗಳೇ ಸಿಗದ 35 ವರ್ಷಗಳ ಹಿಂದೆ ನಾರಾಯಣಸ್ವಾಮಿ ಅವರು ಅಂಬೇಡ್ಕರ್ ಅವರ ಪುಸ್ತಕಗಳನ್ನು ಪಡೆದು ಅವುಗಳನ್ನು ಅನುವಾದಿಸಿ ಕನ್ನಡದ ಓದುಗರಿಗೆ ನೀಡಿದ ಸಾಹಸ ಮತ್ತು ಅವರ ಬದ್ಧತೆ ನಿಜಕ್ಕೂ ಹೆಮ್ಮೆಯ ಸಂಗತಿ. ಹೀಗಾಗಿ ದಲಿತ ಚಳುವಳಿಗೆ ನಾರಾಯಣಸ್ವಾಮಿ ಅವರು ಕ್ರಾಂತಿಕಾರಿ ನಾಯಕರ ವಿಚಾರಗಳನ್ನು ನೀಡಿದ್ದರಿಂದ ದಲಿತ ಚಳುವಳಿ ಆಗ ಒಂದು ಸಿದ್ಧಾಂತವನ್ನು ರೂಪಿಸಿಕೊಂಡು ಮುನ್ನಡೆಯಲು ಸಾಧ್ಯವಾಯಿತು.

ತುತ್ತಿನ ಚೀಲವನ್ನು ತುಂಬಿಸಿಕೊಳ್ಳಲು ಸರ್ಕಾರದ ಶಾಲೆ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿ, ಕೊನೆಗೆ ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕರಾಗಿ ನಿವೃತ್ತರಾದರೂ, ಅವರು ಚಳವಳಿಗಳ ಜೊತೆಗಿನ ಬಾಂಧವ್ಯವನ್ನು ಬಿಡಲಿಲ್ಲ. ಅವರ ಸರಳ ಬದುಕು, ನುಡಿಯಂತೆ ನಡೆ, ಆದರ್ಶ ಅನುಕರಣೀಯ. ಶಿಕ್ಷಣ, ದಲಿತ ಚಳವಳಿ ಜೊತೆಗೆ ಅವರದು ಸಮಾಜದಲ್ಲಿ ಜನರಿಗೆ ಆಗುವ ಹಲವಾರು ಅನುಕೂಲಗಳ ಬಗೆಗೆ ಅವರ ಚಿಂತನೆ ನಡೆದೇ ಇರುತ್ತದೆ. ವಿಜ್ಞಾನ, ಆರೋಗ್ಯ, ಸಾವಯವ ಕೃಷಿ, ಜಲಸಂಪತ್ತು ಹೀಗೆ ಹತ್ತಾರು ಕಡೆ ಅವರ ಮನಸ್ಸು ಕೆಲಸ ಮಾಡುತ್ತಿರುತ್ತದೆ. ಹಾಗಾಗಿ ಶ್ರೀ ನಾರಾಯಣ ಸ್ವಾಮಿ ಅವರು ತಾವು ಕೆಲಸ ಮಾಡುವ ಸ್ಥಳಗಳಲ್ಲಿ ಜನರಿಗೆ ಆತ್ಮೀಯರಾಗಿ ಬಿಡುತ್ತಾರೆ. ಅದು ಅವರ ಜಾಯಮಾನ. ಅದು ಅವರ ಅಂತಃಶಕ್ತಿ.









16

# ಸಾಧನೆಯ ಸಿರಿ ಬೆಳಗು

– ಎಂ. ನರಸಿಂಹಯ್ಯ
ಅಧ್ಯಕ್ಷರು, ಅಖಿಲ ಕರ್ನಾಟಕ ವಾಲ್ಮೀಕಿ ನಾಯಕ ಮಹಾಸಭಾ (ರಿ.)

ಹೊಸ ನೀರು ಬಂದಾಗ ಹಳೆ ನೀರು ಕೊಚ್ಚಿ ಹೋಗುತ್ತದೆ. ಅದೇ ರೀತಿ ಹೊಸದೊಂದು ಸುದ್ದಿ ಬಂದಾಗ ಹಳೆಯ ಸುದ್ದಿಗಳು ಪ್ರಾಮುಖ್ಯತೆ ಕಳೆದುಕೊಳ್ಳುತ್ತವೆ.

ಈ ಮೇಲಿನ ಮಾತು ಒಂದು ರೂಢಿ. ಶ್ರೀಯುತ ಪ್ರೊ. ಕೆ. ನಾರಾಯಣಸ್ವಾಮಿಯವರು ಸರ್ಕಾರಿ ಸೇವೆಯಿಂದ ನಿವೃತ್ತರಾಗಿ ಸಮಾಜಸೇವೆಯಲ್ಲಿ ತೊಡಗಿಸಿಕೊಂಡು ಅವರು ಸಲ್ಲಿಸಿದ ಸೇವೆ ಅನನ್ಯವಾದುದು. ಆದ್ದರಿಂದ ಮೇಲಿನ ಉಕ್ತಿಯು ನಾರಾಯಣಸ್ವಾಮಿಯವರ ಬಗೆಗೆ ಅನ್ವಯವಾಗದೆಂಬ ಅಭಿಪ್ರಾಯ ನನ್ನದು.

ಶ್ರೀ ಕೆ. ನಾರಾಯಣಸ್ವಾಮಿಯವರು ಸರ್ಕಾರಿ ಸೇವೆಯಿಂದ ನಿವೃತ್ತರಾದರೂ ಇತರ ಅಧಿಕಾರಿಗಳಂತೆ ಸುಮ್ಮನೆ ಮನೆಯಲ್ಲಿ ಕುಳಿತವರಲ್ಲ. ಅವರು ಒಮ್ಮೆಲೆ ಹತ್ತಾರು ವಿಚಾರಗಳನ್ನು ಕುರಿತು ಯೋಚಿಸುತ್ತಿರುತ್ತಾರೆ. ಅದರಲ್ಲೂ ಗ್ರಾಮೀಣ ಪ್ರದೇಶದ ನಾಯಕ ಸಮುದಾಯವನ್ನೊಳಗೊಂಡಂತೆ ಇತರ ದುರ್ಬಲ ವರ್ಗಗಳ ಸ್ಥಿತಿಗತಿಯ ಬಗ್ಗೆ ಅವರು ಸದಾ ಹಾತೊರೆಯುತ್ತಿರುತ್ತಾರೆ.

ಒಬ್ಬ ನಾಯಕನಿಗಿರಬೇಕಾದ ದೂರದೃಷ್ಟಿ, ಸಮಯಪ್ರಜ್ಞೆ, ಆಯ್ಕೆಯ ವಿವೇಚನಾಶೀಲತೆ, ಅಧ್ಯಯನಶೀಲತೆ, ಸಂಘಟನೆ, ಸಾಮಾಜಿಕ ಹೊಣೆಗಾರಿಕೆ, ಬೌದ್ಧಿಕ ಸಂಪತ್ತು ಮತ್ತು ಸಂಪರ್ಕ,



ವಾಕ್ ಪಟುತ್ವ, ಮಾನವೀಕರಣದ ಪರವಾದ ಹೋರಾಟದ ಮನೋಭಾವ, ವಿನಯಶೀಲತೆ, ವಿಮರ್ಶನ ಪ್ರಜ್ಞೆ, ಚಿಕಿತ್ಸಕ ಬುದ್ಧಿ, ನೈತಿಕ ದೃಷ್ಟಿಕೋನ, ಬದ್ಧತೆ, ಸಾಂಸ್ಕೃತಿಕ ಪ್ರಜ್ಞೆ, ಆವೇಶಕ್ಕೆ ಒಳಗಾಗದೆ ವಿಷಯಗಳ ಪ್ರತಿಪಾದನೆ, ಸಮತೂಕದ ವಿಚಾರ ಮಂಡನೆ ಮತ್ತು ಜನಪರ ಕಾಳಜಿಗಳು ಕೆ. ನಾರಾಯಣಸ್ವಾಮಿಯವರಲ್ಲಿ ಮೇಳೈಸಿವೆ.

ಶ್ರೀಯುತ ನಾರಾಯಣಸ್ವಾಮಿಯವರು ಶಿಕ್ಷಕರಾಗಿ, ಉಪನ್ಯಾಸಕರಾಗಿ, ಉಪನಿರ್ದೇಶಕರಾಗಿ, ಜಂಟಿ ನಿರ್ದೇಶಕರಾಗಿ ಸಾರ್ಥಕ ಸೇವೆ ಸಲ್ಲಿಸಿ ನಿವೃತ್ತರಾಗಿ ಇವರು ನಿಷ್ಠೆ ಮತ್ತು ಪ್ರಾಮಾಣಿಕತೆಯ ಪ್ರತೀಕವಾಗಿ ರಾಜ್ಯಾದ್ಯಂತ ಹೆಸರು ಗಳಿಸಿದ್ದಾರೆ. ಸಮಾಜದ ಅಭಿವೃದ್ಧಿಗೆ ಯಾವ ಕಾರ್ಯಕ್ರಮ ಕೈಗೊಂಡರೂ ಸದಾ ಚಟುವಟಿಕೆಯ ಸ್ಫೂರ್ತಿಯ ಚಿಲುಮೆಯಾಗಿ ದುಡಿದವರು. ಸಮಾಜ ಸೇವಕರಿಗೆಲ್ಲ ಆದರ್ಶಪ್ರಾಯವಾಗಿ ತಮ್ಮ ಕಾರ್ಯಚಟುವಟಿಕೆಗಳನ್ನು ರೂಪಿಸಿಕೊಂಡವರು ಇವರು. ಇವರ ಬಹುಮುಖದ ಸೇವೆಯು ಎಲ್ಲರಿಗೂ ಅನುಕರಣೀಯವೆಂದು ಹೇಳಿದರೆ ಅದು ಅತಿಶಯೋಕ್ತಿಯೆನಿಸದು. ಮನುಷ್ಯ ಎಷ್ಟರಮಟ್ಟಿಗೆ ಇತರರ ಕ್ಷೇಮಕ್ಕಾಗಿ ದುಡಿಯುತ್ತಾನೋ ಅಷ್ಟರಮಟ್ಟಿಗೆ ಅವನು ದೊಡ್ಡವನಾಗುತ್ತಾನೆ ಎಂಬ ಗುರಿಯಿಟ್ಟುಕೊಂಡವರು. ಹಾಗೆಯೇ ಒಳ್ಳೆಯ ಕೆಲಸ ಮಾಡಬೇಕೆಂಬ ಹಂಬಲ ಅವರಲ್ಲಿ ಸದಾ ಜಾಗೃತವಾಗಿ ನಿಂತಿರುವುದು ಅವರ ವ್ಯಕ್ತಿತ್ವದ ಬಹುದೊಡ್ಡ ಹಿರಿಮೆ.

ಶಿಕ್ಷಣ ಕಲಿಯುವ ಮಕ್ಕಳಿಗೆ ಪ್ರತಿಭಾ ಪುರಸ್ಕಾರ ಕಾರ್ಯಕ್ರಮವನ್ನು 90ರ ದಶಕದಲ್ಲಿ ಪ್ರಪ್ರಥಮವಾಗಿ ಆರಂಭಿಸಿದರು. ಅಸಹಾಯಕರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ಕುರಿ ಸಾಕಾಣೆಗೆ ಸಹಾಯ ಹಸ್ತ ಚಾಚುವ ಮೂಲಕ ಬಡಜನರಲ್ಲಿ ಪರಮಾತ್ಮನನ್ನು ಕಂಡವರು ಇವರು.

ರಾಜ್ಯಾದ್ಯಂತ ಅಂತರ್ಜಲ ಮತ್ತು ನೀರಿನ ಸಂಗ್ರಹ ಕುರಿತು ಕಾರ್ಯಾಗಾರ, ಶಿಬಿರಗಳನ್ನು ಏರ್ಪಡಿಸುವ ಮೂಲಕ ಜಾಗೃತಿ ಮೂಡಿಸಿದ್ದಾರೆ. ಆಯಿಲ್‌ಪುಲ್ಲಿಂಗ್ ಕುರಿತು ಕನ್ನಡಪ್ರಭ ಪತ್ರಿಕೆಯಲ್ಲಿ ನಿರಂತರ ಲೇಖನ ಪ್ರಕಟಿಸಿದ್ದಾರೆ. ದಲಿತರನ್ನು ಜಾಗೃತಗೊಳಿಸಲು ದಲಿತ ಚಳುವಳಿಯಲ್ಲಿ ಪಾಲ್ಗೊಂಡು ನಾಡಿನಾದ್ಯಂತ ಸಕ್ರಿಯವಾಗಿ ಭಾಷಣ ಹಾಗೂ ಉಪನ್ಯಾಸಗಳನ್ನು ನೀಡಿದ್ದಾರೆ. ಸಿರಿಧಾನ್ಯಗಳ ಕುರಿತು ಕೃತಿ ಬರೆದು ರೈತರ ಗಮನಸೆಳೆದಿದ್ದಾರೆ. ಸೆಕ್ಸ್ ವರ್ಕರ್ಸ್ ಕುರಿತು ಪುಸ್ತಕ ಬರೆದು ಆ ನೊಂದ ಮನಸ್ಸುಗಳ ನೋವುಗಳನ್ನು ಜನರು ಅರಿಯುವಂತೆ ಮಾಡಿದ್ದಾರೆ. ಈ ಪುಸ್ತಕ ಜನರ ಮೆಚ್ಚುಗೆಗೂ ಪಾತ್ರವಾಗಿದೆ.

ಹೀಗೆ ಸದಾ ಶೋಷಿತ ವರ್ಗಗಳ ಅಭಿವೃದ್ಧಿ ಬಯಸಿ ಆ ನಿಟ್ಟಿನಲ್ಲಿ ತಮ್ಮದೇ ಚಿಂತನೆಯಲ್ಲಿ ಯೋಜನೆಗಳನ್ನು ರೂಪಿಸಿಕೊಂಡು ಕಾರ್ಯಗತಗೊಳಿಸಿದ್ದಾರೆ. ಬಡರೈತರ



ಜೊತೆ ಸ್ಪಂದಿಸಿ ತಮ್ಮ ಕೈಲಾದ ಸಹಾಯ ಮಾಡಿ ಮಾರ್ಗದರ್ಶಕರಾಗಿ ಬಡ ಜನರ ಕಷ್ಟ ಸುಖಗಳಲ್ಲಿ ಭಾಗಿಯಾಗಿ ಜನರ ಪ್ರೀತಿಗೆ ಪಾತ್ರರಾಗಿದ್ದಾರೆ. ಸಮಾಜದ ಹಲವಾರು ಕಾರ್ಯಕ್ರಮಗಳಲ್ಲಿ ಜೊತೆಯಾಗಿ ಒಂದೇ ವೇದಿಕೆಯಲ್ಲಿ ಭಾಗವಹಿಸಿದ್ದೇವೆ. ಸಮಾಜ, ಸಂಘಟನೆ, ಅಭಿವೃದ್ಧಿ ಈ ವಿಚಾರವಾಗಿ ಬಹಳಷ್ಟು ಸಲಹೆಗಳನ್ನು ನೀಡಿದ್ದಾರೆ. ನಾನು ಗಮನಿಸಿದಂತೆ ಇವರು ಕೇವಲ ಮಾತುಗಾರರಲ್ಲ, ಬಣ್ಣದ ರಂಜನೀಯ ಗುಣಸ್ವಭಾವದವರೂ ಅಲ್ಲ. ನೇರ ನಡೆ ನುಡಿಯ ನಿಷ್ಠುರವಾದಿ. ಅಂತರಂಗ ಬಹಿರಂಗ ಒಂದೇ ಆದಂತಿರುವ ಕಾರ್ಯಕ್ಷಮತೆಯ ಧೀಮಂತ ಚೇತನ. ನಿಸ್ವಾರ್ಥ ಸೇವೆ ಮತ್ತು ಕಾರ್ಯತತ್ಪರತೆಯಿರುವ ಇವರು ಸಾರ್ವಜನಿಕ ಕ್ಷೇತ್ರದಲ್ಲಿ ಒಬ್ಬ ಶ್ರೇಷ್ಠ ವ್ಯಕ್ತಿಯೆನಿಸುತ್ತಾರೆ. ಈ ಇಳಿ ವಯಸ್ಸಿನಲ್ಲೂ ನಾರಾಯಣಸ್ವಾಮಿಯವರ ಕಾರ್ಯ ಚಟುವಟಿಕೆಯಲ್ಲಿ ಸ್ವಲ್ಪವೂ ಬದಲಾವಣೆಯಾಗಿಲ್ಲ. ಇದಕ್ಕೆ ಕಾರಣ ಅವರ ನಿಷ್ಕಲ್ಮಶವಾದ ಮನಸ್ಸು. ಈ ಹಿನ್ನೆಲೆಯಲ್ಲಿ ಶ್ರೀಯುತರ ಬದುಕು ಸಾರ್ಥಕತನವನ್ನು ನಾವು ಹೆಮ್ಮೆಯಿಂದಲೇ ಗೌರವಿಸುವ ಸಹೃದಯತೆಯಿದ್ದರೆ ಅದು ನಮ್ಮನ್ನು ನಾವೇ ಗೌರವಿಸಿಕೊಂಡಂತೆ. ಈ ಸಾಧಕ ಸಿರಿ ನೂರ್ಕಾಲ ನಮ್ಮೊಡನಿದ್ದು ಬೆಳಕು ನೀಡುತ್ತಿರಲೆಂದು ಹಾರೈಕೆ.







17

# ಕೆ.ಎನ್.ಎಸ್ – ನಾ ಕಂಡಂತೆ

– ಡಾ. ಚಿನ್ನ ಕೈವಾರಮಯ್ಯ
ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ

ನಮ್ಮ ಗುರುಗಳಾದ ಶ್ರೀ.ಕೆ.ನಾರಾಯಣಸ್ವಾಮಿರವರು "ಕೆ.ಎನ್.ಎಸ್" ನಾಮಾಂಕಿತದಿಂದಲೇ ಸಹೋದ್ಯೋಗಿಗಳಿಗೆ ಮತ್ತು ಶಿಷ್ಯರಿಗೆ ಚಿರಪರಿಚಿತರು.

1979–80ರಲ್ಲಿ ನಾನು 7ನೇ ತರಗತಿಯಲ್ಲಿ ಓದುತ್ತಿದ್ದಾಗ ನಮ್ಮ ಅಣ್ಣ ಶ್ರೀ.ಎ.ನರಸಿಂಹಯ್ಯ ರವರು ಕೆ.ಎನ್.ಎಸ್ ರವರನ್ನು ನನಗೆ ಪರಿಚಯ ಮಾಡಿಕೊಟ್ಟರು. ನಾನು 7ನೇ ತರಗತಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿ 8ಕ್ಕೆ ಹೈಸ್ಕೂಲ್‌ಗೆ ಸೇರುವಾಗ ಕರ್ನಾಟಕದಲ್ಲಿ ಗೋಕಾಕ್ ಕನ್ನಡ ಚಳುವಳಿ ಪ್ರಬಲವಾಗಿತ್ತು. ಇನ್ನು ಮುಂದೆ ಕರ್ನಾಟಕದಲ್ಲಿ ಕನ್ನಡಕ್ಕೆ ಆದ್ಯತೆ ಎಂದು ತಿಳಿದು ಶ್ರೀ ಕೆ.ಎನ್.ಎಸ್‌ರವರ ಮಾರ್ಗದರ್ಶನದಲ್ಲಿ ಕನ್ನಡ ಮಾಧ್ಯಮಕ್ಕೆ ಸೇರ್ಪಡೆಯಾಗಿ ನನ್ನ ವಿದ್ಯಾಭ್ಯಾಸವನ್ನು ಮುಂದುವರೆಸಿದೆ. ಆಗಾಗ ನಾನು ಶ್ರೀ ಕೆ.ಎನ್.ಎಸ್‌ರವರ ಮನೆಗೆ ಹೋಗಿ ಬರುತ್ತಿದ್ದೆ. ಅವರು ನನಗೆ ಸಾಮಾಜಿಕ ಚಿಂತನೆಯ ಅನೇಕ ಪುಸ್ತಕಗಳನ್ನು ಓದಲು ನೀಡುತ್ತಿದ್ದರು. ಅವುಗಳಲ್ಲಿ ಬಹಳ ಪ್ರಮುಖವಾದ ಮತ್ತು ನನಗೆ ಬಹಳ ಇಷ್ಟವಾದ ಪುಸ್ತಕ 'ಡಾ॥ ಬಿ.ಆರ್.ಅಂಬೇಡ್ಕರ್ ರವರ ಜೀವನ ಚರಿತ್ರೆ' ಇದು ನನ್ನ ಮನಸ್ಸಿನ ಮೇಲೆ ತುಂಬಾನೆ ಪರಿಣಾಮ ಬೀರಿದ ಪುಸ್ತಕ. ಈ ಪುಸ್ತಕವನ್ನು 8ನೇ ತರಗತಿ ಮುಗಿದು ಶಾಲೆಗಳಿಗೆ ವಾರ್ಷಿಕ ರಜೆಗಳನ್ನು ಘೋಷಣೆ ಮಾಡಿದ ಮೇಲೆ ಕೊಟ್ಟು, ಇದನ್ನು ಚೆನ್ನಾಗಿ ಓದಿ ಅರ್ಥಮಾಡಿ ಕೊಳ್ಳಬೇಕೆಂದು ಹೇಳಿದರು– ಮತ್ತೆ ಸಾರ್ ನನ್ನನ್ನು ಪುಸ್ತಕ ಓದಿ ಏನೇನು ಅರ್ಥಮಾಡಿಕೊಂಡೆ ಎಂದು ಪ್ರಶ್ನಿಸಬಹುದೆಂದು



4–5 ಸಾರಿ ಶ್ರದ್ಧೆಯಿಂದ ಓದಿ ಮುಗಿಸಿದೆ. ಅದಕ್ಕೆ ಈಗಲೂ ನಾನು ಅಂಬೇಡ್ಕರ್ ರವರ ಬಗ್ಗೆ ನಿರರ್ಗಳವಾಗಿ ಭಾಷಣ ಮಾಡುತ್ತೇನೆ. ಇದಕ್ಕೆ ಶ್ರೀ.ಕೆ.ಎನ್.ಎಸ್ ರವರೆ ಕಾರಣೀಭೂತರೆಂದರೆ ಅತಿಶಯೋಕ್ತಿ ಆಗಲಾರದು.

ಬಾಗೇಪಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಮೈದಾನದಲ್ಲಿ ರಜಾ ದಿನಗಳಲ್ಲಿ ದಿನಪೂರ್ತಿ ವಾಲಿಬಾಲ್ ಆಡುತ್ತಿದ್ದೇವು. ಆಗ ಕಾಲೇಜಿನ ಹಿಂಭಾಗದ ಕಾಂಪೌಂಡ್ ಹತ್ತಿರ ನಿಂತು ಶ್ರೀ.ಕೆ.ಎನ್.ಎಸ್.ರವರು ಒಂದು ಕೂಗು ಹಾಕಿದರೆ ಸಾಕು, ನಾವೆಲ್ಲ ಆಟ ಬಿಟ್ಟು ಮನೆ ಕಡೆಗೆ ಓಟ ಕೀಳುತ್ತಾ ಓಡುತ್ತಿದ್ದೆವು.

**ಶಿಕ್ಷಣ ತಜ್ಞರು ಮತ್ತು ದಕ್ಷ ಆಡಳಿತಗಾರ**

ಸಮಾಜದ ಎಲ್ಲಾ ಶೋಷಿತರಿಗೆ ವಿದ್ಯಾರ್ಜನೆಯೇ ಮುಕ್ತಿಗೆ ದಾರಿ ಎಂಬ ಡಾ॥ ಬಿ.ಆರ್.ಅಂಬೇಡ್ಕರ್ ರವರ ಚಿಂತನೆಯನ್ನು ಅಕ್ಷರಶಃ ಪಾಲಿಸಿ ಸಾವಿರಾರು ವಿದ್ಯಾರ್ಥಿಗಳ ಬಾಳಿಗೆ ಬೆಳಕಾಗಿದ್ದಾರೆ. ಇದಕ್ಕೆ ಸಾಕ್ಷಿಯೆಂಬಂತೆ ಇವರ ಶಿಷ್ಯವೃಂದ ಕೋಲಾರ, ಚಿಕ್ಕಬಳ್ಳಾಪುರ, ತುಮಕೂರು, ಬೆಂಗಳೂರು ಜಿಲ್ಲೆಗಳಲ್ಲಿ ಹಾಗೂ ರಾಜ್ಯದ ಇತರೆ ಜಿಲ್ಲೆಗಳು, ಮತ್ತು ದೇಶ–ವಿದೇಶಗಳಲ್ಲಿ ವೈದ್ಯರಾಗಿ, ಇಂಜಿನಿಯರುಗಳಾಗಿ, ನ್ಯಾಯವಾದಿಗಳಾಗಿ, ಶಿಕ್ಷಕರಾಗಿ, ಉಪನ್ಯಾಸಕರಾಗಿ, ಸಂಶೋಧಕರಾಗಿ ಕೃಷಿ ಮತ್ತು ಇತರೆ ಕ್ಷೇತ್ರಗಳ ಉನ್ನತ ಸ್ಥಾನಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

ಶ್ರೀ ಕೆ.ಎನ್.ಎಸ್.ರವರು ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿ ಬಗ್ಗೆ ಸದಾ ಶ್ರಮಿಸುತ್ತಾ ಏನಾದರೂ ಹೊಸತನ್ನು ಸರಳವಾಗಿ ಕಲಿಸುವ ಕಾತುರ, ಅದಕ್ಕಾಗಿ ತಮ್ಮ ಸಹೋದ್ಯೋಗಿಗಳೊಂದಿಗೆ ಚರ್ಚಿಸಿ ಇಡೀ ಸಿಬ್ಬಂದಿಯನ್ನು ಕ್ರಿಯಾಶೀಲರನ್ನಾಗಿಸುತ್ತಿದ್ದರು. ಇದಕ್ಕಾಗಿ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ "ಪೋಷಕರ ಕೈಪಿಡಿ"ಯನ್ನು ಹೊರತಂದಿದ್ದರು. ಇದರಿಂದ ಪೋಷಕರು ಸಹ ಮಕ್ಕಳ ಓದಿನ ಬಗ್ಗೆ ಹೆಚ್ಚು ಹೆಚ್ಚು ಕಾಳಜಿ ವಹಿಸುತ್ತಿದ್ದರು.

ಶ್ರೀ ಕೆ.ಎನ್.ಎಸ್.ರವರ ದಪ್ಪಮೀಸೆ, ಘರ್ಜನೆಯ ನೋಟ, ಸಮಯ ಪಾಲನೆ ನಮಗೆಲ್ಲಾ ಮಾದರಿ. ಅವರು ಬೆಳಿಗ್ಗೆ ಶಾಲೆ ಪ್ರಾರಂಭವಾಗುವುದಕ್ಕಿಂತ ಮುಂಚಿತವಾಗಿ ಕೈಯಲ್ಲಿ ರೂಲರ್ ಹಿಡಿದು ಬಾಗೇಪಲ್ಲಿ ಸರ್ಕಾರಿ ಜೂನಿಯರ್ ಕಾಲೇಜು ಮುಂಭಾಗದಲ್ಲಿ ನಿಂತಿದ್ದರೆ ತಡವಾಗಿ ಬರುವ ವಿದ್ಯಾರ್ಥಿಗಳು ಮತ್ತು ಸಿಬ್ಬಂದಿ ಗಡಗಡ ನಡುಗುತ್ತಿದ್ದರು. ಓಡಿ, ಓಡಿ ಬರುವ ದೃಶ್ಯವನ್ನು ಕಣ್ಣಾರೆ ಕಂಡಿದ್ದೇನೆ. ಇದರಿಂದ ಎಲ್ಲರಲ್ಲೂ ಸಮಯದ ಅರಿವು ಮೂಡಿಸಿ ಶಿಸ್ತಿನ ಸಿಪಾಯಿಗಳ ಹಾಗೆ ಇರಬೇಕೆಂಬುದನ್ನು ಮನದಟ್ಟು ಮಾಡಿಕೊಡುತ್ತಿದ್ದರು. ಅವರಿಗಿದ್ದ ವಿಷಯಾಧಾರಿತ ಜ್ಞಾನ, (Subject knowledge) ಮತ್ತು ಪರಿಪಕ್ವತೆಯಿಂದ ಎಂತಹ ಸೋಂಬೇರಿ ವಿದ್ಯಾರ್ಥಿಗಳು ಅಥವಾ ಸಿಬ್ಬಂದಿಯು ಸಹ ಸರಿದಾರಿಗೆ ಬಂದು ಬಿಡುತ್ತಿದ್ದರು, ಇದಕ್ಕೆ ಅವರ ಅವಧಿಯ ವಿದ್ಯಾರ್ಥಿಗಳ ಫಲಿತಾಂಶಗಳು ಮತ್ತು ಕಾಲೇಜಿನ ಕಟ್ಟಡಗಳ ಸ್ಥಾಪನೆ ಮತ್ತು ಆಟದ ಮೈದಾನಗಳ ಅಭಿವೃದ್ಧಿಯು ಸಾಕ್ಷೀಕರಿಸುತ್ತವೆ.



**ಶ್ರೀ ಕೆ.ಎನ್.ಎಸ್ ಮತ್ತು ದಸಂಸ :**

ಡಾ॥ ಬಿ.ಆರ್.ಅಂಬೇಡ್ಕರ್ ರವರ ಚಿಂತನೆ ಮತ್ತು ಆಶಯುಗಳನ್ನು ಮೈಗೂಡಿಸಿಕೊಂಡು ದಲಿತರ ಅಭಿವೃದ್ಧಿಗೆ ಟೊಂಕ ಕಟ್ಟಿ ಶ್ರಮಿಸಿ ದಲಿತ ಚಳುವಳಿಯ ಸಂಸ್ಥಾಪಕರಲ್ಲಿ ಒಬ್ಬರಾಗಿದ್ದಾರೆ. ತಳಸಮುದಾಯಗಳಿಗೆ, ನೆಲಸಂಸ್ಕೃತಿಗೆ ಮತ್ತು ಬಡವರ ಅಭ್ಯುದಯಕ್ಕೆ ಧಕ್ಕೆ ಉಂಟಾದಾಗ ಅವರಿಗೆ ಧ್ವನಿಯಾಗಿ ದಲಿತ ಚಳುವಳಿಗೆ ಚೈತನ್ಯ ತುಂಬುವಂತಹ ಕೆಲಸವನ್ನು ನಿರಂತರವಾಗಿ ಮಾಡುತ್ತಾ ಬಂದಿರುವುದು ಪ್ರಶಂಸನೀಯವಾದದು.

1984ರಲ್ಲಿ ಗೌರಿಬಿದನೂರು ತಾಲ್ಲೂಕಿನ ಗುಂಡ್ಲಕೊತ್ತೂರು ಗ್ರಾಮದಲ್ಲಿ ಒಂದು ದೊಡ್ಡ ಗುಡಿಸಲು ಮನೆಯಲ್ಲಿ ನಡೆದ ಕೋಲಾರ ಜಿಲ್ಲಾ ಮಟ್ಟದ ದಸಂಸ ಕಾರ್ಯಕರ್ತರ ಸಮಾವೇಶಕ್ಕೆ ಶ್ರೀ.ಕೆ.ಎನ್.ಎಸ್.ರವರು ನನ್ನನ್ನು ಜೊತೆಯಲ್ಲಿ ಕರೆದುಕೊಂಡು ಹೋದರು. ನಮ್ಮನ್ನು ಕಳುಹಿಸಲು ಬಾಗೇಪಲ್ಲಿಯ ದಸಂಸ ಮುಖಂಡರು ಬಸ್‌ಸ್ಟಾಂಡ್‌ಗೆ ಬಂದು ಬಸ್ ಹತ್ತಿಸಿದಾಗ ನಾನು ಅವರ ಪಕ್ಕದಲ್ಲಿ ಕುಳಿತು ಪ್ರಯಾಣಿಸುವುದನ್ನು ಎಲ್ಲರೂ ಆಶ್ಚರ್ಯಚಕಿತರಾಗಿ ನೋಡುತ್ತಿದ್ದರು ಶ್ರೀ.ಕೆ.ಎನ್.ಎಸ್ ಅವರನ್ನು ಕಂಡರೆ ಎಲ್ಲರಿಗೂ ಭಯ. ಅದೇ ರೀತಿ ನನಗೂ ಭಯವಾಗುತ್ತಿತ್ತು, ಆ ಭಯದಲ್ಲೂ ಅವರು ನನ್ನ ಮೇಲೆ ತೋರಿಸುತ್ತಿದ್ದ ಪ್ರೀತಿ, ವಾತ್ಸಲ್ಯ ಮತ್ತು ಅಕ್ಕರೆಯ ಮಾತುಗಳು ನನ್ನನ್ನು ಅವರಿಗೆ ತುಂಬ ಹತ್ತಿರವಾಗಿಸತೊಡಗಿಸಿದವು.

ಅಂದು ರಾಜ್ಯದ ಮತ್ತು ಜಿಲ್ಲೆಯ ಎಲ್ಲಾ ಮುಖಂಡರು ದಲಿತ ಸಂಘದ ಹುಟ್ಟು, ಬೆಳವಣಿಗೆ ಮತ್ತು ವಿಸ್ತಾರದ ಬಗ್ಗೆ ಚರ್ಚಿಸುವಾಗ ಶ್ರೀ.ಕೆ.ಎನ್.ಎಸ್ ರವರ ಮಾತಿಗೆ ವಿಶೇಷವಾದ ಮನ್ನಣೆ ಎಲ್ಲಾ ಮುಖಂಡರಿಂದ ವ್ಯಕ್ತವಾಗುತ್ತಿತ್ತು. ದಸಂಸ ಪ್ರಾರಂಭದ ಹಂತದಲ್ಲಿ ಶ್ರೀ.ಕೆ.ಎನ್.ಎಸ್ ರವರ ಸಲಹೆ, ಸೂಚನೆ, ಮಾರ್ಗದರ್ಶನ ಮತ್ತು ಆರ್ಥಿಕ ಸಹಾಯ ಎಲ್ಲವೂ ಸೇರಿದಂತೆ ಮನಸ್ಫೂರ್ತಿಯಾಗಿ ತಮ್ಮನ್ನು ತಾವು ತೊಡಗಿಸಿಕೊಂಡು, ದಸಂಸ ಸಂಸ್ಥಾಪಕರಲ್ಲಿ ಒಬ್ಬರಾಗಿ, ತಮ್ಮದೇ ಆದ ಛಾಪು ಮೂಡಿಸಿ, ಸಂಘಟನೆಯನ್ನು ಬೆಳೆಸಿ ಅದೇ ರೀತಿಯ ನಂಟು ಇಂದಿಗೂ ಪ್ರಶ್ನಾತೀತವಾಗಿ ಉಳಿಸಿಕೊಂಡು, ಮುಂದುವರೆಸಿಕೊಂಡು ಬಂದಿರುವುದು ವಿಶೇಷ ಮತ್ತು ವಿಭಿನ್ನ.

ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿನ ದಲಿತರಿಗೆ ಯಾವುದೇ ರೀತಿಯ ಅನ್ಯಾಯ ಎದುರಾದರೂ ಸಹ ಅದು ಸಾಮಾಜಿಕ ಅಸಮಾನತೆ ಆಗಿರಬಹುದು, ಭೂ ಹೋರಾಟ ಆಗಿರಬಹುದು, ಮತ್ತು ಸಂವಿಧಾನ ಬದ್ಧವಾದ ಹಕ್ಕುಗಳನ್ನು ದಕ್ಕಿಸುವುದಾಗಿರಬಹುದು. ಅದಕ್ಕೆ ಒಂದು ಹೋರಾಟ ರೂಪಿಸಿ, ಕರಪತ್ರ ಬರೆಯುವುದರಿಂದ ಹಿಡಿದು ಅದರ ಫಲಿತಾಂಶದವರೆಗೂ ಎಲ್ಲಾ ಹಂತಗಳಲ್ಲೂ ಶ್ರೀ.ಕೆ.ಎನ್.ಎಸ್ ರವರ ಪಾತ್ರ ಬಹಳ ಪ್ರಮುಖವಾಗಿ ಎದ್ದು ಕಾಣುತ್ತಿತ್ತು.



## 1987–88ರ ಮಿಟ್ಟೇಮರಿ ಹೋಬಳಿಯ ಪಿಲ್ಲಗುಟ್ಟ ಭೂ ಹೋರಾಟ

ಮಿಟ್ಟೇಮರಿ ಹೋಬಳಿಯ ಬಾಗೇಪಲ್ಲಿ ಬಂಗಾರಪೇಟೆ ಮುಖ್ಯರಸ್ತೆ ಪಿಲ್ಲಗುಟ್ಟ ಗ್ರಾಮದ ಹತ್ತಿರ ರಾಜ್ಯ ಹೆದ್ದಾರಿ ಪಕ್ಕದಲ್ಲಿರುವ 30 ಎಕರೆ ಗೋಮಾಳ ಭೂಮಿಯನ್ನು ಬಡ ದಲಿತರಿಗೆ ಹಂಚಿಕೆ ಮಾಡಲು ದಸಂಸ ಬಾಗೇಪಲ್ಲಿ ಶಾಖೆ ವತಿಯಿಂದ ಭೂ ಹೋರಾಟ ನಡೆಯಿತು. ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು ಎಂದು ಎಲ್ಲರಿಗೂ ಅಂಬೇಡ್ಕರ್‌ರವರು ಸಂವಿಧಾನ ಬದ್ಧವಾದ ಹಕ್ಕುಗಳನ್ನು ನೀಡಿದ್ದರು. ಅದು ದಲಿತರಿಗೆ ಮಾತ್ರ ಇನ್ನು ಕನಸಿನ ಮಾತಾಗಿಯೇ ಉಳಿದಿತ್ತು. ಆ ಕಾರಣಕ್ಕಾಗಿ ಅವಿಭಜಿತ ಕೋಲಾರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕಿನ ಮಿಟ್ಟೇಮರಿ ಹೋಬಳಿ ಪಿಲ್ಲಗುಟ್ಟ ಭೂ ಹೋರಾಟವನ್ನು ಹಮ್ಮಿಕೊಂಡಿದ್ದ ಸಂದರ್ಭದಲ್ಲಿ ಶ್ರೀ.ಕೆ.ಎನ್.ಎಸ್.ರವರು ದಸಂಸ ರಾಜ್ಯ ಮುಖಂಡರಾದ ಶ್ರೀ.ಎನ್.ಮುನಿಶಾಮಿ, ಗಡ್ಡಂ ವೆಂಕಟೇಶ್, ಗೊಲ್ಲಹಳ್ಳಿ ಶಿವಪ್ರಸಾದ್, ಕೆ.ಸಿ.ರಾಜಾಕಾಂತ್, ಸಿ.ಜಿ.ಗಂಗಪ್ಪ ಹಾಗೂ ತಾಲ್ಲೂಕಿನ ದ.ಸಂ.ಸ. ಮುಖಂಡರಾದ ಶ್ರೀ.ಎ.ನರಸಿಂಹಯ್ಯ, ಎ.ವಿ.ಪೂಜಪ್ಪ, ಮದ್ದಪ್ಪ, ಬಿ.ವಿ.ನರಸಿಂಹಯ್ಯ, ಎ.ವಿ.ನಾಗರಾಜ ಮತ್ತು ಅನೇಕ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಮುಖಂಡರು ಮತ್ತು ಕಾರ್ಯಕರ್ತರು ಮಿಟ್ಟೇಮರಿಯಿಂದ ಬಾಗೇಪಲ್ಲಿಗೆ 15ಕಿ.ಮೀಟರ್‌ನಷ್ಟು ದೂರ ಕಾಲುನಡಿಗೆ ಜಾಥಾ ಬಂದಾಗ ಶ್ರೀ.ಕೆ.ಎನ್.ಎಸ್ ರವರು ಅಷ್ಟು ದೂರ ನಡೆದುಕೊಂಡು ಬಂದು ಬಾಗೇಪಲ್ಲಿಯ ಪಟ್ಟಣದಲ್ಲಿ ಹೋರಾಟದ ಉದ್ದೇಶದ ಬಗ್ಗೆ ಮಾತನಾಡಿದರು. ಅದರ ಫಲವಾಗಿ ಇಂದು ಪಿಲ್ಲಗುಟ್ಟದ 30 ಎಕರೆ ಗೋಮಾಳ ಜಾಗವನ್ನು ಸರ್ಕಾರ ಸುಮಾರು 15–20 ಜನ ಪಿಲ್ಲಗುಟ್ಟ, ಕೊತ್ತಕೋಟೆ ಮತ್ತು ಬೋಡಿಪಲ್ಲಿ ಬಡ ದಲಿತರಿಗೆ ಹಂಚಿಕೆ ಮಾಡಿದೆ.

## ಶ್ರೀ ಕೆ.ಎನ್.ಎಸ್ ರವರ ಕೃಷಿ ಮತ್ತು ಆರೋಗ್ಯ ಪರಿಕಲ್ಪನೆ

ಶ್ರೀ ಕೆ.ಎನ್.ಎಸ್.ರವರ ಸಂಯಮ, ಸಮಯ ಪಾಲನೆ, ಸಮಯ ಪ್ರಜ್ಞೆ, ಪ್ರಾಮಾಣಿಕತೆ, ಸರಳ ವ್ಯಕ್ತಿತ್ವ, ಸಾಮಾಜಿಕ ಚಿಂತನೆ, ವಿವಿಧ ಕ್ಷೇತ್ರಗಳಲ್ಲಿನ ವಿಷಯ ನೈಪುಣ್ಯತೆ, ಬಡತನ ನಿರ್ಮೂಲನೆಯ ಬಗ್ಗೆ ಕಾಳಜಿ ಇದ್ದುದರಿಂದ ಶೈಕ್ಷಣಿಕವಾಗಿ ಅಪಾರ ಸೇವೆ ಸಲ್ಲಿಸಿ ಜನಮನ್ನಣೆ ಪಡೆದರು. ಜೊತೆಗೆ ಸಮಾಜ ಮುಖಿ ಚಿಂತನೆಗಳು, ದಲಿತ ಚಳುವಳಿ, ಕೃಷಿ ಕ್ರಾಂತಿ, ಸಾವಯವಕೃಷಿ, ಸುಭಾಷ್‌ಪಾಳೇಕಾರ್ ನೈಸರ್ಗಿಕ ಕೃಷಿ, ಶೂನ್ಯ ಕೃಷಿ, ಆಯಿಲ್ ಪುಲ್ಲಿಂಗ್, ಕುಡಿಯುವ ನೀರಲ್ಲಿ ಫ್ಲೋರೈಡ್ ಸಮಸ್ಯೆ ಮತ್ತು ಅದರ ದುಷ್ಪರಿಣಾಮಗಳ ಬಗ್ಗೆ ರೈತರು, ಸಾರ್ವಜನಿಕರು ಮತ್ತು ವಿದ್ಯಾರ್ಥಿಸಮುದಾಯದವರಿಗೆ ತಿಳುವಳಿಕೆ, ಈ ಸಂಬಂಧದ ವಿಚಾರ ಸಂಕಿರಣ ಮತ್ತು ಪ್ರಚಾರ ಕಾರ್ಯಕ್ರಮಗಳನ್ನು ಹತ್ತು ಹಲವು ನಡೆಸಿದರು. ಇದರ ಜೊತೆಗೆ ಕಿರುಧಾನ್ಯಗಳಲ್ಲಿರುವ ಪೌಷ್ಟಿಕಾಂಶಗಳ ಬಗ್ಗೆ ಅರಿವು ಮೂಡಿಸಿ ಇವು ನಿಜವಾದ ಬಡವರ ಶಕ್ತಿಯುತವಾದ ಆಹಾರ ಎಂಬ ಪ್ರಚಾರ ಮಾಡಿದರು.



ದಲಿತ ಸಂಘರ್ಷ ಸಮಿತಿಯಲ್ಲಿ ಪ್ರಾಮಾಣಿಕವಾಗಿ ದುಡಿದು ಕಣ್ಮರೆಯಾದ ಅನೇಕ ನಾಯಕರ ನೆನಪಿನ ದಿನಾಚರಣೆಯನ್ನು ದಸಂಸ ವತಿಯಿಂದ ಪ್ರತಿವರ್ಷ ಅರ್ಥಪೂರ್ಣವಾಗಿ ಆಚರಿಸಿಕೊಂಡು ಬರುವಂತಹ ಸಂದರ್ಭದಲ್ಲಿ ಶ್ರೀ.ಕೆ.ಎನ್.ಎಸ್ ರವರು ಪ್ರತಿ ವರ್ಷ ಆ ಸಭೆಗೆ ಹಾಜರಾಗಿ ಹೇಳುತ್ತಿದ್ದ ಮುಖ್ಯ ವಿಷಯ ಪ್ರಾಮಾಣಿಕವಾಗಿ ದುಡಿಯುವ ಎಲ್ಲಾ ದಸಂಸ ಮುಖಂಡರು ಮತ್ತು ಕಾರ್ಯಕರ್ತರು ಸಹ ಸಮಯಕ್ಕೆ ಸರಿಯಾಗಿ ಊಟೋಪಚಾರಗಳನ್ನು ಪಾಲಿಸಿ ಆರೋಗ್ಯ ಕಾಪಾಡಿಕೊಳ್ಳುವುದರ ಜೊತೆಗೆ ಬಡವರ ಸೇವೆಯನ್ನು ಮಾಡಿ ಎಂಬ ಹಿತವಚನವನ್ನು ಒತ್ತಿ ಹೇಳುತ್ತಾರೆ. ಜೊತೆಗೆ ಕಣ್ಮರೆಯಾದ ಮುಖಂಡರೊಂದಿಗಿನ ಸವಿ ನೆನಪುಗಳು, ಅವರ ತ್ಯಾಗ ಬಲಿದಾನ ಮತ್ತು ಸೇವೆಗಳನ್ನು ಸ್ಮರಿಸುವ ಮುಖಾಂತರ ಆಲೋಚನೆಗೆ ನಮ್ಮ ತೊಡಗಿಸುತ್ತಾರೆ.

### ಶ್ರೀ ಕೆ.ಎನ್.ಎಸ್ ರವರ ಸಾಹಿತ್ಯ ಕ್ಷೇತ್ರ

ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಪುಸ್ತಕಗಳನ್ನು ವಿವಿಧ ಭಾಷೆಗಳಿಂದ ಅನುವಾದ ಮಾಡಿ ಕನ್ನಡಿಗರಿಗೆ ಹೊಸ ವಿಷಯಗಳನ್ನು ಪರಿಚಯ ಮಾಡಿಕೊಟ್ಟಿರುತ್ತಾರೆ, ಯಾವುದೇ ಒಂದು ಸಾಮಾಜಿಕ ಕಾಳಜಿಯ ಹೊಸ ವಿಷಯ ಅವರ ಗಮನಕ್ಕೆ ಬಂದರೂ ಅದನ್ನು ಆಳವಾಗಿ ಅಧ್ಯಯನ ಮಾಡಿ ಸಮಾಜಕ್ಕೆ ರವಾನಿಸುವ ಕಾರ್ಯದಲ್ಲಿ ನಿಷ್ಠೆಯಿಂದ ಮಗುವಿನಂತೆ ಆ ಕಾರ್ಯ ಮುಗಿಯುವವರೆವಿಗೂ ಕಾಳಜಿಯಿಂದ ಶ್ರಮಿಸುತ್ತಾರೆ. ಶ್ರೀ ಕೆ.ಎನ್.ಎಸ್.ರವರ ಪ್ರಮುಖ ಪ್ರಕಟಣೆಗಳಾದ ಅಂಬೇಡ್ಕರ್ ವಾಣಿ, ದಲಿತ ಕೈಪಿಡಿ, ಭಂಗಿಜನಕಥ, ನರಬಲಿ, ಅಯೋಧ್ಯೆಯ ಭುಗಿಲು, ಮಾಹಿತಿಹಕ್ಕು, ರೈತರ ನಿರಂತರ ಆತ್ಮಹತ್ಯೆಗಳು ಕೃತಿಗಳು ಪ್ರಮುಖವಾದವು. ಸಂಸ್ಕಾರ ಮತ್ತು ದಿಗಂಬರ ಕವುಲು ಕೃತಿಗಳ ಅನುವಾದಗಳನ್ನು ಮಾಡಿರುತ್ತಾರೆ.

ಕೇರಳ ಮೂಲದ ಲೈಂಗಿಕ ಕಾರ್ಯಕರ್ತೆ ನಳಿನ ಜಮೀಲಾ ಇವರ ಜೀವನ ಚರಿತ್ರೆಯನ್ನು (Auto Biography) ಕನ್ನಡಕ್ಕೆ ಅನುವಾದಿಸುವ ಸಂದರ್ಭ ಒದಗಿಬಂದಾಗ ಅವರಿಗೆ ಸಂಬಂಧ ಪಡದ ಯಾವುದೇ ಕ್ಷೇತ್ರವಾದರೂ ಸಹ, ಯಾರು ಏನಂದುಕೊಂಡಾರು ಎಂದು ವಿಚಲಿತರಾಗದೆ ಪ್ರತಿಯೊಬ್ಬ ಕೆಟ್ಟ ಮನುಷ್ಯನಿಗೂ ಬದಲಾವಣೆ ಮತ್ತು ಮನಸ್ಸಿನ ಪರಿವರ್ತನೆ ಬಹಳ ಅಗತ್ಯ ಅವರು ಕೂಡ ಸಮಾಜದ ಮುಖ್ಯವಾಹಿನಿಗೆ ಬರುವಂತಹ ನಿರ್ಧಾರಗಳನ್ನು ಗೌರವಿಸಿ ಅದರಿಂದ ಕೆಟ್ಟಸಮಾಜ ಪಾಠ ಕಲಿಯುವಂತಾಗಲಿ, ಪ್ರತಿಯೊಬ್ಬರು ಈ ಸಮಾಜದಲ್ಲಿ ಗೌರವವಾಗಿ ಬಾಳುವಂತಹ ಸದಾವಕಾಶ ಸಿಗುವಂತಾಗಲಿ ಎಂಬುದನ್ನು ಅರ್ಥಮಾಡಿಕೊಂಡು ಕೇಂದ್ರದ ಕಾನೂನು ಮಂತ್ರಿಗಳಾದ ಡಾ॥ ಎಂ.ವೀರಪ್ಪಮೊಯಿಲಿ, ಶಾಸಕರಾದ ಶ್ರೀ ಎನ್. ಸಂಪಂಗಿ ಮತ್ತು ಅನೇಕ ಗಣ್ಯರ ಸಮ್ಮುಖದಲ್ಲಿ ಈ ಪುಸ್ತಕವನ್ನು ಹೊರತರುವ ಗುರುತರವಾದ ಜವಾಬ್ದಾರಿಯನ್ನು ಹೊತ್ತು ಅಬಲೆಯರ ಬಾಳಿಗೂ ಬೆಳಕಾದರು.



ಶ್ರೀ ಕೆ.ಎನ್.ಎಸ್. ವಿವಿಧ ಕ್ಷೇತ್ರಗಳಲ್ಲಿ ಮಾಡಿರುವ ಅನೇಕ ಸಾಧನೆಗಳನ್ನು ಗುರ್ತಿಸಿ 2013–14ನೇ ಸಾಲಿನಲ್ಲಿ ಕರ್ನಾಟಕ ಸರ್ಕಾರದಿಂದ ಕನ್ನಡ ರಾಜ್ಯೋತ್ಸವದ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದು ಅವರಿಗೆ ಸಂದ ಗೌರವ. ಇನ್ನು ಅವರ ಸೇವೆಗೆ ಹತ್ತು ಹಲವು ಗೌರವಗಳು ಸಿಗಲೆಂದು ಮನಸ್ಪೂರ್ತಿಯಾಗಿ ಕೋರುತ್ತೇನೆ.

**ಶ್ರೀ ಕೆ.ಎನ್.ಎಸ್ ರವರ ಪರಿಸರ ಕಾಳಜಿ**

ಪ್ರಸ್ತುತ ಶ್ರೀ.ಕೆ.ಎನ್.ಎಸ್‌ರವರು ಈ ಇಳಿವಯಸ್ಸಿನಲ್ಲೂ ಸದಾ ಚಿಂತನಾ ಶೀಲರಾಗಿ ಸಮಾಜ ಮುಖಿ ಅಲೋಚನೆಗಳನ್ನು ಅನುಷ್ಠಾನ ಮಾಡಲು ಸದಾ ಕ್ರಿಯಾ ಶೀಲರಾಗಿದ್ದು, ಹಸಿರು ಶಾಲೆಗಳಿರುವಂತೆ, ಹಸಿರು ಹಳ್ಳಿಗಳನ್ನು ಮಾಡಲು ಹೊರಟಿರುವುದು ಅವರ ಪರಿಸರ ಪ್ರೇಮವನ್ನು ಎತ್ತಿತೋರಿಸುತ್ತದೆ. ಇದರಿಂದ ಇಡೀ ಹಳ್ಳಿಯನ್ನು ಹಸಿರೀಕರಣ ಮಾಡುವುದರ ಜೊತೆಗೆ ಬಡವರ ಮತ್ತು ಎಲ್ಲಾ ವರ್ಗದ ಮನೆಗಳ ಹತ್ತಿರ ಹಸಿರು ಸೊಪ್ಪು ಮತ್ತು ಇತರೆ ಪೌಷ್ಠಿಕಾಂಶಗಳುಳ್ಳ ತರಕಾರಿಗಳನ್ನು ಬೆಳೆಸಿಕೊಂಡು ಆರೋಗ್ಯ ವೃದ್ದಿಸಿಕೊಳ್ಳುಸುವುದರ ಬಗ್ಗೆ ಪ್ರಚಾರ ಆಂದೋಲನ ಮಾಡಲು ಇಡೀ ಗ್ರಾಮದ ರೈತರನ್ನು, ವಿದ್ಯಾರ್ಥಿಗಳನ್ನು, ಅಧಿಕಾರಿಗಳನ್ನು, ಜನಪ್ರತಿನಿಧಿಗಳನ್ನು, ಒಗ್ಗೂಡಿಸಿ ಅರಿವು ಮೂಡಿಸುವ ಕಾರ್ಯಕ್ಕೆ ಚಾಲನೆ ನೀಡುತ್ತಿದ್ದಾರೆ. ಇದರಿಂದ ಪರಿಸರದಲ್ಲಿ ಗಾಳಿ, ಪರಿಶುದ್ಧವಾಗಿರುವುದಲ್ಲದೇ ಎಲ್ಲಾ ಪ್ರಾಣಿ ಪಕ್ಷಿಗಳ ಆರೋಗ್ಯ ವೃದ್ಧಿಯಾಗುತ್ತದೆ. ಇನ್ನು ಇಂತಹ ಅನೇಕ ಯೋಜನೆಗಳು ಕೈಗೂಡಿ ಅನುಷ್ಠಾನ ಮಾಡಲು ಶ್ರೀ.ಕೆ.ಎನ್.ಎಸ್ ರವರಿಗೆ ಆಯುರಾರೋಗ್ಯ ವೃದ್ಧಿಯಾಗಿ ದೀರ್ಘಾಯುಷಿಗಳಾಗಿರಲೆಂದು ಭಗವಂತ (ಭಗವಾನ್ ಬುದ್ಧ, ಬಸವಣ್ಣ ಮತ್ತು ಅಂಬೇಡ್ಕರ್) ರವರಲ್ಲಿ ಪ್ರಾರ್ಥಿಸುತ್ತೇನೆ.







18

# ನನ್ನ ಮದುವೆಯ ಪುರೋಹಿತರು

– ಶ್ರೀ ರಂಗಾಚಾರಿ
ಪದವಿ ಪೂರ್ವ ಶಿಕ್ಷಣ ಇಲಾಖೆ

ಬರೆಯುವುದು ಎಷ್ಟು ಕಷ್ಟ ? ಲೇಖನ, ಕವನ, ಕಾದಂಬರಿ ಬರೆಯಲು ಅವಶ್ಯವಿರುವ ವಸ್ತು, ವಿಷಯ, ಸಂಗತಿಗಳೊಂದಿಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನಿಕಟವರ್ತಿಗಳಾದವರ ವಿಷಯ ಬೇರೆ. ಮೂಲತಃ ಬರಹಗಾರನಲ್ಲದ ನಾನು ಬರೆಯುವುದನ್ನು ಪ್ರಾರಂಭಿಸಲೂ ಸಹ ತುಂಬ ಕಷ್ಟ ಮತ್ತು ಭಯ. ಏಕೆಂದರೆ ಬರಹವು ಅಭಿವ್ಯಕ್ತಿಯ ಮೂರ್ತರೂಪ. ಅಭಿವ್ಯಕ್ತಿಯು ಸತ್ಯದ ನೆಲೆಗಟ್ಟಿನಲ್ಲಿ ಬರಹದ ರೂಪ ಪಡೆದಾಗ ಮಾತ್ರ ಸ್ವೀಕಾರಾರ್ಹ ಎಂದು ಭಾವಿಸಿ ಈ ಲೇಖನವನ್ನು ಬರೆಯುತ್ತಿದ್ದೇನೆ.

ನವೆಂಬರ್ 01, 2013 ನನ್ನ ಜೀವನದಲ್ಲಿ ಸ್ಮರಣೀಯ ದಿನ. ನನಗೆ ಮಾತ್ರವಲ್ಲ, ನನ್ನಂತಹ ಸಹಸ್ರಾರು ದಲಿತ ಸಂಘಟನೆಯ ಕಾರ್ಯಕರ್ತರು, ಸಾಮಾಜಿಕ ಕಾರ್ಯಕರ್ತರು, ಪ್ರಾಮಾಣಿಕತೆಯನ್ನು ತಮ್ಮ ಜೀವನದ ಶೈಲಿಯನ್ನಾಗಿಸಿಕೊಂಡ ಎಷ್ಟೋ ಮಂದಿಗೆ ಸಂತಸದ ದಿನ.

ಸಂತಸಕ್ಕೆ ಕಾರಣರಾದವರು ಶ್ರೀಯುತ ಕೆ. ನಾರಾಯಣಸ್ವಾಮಿ (ಕೆಎನ್ನೆಸ್) ರವರು. ದಲಿತರ ಮುಖವಾಣಿಯಂತಿದ್ದ ಶ್ರೀಯುತರು ಕೃಷಿತಜ್ಞರಾಗಿ, ಜಲತಜ್ಞರಾಗಿ, ಸಾಮಾಜಿಕ ಕಾರ್ಯಕರ್ತರಾಗಿ ಸಲ್ಲಿಸಿರುವ ಜೀವಮಾನ ಸಾಧನೆಯನ್ನು ಪರಿಗಣಿಸಿದ ಕರ್ನಾಟಕ ಸರ್ಕಾರವು ಇವರಿಗೆ "ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ" ನೀಡಿ ಗೌರವಿಸಿತ್ತು. ಈ ವಿಷಯ ಮೊದಲು ತಿಳಿಸಿದ್ದು ಮಿತ್ರರಾದ ವಿ.ಹೆಚ್.ರವರು. ಈ ಸಂತಸವನ್ನು ಹಂಚಿಕೊಳ್ಳಲು ಇಬ್ಬರೂ ಒಂದೆಡೆ ಸೇರಿ, 'ಕೆಎನ್ನೆಸ್' ರವರ ಆಪ್ತರೆಂದು ಗುರುತಿಸಿಕೊಂಡಿದ್ದ ಗೌರಿಬಿದನೂರಿನ ದಲಿತ ಸಂಘಟನೆಯ ಕಾರ್ಯಕರ್ತರನ್ನು ಕರೆದು ಚರ್ಚಿಸಿದೆವು. ಸನ್ಮಾನ ಕಾರ್ಯಕ್ರಮವನ್ನು ಸಂಘಟಿಸಿ ಈ ಮಾಹಿತಿಯನ್ನು ತಳಹಂತದ ಕಾರ್ಯಕರ್ತರಿಗೆ ತಲುಪಿಸಲು



ತೀರ್ಮಾನಿಸಿದೆವು. ಈ ಕಾರ್ಯಕ್ರಮಕ್ಕೆ ತುಂಬಾ ಆತ್ಮೀಯವಾಗಿ ತೊಡಗಿಸಿಕೊಂಡ ಮುಖ್ಯರಲ್ಲಿ ಸಿ.ಜಿ. ಗಂಗಪ್ಪ, ಪಿ. ನರಸಿಂಹಮೂರ್ತಿ, ಲಚ್ಚಿ, ರಾಮಕೃಷ್ಣಪ್ಪ, ಕೃಷ್ಣಪ್ಪ ಮಾಸ್ಟರ್ ಹಾಗೂ ಕೆ.ಪಿ.ನಾರಾಯಣಪ್ಪ (ಕಾಪಾನಾ), ನಾಗರಾಜಪ್ಪ, ವೇಣುಗೋಪಾಲ್‌ರವರು ಹೀಗೆ ಬರೆಯುತ್ತಾ ಹೋದರೆ ದೊಡ್ಡ ಪಟ್ಟಿಯನ್ನೇ ರಚಿಸಬೇಕಾದೀತು.

ಒಟ್ಟಾರೆ ನಾವಂದುಕೊಂಡಂತೆ ದಿನಾಂಕ 21-11-2013 ರಂದು ಆತ್ಮೀಯರ ಸಮ್ಮುಖದಲ್ಲಿ, ಮೂಲ ದಲಿತ ಸಂಘರ್ಷ ಸಮಿತಿಯ ನಾಯಕರ ನೇತೃತ್ವದಲ್ಲಿ ಕೆಎನ್ನೆಸ್ ರವರ ಹಿತೈಷಿಗಳು, ಅಭಿಮಾನಿಗಳು, ಮತ್ತವರ ಹಳೇ ವಿದ್ಯಾರ್ಥಿ ಸಮೂಹದ ಉಪಸ್ಥಿತಿಯಲ್ಲಿ ಶ್ರೀಯುತ ಕೆ. ರಾಮಯ್ಯನವರ ಅಧ್ಯಕ್ಷತೆಯಲ್ಲಿ ಹೃದಯಸ್ಪರ್ಶಿ ಅಭಿನಂದನಾ ಸಮಾರಂಭವು ತುಂಬಾ ಅಚ್ಚುಕಟ್ಟಾಗಿ ಮೈದಳೆದಿತ್ತು.

ಗೆಳೆಯ 'ಕಾಪಾನಾ' ರವರು ಬಹಳ ಹಿಂದೆಯೇ ಕೈಗೆತ್ತಿಕೊಂಡಿದ್ದ ಕೆಎನ್ನೆಸ್‌ರವರ "ಅಭಿನಂದನಾ ಗ್ರಂಥ" ರಚನೆಯ ಕಾರ್ಯವು ಚುರುಕುಗೊಂಡಿದ್ದು ಈ ಕಾರ್ಯಕ್ರಮದ ನಂತರವೇ ಎನ್ನಬಹುದು.

ಹೀಗಾಗಿ ಅಭಿನಂದನಾ ಗ್ರಂಥ ರಚನೆಗಾಗಿ ಒಂದು ಕಾರ್ಯಪಡೆಯ ಅವಶ್ಯಕತೆ ಇತ್ತು. ಅದರಂತೆ ಸಾಮಾಜಿಕ ಅಸಮಾನತೆಯ ವಿರುದ್ಧ ದನಿ ಎತ್ತಿ, ಕಾರ್ಯಪ್ರವೃತ್ತರಾಗಿರುವ "ನಿಡುಮಾಮಿಡಿ ಮಹಾಸಂಸ್ಥಾನ"ದ ಅಧ್ಯಕ್ಷರಾದ "ಶ್ರೀ ವೀರಭದ್ರ ಚನ್ನಮಲ್ಲದೇಶಿಕೇಂದ್ರ ಮಹಾಸ್ವಾಮಿ"ಗಳು (ಗೌರವ ಅಧ್ಯಕ್ಷರು) ಇವರ ಶುಭಾಶಯಗಳೊಂದಿಗೆ ಕೃಷಿ ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿಗಳಾದ ಡಾ. ಎಸ್. ಬಿಸಲಯ್ಯರವರ ಅಧ್ಯಕ್ಷತೆಯಲ್ಲಿ ಆತ್ಮೀಯರು, ಸಮಾನ ಮನಸ್ಕರನ್ನೊಳಗೊಂಡ ಅಭಿನಂದನಾ ಸಮಿತಿ ಮತ್ತು ಸಂಪಾದಕೀಯ ಮಂಡಳಿಯು ರೂಪುಗೊಂಡು, ಎರಡು ಮೂರು ಸಭೆಗಳ ನಂತರ ಕಾರ್ಯಪ್ರವೃತ್ತವಾಯಿತು. ಅದರಂತೆ ಸಮಿತಿಯ ಎಲ್ಲ ಸದಸ್ಯರೂ ತಪ್ಪದೆ ಒಂದು ಲೇಖನವನ್ನು ಕೊಡಲೇಬೇಕೆಂಬ ತೀರ್ಮಾನ ಕೈಗೊಂಡಾಗಲೇ "ನಾನೂ ಸಹ ಬರೆಯಲೇಬೇಕೆಂಬ ಅನಿವಾರ್ಯತೆ" ಏರ್ಪಟ್ಟಿದ್ದು ಮತ್ತು ಯಾವುದೇ ವಸ್ತು, ವಿಷಯ ಅಥವಾ ಸಂಗತಿಗಳ ಬಗ್ಗೆ ನಿರರ್ಗಳವಾಗಿ ಮಾತನಾಡುವುದಕ್ಕೂ, ಮಾತುಗಳನ್ನು ಕೃತಿಯ ರೂಪದಲ್ಲಿ (ಬರವಣಿಗೆಯ ರೂಪದಲ್ಲಿ) ವ್ಯಕ್ತಪಡಿಸುವುದಕ್ಕೂ ಎಷ್ಟು ಕಷ್ಟವೆಂದು ತಿಳಿದದ್ದು.

ಲೇಖನ ಬರೆಯಲು ತೀರ್ಮಾನಿಸಿದ್ದಾಯಿತು. ಏನು ಬರೆಯಬೇಕೆಂಬುದು ಗೊತ್ತು. ಹೇಗೆ ಬರೆಯುವುದೆಂದು ಅರ್ಥವಾಗದೆ ತಿಂಗಳುಗಳೇ ಕಳೆದವು. ಎಲ್ಲೋ ಒಂದು ಕಡೆ ಬರವಣಿಗೆಯಲ್ಲಿ ಲೋಪವಾಗುವುದೇನೋ ಎಂಬ ಭಯಕ್ಕಿಂತಲೂ ಬಾಲ್ಯದ ಗೆಳೆಯ (ಪಿಯುಸಿ ತರಗತಿಯಿಂದ) ಮೂಲ ದಲಿತ ಸಂಘಟನೆಯಲ್ಲಿ ನನ್ನ ಒಡನಾಡಿಯಾದ ಕಾಪಾನಾ ರವರ ಆತ್ಮೀಯ ಬೈಗಳಿಗೆ ಹೆದರಿ ಅಂತೂ ಬರೆಯಲು ಪ್ರಾರಂಭಿಸಿದ್ದೇನೆ. ನನ್ನ ಈ ಮೊದಲನೇ ಬರವಣಿಗೆಯಲ್ಲಿ ಏನೇ ತಪ್ಪುಗಳಿದ್ದರೂ

ಸಹ ಈ ಪುಸ್ತಕವನ್ನು ಓದುತ್ತಿರುವ ನಿಮ್ಮ ಸಹಕಾರ ಇದೆಯೆಂದು ಭಾವಿಸಿ ಮುಂದುವರೆಸುತ್ತಿದ್ದೇನೆ.

ಹೊಗಳಿಸಿಕೊಳ್ಳುವುದು ತರವಲ್ಲ, ಹೊಗಳಿಸಿಕೊಳ್ಳುವ ಜಾಯಮಾನವೂ ಕೆಎನ್ನೆಸ್ ಅವರದಲ್ಲ. ಆದರೂ ನನ್ನ ಜೀವನದಲ್ಲಿ ಕೆಎನ್ನೆಸ್ ಏನು ಎಂಬುದರ ಬಗ್ಗೆ ಕೆಲವು ಸಂಗತಿಗಳನ್ನು ವಾಸ್ತವತೆಯ ಹಿನ್ನೆಲೆಯಲ್ಲಿ ನಿಮ್ಮ ಮುಂದಿಡುವ ಪ್ರಯತ್ನ.

ಗೌರಿಬಿದನೂರು ತಾಲ್ಲೂಕಿನಲ್ಲಿ ಕೆ.ಎಂ. ಕೊಮ್ಮಣ್ಣ ಮತ್ತು ಹ.ಮಾ.ರಾಮಚಂದ್ರರವರ ಮಾರ್ಗದರ್ಶನದಲ್ಲಿ ಒಂಗೊಳ್ಳುತ್ತಿದ್ದ ಮೂಲ ದ.ಸಂ.ಸ. ಚಳುವಳಿಯಲ್ಲಿ ಆಗಷ್ಟೆ ನಾಯಕತ್ವ ವಹಿಸಿಕೊಂಡ ಹೊಸತರಲ್ಲಿ ವಾಟದಹೊಸಹಳ್ಳಿಯಲ್ಲಿ ಎಸ್.ಸಿ. ಮತ್ತು ಎಸ್.ಟಿ.ಗಳ ನಡುವೆ ವೈಷಮ್ಯ ಬೆಳೆದು ಸ್ಥಳೀಯ ಪಟ್ಟಭದ್ರ ಹಿತಾಸಕ್ತಿಗಳ ಒತ್ತಡದಿಂದಾಗಿ ತೀವ್ರ ಸ್ವರೂಪದ ಸಂಘರ್ಷವೇರ್ಪಟ್ಟ ಸಂದರ್ಭ. ಮಾಮೂಲಿನಂತೆ ಹೆಚ್ಚಿನ ನೋವುಂಡವರು ಪರಿಶಿಷ್ಟ ಜಾತಿಯ ವಿದ್ಯಾರ್ಥಿ ಯುವಕರು, ಅಸಹಾಯಕರು. ಇವರೆಲ್ಲರ ಆಕ್ರೋಶವು ಒಂದು ಬೃಹತ್ ಪ್ರತಿಭಟನಾ ಕಾರ್ಯಕ್ರಮಕ್ಕೆ ದಾರಿ ಮಾಡಿಕೊಟ್ಟಿತು. ಸಂಘರ್ಷಕ್ಕೆ ಕಾರಣಕರ್ತರಾದ ವಾಟದ ಹೊಸಹಳ್ಳಿಯ ಗ್ರಾಮಸ್ಥರಲ್ಲಿ ಅರಿವು ಮೂಡಿಸುವ ಉದ್ದೇಶದಿಂದ ಹಾಗೂ ನೋವುಂಡವರಲ್ಲಿ ಧೈರ್ಯ ತುಂಬಲು ಮತ್ತು ಮುಂದೆ ಇಂತಹ ಘಟನೆಗಳು ಮರುಕಳಿಸದಂತೆ ಎಚ್ಚರಿಕೆ ನೀಡುವ ಸಲುವಾಗಿ ಬೃಹತ್ ಕಾರ್ಯಕ್ರಮದ ಸಂಘಟನೆಗಾಗಿ ಸಭೆ ಸೇರಿತ್ತು. ಸಭೆಯ ನೇತೃತ್ವ ಹ.ಮಾ. ರಾಮಚಂದ್ರರವರದ್ದು. ಸಭೆಯಲ್ಲಿ ಹಾಜರಿದ್ದ ತಾಲ್ಲೂಕು ಸಮಿತಿಯ ಪದಾಧಿಕಾರಿಗಳು, ಸಂಘಟನೆಯ ಹಿತೈಷಿಗಳು ಹಾಗೂ ವಾಟದಹೊಸಹಳ್ಳಿಯ ದಲಿತ ವಿದ್ಯಾರ್ಥಿಗಳ ಉಪಸ್ಥಿತಿಯಲ್ಲಿ ಕಾರ್ಯಕ್ರಮದ ರೂಪರೇಷೆಗಳು ಸಿದ್ಧವಾಯಿತು.

ಕಾರ್ಯಕ್ರಮದ ಕರಪತ್ರದ ರಚನೆಯನ್ನು ಸ್ವಯಂಪ್ರೇರಿತನಾಗಿ ನಾನೇ ಒಪ್ಪಿಕೊಂಡು ಒಂದು ಕರಪತ್ರವನ್ನು ರಚಿಸಿದೆ. ಆಗ ಹ.ಮಾ.ರಾಮಚಂದ್ರಪ್ಪನವರು ನೀವೂ ಬರೆಯಿರಿ, ಆದರೆ ಕೆಎನ್ನೆಸ್‌ರವರೂ ಒಂದು ಕರಪತ್ರವನ್ನು ಸಿದ್ಧಪಡಿಸಿದ್ದಾರೆ. ಗುಡಿಬಂಡೆಗೆ ಹೋಗಿ (ಕೆಎನ್ನೆಸ್‌ರವರು ಗುಡಿಬಂಡೆಯಲ್ಲಿ ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದ ಸಂದರ್ಭ) ಅವರನ್ನು ಸಹ ಭೇಟಿಯಾಗಿ. ಕೆಎನ್ನೆಸ್‌ರವರು ಯಾವುದು ಸೂಕ್ತವೆಂದು ಹೇಳುತ್ತಾರೋ ಅದನ್ನು ಪ್ರಕಟಿಸಿ ಎಂದರು.

ಸರಿ ನಾನು ಮತ್ತು ಸಿ.ಜಿ. ಗಂಗಪ್ಪನವರು ಗುಡಿಬಂಡೆಯ ಕೆಎನ್ನೆಸ್‌ರವರ ಮನೆಗೆ ಹೋದೆವು. ಅದುವರೆಗೂ ಕೆಎನ್ನೆಸ್‌ರವರ ಬಗ್ಗೆ ಅವರಿವರಿಂದ ಕೇಳಿ ತಿಳಿದಿದ್ದೆನೇ ಹೊರತು, ಅವರನ್ನು ಖುದ್ದಾಗಿ ಭೇಟಿಯಾಗುವ ಸಂದರ್ಭ ಒದಗಿ ಬಂದಿರಲಿಲ್ಲ. ಪರಸ್ಪರ ಪರಿಚಯವಾಯಿತು.

ಉಭಯ ಕುಶಲೋಪರಿಯ ನಂತರ ಕಾರ್ಯಕ್ರಮದ ಕರಪತ್ರದ ಬಗ್ಗೆ ಪ್ರಸ್ತಾಪ. ಕೂಡಲೇ ನನ್ನ ಕೈಗೊಂದು ಕರಪತ್ರದ ಹಸ್ತಪ್ರತಿಯನ್ನು ಕೊಟ್ಟರು. ಅದನ್ನು ಓದಲು ಪ್ರಾರಂಭಿಸುವ ಮುನ್ನ ನಾನು ವಾಟದಹೊಸಹಳ್ಳಿಯ ಘರ್ಷಣೆಯಲ್ಲಿ ತೊಡಗಿದ್ದ



ಎರಡೂ ಜನಾಂಗದವರು ಮೂಲತಃ ಶೋಷಿತ ಸಮುದಾಯದವರೆ. ರಾಮಾಯಣ, ಮಹಾಭಾರತಗಳ ಕಾಲಘಟ್ಟಗಳಿಂದಲೂ ಇಲ್ಲಿನವರೆಗೆ ಊಳಿಗಮಾನ್ಯ ಪದ್ಧತಿಯಲ್ಲಿ ಚಾಕರಿ ಮಾಡಿಕೊಂಡು ತಮ್ಮನ್ನು ತಾವು ಉಳ್ಳವರ ಸೇವೆಗೆ ಮುಡಿಪಾಗಿಸಿ, ಸೋತು, ಸತ್ತಂತಹವರೆ. ಈ ಹಿನ್ನೆಲೆಯಲ್ಲಿ ಮತ್ತು ಹಳ್ಳಿಗಳಲ್ಲಿನ ತೋಟಿ, ತಳವಾರ (ಎಸ್.ಸಿ./ ಎಸ್.ಟಿ.) ಚಾಕರಿಯ ಹಿನ್ನೆಲೆಯಲ್ಲಿ ತುಲನಾತ್ಮಕವಾಗಿ ಕರಪತ್ರ ರಚಿಸಿದ್ದೆ. ಅದರ ಪ್ರತಿಯನ್ನು ಅವರಿಗೆ ಕೊಟ್ಟೆ.

ಅವರು ಬರೆದ ಕರಪತ್ರವನ್ನು ನಾನಿನ್ನೂ ಅರ್ಧದಷ್ಟೂ ಸಹ ಓದಿರಲಿಲ್ಲ. ನನ್ನ ಕರಪತ್ರವನ್ನು ಅವರು ಎಷ್ಟು ಓದಿದರೋ ಗೊತ್ತಿಲ್ಲ.

ಮೂಲತಃ ಕನ್ನಡ ಉಪನ್ಯಾಸಕರಾಗಿ, ಸಾಹಿತ್ಯದ ಬಗ್ಗೆ ಸಾಕಷ್ಟು ಅರಿವಿದ್ದ ಅವರು ನನ್ನ ಕೈಲಿದ್ದ ಅವರ ಕರಪತ್ರವನ್ನು ಸೆಳೆದುಕೊಂಡು, ಈ ಸಂದರ್ಭದಲ್ಲಿ ನೀವು ರಚಿಸಿರುವ ಕರಪತ್ರದಲ್ಲಿನ ಮಾಹಿತಿಯೇ ಪ್ರಸ್ತುತ, ತುಂಬಾ ಚೆನ್ನಾಗಿದೆ. ಅದನ್ನೇ ಪ್ರಕಟಿಸಿ ಎಂದು ಸಲಹೆ ಇತ್ತರು. ಆ ಕ್ಷಣದಲ್ಲಿ ಅವರ ಮಾತುಗಳಲ್ಲಿ ದೃಢವಾದ ಸ್ಪಷ್ಟತೆ ಇತ್ತೇ ಹೊರತು, ಸ್ವಯಂಘೋಷಿತ ಸಾಹಿತಿಗಳ ರೀತಿಯಲ್ಲಿ ಯಾವುದೇ ಅಹಂ ಅವರ ಮುಖದಲ್ಲಿ ಕಾಣಲಿಲ್ಲ. ಮೇಲಾಗಿ ಈ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ನಮ್ಮನ್ನು ಬೀಳ್ಕೊಟ್ಟರು.

ನಂತರ ನಾನು ಪೇಚಿಗೆ ಸಿಲುಕಿದೆ. ನಾನು ಬರೆದಿದ್ದು ಸರಿಯಿದೆಯೋ ? ಅಥವಾ ನನ್ನನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಅವರು ಹಾಗೆ ಹೇಳಿದರೋ ? ಎಂದು ನನಗೆ ತಿಳಿಯಲಿಲ್ಲ. ಮೇಲಿನ ಎರಡರಲ್ಲಿ ಯಾವುದು ಸರಿಯೋ, ಅಂತೂ ಅವರು ಹಾಗೆ ಹೇಳದೇ ಇದ್ದಿದ್ದರೆ ಕೀಳರಿಮೆಯಿಂದ ಮುಂದೆ ಎಂದೆಂದಿಗೂ ನಾನು ಬರೆಯುವ ಪ್ರಯತ್ನವನ್ನೇ ಮಾಡುತ್ತಿರಲಿಲ್ಲವೇನೋ. ಒಟ್ಟಿನಲ್ಲಿ ನನ್ನ ಅವರ ಮೊದಲ ಪರಿಚಯದಲ್ಲೆ ಈ ಘಟನೆಯು ಮುಂದೆ ನಾನು ಅವರ ನಿಕಟವರ್ತಿಯಾಗಲು ನಾಂದಿಯಾಯಿತು.

ಇಂತಹ ಘಟನೆಗೆ ಸಾಕ್ಷಿಭೂತರಾದವರು ಗೆಳೆಯರಾದ ಸಿ.ಜಿ. ಗಂಗಪ್ಪನವರು. ಒಟ್ಟಾರೆ ದಲಿತ ಚಳುವಳಿಯಲ್ಲಿ ಅವರ ಪಾತ್ರವು ತುಂಬಾ ಗಣನೀಯವಾದದ್ದು. ಅದರಲ್ಲೂ ಮುಖ್ಯವಾಗಿ ಗೌರಿಬಿದನೂರಿನ ತಾಲ್ಲೂಕು ಸಂಘಟನೆಯೊಂದಿಗೆ ನಿಕಟವಾದ ಸಂಬಂಧ ಹೊಂದಿದ್ದ ಅವರು ಗೌರಿಬಿದನೂರಿನ ಎಲ್ಲ ತಾಲ್ಲೂಕು ಸಮಿತಿ ರಚನೆಯ ಸಂದರ್ಭದಲ್ಲಿ ಚುನಾವಣಾಧಿಕಾರಿಗಳಾಗಿ, ಮಾರ್ಗದರ್ಶಕರಾಗಿ, ಯುವಸ್ಫೂರ್ತಿಯಿಂದ ಹಳ್ಳಿಗಳಲ್ಲಿ ಕೆಲಸ ಮಾಡುತ್ತಿದ್ದ ನಾವುಗಳು ಯಾರೂ ಸಹ ತಪ್ಪು ಮಾಡದಂತೆ ನಮ್ಮನ್ನು ತಿದ್ದಿ ಬೆಳೆಸಿದ ನಮ್ಮೆಲ್ಲರ ನೆಚ್ಚಿನ ಮಾಸ್ತರರಾಗಿ ಸದಾ (ಈಗಲೂ) ನಮ್ಮೊಂದಿಗಿದ್ದವರು.

ಸರ್ಕಾರಿ ನೌಕರಿಯಲ್ಲಿದ್ದಾಗ ಅವರಿಗಿದ್ದ ಮಿತಿಯ ನಡುವೆಯೂ ಹಲವಾರು ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗಿದ್ದವರು.

ಉದ್ಯೋಗದಿಂದ ವಯೋನಿವೃತ್ತಿ ಹೊಂದಿದ ಮೇಲಂತೂ ಅವರ ಸಂಘಟನಾಸಕ್ತಿಯು ಒಬ್ಬ ಪ್ರಾಮಾಣಿಕನಾದ ಪೂರ್ಣಾವಧಿ ಕಾರ್ಯಕರ್ತನಿಗೂ ಮಿಗಿಲಾಗಿತ್ತು. ಹಾಗೆ "ನಿರಂತರ ಕಾಯಕಜೀವಿ"ಯಾಗಿ ಶ್ರಮಿಸಿದ್ದರ ಫಲವೇ ಇಂದು ಅವರಿಗೆ ಲಭಿಸಿದ ಈ ಪ್ರಶಸ್ತಿ ಎಂದರೆ ತಪ್ಪಾಗಲಾರದು.

ಹಾಗೆಯೇ ನನ್ನ ವೈಯಕ್ತಿಕ ಜೀವನದಲ್ಲಿಯೂ ಸಹ ಇವರ ಪಾತ್ರವು ಅತ್ಯಮೂಲ್ಯವಾದದ್ದು. ದ.ಸಂ.ಸ. ಸಂಘಟನೆಯು (ಚುನಾವಣಾ) ರಾಜಕೀಯ ತೀರ್ಮಾನ ಕೈಗೊಂಡ ನಂತರ, ಅದನ್ನು ವಿರೋಧಿಸಿ ಸಂಘಟನೆಯಿಂದ ಹೊರನಡೆದವರಲ್ಲಿ ನಾನೂ ಒಬ್ಬ. ಹೆತ್ತು ಹೊತ್ತವರನ್ನು, ವಿದ್ಯಾಭ್ಯಾಸವನ್ನು ತೊರೆದು ಕಟ್ಟಿದ ಸಂಘಟನೆ ಹೀಗಾಯಿತಲ್ಲ ಎಂಬ ನೋವಿನಲ್ಲಿದ್ದ ನಾನು ಆಕರ್ಷಿತನಾದದ್ದು "ಕರ್ನಾಟಕ ವಿಮೋಚನಾ ರಂಗ" ಚಳುವಳಿಯ ತತ್ವಸಿದ್ಧಾಂತಕ್ಕೆ. ಆಗ ಆ ಸಂಘಟನೆಯ ರಾಜ್ಯ ಸಂಚಾಲಕರು ಪ್ರಗತಿಪರ ಬರಹಗಾರರೆಂದು ಗುರ್ತಿಸಿಕೊಂಡಿದ್ದ 'ಬಂಜಗೆರೆ ಜಯಪ್ರಕಾಶ್'ರವರು. ಹೆತ್ತ ತಾಯಿಯ ಒತ್ತಾಯಕ್ಕೆ ಮಣಿದ ನಾನು ಅವರು ತೋರಿಸಿದ ವರಲಕ್ಷ್ಮಿಯನ್ನು ಮದುವೆಯಾಗಲು ಒಪ್ಪಿದ್ದೆ.

ಆದರೆ ಮದುವೆ ಎಲ್ಲವೂ ನನ್ನ ಚಿಂತನೆಯ ಪ್ರಕಾರ ಸಂಪ್ರದಾಯರಹಿತವಾಗಿತ್ತು. ಮದುವೆಯ ದಿನಾಂಕ ನಿಗದಿಪಡಿಸಿದ್ದು ಮಾತ್ರ ಬಂಜಗೆರೆ ಜಯಪ್ರಕಾಶ್‌ರವರೆ. ಅವರೇ ನಿಂತು ನಿರ್ವಹಿಸಬೇಕಾದ ನನ್ನ ಮದುವೆಯ ದಿನ ಸಂಘಟನಾ ಕಾರ್ಯಗಳ ಒತ್ತಡದಿಂದಾಗಿ ಅವರು ಅಂದು ಗೈರುಹಾಜರು. ಆಗ ನನ್ನ ಮದುವೆಯ ಸಂಪ್ರದಾಯರಹಿತ ವಿಧಿವಿಧಾನಗಳ ಸಂಪೂರ್ಣ ಹೊಣೆ ಹೊತ್ತು ಪ್ರಮಾಣವಚನ ಬೋಧಿಸುವ ಮೂಲಕ ನನ್ನ ಮದುವೆ ಮಾಡಿಸಿದವರು ಶ್ರೀಯುತ ಕೆಎನ್ನೆಸ್‌ರವರು.

ಅಷ್ಟೇ ಅಲ್ಲದೆ ನನ್ನ ಚಿಕ್ಕ ಮಗನಿಗೆ 'ಸ್ನೇಹಿತ' ಎಂದು ನಾಮಕರಣ ಮಾಡಿದ ಪುರೋಹಿತರೂ ಅವರೆ. ಹೀಗೆ ನನ್ನ ಪ್ರತಿ ಬೆಳವಣಿಗೆಯ ಹಂತದಲ್ಲೂ ಅವರ ಮಾರ್ಗದರ್ಶನವಿದೆ. ಸರ್ಕಾರಿ ನೌಕರಿಯಲ್ಲಿ ಬರುತ್ತಿದ್ದ ಸಂಬಳ (ತಿಂಗಳಿಗೆ 1200 ರೂ.) ಜೀವನಕ್ಕೆ ಸಾಕಾಗದ ಪರಿಸ್ಥಿತಿಯಲ್ಲಿ ಭ್ರಷ್ಟನಾಗದ ನಾನು ಅನಿವಾರ್ಯವಾಗಿ ಖಾಸಗಿ ಕಂಪನಿಯೊಂದರಲ್ಲಿ ಮಾರ್ಕೆಟಿಂಗ್ ಆಫೀಸರ್ ಆಗಿ ನೇಮಕಗೊಂಡಾಗಲೂ ಸಹ ಅವರ ಸಲಹೆ ಬಯಸಿದ್ದೆ. ಆಗ ಅವರ ಅಂತರಂಗದಲ್ಲಿ ನನ್ನ ತೀರ್ಮಾನದ ಬಗ್ಗೆ ಒಪ್ಪಿಗೆಯಿಲ್ಲದಿದ್ದರೂ ಸಹ ನನ್ನ ಆರ್ಥಿಕ ದುಃಸ್ಥಿತಿಯನ್ನರಿತ ಅವರು ಅನಿವಾರ್ಯವಾಗಿ ಒಪ್ಪಿದರೆಂದೇ ಹೇಳಬೇಕು. ಆನಂತರ ಗೆಳೆಯ ಹುದುಗೂರು ಮೋಹನ್‌ರವರ ಸಾವಿನ ನಂತರ ಅವರ ಕುಟುಂಬಕ್ಕೆ ಸಹಾಯಾರ್ಥವಾಗಿ ಸಮಾನ ಮನಸ್ಕರು, ಕಾರ್ಯಕರ್ತರು ಸಂಗ್ರಹಿಸಿದ್ದ ಹಣವನ್ನು ಮಾತ್ರ ನನ್ನ ಕಂಪನಿಯಲ್ಲಿಯೇ ತೊಡಗಿಸಲು ಸಲಹೆಯಿತ್ತ ಅವರ ತೀರ್ಮಾನದಲ್ಲಿ, "ಆ ಹಣಕ್ಕೆ ಸರಿಯಾದ ಕಾವಲುಗಾರ ನಾನೇ" ಎಂಬಂತಿತ್ತು.

ಹೀಗೆ ನನ್ನ ರೀತಿ ಎಲ್ಲರೂ ಬರೆಯುತ್ತಾ ಹೋದರೆ ಈ ಅಭಿನಂದನಾ ಗ್ರಂಥಕ್ಕಿರುವ ಪುಟಗಳ ಮಿತಿಯು ಮೀರಿ ಹಲವಾರು ಸಂಪುಟಗಳಾಗುವ ಸಾಧ್ಯತೆ ಇದೆ. ಏಕೆಂದರೆ



ಕೆಎನ್ನೆಸ್‌ರವರೇ ಹಾಗೆ. ನಮ್ಮಂತಹ ಎಲ್ಲರ ಬಾಳಿನಲ್ಲೂ ಹಾಸುಹೊಕ್ಕಾದವರು. ಆದ್ದರಿಂದ ನನ್ನ ಈ ಬರಹವನ್ನು ಮುಗಿಸುವ ಮುನ್ನ ಇವರು ಯಾವುದೇ ಅಹಂ (Ego) ಇಲ್ಲದೆ ತಮ್ಮನ್ನು ತಾವು 'ಆತ್ಮವಿಮರ್ಶೆ' ಮಾಡಿಕೊಳ್ಳುವ ಉತ್ತಮ ವ್ಯಕ್ತಿತ್ವಕ್ಕೆ ನಿದರ್ಶನವಾದ ಒಂದು ಘಟನೆಯನ್ನು ನಿಮ್ಮೊಂದಿಗೆ ಹಂಚಿಕೊಳ್ಳಲು ಇಚ್ಚಿಸುತ್ತೇನೆ.

ಆಗ ಮೊಬೈಲ್ ಬಳಕೆ ತುಂಬಾ ದುಬಾರಿಯಾಗಿದ್ದ ಕಾಲ. ದಿನಾಂಕ 10-10-1996 ರಂದು ಕೆಎನ್ನೆಸ್‌ರವರಿಂದ ನನಗೊಂದು ಪತ್ರ ಬಂತು.

ಒಳಗೇನಿರಬಹುದೆಂಬ ಕುತೂಹಲ ನನಗೆ. ಪತ್ರ ಓದಿದ ನನಗೆ ಒಂದು ಕಾರ್ಯಕ್ರಮಕ್ಕೆ ಆಹ್ವಾನ. ಆ ಕಾರ್ಯಕ್ರಮವು ಸ್ವಯಂ ಅವರು ಸಂಘಟಿಸಿದ್ದೇ ಆಗಿತ್ತು. ಅದುವರೆಗೂ ದ.ಸಂ.ಸ. ಚಟುವಟಿಕೆಗಳೊಂದಿಗೆ ಜಿಲ್ಲೆ ಹಾಗೂ ತಾಲ್ಲೂಕಿನಾದ್ಯಂತ ಪ್ರತಿ ಹಳ್ಳಿಯನ್ನು ಸುತ್ತಿದ್ದ ಅವರಿಗೆ ಮನವರಿಕೆಯಾಗಿದ್ದ ಒಂದು ಸಂಗತಿ ಎಂದರೆ, ನಾಯಕ (ವಾಲ್ಮೀಕಿ) ಜನಾಂಗದ ಯುವಕರು ಮತ್ತು ಸಮುದಾಯವು ದ.ಸಂ.ಸ. ಚಳುವಳಿಯೊಂದಿಗೆ ಗುರುತಿಸಿಕೊಳ್ಳದೆ ದೂರ ಉಳಿದು ವಿಭಿನ್ನವಾಗಿ ಸಾಗುತ್ತಿದ್ದ ವಾಸ್ತವ.

ಇದರ ಕುರಿತು ಆಲೋಚಿಸಿದ ಕೆಎನ್ನೆಸ್‌ರವರು ಏನಾದರೂ ಮಾಡಿ ಈ ಸಮುದಾಯದ ನೋವು ನಲಿವುಗಳಿಗೆ ಒಂದು ಚಳವಳಿಯ ರೂಪ ಕೊಟ್ಟು ಮೂಲ ದ.ಸಂ.ಸ. ಚಳವಳಿಯೊಂದಿಗೆ ಕೊಂಡೊಯ್ಯಬೇಕೆಂಬ ಒತ್ತಾಸೆ. ಅದರ ಫಲವಾಗಿ ಇಡೀ ತಾಲ್ಲೂಕಿನಾದ್ಯಂತ ಹೋಬಳಿವಾರು ಕಾರ್ಯಕ್ರಮವನ್ನು ಹಮ್ಮಿಕೊಂಡು ಪ್ರತಿ ಹೋಬಳಿ ವ್ಯಾಪ್ತಿಯಲ್ಲಿನ ಹಳ್ಳಿಗಳಲ್ಲಿನ ನಾಯಕ ಜನಾಂಗದ ವಿದ್ಯಾರ್ಥಿ, ಯುವಕರನ್ನು ಸಂಘಟಿಸಿ, ವಿಚಾರ ವೇದಿಕೆ ರೂಪದಲ್ಲಿ ಅವರನ್ನು ಪ್ರಜ್ಞಾವಂತರನ್ನಾಗಿ ಬೆಳೆಸಬೇಕೆಂಬ ಛಲ. ಇಂತಹ ಒಂದು ಕಾರ್ಯಕ್ರಮವನ್ನು ದಿನಾಂಕ 22-10-2006 ರಂದು ಹೊಸೂರಿನಲ್ಲಿಯೂ ಆಯೋಜಿಸಲಾಗಿತ್ತು. ಮೂಲತಃ ಅದೇ ಹೋಬಳಿಯವನಾದ ನನ್ನನ್ನು ಒಂದು ನಿರ್ಧಿಷ್ಟ ವಿಷಯಕ್ಕೆ ಭಾಷಣಕಾರನಾಗಿ ಆಹ್ವಾನಿಸಿದ್ದರು. (ಅವರ ಸ್ವಂತ ಕೈ ಬರಹದ ಈ ಪತ್ರವು ಈಗಲೂ ನನ್ನ ಸಂಗ್ರಹದಲ್ಲಿದೆ) ಅದರಂತೆ ಕಾರ್ಯಕ್ರಮಕ್ಕೆ ಹಾಜರಾದೆ.

ಕಾರ್ಯಕ್ರಮವು ಒಂದು ಕಾರ್ಯಕ್ರಮವಾಗಿ ಯಶಸ್ವಿಯಾಯಿತೇ ಹೊರತು ಕೆಎನ್ನೆಸ್‌ರವರ ಆಶಯದಂತೆ ಫಲಿತಾಂಶ ಕೊಡುವ ನಿರೀಕ್ಷೆ ನನಗಿರಲಿಲ್ಲ. ಕಾರ್ಯಕ್ರಮ ಮುಗಿದ ನಂತರ ಕೊನೆಯವರೆಗೂ ಜೊತೆಗಿದ್ದ ನಾವಿಬ್ಬರೂ ಹೊಸೂರಿನ ಹೈಸ್ಕೂಲ್ ಹಾಸ್ಟೆಲ್‌ನ ಕಾರಿಡಾರ್‌ನಲ್ಲಿ ಕುಳಿತು ಚರ್ಚಿಸುವಾಗ ನನ್ನ ಮನದಾಳದ ಅಭಿಪ್ರಾಯವನ್ನು ಅವರೊಂದಿಗೆ ಹಂಚಿಕೊಳ್ಳಬೇಕೆನಿಸಿತು.

ಈ ಕಾರ್ಯಕ್ರಮದ ಬಗ್ಗೆ ಇಳಿ ವಯಸ್ಸಿನಲ್ಲಿಯೂ ಸಹ ಇಡೀ ತಾಲ್ಲೂಕನ್ನು ಸುತ್ತಾಡಿ ಶ್ರಮಿಸಿದ್ದ ಅವರ ಉದ್ದೇಶ ಕೈಗೂಡದೆಂಬ ಶಂಕೆ ನನ್ನನ್ನು ಕಾಡುತ್ತಿತ್ತು. ನಿಜ, ಅವರು ನಮ್ಮ ಮಾರ್ಗದರ್ಶಕರಾದರೂ ಸಹ ನನ್ನ ಈ ಅಭಿಪ್ರಾಯವನ್ನು

'ಸಕಾರಾತ್ಮಕ ವಿಮರ್ಶೆ' ಯಾಗಿ ಸ್ವೀಕರಿಸುತ್ತಾರೆಂಬ ನಂಬಿಕೆಯಿಂದ ಧೈರ್ಯ ಮಾಡಿ ಹೇಳಿಯೇ ಬಿಟ್ಟೆ. "ಸಾರ್ ಈ ಕಾರ್ಯಕ್ರಮದ ಮೂಲಕ ಇಡೀ ಜನಾಂಗವನ್ನು ಸಾಂಸ್ಕೃತಿಕವಾಗಿ ಸಂಘಟಿಸಿ ಅದಕ್ಕೆ ಚಳವಳಿಯ ರೂಪ ಕೊಡಬೇಕೆಂಬ ನಿಮ್ಮ ನಿರಂತರ ಶ್ರಮದ ಫಲವು ಸಿಹಿನೀರಿನ ನದಿಯಾಗಿ ಹರಿದು ಕೊನೆಗೆ ಸೇರುವುದು ಕಡು ಉಪ್ಪಾದ ರಾಜಕೀಯ ಸಮುದ್ರವನ್ನು ಮಾತ್ರ". ಏಕೆಂದರೆ ಅತಿ ಸ್ವಲ್ಪ ಕಾಲದಲ್ಲಿಯೇ ಸಮೀಪಿಸಲಿರುವ ಚುನಾವಣೆಗೆ ಅದುವರೆಗೂ ಚದುರಿ, ಹಂಚಿ ಹೋಗಿದ್ದ ವಿದ್ಯಾರ್ಥಿ, ಯುವಕರನ್ನು ಸಂಘಟಿಸಿ ಆ ಜನಾಂಗದ ನಾಯಕರ (ರಾಜಕೀಯ ನಾಯಕರ) ಕೈಗೆ ನೀಡಿದಂತಾಯಿತು ಎಂದು ಹೇಳಿಯೇಬಿಟ್ಟೆ. ಆ ಕ್ಷಣಕ್ಕೆ "ಇರಲಿ ನೋಡೋಣ" ಎಂದಷ್ಟೇ ಹೇಳಿದ್ದ ಅವರು ಮುಂದೊಂದು ದಿನ ಚುನಾವಣೆ ಮುಗಿದ ನಂತರ ಅವರನ್ನು ಭೇಟಿಯಾದಾಗ "ಹೌದು ರಂಗಣ್ಣ, ನೀನು ಹೇಳಿದ ಮಾತು ಸತ್ಯ" ನಾವು ಸಂಘಟಿಸಿದ್ದ ವಿದ್ಯಾರ್ಥಿ ಯುವಕರನ್ನು ಹೋಬಳಿ ಮಟ್ಟದ ಎಲ್ಲ ಕಾರ್ಯಕ್ರಮಗಳಲ್ಲಿ ಕ್ರಿಯಾಶೀಲರಾಗಿ ಪಾಲ್ಗೊಂಡಿದ್ದ ಜನಾಂಗದ ನಾಯಕರು ತಮ್ಮ ರಾಜಕೀಯ ಲಾಭವನ್ನಾಗಿ ನಗದೀಕರಿಸಿಕೊಂಡಿರುವುದು ಸತ್ಯ" ಎಂಬ ಸತ್ಯವನ್ನು ಯಾವುದೇ ಅಹಂ ಇಲ್ಲದೆ ಒಪ್ಪಿಕೊಂಡಿದ್ದರು. ನಿಜಕ್ಕೂ ಅವರು ತಮ್ಮನ್ನು ತಾವು ಆತ್ಮವಿಮರ್ಶೆಗೊಳಪಡಿಸಿಕೊಂಡಿದ್ದರು.

ಇಂತಹ ಶ್ರೇಷ್ಠ ಗುಣಗಳನ್ನು ಹೊಂದಿದ ಇವರು ಯಾವತ್ತೂ ಪದವಿ ಬಿರುದುಗಳ ಬೆನ್ನುಹತ್ತಿ ಹೋದವರಲ್ಲ, ಸನ್ಮಾನ, ಹೊಗಳಿಕೆಗಾಗಿ ಕಾದು ಕುಂತವರಲ್ಲ.

"ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ ಹಾಡುವುದು ಅನಿವಾರ್ಯ ಕರ್ಮ ಎನಗೆ, ಯಾರು ಕಿವಿ ಮುಚ್ಚಿದರು ನನಗಿಲ್ಲ ಚಿಂತೆ, ಹಾಡು ಹಕ್ಕಿಗೆ ಬೇಕೆ ಬಿರುದು ಸನ್ಮಾನ" ಎಂಬ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರ ಕವಿತೆಯ ಸಾಲುಗಳಂತೆ ದಲಿತರು, ಅಸಹಾಯಕರು, ತುಳಿತಕ್ಕೊಳಪಟ್ಟವರ ಬಾಳಿನ ಕತ್ತಲೆ ನೀಗಲು ಮೇಣದಬತ್ತಿಯಂತೆ ಕರಗಿದವರು, ಈಗಲೂ ಕರಗುತ್ತಿರುವವರು.

ಯಾವುದೇ ಪದವಿ ಅಥವಾ ಬಿರುದು ಯೋಗ್ಯರಿಗೆ ಲಭಿಸಿದಾಗ ಮಾತ್ರ ಅದರ ಉದ್ದೇಶ ಸಾರ್ಥಕವಾಗುತ್ತದೆ. ಮಾತ್ರವಲ್ಲ ಆ ಪದವಿ ಅಥವಾ ಬಿರುದಿನ ಘನತೆ ಹೆಚ್ಚುತ್ತದೆ ಎಂದರೆ ತಪ್ಪಾಗಲಾರದು. ಅದರಂತೆ ಮೊನ್ನೆ ದಿನಾಂಕ 01-11-2013 ರ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯನ್ನು ಕೆಎನ್ನೆಸ್‌ರವರಿಗೆ ನೀಡುವ ಮೂಲಕ ಕರ್ನಾಟಕ ಸರ್ಕಾರವು ಆ ಪ್ರಶಸ್ತಿಯ ಔನ್ನತ್ಯವನ್ನು ಸಾರಿದೆ.





19






# ರಾಜ್ಯೋತ್ಸವ ಪ್ರಶಸ್ತಿ ಮೇಸ್ಟ್ರಿಗೆ ಅರ್ಪಣೆ

**– ಎನ್. ವೆಂಕಟೇಶ್**
ದಸಂಸ ರಾಜ್ಯ ಸಂಚಾಲಕರು

ಕೆಎನ್‌ಎಸ್‌ರವರು ಬೇರೆಯವರಿಗೆ ಕೆ. ನಾರಾಯಣ ಸ್ವಾಮಿ, ಕೆಎನ್‌ಎಸ್ ಎಂದು ಏನೇನೋ ಆಗಿದ್ದರೂ, ನನಗೆ ಮಾತ್ರ ಅವರು ಸದಾ ಮೇಸ್ಟ್ರು. ಕೇವಲ ಮೇಸ್ಟ್ರು ಅಷ್ಟೇ ಅಲ್ಲ, ಅವರು ನನಗೆ ಮಾರ್ಗದರ್ಶಕರು, ತಂದೆ–ತಾಯಿ ಎಲ್ಲವೂ. ಅವರ ಹೆಸರು ನೆನಪಾದಾಕ್ಷಣ ನನ್ನ ಕಣ್ಣ ಮುಂದೆ ಬರುವ ಚಿತ್ರ 40 ವರ್ಷಗಳ ಹಿಂದಿನದು. ಆಗ ನಾನು ಎಸ್‌ಎಸ್‌ಎಲ್‌ಸಿ ಪಾಸ್ ಮಾಡಿ ನಮ್ಮ ಪಟ್ಟಣದ (ಚಿಂತಾಮಣಿ) ಪ್ರಥಮ ದರ್ಜೆ ಕಾಲೇಜಿನ ಪ್ರಥಮ ಪಿಯುಸಿ ತರಗತಿಗೆ ದಾಖಲಾಗಿದ್ದೆ, ನಮಗೆ ಕನ್ನಡ ಪಾಠವನ್ನು ಮಾಡುತ್ತಿದ್ದ ಹದಿಹರೆಯದ, ದಪ್ಪ ಮೀಸೆಯ, ಕರುಣೆಯ ಮಳೆ ಸೂಸುವ ಕಣ್ಣುಗಳನ್ನು ಹೊಂದಿದ್ದ ದೀನ ದುರ್ಬಲರ ಬಗ್ಗೆ ಕಳಕಳಿಯಿಂದ ಮಾತನಾಡುವ, ಅವರ ಬದುಕಿನ ಚಿತ್ರಣ ಬಂದರೆ ಮೈಮರೆತು ಮನಮುಟ್ಟುವ ಹಾಗೆ ತಿಳಿಸಿಕೊಡುವ ಉಪನ್ಯಾಸಕರನ್ನು ಕಂಡೆನು. ಅವರೇ ನಮ್ಮ ಕೆ.ನಾರಾಯಣಸ್ವಾಮಿ ಮೇಷ್ಟ್ರು. ತಾಯಿಯಿದ್ದರೂ ಅಜ್ಜಿ, ಮಾವ ಚಿಕ್ಕನಾರಾಯಣಪ್ಪನ ಕಣ್ಗಾವಲಿನಲ್ಲಿ ಅನಾಥನಂತೆ ಬೆಳೆದಿದ್ದ ನನಗೆ ಅವರ ಆತ್ಮೀಯವಾದ ಮಾತುಗಳು ಅಪ್ಯಾಯಮಾನವಾಗಿ ಕಂಡವು. ಆದ್ದರಿಂದಲೇ ಅವರ ಮಾತುಗಳಿಂದ ಎಲ್ಲಾ ದಲಿತ ವಿದ್ಯಾರ್ಥಿಗಳಿಗಿಂತಲೂ ಹೆಚ್ಚಾಗಿ ನಾನು ಆಕರ್ಷಿತನಾದೆನು.

ಅವರು ಆಗಾಗ ನಾವುಗಳಿದ್ದ ಹಾಸ್ಟೆಲ್‌ಗೆ ಬರುತ್ತಿದ್ದರು. ದಲಿತರ ಬದುಕು–ಬವಣೆಯ ಬಗ್ಗೆ ಮಾತನಾಡುತ್ತಿದ್ದರು. ಅವುಗಳು ನಮಗೆ ತುಂಬಾ ಪ್ರಿಯವಾಗುತ್ತಿದ್ದವು. ಅವರು ತಿಳಿಸಿದಂತೆ ಮಹಾತ್ಮ

ಗಾಂಧಿ ಹರಿಜನ-ಗಿರಿಜನ ವಿದ್ಯಾರ್ಥಿ ಸಂಘವನ್ನು ಕಟ್ಟಿದೆವು. ಆಗಿನ್ನೂ ನಮಗೆ ಅಂಬೇಡ್ಕರ್ ಸಾಹಿತ್ಯ, ವಿಚಾರಧಾರೆ ದೊರತಿರಲಿಲ್ಲ. ಆದ್ದರಿಂದಲೇ ಮಹಾತ್ಮ ಗಾಂಧಿಯವರ ವಿಚಾರಗಳೇ ನಮಗೆ ಆಗ ಪ್ರಸ್ತುತವೆನಿಸಿದ್ದವು. ಆದ್ದರಿಂದ ನಮ್ಮ ಸಂಘಕ್ಕೆ ಮಹಾತ್ಮ ಗಾಂಧಿ ಹೆಸರನ್ನು ಇಟ್ಟುಕೊಂಡೆವು. ಸಂಘದಲ್ಲಿ ರಾಮಣ್ಣ, ತಿಮ್ಮಯ್ಯ, ಕದಿರಪ್ಪ, ನಾರಾಯಣಸ್ವಾಮಿ ಮುಂತಾದವರು ಇದ್ದರು. ಈ ಸಂಘದ ಮೂಲಕ ನಮ್ಮ ದಲಿತ ಕಾಲೋನಿಗಳನ್ನು ಸ್ವಚ್ಛಗೊಳಿಸುವುದು, ಮಕ್ಕಳನ್ನು ಶಾಲೆಗೆ ಸೇರಿಸುವುದು ಮುಂತಾದ ಕಾರ್ಯಕ್ರಮಗಳನ್ನು ನಡೆಸಿದೆವು. ಸ್ವಾತಂತ್ರ್ಯ ದಿನಾಚರಣೆಯ ದಿನವನ್ನು ಕರಾಳ ದಿನಾಚರಣೆಯನ್ನಾಗಿ ಮಾಡಲು ಸಹ ಯೋಜಿಸಿದ್ದೇವೆ.

ಇದರ ಮುಂದುವರೆದ ಭಾಗವಾಗಿ ಜಾತಿ ಭಾವನೆಗಳನ್ನು ತೊಡೆದು ಹಾಕುವುದಕ್ಕಾಗಿ ದಲಿತರ ಮನೆಗಳಲ್ಲಿ ಮೇಲ್ಜಾತಿಯವರು ಮತ್ತು ಮೇಲ್ಜಾತಿಯವರ ಮನೆಗಳಲ್ಲಿ ದಲಿತರು ಊಟ ಮಾಡುವ ಕಾರ್ಯಕ್ರಮವನ್ನು ಹಮ್ಮಿಕೊಂಡೆವು. ಅದರಂತೆ ನಮ್ಮ ಮನೆಗೆ ಕೆಎನ್‌ಎಸ್‌ರವರು ಊಟಕ್ಕೆ ಬಂದರು. ಅವರು ಬರುತ್ತಾರೆ ಎಂಬುದು ಖಚಿತವಾದ ಮೇಲೆ ನಮಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಇದನ್ನು ನಮ್ಮ ಅಜ್ಜಿಗೆ ತಿಳಿಸಿದಾಗ ಅವರು ನಂಬದಾದರು. ಅರೆ ಮನಸ್ಸಿನಿಂದ ಮಾವ ಚಿಕ್ಕನಾರಾಯಣಪ್ಪ ಒಪ್ಪಿಕೊಂಡರು. ಅಂತೂ ನಿಗದಿತ ಕಾರ್ಯಕ್ರಮದಂತೆ ಕೆಎನ್‌ಎಸ್ ನಮ್ಮ ಮನೆಗೆ ಬಂದು ಊಟ ಮಾಡಿದರು. ಅದನ್ನು ಕಂಡು ನಾವೆಲ್ಲಾ ರೋಮಾಂಚನಕ್ಕೆ ಒಳಗಾದೆವು. ಇದಕ್ಕೆ ಮತ್ತೊಂದು 'ಶಾಕ್' ನೀಡುವ ಹಾಗೆ ದಲಿತ ವಿದ್ಯಾರ್ಥಿಗಳಾಗಿದ್ದ ನಮ್ಮನ್ನೆಲ್ಲಾ ಅವರು ತಮ್ಮ ಮನೆಗೆ ಊಟಕ್ಕೆ ಆಹ್ವಾನಿಸಿದರು. ನನಗೆ ಇದೊಂದು ವಿಶಿಷ್ಟವಾದ ಅನುಭವವಾಗಿತ್ತು. ಅಜ್ಜಿ ಒಕ್ಕಲಿಗರ ಹಾಸ್ಟೆಲ್‌ಗೆ ಅಕ್ಕಿ, ರಾಗಿ ಕ್ಲೀನ್ ಮಾಡಲು ಹೋಗುತ್ತಿದ್ದರು. ನಾನು ಅವರೊಂದಿಗೆ ಹೋಗಿ ಅಲ್ಲಿ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತಿದ್ದೆನು. ಅದಕ್ಕೆ ಪ್ರತಿಯಾಗಿ ಅವರೆಲ್ಲ ಉಂಡ ಮೇಲೆ ಉಳಿದದ್ದನ್ನು ನನಗೆ ಹಾಕುತ್ತಿದ್ದರು. ಅದನ್ನು ಅವರು ತಟ್ಟೆ, ಲೋಟ ತೊಳೆಯುವ ಸ್ಥಳದಲ್ಲಿ ನಾನು ಕುಳಿತು ತಿನ್ನಬೇಕಾಗಿತ್ತು. ಇಂತಹ ದುಃಸ್ಥಿತಿಯನ್ನು ಅನುಭವಿಸಿದ್ದ ನನಗೆ ಮೇಸ್ಟ್ರು ತಮ್ಮ ಮನೆಗೆ ಕರೆದು ತಮ್ಮೊಂದಿಗೆ ಕೂರಿಸಿಕೊಂಡು ಉಣಬಡಿಸಿದಾಗ ನನಗಾದ ಆನಂದ ಅಷ್ಟಿಷ್ಟಲ್ಲ.

ಸಂಘದ ಹೆಸರಿನಲ್ಲಿ ಹೀಗೇ ಹತ್ತು ಹಲವು ಕಾರ್ಯಕ್ರಮಗಳು ನಡೆಯುತ್ತಿದ್ದವು. ಒಂದೆರಡು ವರ್ಷಗಳು ಉರುಳಿರಬಹುದು. ಮೇಸ್ಟ್ರಿಗೆ ನೆರೆಯ ಆಂಧ್ರ ಪ್ರದೇಶದ ತೆಲುಗು ಸಾಹಿತ್ಯದ ಪರಿಚಯವಾಗಿ ತೆಲುಗಿನಲ್ಲಿದ್ದ ಅಂಬೇಡ್ಕರ್ ಸಾಹಿತ್ಯವನ್ನು ಅಧ್ಯಯನ ಮಾಡಿದರು. ಇದರ ಫಲವಾಗಿ ಅಂಬೇಡ್ಕರ್‌ರವರ ಚಿಂತನೆಗಳನ್ನು ಒಳಗೊಂಡ ಅಂಬೇಡ್ಕರ್‌ವಾಣಿ ಕನ್ನಡಕ್ಕೆ ಅನುವಾದಗೊಂಡಿತು. ಇದು ಮೊದಲು ಮೈಸೂರಿನಿಂದ ಪ್ರಕಟವಾಗುತ್ತಿದ್ದ ಪತ್ರಿಕೆಯೊಂದರಲ್ಲಿ ಪ್ರಕಟವಾಗಿ ಜನಪ್ರಿಯತೆ ಗಳಿಸಿತು. ತದನಂತರ ದೇವನೂರು ಮಹದೇವರವರ ಸಲಹೆಯಂತೆ ಪುಸ್ತಕದ ರೂಪದಲ್ಲಿ ಪ್ರಕಟವಾಯಿತು.



ಅದಾದ ಕೆಲವು ದಿನಗಳ ಬಳಿಕ ದಲಿತ ಕೈಪಿಡಿ ಪ್ರಕಟವಾಯಿತು. ಈ ಎರಡೂ ಪುಸ್ತಕಗಳು ನನ್ನ ಮೇಲೆ ಗಾಢವಾದ ಪ್ರಭಾವವನ್ನು ಬೀರಿದವು. ನನ್ನ ಪಾಲಿಗಷ್ಟೇ ಅಲ್ಲ ದಲಿತ ಚಳವಳಿಯ ಸಾವಿರಾರು ಮಂದಿ ಕಾರ್ಯಕರ್ತರಿಗೆ ಅವುಗಳು ಬೈಬಲ್‌ನಂತಾಗಿದ್ದವು. ಅವುಗಳಲ್ಲಿನ ಅಂಬೇಡ್ಕರ್ ಉಕ್ತಿಗಳನ್ನು ಎಲ್ಲರಂತೆ ನಾನೂ ಕಂಠಪಾಠ ಮಾಡಿಬಿಟ್ಟಿದ್ದೆನು. ನನ್ನ ಮಾತು ಪ್ರಾರಂಭಕ್ಕೆ ಮೊದಲು ಮತ್ತು ಕೊನೆಯಲ್ಲಿ ಈ ಉಕ್ತಿಗಳ ಉಲ್ಲೇಖವಿರುತ್ತಲೇ ಇದ್ದವು. ಇವುಗಳನ್ನು ಉಲ್ಲೇಖ ಮಾಡದೆ ನಾನು ಭಾಷಣ ಮಾಡಲಾಗುತ್ತಲೇ ಇರಲಿಲ್ಲ. ಇಂತಹ ವಿಶಿಷ್ಟವಾದ ಚಿಂತನೆಗಳನ್ನು ನೀಡಿದವರು ಇವರು.

ಅಂಬೇಡ್ಕರ್‌ವಾಣಿ ಪುಸ್ತಕವನ್ನು ಓದಿಕೊಂಡ ನಾವುಗಳು ಅಂಬೇಡ್ಕರ್ ಚಿಂತನೆಗಳಿಗೆ ಮಾರು ಹೋದೆವು. ಆ ಮಹನೀಯನ ಚಿಂತನೆಗಳನ್ನು ಜನರಿಗೆ ತಲುಪಿಸುವ ಸಲುವಾಗಿ ಅಂಬೇಡ್ಕರ್ ಜಯಂತಿಯನ್ನು ಆಚರಿಸಲು ತೀರ್ಮಾನಿಸಿದೆವು. ಜಿ.ಪಂ. ಮುಖ್ಯ ಕಾರ್ಯನಿರ್ವಹಣಾಧಿಕಾರಿ ನಿವೃತ್ತರಾಗಿರುವ ನಾರಾಯಣಸ್ವಾಮಿ ಅಂದು ನಮ್ಮ ಸಂಘದ ಸದಸ್ಯರಲ್ಲೇ ಬುದ್ಧಿವಂತರಾಗಿದ್ದರು. ಅವರು ವಿದ್ಯಾರ್ಥಿಯಾಗಿದ್ದಾಗಲೇ ಕಲಿಕೆ ಗಳಿಕೆ ಎಂಬ ತತ್ವವನ್ನು ರೂಢಿಸಿಕೊಂಡಿದ್ದರು. ಇದರ ಫಲವಾಗಿ ಅವರು ಪಟ್ಟಣದ ಗಜಾನನ ಸರ್ಕಲ್‌ನಲ್ಲಿ ಟ್ಯೂಶನ್ ಮಾಡುತ್ತಿದ್ದರು. ಆ ಸ್ಥಳದಲ್ಲೇ ಅಂಬೇಡ್ಕರ್ ಜಯಂತಿಯನ್ನು ಮಾಡಿದೆವು. ಅದಕ್ಕೆ ಮುಖ್ಯ ಅತಿಥಿಗಳಾಗಿ ಕೆಎನ್‌ಎಸ್‌ರವರೇ ಬಂದಿದ್ದು. ಅದು ನಮ್ಮ ಮೊದಲ ಅಂಬೇಡ್ಕರ್ ಜಯಂತಿಯಾಗಿತ್ತು. ಪ್ರಾಯಶಃ ಇದು ಕರ್ನಾಟಕದಲ್ಲಿ ನಡೆದ ಮೊಟ್ಟ ಮೊದಲ ಅಂಬೇಡ್ಕರ್ ಜಯಂತಿಯೂ ಆಗಿರಬಹುದು.

ಮೇಸ್ತ್ರ ಮಾರ್ಗದರ್ಶನದಲ್ಲಿ ನಾವುಗಳು ಸರ್ಕಾರಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಿಗೆ ಭೇಟಿ ನೀಡುವುದು, ಜಾತಿ ಪದ್ಧತಿಯ ಕರಾಳತೆಯನ್ನು ಅಲ್ಲಿನ ವಿದ್ಯಾರ್ಥಿಗಳಿಗೆ ಪರಿಚಯ ಮಾಡಿಕೊಟ್ಟು, ಇದರ ವಿನಾಶಕ್ಕೆ ಸಂಘಟಿತರಾಗಬೇಕೆಂದು ತಿಳಿಸುವುದು ನಡೆಯುತ್ತಿತ್ತು. ಇದಕ್ಕೆ ಪೂರಕವಾಗಿ ಸಾಹಿತ್ಯವನ್ನು ಮೇಸ್ತ್ರ ಒದಗಿಸಿಕೊಡುತ್ತಿದ್ದರು. ಸಾಹಿತ್ಯವನ್ನು ಓದಿದ ನಂತರ ನಮ್ಮಲ್ಲಿ ಮೂಡಿದ ಸಂಶಯಗಳನ್ನು ಅವರೊಂದಿಗೆ ಹಂಚಿಕೊಳ್ಳುತ್ತಿದ್ದೆವು. ಅವರು ನೀಡಿದ ಹಲವು ಪುಸ್ತಕಗಳಲ್ಲಿ ನಮ್ಮ ಮೇಲೆ ಭಾರಿ ಪ್ರಭಾವ ಬೀರಿದ ಪುಸ್ತಕವೆಂದರೆ ಗೋದಾವರಿ ಪೊರಳೆಕರ್‌ರವರ 'ಮಾನವ ಎಚ್ಚೆತ್ತಾಗ' ಪುಸ್ತಕ. ಪೊರಳೆಕರ್‌ರವರು ಗಿರಿಜನರನ್ನು ಸಂಘಟಿಸಿ ಅವರಲ್ಲಿ ಜಾಗೃತಿಗೊಳಿಸಿದ ಚಳವಳಿಯಂತೂ ನಮ್ಮ ಮೇಲೆ ಅಗಾಧವಾದ ಪ್ರಭಾವ ಬೀರಿತು. ಅವರು ನಮಗೆ ಸಾಹಿತ್ಯವನ್ನು ನೀಡಿ ನಮ್ಮನ್ನು ಚಟುವಟಿಕೆಯಲ್ಲಿ ತೊಡಗಿಸಿದ ಪರಿಯಂತೂ ಅನನ್ಯವಾದುದು.

ನಂತರ ನಾನು ಬಿಕಾಂ ಓದುವುದಕ್ಕಾಗಿ ಚಿಕ್ಕಮಗಳೂರಿಗೆ ಹೋದೆನು. ಅಲ್ಲಿ ವಿದ್ಯಾರ್ಥಿನಿಲಯಕ್ಕೆ ಸೇರಿಕೊಂಡಿದ್ದೆನು. ಇದನ್ನು ಪುಟ್ಟಸ್ವಾಮಿಯವರು ನಡೆಸುತ್ತಿದ್ದರು.

(ಮುಂದೆ ಅವರು ಉಪ ಸಭಾಪತಿಯಾದರು) ಒಂದು ದಿನದ ಅಂದಿನ ಸಚಿವ ಎನ್.ರಾಚಯ್ಯ ಭೇಟಿ ನೀಡಿದರು. ಅವರು ನಿಲಯದ ವ್ಯವಸ್ಥೆಯ ಬಗ್ಗೆ ಒಂದು ಮಾತನ್ನೂ ಆಡದೆ ಆದರ್ಶವಾಗಿ ಏನೇನೋ ಹೇಳಿದರು. ಅದೆಲ್ಲವನ್ನೂ ಕೇಳಿಸಿಕೊಂಡ ನಾನು ಅವರು ಭಾಷಣ ಮುಗಿಸಿ ಹೊರಟಾಗ 'ನೀವು ನಿಮಗೆ ಬೇಕಾದುದನ್ನು ಮಾತನಾಡಿದಿರಿ, ಆದರೆ ನಮ್ಮ ಸಮಸ್ಯೆಗಳ ಬಗ್ಗೆ ಒಂದು ಮಾತನ್ನೂ ಆಡಲಿಲ್ಲ. ಇಲ್ಲಿ ಒಂದು ಬಕೇಟು, ಒಂದು ಜಗ್ ಇದೆ. ಇದರಲ್ಲೇ ನಾವು ಸ್ನಾನ ಮಾಡುವುದು, ಬಟ್ಟೆ ಒಗೆಯುವುದು ಮಾಡಬೇಕು. ತುಂಬಾ ಕಷ್ಟವಾಗುತ್ತಿದೆ' ಎಂದು ಗಟ್ಟಿಯಾಗಿ ಕೂಗಿ ಹೇಳಿದೆನು. ಇದಕ್ಕೆ ತಕ್ಷಣ ಸ್ಪಂದಿಸಿದ ರಾಚಯ್ಯ ಕೂಡಲೇ ಎಲ್ಲ ಅನುಕೂಲಗಳನ್ನು ಮಾಡಿಕೊಡಬೇಕೆಂದು ಸೂಚನೆ ನೀಡಿ ತಕ್ಷಣ ತರಿಸಿಕೊಟ್ಟರು. ಇಲ್ಲಿ ಇರುವಷ್ಟು ದಿನಗಳು ದಸಂಸವನ್ನು ಕಟ್ಟಿ ಬೆಳೆಸಲು ಶ್ರಮಿಸಿದೆನು.

ಕ್ಲಿಷ್ಟಕರ ಸಮಸ್ಯೆಗಳು ಎದುರಾದಾಗ ಊರಿಗೆ ಬಂದು ಮೇಸ್ಟ್ರನ್ನು ಭೇಟಿ ಮಾಡಿ ಅವರಿಗೆ ತಿಳಿಸಿ ಪರಿಹಾರ\ಸಲಹೆಗಳನ್ನು ಪಡೆಯುತ್ತಿದ್ದೆ. ಈ ಸಂದರ್ಭದಲ್ಲಿ ಚಿಕ್ಕಮಗಳೂರಿನಲ್ಲಿ ಪರಿಚಯವಾದವರೇ ಉಪನ್ಯಾಸಕ ರುದ್ರಸ್ವಾಮಿ, ಎಂ.ಡಿ.ಗಂಗಯ್ಯರವರು. ಇಂತಹ ಹೋರಾಟ ಮನೋಭಾವ ಮತ್ತು ಸ್ಥೈರ್ಯವನ್ನು ನಾನು ರೂಢಿಸಿಕೊಳ್ಳಲು ಕೆಎನ್ಎಸ್ ನೀಡಿದ ಮಾರ್ಗದರ್ಶನ ಮತ್ತು ಪ್ರೇರಣೆಯೇ ಕಾರಣ. ಇಂದು ನಾನೇನಾದರೂ ಸಾಧಿಸಿದ್ದರೆ, ವೈಚಾರಿಕ ಮನೋಭಾವ ಬೆಳೆಸಿಕೊಂಡಿದ್ದರೆ ಅದಕ್ಕೆ ಕೆಎನ್ಎಸ್‌ರವರೇ ಕಾರಣ. ಅವರು ತಂದೆ, ತಾಯಿ, ಗುರುವಿನ ಸ್ಥಾನದಲ್ಲಿ ನಿಂತು ನನ್ನನ್ನು ಮುನ್ನಡೆಸಿದರು. ಆ ನಡಿಗೆ ನನ್ನನ್ನು ಸ್ಫೂರ್ತಿಧಾಮದ ಬೋಧಿ ವರ್ಧಿನಿ ಪ್ರಶಸ್ತಿ ಮತ್ತು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯವರೆಗೂ ಕರೆದೊಯ್ಯಿತು.

ತಂದೆ-ತಾಯಿಯಿಂದ ದೂರವಾಗಿ ಮಾವ ಮಿಲ್ಟ್ರಿ ಗಿತ್ತಿ ನಾರಾಯಣಪ್ಪನ ಆಶಯದಂತೆ ಗಾರೆ ಕೆಲಸದ ಮಾವ ಚಿಕ್ಕನಾರಾಯಣಪ್ಪ ಮತ್ತು ಅಜ್ಜಿಯ ಆಶ್ರಯದಲ್ಲಿ ಅನಾಥ ಶಿಶುವಿನಂತಹ ತಬ್ಬಲಿತನದ ಭಾವನೆಗಳಲ್ಲಿ ನಲುಗಿ ಹೋಗಿದ್ದ ನನ್ನಲ್ಲಿ ಓದಿನ ಹಸಿವು ಹುಟ್ಟಿಸಿ, ವೈಚಾರಿಕ ಪ್ರಜ್ಞೆ ಮೂಡಿಸಿ ಕರ್ನಾಟಕ ರಾಜ್ಯದ ವೈಚಾರಿಕ ಕ್ಷೇತ್ರದಲ್ಲಿ ಎಸ್.ವೆಂಕಟೇಶ್ ಎಂದು ಪರಿಚಯಗೊಳ್ಳಲು ಕಾರಣರಾದವರು ಈ ಮೇಸ್ಟ್ರು ಎಂಬುದರಲ್ಲಿ ಎರಡು ಮಾತಿಲ್ಲ. ಸಾಮಾನ್ಯ ವೆಂಕಟೇಶ್‌ಆಗಿ ಹತ್ತರ ಜೊತೆಯಲ್ಲಿ ಹನ್ನೊಂದನೆಯವನಾಗಿ ಬದುಕಿನ ಜಂಜಾಟಕ್ಕೆ ಅಂತ್ಯವಾಡಬಹುದಾಗಿದ್ದ ನನ್ನನ್ನು ಗಡ್ಡಂ ವೆಂಕಟೇಶ್ ಅಲಿಯಾಸ್ ಎಸ್.ವೆಂಕಟೇಶ್‌ಆಗಿ ರೂಪಿಸಿದ ಶಿಲ್ಪಿ ಇವರು. ಆದ್ದರಿಂದಲೇ ನನಗೆ ದೊರೆತ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಅವರಿಗೆ ಅರ್ಪಣೆ ಮಾಡುತ್ತಿದ್ದೇನೆ.

ಇರಲಿ, ಅಸಲು ವಿಷಯಕ್ಕೆ ಬರೋಣ. ನಾವು ಇಲ್ಲಿ ಮಹಾತ್ಮ ಗಾಂಧಿ ಹರಿಜನ ಗಿರಿಜನ ಸಂಘವನ್ನು ಕಟ್ಟಿಕೊಂಡು ಕೆಎನ್ಎಸ್‌ರವರ ಮುಖಂಡತ್ವದಲ್ಲಿ ದಲಿತರಲ್ಲಿ

ಜಾಗೃತಿ ಮೂಡಿಸುವ ಕಾರ್ಯವನ್ನು ಮಾಡುತ್ತಿದ್ದರೆ, ಮೈಸೂರು ಮುಂತಾದ ಕಡೆ ದಲಿತ ಲೇಖಕ ಕಲಾವಿದರ ಬಳಗ, ಭದ್ರಾವತಿಯಲ್ಲಿ ಪ್ರೊ॥ ಬಿ. ಕೃಷ್ಣಪ್ಪನವರು ಕರ್ನಾಟಕ ದಲಿತ ಸಂಘರ್ಷ ಸಮಿತಿಯನ್ನು, ಮತ್ತೊಂದು ಕಡೆಯಲ್ಲಿ ಜನ ಸಂಘರ್ಷ ಸಮಿತಿ, ಕೋಲಾರದಲ್ಲಿ ಚಂಡಾಲ ಬಳಗವನ್ನು ಕಟ್ಟಿಕೊಂಡು ಜಾಗೃತಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿತ್ತು. ಇವೆಲ್ಲವನ್ನು ಒಗ್ಗೂಡಿಸಲು ನಾನು ಮೇಸ್ತ್ರ ಮಾರ್ಗದರ್ಶನಲ್ಲಿ ಶ್ರಮಿಸಿದೆನು. ಇದಕ್ಕೆ ಪೂರಕವಾಗಿ ಭದ್ರಾವತಿಯಲ್ಲಿ ಈ ಎಲ್ಲಾ ಸಂಘಟನೆಗಳ ಪ್ರಥಮ ಅಧಿವೇಶನ ನಡೆಯಿತು. ಇದನ್ನು ಪ್ರೊ॥ ಬಿ.ಕೃಷ್ಣಪ್ಪನವರು ಏರ್ಪಡಿಸಿದ್ದರು. ಇದಕ್ಕೆ ಕೆಎನ್‌ಎಸ್‌ರವರಿಗೆ ಆಹ್ವಾನ ನೀಡಲಾಗಿತ್ತಾದರೂ ಅವರು ಬಾಗೇಪಲ್ಲಿ ಕಾಲೇಜಿಗೆ ಪ್ರಿನ್ಸಿಪಾಲರಾಗಿ ನೂತನವಾಗಿ ನೇಮಕಗೊಂಡಿದ್ದರಿಂದ ಹೊಸ ನೌಕರಿ ಒತ್ತಡದಲ್ಲಿ ಆ ಅಧಿವೇಶನದಲ್ಲಿ ಭಾಗವಹಿಸಲಾಗಲಿಲ್ಲ. ಆ ಅಧಿವೇಶನ ಯಶಸ್ವಿಯಾಗಿ ನಡೆದು ಕರ್ನಾಟಕ ದಲಿತ ಸಂಘರ್ಷ ಸಮಿತಿ ನೂತನ ಸಂಘಟನೆಯಾಗಿ, ದಲಿತರ ಆಶಾಕಿರಣವಾಗಿ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದಿತು. ಆಂಧ್ರದ ಜನ ನಾಟ್ಯ ಮಂಡಲಿಯ ಕ್ರಾಂತಿಕಾರಿ ಗಾಯಕ ಗದ್ದರ್‌ರವರ ಕ್ರಾಂತಿ ಗೀತೆಗಳು, ಸಿದ್ದಲಿಂಗಯ್ಯನವರ 'ಹೊಲೆಮಾದಿಗರ ಹಾಡುಗಳು, ದೇವನೂರು ಮಹದೇವರವರ 'ದ್ಯಾವನೂರು ಕಥಾ ಸಂಕಲನ'ವು ದಲಿತರ ಸಂಘಟನೆಗೆ ಹೊಸ ಚಿಂತನೆಗಳ ರಕ್ತವನ್ನು ತುಂಬಿದವು. ಇವುಗಳ ಜೊತೆಗೆ ಬೆಲ್ಚಿಯ ದಲಿತರ ಸಜೀವ ದಹನದ ಘಟನೆ, ಪತ್ರೆ ಸಂಗಪ್ಪನ ಘಟನೆಗಳನ್ನು ನಾಟಕ ಮಾಡಿ ಆಡಿ ಜನರಲ್ಲಿ ಜಾಗೃತಿ ಮೂಡಿಸಲಾಯಿತು.

ನಾನು ಕೋಲಾರ, ತುಮಕೂರು, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಸಂಘಟನೆಯನ್ನು ಮಾಡಲು ಸಕ್ರಿಯವಾಗಿ ತೊಡಗಿಸಿಕೊಂಡೆನು. ಈ ನಡುವೆ ನನ್ನ ಓದು ಏನಾಯಿತೋ ನನಗೂ ಗೊತ್ತಾಗಲೇ ಇಲ್ಲ. ಸಂಘಟನೆಯನ್ನು ಕಟ್ಟಿ ಬೆಳೆಸುವ ಹುಮ್ಮಸ್ಸಿನಲ್ಲಿ ರಾಜ್ಯದೆಲ್ಲೆಡೆ ನನ್ನ ತಿರುಗಾಟ ಭರದಿಂದ ಸಾಗಿತು. ಕಿಸೆಯಲ್ಲಿ ಒಂದು ಬಿಡಿಗಾಸು ಇಲ್ಲದಿದ್ದರೂ ತಿರುಗಾಟವನ್ನು ಧೈರ್ಯವಾಗಿ ಮಾಡುತ್ತಿದ್ದೆನು. ಆದರೆ ಹಣದ ಅವಶ್ಯಕತೆ ಬಂದಾಗಲೆಲ್ಲಾ ನನಗೆ ನೆನಪಾಗುತ್ತಿದ್ದದ್ದು ಕೆಎನ್‌ಎಸ್‌ರವರ ಹೆಸರು. ಅವರ ಬಳಿಗೆ ಯಾವುದೇ ಸಮಯದಲ್ಲಿ ಹೋಗಿ ಕೇಳಿದರೂ ಇಲ್ಲವೆನ್ನದೆ ಹಣ ನೀಡುತ್ತಿದ್ದರು. ನನಗಷ್ಟೇ ಅಲ್ಲದೆ, ನನ್ನಂತಹ ಹಲವು ಮಂದಿ ದಸಂಸ ಸಂಘಟಕರಿಗೆ ಹಣ ನೀಡಿದ್ದಾರೆ. ಹೀಗೆ ನೀಡಿದ ಹಣಕ್ಕೆ ಅವರು ಲೆಕ್ಕವಿಡುತ್ತಿರಲಿಲ್ಲ. ನಾವೂ ಲೆಕ್ಕವಿಟ್ಟಿಲ್ಲ. ಸಂಘಟನೆಯ ಸಲುವಾಗಿ ಲೆಕ್ಕವಿಡದೆ ಹಣವನ್ನು ಧಾರಾಳವಾಗಿ ನೀಡಿದ್ದಾರೆ. ಒಮ್ಮೆ ರಾಯಚೂರಿಗೆ ದಸಂಸದ ಕಾರ್ಯಕ್ರಮವೊಂದಕ್ಕೆ ಹೋಗಿದ್ದೆನು. ಅಲ್ಲಿನವರು ನನ್ನ ಜೊತೆಯಲ್ಲಿ ಬಂದಿದ್ದ ಮಂಡ್ಯದ ಗೆಳೆಯರಿಗೆ ಬಸ್ ಚಾರ್ಜಿಗೆ ಹಣ ನೀಡಿದರು. ಆದರೆ ನನಗೆ ನೀಡಲಿಲ್ಲ. ಕೊನೆಗೆ ಮಂಡ್ಯದ ಗೆಳೆಯರಿಗೆ ನೀಡಿದ್ದ ಹಣದಲ್ಲೇ ಗೌರಿಬಿದನೂರುವರೆಗೆ ರೈಲಿನಲ್ಲಿ ಬಂದು, ಇಲ್ಲಿ ಅವರಿಗೆ ಬೇಕಾದ ಬಸ್ ಚಾರ್ಜಿನ ಹಣವನ್ನು ಕೆಎನ್‌ಎಸ್‌ರಿಂದ ಕೊಡಿಸಿದೆನು. ನಾನು ಎಲ್ಲಿಗೇ ಹೋಗಲಿ, ವಾಪಸ್ಸು ಬಂದಾಗ



ಮೇಸ್ಟ್ರು ಮನೆಗೆ ಹೋಗಿ ಅವರ ಮನೆಯಲ್ಲಿ ಉಪಹಾರ ಸೇವಿಸಿ ಅವರನ್ನು ಮಾತನಾಡಿಸಿಕೊಂಡು ಹೋದರೇನೆ ನನಗೆ ಸಮಾಧಾನ.

ಅವರೊಂದಿಗೆ ಮಾತನಾಡುತ್ತಿದ್ದರೆ, ಹೊತ್ತು ಕಳೆಯವುದೇ ಗೊತ್ತಾಗುವುದಿಲ್ಲ. ಅವರ ಜ್ಞಾನ ಜಗತ್ತು ಬಹು ವಿಸ್ತಾರವಾದುದು. ದಲಿತ ಚಿಂತನೆಯ ಜೊತೆಗೆ ಪರಿಸರ, ಕೃಷಿ, ನೆಲ, ಜಲ ಹೀಗೆ ಮಾನವ ಬದುಕಿನ ಸುತ್ತಲೂ ಆವರಿಸಿಕೊಂಡಿರುವ ಅಮೂಲ್ಯ ಸಂಗತಿಗಳ ಬಗ್ಗೆ ನಿರರ್ಗಳವಾಗಿ ಗಂಟೆಗಟ್ಟಲೇ ಕಾಳಜಿ ಪೂರ್ವಕವಾಗಿ ಮಾತನಾಡುತ್ತಾರೆ. ಇದರ ಜೊತೆಗೆ ಆರೋಗ್ಯ ವಿಷಯವನ್ನು ಪ್ರಸ್ತಾಪ ಮಾಡಿ ವಾಯು ವಿಹಾರದ ಪ್ರಾಮುಖ್ಯತೆಯನ್ನು ಒತ್ತಿ ಹೇಳುತ್ತಾ 'ಆರೋಗ್ಯವನ್ನು ಚೆನ್ನಾಗಿಟ್ಟುಕೊಳ್ಳಪ್ಪ' ಎಂದು ಆತ್ಮೀಯವಾಗಿ ತಿಳಿಸುತ್ತಾರೆ.

ಇನ್ನು ಅವರ ವೃತ್ತಿ ಜೀವನಕ್ಕೆ ಬಂದರೆ, ಅದು ವೈವಿಧ್ಯಮಯ ಸಂಗತಿ, ದಪ್ಪ ಮೀಸೆಯ ಈ ಪ್ರಿನ್ಸಿಪಾಲ್ ದೊಣ್ಣೆ ಹಿಡಿದುಕೊಂಡು ಕಾಲೇಜಿನ ಆವರಣದಲ್ಲಿ ಬಿರುಗಣ್ಣು ಬಿಡುತ್ತಾ ತಿರುಗಾಡುತ್ತಿರುತ್ತಾರೆ. ಅದನ್ನು ಕಂಡರೆ ಎಂತಹ ವಿದ್ಯಾರ್ಥಿಯ ಎದೆಯೂ ಝಲ್ಲೆನ್ನಬೇಕು. ಆದರೆ ಅಂತಹ ಕಟ್ಟುನಿಟ್ಟಿನ ಶಿಸ್ತಿನ ಒಳಗೆ ಮಾನವೀಯ ಅಂತಃಕರಣವಿದೆ. ಇವರು ಬಾಗೇಪಲ್ಲಿಯಲ್ಲಿ ಪ್ರಿನ್ಸಿಪಾಲರಾಗಿದ್ದಾಗ ಅಲ್ಲಿನ ಕಾಲೇಜಿಗೆ ಪಿಯುಸಿ ಶಿಕ್ಷಣ ಕೋರ್ಸ್‌ನ್ನು ತಂದರು. ಇದರಿಂದ ಅಲ್ಲಿನ ಹಲವು ಮಂದಿ ದಲಿತ ವಿದ್ಯಾರ್ಥಿಗಳಿಗೆ ಅನುಕೂಲವಾಯಿತು. ಆ ಕೋರ್ಸ್‌ನ್ನು ವ್ಯಾಸಂಗ ಮಾಡಿದ ಬಹುತೇಕ ಎಲ್ಲರೂ ಶಿಕ್ಷಕರಾಗಿ ಬದುಕು ಕಟ್ಟಿಕೊಂಡಿದ್ದಾರೆ. ಹೀಗೆ ಇವರು ಎಲ್ಲೇ ಇರಲಿ, ಅಲ್ಲಿ ದಲಿತ ಪ್ರಜ್ಞೆ ಕೆಲಸ ಮಾಡುತ್ತಿರುತ್ತದೆ. ಬಡವರ, ದುರ್ಬಲರ ಏಳ್ಗೆ ಇವರ ತಾರಕ ಮಂತ್ರವಾಗಿರುತ್ತದೆ. ಇವರ ಇಂತಹ ಗುಣಕ್ಕೆ ಭೂಷಣಪ್ರಾಯವಾಗಿ ಸಿದ್ಧವಾಗುತ್ತಿರುವ ಅಭಿನಂದನಾ ಗ್ರಂಥಕ್ಕೆ ನನ್ನಿಂದ ಲೇಖನವನ್ನು ಬರೆಸಿಕೊಂಡ ಗೆಳೆಯರಿಗೆ ನನ್ನ ಕೃತಜ್ಞತೆಗಳು.








# ಸಮಾಜೋದ್ಧಾರಕ

– ಬಿ. ನಂಜುಂಡಭಟ್ಟ
ಹಿರಿಯ ಶ್ರೇಣಿ ಉಪನ್ಯಾಸಕರು, ಶಿಕ್ಷಕರ ತರಬೇತಿ ಕೇಂದ್ರ

**ಕೆ.** ನಾರಾಯಣಸ್ವಾಮಿಯವರು ನಮ್ಮ ಬಾಗೇಪಲ್ಲಿಗೆ ಬರುವ ಮೊದಲು ಚಿಂತಾಮಣಿಯ ಪದವಿ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ಜೂನಿಯರ್ ಕಾಲೇಜು ಪ್ರಾಂಶುಪಾಲರಾಗಿ ನೇಮಕಗೊಂಡಾಗ ಬಾಗೇಪಲ್ಲಿಗೆ ಬರುವಂತಾಯಿತು. ಆನಂತರ ಗುಡಿಬಂಡೆ, ಶ್ರೀನಿವಾಸಪುರಗಳಲ್ಲಿಯೂ ಕರ್ತವ್ಯ ನಿರ್ವಹಿಸಿ ಪದವಿ ಪೂರ್ವ ಶಿಕ್ಷಣ ಇಲಾಖೆಯ 'ಜಂಟಿ ನಿರ್ದೇಶಕ' ಹುದ್ದೆಯಲ್ಲಿ ಸೇವೆ ಸಲ್ಲಿಸಿದ ಖ್ಯಾತಿ ಇವರದು. ತಾವು ಹೋದ ಕಡೆಯಲ್ಲೆಲ್ಲಾ ಒಳ್ಳೆಯ ಹೆಸರನ್ನು ಪಡೆದಿರುವ ಕೀರ್ತಿ ಇವರದು. ಆದರ್ಶ ಶಿಕ್ಷಕ, ದಕ್ಷ ಆಡಳಿತಗಾರರೆಂದೇ ಇವರು ಜನಪ್ರಿಯರಾಗಿದ್ದಾರೆ ಹಾಗೂ ಸಹೋದ್ಯೋಗಿಗಳಿಗೆ ಕರುಣಾಮಯಿ ಮಾರ್ಗದರ್ಶಕರೆನಿಸಿದ್ದಾರೆ. ಸುಮಾರು ಹದಿನೈದು ವರ್ಷಗಳಷ್ಟು ಹಿಂದೆಯೇ ಇಲಾಖೆಯಿಂದ 'ನಿವೃತ್ತ'ರಾಗಿದ್ದರೂ ಸಹ ಜನೋಪಯೋಗಿ ಜಲಜಾಗೃತಿ ಚಟುವಟಿಕೆಗಳಲ್ಲಿ ತಮ್ಮನ್ನು ತ್ರಿಕರಣಪೂರ್ವಕವಾಗಿ ತೊಡಗಿಸಿಕೊಂಡು ಗೌರೀಬಿದನೂರು, ಗುಡಿಬಂಡೆ, ಬಾಗೇಪಲ್ಲಿ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯ ಇತರೇ ತಾಲ್ಲೂಕುಗಳಲ್ಲಿ ಹೆಸರುವಾಸಿಯಾಗಿದ್ದಾರೆ. ನಿರಂತರ ಕ್ರಿಯಾಶೀಲರೆನಿಸಿದ್ದಾರೆ.

ನಾನು ಪ್ರಾಥಮಿಕ ಶಾಲಾ ಶಿಕ್ಷಕರಾಗಿ 1976ರಲ್ಲಿ ನೇಮಕವಾದಾಗ ಶ್ರೀಯುತರ ಪರಿಚಯ ನನಗಾಯ್ತು. ಪದವೀಧರರಾಗಿದ್ದ ನನ್ನನ್ನು ಶಿಕ್ಷಕರ ಕೊರತೆಯಿದ್ದ ಬಾಗೇಪಲ್ಲಿ



ಜೂನಿಯರ್ ಕಾಲೇಜಿನ ಪ್ರೌಢಶಾಲಾ ವಿಭಾಗಕ್ಕೆ ನಿಯೋಜನೆ ಮಾಡಿಸಿಕೊಂಡಾಗ ಇವರ ಬಗ್ಗೆ ಹೆಚ್ಚು ತಿಳಿದುಕೊಳ್ಳುವ ಅವಕಾಶ ನನಗೆ ಲಭ್ಯವಾಯಿತು. ಶಿಸ್ತಿನ ಸಿಪಾಯಿಗಳೂ, ಪ್ರಗತಿಪರ ಚಿಂತಕರೂ, ವಿಚಾರವಾದಿಗಳೂ ಹಾಗೂ ಜಾತ್ಯಾತೀತ ಗುಣವುಳ್ಳವರೆಂದು ಇವರ ಬಗ್ಗೆ ನಮ್ಮ ಸಹೋದ್ಯೋಗಿಗಳು ಮಾತನಾಡಿಕೊಳ್ಳುತ್ತಿದ್ದಾಗ ಇವರು ಬಹುಶಃ ಸಮಾಜವಾದಿ ಧೋರಣೆಯುಳ್ಳವರಿರಬಹುದೆಂದು ಅನುಮಾನಗಳು ನನ್ನನ್ನು ಪ್ರಾರಂಭದಲ್ಲಿ ಕಾಡಿದ್ದುಂಟು. ಆದರೆ ಇವರ ಸರಳತೆ, ತಾತ್ವಿಕ ಚಿಂತನೆ, ಅಧ್ಯಯನಶೀಲತೆಗಳ ಪ್ರತ್ಯಕ್ಷ ಅನುಭವಗಳಿಂದ ಚಿಂತೆ ದೂರವಾಗಿ ಇವರ ಬಗ್ಗೆ ಗೌರವ, ಆದರಗಳು ಹೆಚ್ಚಾಗತೊಡಗಿತು.

ಉತ್ತಮ ಗುಣಗ್ರಾಹಿಗಳಾಗಿದ್ದ ಶ್ರೀಯುತರು ತಮ್ಮ ಅಧ್ಯಯನ ಶೀಲತೆಯನ್ನು ಸಹೋದ್ಯೋಗಿಗಳಲ್ಲೂ ಬೆಳೆಸಲು ಮಾರ್ಗದರ್ಶನ ನೀಡುತ್ತಿದ್ದರು. ಅನೇಕ ಶ್ರೇಷ್ಠ ಗ್ರಂಥಗಳನ್ನು ನನಗೂ ವ್ಯಾಸಂಗ ಮಾಡಲು ನೀಡಿ ನನ್ನ ಜ್ಞಾನದುನ್ನತಿಗೆ ಕಾರಣರಾದುದನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲ. ಇಲಾಖೆಯ ಉನ್ನತ ಮಟ್ಟದ ಅಧಿಕಾರಿಗಳೊಂದಿಗೆ ನಿಕಟ ಪರಿಚಯ ಹೊಂದಿದ್ದ ಇವರ ಸಹಾಯವಿಲ್ಲದಿದ್ದರೆ 'ಪ್ರೌಢಶಾಲಾ ಶಿಕ್ಷಕನಾಗಿ' ನಾನು ಆಯ್ಕೆಯಾದಾಗ 'ಬಾಗೇಪಲ್ಲಿಯ' ಜೂನಿಯರ್ ಕಾಲೇಜಿಗೇ ನೇಮಕಗೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಇವರ ಮಾರ್ಗದರ್ಶನದಿಂದಲೇ 'ನಾನು ಪ್ರೌಢಶಾಲಾ ಮುಖ್ಯೋಪಾಧ್ಯಾಯ ಹುದ್ದೆಗೆ ಆಯ್ಕೆಯಾಗಲು ಸಾಧ್ಯವಾಯಿತೆಂದರೆ ಅತಿಶಯೋಕ್ತಿಯಲ್ಲ. ಹೀಗೆ ಅನೇಕ ವಿಧಗಳಲ್ಲಿ ನಾನು ಶ್ರೀಯುತರಿಂದ ವೈಯಕ್ತಿಕ ಸಹಾಯದ 'ಋಣ'ವನ್ನು ಹೊಂದಿದ್ದೇನೆ.

ಇವರು ಬಾಗೇಪಲ್ಲಿಗೆ ಬಂದಾಗ ಹೆಸರಿಗೆ 'ಜೂನಿಯರ್ ಕಾಲೇಜು' ಆದರೂ ಅನೇಕ ಮೂಲಭೂತ ಸೌಕರ್ಯಗಳ ಕೊರತೆಯೇ ತುಂಬಿತ್ತು. ತರಗತಿ ಕೋಣೆಗಳ ಕೊರತೆ, ಕುಡಿಯುವ ನೀರಿನ ಸೌಲಭ್ಯದ ಕೊರತೆ, ಆಟದ ಮೈದಾನದ ಕೊರತೆ ಹಾಗೂ ಸೂಕ್ತ ಸಿಬ್ಬಂದಿ ವರ್ಗದ ಕೊರತೆಗಳಿಂದ ಕೂಡಿದ್ದ ಸಂಸ್ಥೆಯನ್ನು ಅತಿ ಶೀಘ್ರವಾಗಿ ತಮ್ಮ ಕಾರ್ಯನಿಷ್ಠೆ ಹಾಗೂ ನಿರಂತರ ಪ್ರಯತ್ನಗಳ ನೆರವಿನಿಂದ ಎಲ್ಲ ಸಮಸ್ಯೆಗಳಿಂದಲೂ ಮುಕ್ತವಾಗುವಂತೆ ಮಾಡಿದ್ದೇ ಅಲ್ಲದೇ ಅನೇಕ ಪ್ರಗತಿಪರ ಯೋಜನೆಗಳನ್ನೂ ಅಳವಡಿಸುವಲ್ಲಿ ಸಫಲರಾದರು.

ಅದಲ್ಲದೆ ಇವರು ಕೇವಲ ಇತಿಹಾಸ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ವಿಷಯಗಳನ್ನು ಮಾತ್ರ ಹೊಂದಿದ್ದ ಪಿ.ಯು.ಸಿ. ತರಗತಿಯ ಕಲಾವಿಭಾಗಕ್ಕೆ ಶಿಕ್ಷಣ - 1, ಶಿಕ್ಷಣ - 2 ಎಂಬ ಎರಡು ಹೊಸ ವಿಷಯಗಳನ್ನು ಅಧ್ಯಯನಕ್ಕೆ ಹೊಸದಾಗಿ ಬಾಗೇಪಲ್ಲಿ ಜೂನಿಯರ್ ಕಾಲೇಜಿನಲ್ಲಿ ಸೇರ್ಪಡೆ ಮಾಡಿದ್ದು ನಿಜಕ್ಕೂ ಒಂದು ಕ್ರಾಂತಿಕಾರೀ ಬೆಳವಣಿಗೆ. ಪ್ರಾಥಮಿಕ



ಶಾಲಾ ಶಿಕ್ಷಕ ವೃತ್ತಿಗೆ ಅತ್ಯವಶ್ಯಕವಾದ ಟಿ.ಸಿ.ಹೆಚ್. ತರಬೇತಿಗೆ ಸಮಾನವಾದ ಈ ಹೊಸ ಸೇರ್ಪಡೆಗಳ ಅಧ್ಯಯನದಿಂದ ನೂರಾರು ಮಂದಿ ವಿದ್ಯಾರ್ಥಿಗಳು ಶಿಕ್ಷಕ ವೃತ್ತಿಯನ್ನು ಸರ್ಕಾರಿ ಶಾಲೆಗಳಲ್ಲಿ ಪಡೆಯಲು ಸಹಾಯ ಮಾಡಿತು. ಈ ಹೊಸ ಅಧ್ಯಯನಕ್ಕೆ ಪೂರಕವಾದ 'ಇಂಟರ್ನ್‌ಶಿಪ್ ಕೋರ್ಸ್' ಎಂಬ ಆರು ತಿಂಗಳ ಹೆಚ್ಚುವರಿ ಅಧ್ಯಯನವನ್ನು ತಂದುಕೊಡುವಲ್ಲಿಯೂ ಶ್ರೀಯುತರ ಶ್ರಮ ಅಪಾರವಾದುದು. ಈ ಯೋಜನೆಯ ನೆರವಿನಿಂದ ಸರ್ಕಾರಿ ಶಿಕ್ಷಕ ಉದ್ಯೋಗಗಳನ್ನು ಪಡೆದ ನೂರಾರು ಗ್ರಾಮೀಣ ವಿದ್ಯಾರ್ಥಿಗಳು ಶ್ರೀ ಕೆ.ಎಸ್.ಎನ್.ರವರನ್ನು ತಮ್ಮ ಪಾಲಿನ ದೇವರೆಂದೇ ಇಂದಿಗೂ ಭಾವಿಸಿದ್ದಾರೆ.

ತಾವು ಹೋದ ಕಡೆಯಲ್ಲೆಲ್ಲಾ ಇದೇ ರೀತಿಯ ಅಭಿವೃದ್ಧಿಶೀಲ ಕಾರ್ಯಗಳನ್ನು ಕೈಗೊಳ್ಳುತ್ತಿದ್ದುದೇ ಇವರ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಇಂತಹವರು ಸರ್ಕಾರಿ ಕೆಲಸದಿಂದ ನಿವೃತ್ತರಾದ ನಂತರ ಇತರೆ ನಿವೃತ್ತ ನೌಕರರಂತೆ ಹಾಯಾಗಿ ವಿಶ್ರಾಂತಿ ಪಡೆಯಬಹುದಾಗಿತ್ತು. ಆದರೆ ಮಾನವೀಯತೆಯೇ ಮೂರ್ತಿವೆತ್ತಿದ ಶ್ರೀಯುತರು ಜನತೆಗೆ ಅನುಕೂಲವಾಗಲೆಂಬ ಉದ್ದೇಶದಿಂದ ತಮ್ಮನ್ನು ಇನ್ನೊಂದು ವಿಶಾಲ ಕ್ಷೇತ್ರವಾದ "ಜಲಸಂಪನ್ಮೂಲ ರಕ್ಷಣಾ ಕಾರ್ಯಕ್ಕೆ" ತೊಡಗಿಸಿಕೊಂಡಿದ್ದಾರೆ. ಈ ಸಮಾಜಪರ ಹೊಸ ಕೈಂಕರ್ಯಕ್ಕೆ ಸರ್ಕಾರದಿಂದಾಗಲೀ ಅಥವಾ ಸಂಸ್ಥೆಗಳಿಂದಾಗಲೀ ಹಣಕಾಸಿನ ನೆರವನ್ನು ಪಡೆಯದೆ ತಮ್ಮ ಸ್ವಂತ ಹಣದಿಂದ ಕಾರ್ಯಕ್ರಮಗಳನ್ನು ರೂಪಿಸಿ ನೀರಿನ ಮಹತ್ವದ ಬಗ್ಗೆ ಗ್ರಾಮೀಣ ಜನಗಳಿಗೆ ಜ್ಞಾನೋದಯವನ್ನುಂಟು ಮಾಡುತ್ತಿರುವ ಇವರನ್ನು ಸಮಾಜೋದ್ಧಾರಕರೆಂದರೆ ತಪ್ಪಾಗಲಾರದು.

ಸತತ ಬರಗಾಲ ಪೀಡಿತ ಪ್ರದೇಶಗಳೆಂದೇ ಪ್ರಸಿದ್ಧವಾದ ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ, ಗುಡಿಬಂಡೆ ಮತ್ತು ಗೌರಿಬಿದನೂರು ತಾಲ್ಲೂಕುಗಳಲ್ಲಿ ನಿರಂತರ ಸಂಚಾರ ಮಾಡಿ ಜನತೆಗೆ ನೀರಿನ ಸಂಪನ್ಮೂಲಗಳ ರಕ್ಷಣೆ ಹೇಗೆ ಮಾಡಬಹುದೆಂಬ ಬಗ್ಗೆ ತರಬೇತಿ ಕಾರ್ಯಕ್ರಮಗಳನ್ನು ರೂಪಿಸುವ ಮೊದಲು ವಿದ್ಯಾರ್ಥಿಗಳಿಗೆ ನೀರಿನ ಸಮಸ್ಯೆಯ ಬಗ್ಗೆ ಮನದಟ್ಟು ಮಾಡಿಕೊಡಲು ವಿದ್ಯಾ ಇಲಾಖೆಯ ಸಹಕಾರವನ್ನೂ ಪಡೆದರು. 'ಗುಡಿಬಂಡೆ' ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ನಾನು ಈ ಸಂದರ್ಭದಲ್ಲಿ ಮತ್ತೊಮ್ಮೆ ಕೆ.ಎನ್.ಎಸ್.ರವರ ಜೊತೆ ಸೇರಿ ಅವರ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತಹ ಸೌಭಾಗ್ಯ ದೊರೆತಿತ್ತು.

ತಮ್ಮ ಸ್ವಂತ ಹಣದಿಂದ ಆಯೋಜಿಸುತ್ತಿದ್ದ ಆ ತರಬೇತಿ ಶಿಬಿರಗಳಲ್ಲಿ ಇವರು ನೀರಿನ ಸಂಪನ್ಮೂಲಗಳ ರಕ್ಷಣೆಯ ಬಗ್ಗೆ ವಿದ್ಯಾರ್ಥಿಗಳಿಂದ ಹಿಡಿದು ವೃದ್ಧರವರೆಗೆ



ತೋರುತ್ತಿದ್ದ ಕಾಳಜಿಯನ್ನು ನಾನು ಎಂದಿಗೂ ಮರೆಯಲು ಸಾಧ್ಯವಿಲ್ಲ. ಈ ಕಾರ್ಯಕ್ರಮಗಳಿಗೆ ಪೂರ್ವಭಾವಿಯಾಗಿ ನೀರಿನ ಸಂರಕ್ಷಣೆಯ ಕುರಿತು ಅಧ್ಯಯನ ಮಾಡಲು ಶ್ರೀಯುತರು ಭಾರತದ ಇತರೇ ರಾಜ್ಯಗಳಿಗೆ ಪ್ರವಾಸ ಮಾಡಿದ್ದರ ಬಗ್ಗೆ ಅಲ್ಲಿನ ಜಲಸಂರಕ್ಷಣಾ ಪ್ರಯೋಗಗಳ ಬಗ್ಗೆ ತಿಳಿದಾಗ ನನಗೆ ಬಹಳ ಆಶ್ಚರ್ಯವಾಯಿತು. ಅದಕ್ಕಿಂತಲೂ ಹೆಚ್ಚಾಗಿ ಯಾರ ನೆರವನ್ನೂ ಅಪೇಕ್ಷಿಸದೇ ಕೇವಲ ಜನತೆಗೆ ನೀರಿನ ಬಗ್ಗೆ ಜ್ಞಾನೋದಯುವನ್ನುಂಟು ಮಾಡುವ ನಿಟ್ಟಿನಲ್ಲಿ ಅವರು ಹಾಕಿಕೊಂಡಿರುವ ಯೋಜನೆಗಳನ್ನು ನೋಡಿದಾಗ ಆಶ್ಚರ್ಯದೊಡನೆ ಅವರ ಬಗ್ಗೆ ಪೂಜ್ಯ ಭಾವನೆಯೂ ಬೆಳೆದು ಬಂತು.

ಸ್ವಾರ್ಥಿಗಳೇ ಅಧಿಕವಾಗಿರುವ ಇಂದಿನ ಜಗತ್ತಿನಲ್ಲಿ ಶ್ರೀ ಕೆ.ಎನ್.ಎಸ್.ರವರಂತಹವರು "ಕೋಟಿಗೊಬ್ಬರು" ಎಂದರೆ ಉತ್ಪ್ರೇಕ್ಷೆಯಲ್ಲ. ಧರ್ಮ, ರಾಜಕೀಯ, ಜಾತಿ, ಮತ ಇವೆಲ್ಲವುಗಳನ್ನೂ ಮೀರಿ ನಿಂತ ಇವರ ನಿಸ್ವಾರ್ಥ, ಪ್ರಾಮಾಣಿಕ ಹಾಗೂ ನಿರಂತರ ಸೇವಾ ಮನೋಭಾವವನ್ನು, ಸಮಾಜದ ಹಿತಚಿಂತನೆಯನ್ನು ಗಮನಿಸಿ ಇಡೀ ಸಮಾಜವೇ ಶ್ರೀಯುತರನ್ನು ಗೌರವಿಸಬೇಕಾದದ್ದು ಅತ್ಯಗತ್ಯ. ಶ್ರೀಯುತರು ಆಯುರಾರೋಗ್ಯಭಾಗ್ಯಗಳೊಂದಿಗೆ ಚಿರಕಾಲ ಬಾಳಲಿ. ಅವರ ಜೀವನ ಚರಿತ್ರೆ ಭಾರತೀಯ ಯುವ ಜನಾಂಗಕ್ಕೆ ದಾರಿದೀಪವಾಗಲಿ ಎಂದು ಹೃದಯಪೂರ್ವಕವಾಗಿ ಆಶಿಸುತ್ತೇನೆ.







21

# ಆದರ್ಶ ವ್ಯಕ್ತಿ

– ಕೆ. ನಾಗರಾಜ್
ಪ್ರಾಂಶುಪಾಲರು, ಸರ್ಕಾರಿ ಪದವಿಪೂರ್ವ ಕಾಲೇಜು
ಯಲಹಂಕ, ಬೆಂಗಳೂರು.

ಪ್ರಾಂಶುಪಾಲರಾಗಿ, ಉಪನಿರ್ದೇಶಕರಾಗಿ, ಜಂಟಿ ನಿರ್ದೇಶಕರಾಗಿ ಸೇವೆ ಸಲ್ಲಿಸಿದರೂ ತಮ್ಮ ಸರಳ ಉಡುಗೆ, ಸರಳ ಜೀವನ ಶೈಲಿಯಿಂದ ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಎಂದೂ ಆಡಂಬರದ ಜೀವನಕ್ಕೆ ಮನಸೋತವರಲ್ಲ. ಇವರ ಸರಳತೆ ಹಲವು ಹತ್ತು ಮಂದಿಗೆ ಇಂದಿಗೂ ಆದರ್ಶ.

ಪ್ರಾಂಶುಪಾಲರಿಂದ ಜಂಟಿ ನಿರ್ದೇಶಕರಾಗಿ ನಿವೃತ್ತಿ ಹೊಂದುವವರೆಗೆ ಪ್ರಾಮಾಣಿಕ ವ್ಯಕ್ತಿಯಾಗಿ ಪ್ರಾಮಾಣಿಕತೆಯನ್ನು ಮೆರೆದವರು, ಪ್ರಾಮಾಣಿಕತೆಗೆ ಬದ್ಧರಾದವರು. ಸರ್ಕಾರದ ಹಣವನ್ನು, ಸವಲತ್ತುಗಳನ್ನು ಎಂದಿಗೂ ದುರುಪಯೋಗ ಮಾಡಿಕೊಂಡವರಲ್ಲ. ಇಲ್ಲಿ ಒಂದು ಘಟನೆ ನೆನಪಾಗುತ್ತದೆ. ಇವರು ಕೋಟಾಲದಿನ್ನೆಯ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದಾಗ ನನ್ನನ್ನು ಪದವಿಪೂರ್ವ ಶಿಕ್ಷಣ ಮಂಡಳಿಯಲ್ಲಿ ಏನಾದರೂ ಕೆಲಸವಿದ್ದರೆ ಕಳುಹಿಸುತ್ತಿದ್ದರು. ಒಮ್ಮೆ ಉಪನ್ಯಾಸಕರ ನೇಮಕದ ಬಗ್ಗೆ, ಅಂದಿನ ಉಪನಿರ್ದೇಶಕರೊಬ್ಬರಿಗೆ ಒಂದು ಪತ್ರ ತಲುಪಿಸಲು ಕಳುಹಿಸಿದರು. ಇವರ ಪರಿಚಯ ಹೇಳಿ, ನಾನು ಪತ್ರವನ್ನು ಕೊಟ್ಟೆ. ಆಗ ಅವರು "ಏನ್ರೀ, ಎಲ್ಲಾ ಪ್ರಾಂಶುಪಾಲರು ಸಿ.ಜಿ. ಹಣ ಕೊಡಿ ಎಂದು ಪತ್ರ ಬರೆಯುತ್ತಾರೆ, ಕೇಳುತ್ತಾರೆ. ಆದರೆ ನಿಮ್ಮ ಪ್ರಾಂಶುಪಾಲರು, ನಮ್ಮ ಕಾಲೇಜಿಗೆ ಸಿ.ಜಿ. ಕೊಡಬೇಡಿ ಎಂದು ಪತ್ರ ಬರೆದಿದ್ದಾರಲ್ಲ!" ಎಂದರು. ಸರ್ಕಾರದ ಹಣವನ್ನು ಪಾಷಾಣದಂತೆ ಕಾಣುತ್ತಿದ್ದರು ಎಂಬುದಕ್ಕೆ ಇದೊಂದು ಸಣ್ಣ ನಿದರ್ಶನ. ಇಂಥವರು ಇಂದಿನ ಸಮಾಜದಲ್ಲಿ ತುಂಬ



ಅಪರೂಪ. ಆದ್ದರಿಂದ ಶ್ರೀ ಕೆ. ನಾರಾಯಣಸ್ವಾಮಿಯವರನ್ನು ನಾನು ನಿತ್ಯ ಸ್ಮರಿಸುತ್ತೇನೆ.

ಇವರು ಪ್ರಾಂಶುಪಾಲರಾಗಿದ್ದಾಗ, ಎಲ್ಲಾ ಉಪನ್ಯಾಸಕರಿಗಿಂತ, ಜವಾನರಿಗಿಂತ ಒಂದು ಗಂಟೆ ಮುಂಚೆ ಕಾಲೇಜಿನಲ್ಲಿ ಹಾಜರಿರುತ್ತಿದ್ದರು. ತಾವೇ ಕಛೇರಿ ಬಾಗಿಲು ತೆಗೆದು, ಉಪನ್ಯಾಸಕರಿಗಾಗಿ ಕಾಯುತ್ತಿದ್ದರು. ಉಪನ್ಯಾಸಕರು ಬರುವವರೆಗೆ, ಅವರ ಕೊಠಡಿಯಿಂದ ಗೇಟಿನವರೆಗೆ, ಗೇಟಿನಿಂದ ಕೊಠಡಿಯವರೆಗೆ ಚಡಪಡಿಸುತ್ತಾ ಓಡಾಡುತ್ತಿದ್ದರು. ಉಪನ್ಯಾಸಕರು ಬಂದ ಮೇಲೆ ನಿಟ್ಟುಸಿರು ಬಿಡುತ್ತಿದ್ದರು. ವಿದ್ಯಾರ್ಥಿಗಳಿಗೆ ಒಂದು ನಿಮಿಷವೂ ಅನ್ಯಾಯವಾಗಬಾರದು ಎಂದು ಸದಾ ಕಾಲ ಚಿಂತಿಸುತ್ತಿದ್ದರು. ಯಾವುದೇ ಉಪನ್ಯಾಸಕರು ತರಗತಿಗಳನ್ನು ತಪ್ಪಿಸಿಕೊಳ್ಳುವಂತಿರಲಿಲ್ಲ. ಸಮಯಕ್ಕೆ ಸರಿಯಾಗಿ ತರಗತಿಗಳನ್ನು ತೆಗೆದುಕೊಳ್ಳುವಂತೆ ಸೂಚಿಸುತ್ತಿದ್ದರು. ಎಂದೂ ತಡವಾಗಿ ಬಂದು, ಬೇಗ ಹೋಗುತ್ತಿರಲಿಲ್ಲ. ಇವರ ಈ ಕರ್ತವ್ಯ ನಿಷ್ಠೆ ನನ್ನಂಥವರಿಗೆ ಇಂದು ಮಾದರಿಯಾಗಿದೆ. "ಮಾಗಿದವನು ಬಾಗುತ್ತಾನೆ, ಬೀಗುವುದಿಲ್ಲ" ಎಂಬಂತೆ ಇವರ ವ್ಯಕ್ತಿತ್ವ. ಅವರ ಸರಳತೆ, ಪ್ರಾಮಾಣಿಕತೆ, ಕರ್ತವ್ಯ ನಿಷ್ಠೆ ಮತ್ತು ವಿದ್ಯಾರ್ಥಿಗಳಿಗೆ ಅನ್ಯಾಯವಾಗಬಾರದೆಂಬ ಅವರ ಕಳಕಳಿ ಅನನ್ಯ. ಅವರೊಡನೆ ಕೆಲಸ ಮಾಡಿದ ನನಗೆ, ಉಪನ್ಯಾಸಕನಾಗಿ, ಪ್ರಾಂಶುಪಾಲನಾಗಿ ಜೀವನದಲ್ಲಿ ಸಾಕಷ್ಟು ಪ್ರಾಮಾಣಿಕತೆಯನ್ನು ರೂಢಿಸಿಕೊಂಡಿದ್ದೇನೆ. ಶ್ರೀಯುತರು ಪರಿಸರ ರಕ್ಷಣೆ, ಸಾಕ್ಷರತೆ, ಆರೋಗ್ಯ ಹೀಗೆ ಹತ್ತಾರು ಸಮಾಜಮುಖಿ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅವರೊಂದಿಗಿನ ಒಡನಾಟದಿಂದ, ಅವರ ಕರ್ತವ್ಯ ನಿಷ್ಠೆ, ಪ್ರಾಮಾಣಿಕತೆ, ವಿದ್ಯಾರ್ಥಿಗಳಿಗೆ ಅನ್ಯಾಯವಾಗಬಾರದೆಂಬ ಕಳಕಳಿಯನ್ನು ಅವರಿಂದ ಕಲಿತದ್ದು ಎಂದರೆ ತಪ್ಪಾಗಲಾರದು. ಅವರು ನನಗೆ ಮಾದರಿ ಆಗಿದ್ದಾರೆ.

ಉತ್ತಮರ ಸ್ನೇಹ ಹಿತವಾದುದು. ನನ್ನ ಮೇಲೆ ಪ್ರಭಾವ ಬೀರಿದ, ನಾನು ಆದರ್ಶ ವ್ಯಕ್ತಿ ಎಂದು ಗೌರವಿಸುವ ನನಗೆ, ಒಂದಷ್ಟು ಕರ್ತವ್ಯ ನಿಷ್ಠೆಯನ್ನು ಕಲಿಸಿದ ಮಾದರಿ ಪ್ರಾಂಶುಪಾಲರು ಮೂವರಿದ್ದಾರೆ. ಅವರಲ್ಲಿ ಈ ಮಹನೀಯರನ್ನು ನಿತ್ಯ ಸ್ಮರಿಸುತ್ತೇನೆ. ಸಮಾಜದಲ್ಲಿನ ಅನ್ಯಾಯ, ಶೋಷಣೆ, ಮಹಿಳೆಯರ ಮೇಲಿನ ದೌರ್ಜನ್ಯ ಮುಂತಾದವುಗಳ ಬಗ್ಗೆ ಸದಾ ಚಿಂತನೆ ಮಾಡುತ್ತಾ, ಯಾವುದೇ ಸದ್ದುಗದ್ದಲವಿಲ್ಲದೇ ಇವೆಲ್ಲವುಗಳ ವಿರುದ್ಧ ಹೋರಾಟ ಮಾಡಿದ, ನೊಂದ ಜೀವಿಗಳ ಬಗ್ಗೆ ಧ್ವನಿಯೆತ್ತಿದ, ಸಾಂತ್ವನ ಹೇಳಿದ, ಸರಳ ಸಜ್ಜನಿಕೆಯ ವ್ಯಕ್ತಿ, ದ್ವೇಷಿಸಿದವರನ್ನೂ ಪ್ರೀತಿಸುವ ಇವರ ಮಾನವ ಧರ್ಮ ಅಚ್ಚರಿ ಹುಟ್ಟಿಸುತ್ತದೆ. ಇವರ ವ್ಯಕ್ತಿತ್ವ ನನ್ನಂತಹ ಎಷ್ಟೋ ಜನರಿಗೆ ಪ್ರೇರಣೆ ಹಾಗೂ ಸ್ಫೂರ್ತಿಯಾಗಿದೆ.







22

# ಮುಖದಲ್ಲಿ ದಪ್ಪ ಮೀಸೆ, ಕೈಯಲ್ಲಿ ಕೋಲು

– ಜೆ.ಸಿ. ಗುರ್ರಪ್ಪ

ಇಸ್ಟ್ರ್ಯಾಕ್/ಇಸ್ರೋ ವಿಜ್ಞಾನಿ

ನಾನು 8ನೇ ತರಗತಿಯಿಂದ 10ನೇ ತರಗತಿಯವರೆಗೆ ಗುಡಿಬಂಡೆ ಸರ್ಕಾರಿ ಜೂನಿಯರ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದೆ. ನಾನು 8ನೇ ತರಗತಿಯಿಂದ 9ನೇ ತರಗತಿಗೆ ಪ್ರವೇಶಿಸಿದಾಗ, ನಮ್ಮ ಶಾಲೆಯ ಪ್ರಾಶುಂಪಾಲರು ಬದಲಾವಣೆಯಾದರು. ಆ ಬದಲಾದ ಪ್ರಾಂಶುಪಾಲರೇ ಸಿಂಹದಂತಹ ಕೆ. ನಾರಾಯಣಸ್ವಾಮಿ. ಇದಕ್ಕೂ ಮುಂಚೆ ಇವರು ಬಾಗೇಪಲ್ಲಿಯಲ್ಲಿ ಪ್ರಾಂಶುಪಾಲರಾಗಿದ್ದರು. ಇವರು ಗುಡಿಬಂಡೆಗೆ ಬರುವ ಮುಂಚೆಯೆ, ನಮ್ಮ ಕಾಲೇಜಿನ ಸಿಬ್ಬಂದಿ ಮತ್ತು ವಿದ್ಯಾರ್ಥಿಗಳಲ್ಲಿ ಭಯ ಗೋಚರಿಸುತ್ತಿರುವಂತಾಗಿತ್ತು. ಇದಕ್ಕೆ ಕಾರಣ ಅವರು ಬಾಗೇಪಲ್ಲಿ ಕಾಲೇಜಿನಲ್ಲಿ ಮಾಡಿದ ಬದಲಾವಣೆಗಳು ಹಾಗು ಶಿಸ್ತು ಕ್ರಮಗಳು. ಯಾವಾಗಲೂ ದಪ್ಪ ಮೀಸೆ ಮತ್ತು ಲಾಠಿ ಹಿಡಿದುಕೊಂಡು ಇರುವವರು ಅಂತ ಗೊತ್ತಾಯಿತೋ, ನಮ್ಮ ಹೈಸ್ಕೂಲು ಹಾಗು ಕಾಲೇಜಿನ ವಿದ್ಯಾರ್ಥಿಗಳೆಲ್ಲ ಗುಸುಗುಸು ಮಾತಾಡುತ್ತಾ ನಡುಗುವುದಕ್ಕೆ ಶುರು ಮಾಡಿದ್ದರು. ಹಾಗೆಯೇ ಕೆಲವರು ಅವರು ಬರುವುದರಿಂದ ನಮ್ಮ ವಿದ್ಯಾಸಂಸ್ಥೆ ಚೆನ್ನಾಗಿ ಇರುತ್ತೆ ಅಂತ ಸಹ ತಿಳಿದುಕೊಂಡರು.

ನಮ್ಮ ಹೈಸ್ಕೂಲು ಹಾಗೂ ಜೂನಿಯರ್ ಕಾಲೇಜು ಗುಡಿಬಂಡೆ ತಾಲ್ಲೂಕಿನ ಒಂದು ದೊಡ್ಡ ವಿದ್ಯಾಸಂಸ್ಥೆಯಾಗಿತ್ತು. ಏಕೆಂದರೆ ಅದು ತಾಲ್ಲೂಕಿನ ಮುಖ್ಯ ಕೇಂದ್ರದಲ್ಲಿತ್ತು. ತಾಲ್ಲೂಕಿನ ಮುಖ್ಯ ಕೇಂದ್ರವಾದರೂ ವಿದ್ಯಾಭ್ಯಾಸ ಹಾಗು ನಾಗರಿಕತೆಯಲ್ಲಿ ಬಹಳ

ಹಿಂದುಳಿದ ಊರು ಮತ್ತು ಈ ಊರಿಗೆ ಯಾವುದೇ ರಾಷ್ಟ್ರೀಯ ಹೆದ್ದಾರಿ ಅಥವಾ ರೈಲ್ವೆ ಸಂಪರ್ಕ ಇರಲಿಲ್ಲ. ಗುಡಿಬಂಡೆ ಬೆಂಗಳೂರಿನಿಂದ ಸುಮಾರು 110 ಕಿಮೀ ದೂರವಿದ್ದು, ಸೀಮಾಂಧ್ರ ಗಡಿಯಿಂದ ಕೇವಲ 20 ಕಿಮೀ ಅಂತರದಲ್ಲಿದೆ. ಆದ್ದರಿಂದ ಇಲ್ಲಿ ಓದುವುದು ಕನ್ನಡವಾದರೂ ಹೆಚ್ಚಾಗಿ ಮಾತನಾಡುವುದು ತೆಲುಗು ಭಾಷೆ.

ಕೆ. ನಾರಾಯಣಸ್ವಾಮಿ ಅವರು, ಗೌರಿಬಿದನೂರು ತಾಲ್ಲೂಕಿನ ಹೊಸೂರಿನಲ್ಲಿ ಹುಟ್ಟಿ ಬೆಳೆದವರು. ಆದ್ದರಿಂದ ಅವರೂ ಕೋಲಾರ ಜಿಲ್ಲೆಯವರೇ ಆದ್ದರಿಂದ, ಅವರು ಬರುತ್ತಾರೆ ಎಂದು ತಿಳಿದಾಗ ಎಲ್ಲರಿಗೂ ಏನೋ ಒಂದು ರೀತಿಯ ಅಭಿಮಾನ ಹಾಗೂ ಆತ್ಮೀಯತೆ. ನಾನು 9ನೇ ತರಗತಿಯಲ್ಲಿರುವಾಗ ಈ ಸಿಂಹದಂತಹ ಮೀಸೆ ಹೊತ್ತು ಲಾಠಿ ಹಿಡಿದುಕೊಂಡು ತಿರುಗಾಡುವ ಪ್ರಿನ್ಸಿಪಾಲರು ನಮ್ಮ ಶಾಲೆಗೆ ಬಂದರು. ಇವರು ಶಾಲೆಗೆ ಮನೆಯಿಂದ ಹೊರಟಾಗ ಹಾಗೂ ಮತ್ತೆ ವಾಪಾಸ್ಸು ಹೋಗುವಾಗ ಯಾವಾಗಲೂ ಪುಸ್ತಕಗಳನ್ನು ಕೈಯಲ್ಲಿ ಇಟ್ಟುಕೊಂಡಿರುತ್ತಿದ್ದರು. ಆಮೇಲೆ ಶಾಲೆಯಲ್ಲಿ ಓಡಾಡಬೇಕಾದರೆ ಬಲಗೈಯಲ್ಲಿ ಲಾಠಿ ಹಿಡಿದು ಕೊಠಡಿಗಳ ಕಡೆ ಹೆಜ್ಜೆ ಹಾಕುತ್ತಿದ್ದರು. ಅವರು ತಿರುಗಾಡುತ್ತಿದ್ದಾರೆಂದರೆ ಕೊಠಡಿಗಳಲ್ಲಿ ವಿದ್ಯಾರ್ಥಿಗಳೆಲ್ಲಾ ನಿಶ್ಶಬ್ಧ. ಅವರು ಶಾಲೆಯಲ್ಲಿ ಎಲ್ಲೇ ಇದ್ದರೂ ಲಾಠಿ ಇಲ್ಲದೇ ಇರುವವರೇ ಅಲ್ಲ. ತಮ್ಮ ಪ್ರಾಂಶುಪಾಲರ ಕುರ್ಚಿಯಲ್ಲಿ ಕೂತಿದ್ದರೂ, ಪಕ್ಕದ ಮೇಜಿನ ಮೇಲೆ ಅವರ ಲಾಠಿ ಇದ್ದೇ ಇರುತ್ತಿತ್ತು. ನಾನು ಕಂಡ ಹಾಗೆ ಅವರು ಲಾಠಿಯನ್ನು ಯಾವತ್ತೂ ಬೇಜವಾಬ್ದಾರಿಯಿಂದ ಯಾರ ಮೇಲೆಯೂ ಅಸ್ತ್ರವಾಗಿ ಉಪಯೋಗಿಸಿಲ್ಲ. ಶಾಲೆಗೆ ಲೇಟಾಗಿ ಬರುವ ವಿದ್ಯಾರ್ಥಿಗಳಿಗೆ ಗೇಟಿನ ಬಳಿ ನಿಂತು ಶಿಕ್ಷಿಸುತ್ತಿದ್ದರು. ಪ್ರಾರ್ಥನೆ ಸಾಲಿನಲ್ಲಿ ಸರಿಯಾಗಿ ನಿಲ್ಲದವರಿಗೆ ಬುದ್ಧಿ ಹೇಳಿ ಬಡಿಯುತ್ತಿದ್ದರು. ಅವರು ಕೊಟ್ಟ ಮನೆಗೆಲಸ ಮಾಡದೇ ಇದ್ದ ಪಕ್ಷದಲ್ಲಿ ಕೈ ಚಾಚಿಸಿ ಶಿಕ್ಷಿಸುತ್ತಿದ್ದರು.

ಕೆ ನಾರಾಯಣಸ್ವಾಮಿಯವರು ಕನ್ನಡ ಪಂಡಿತರು ಹಾಗು ಉಪನ್ಯಾಸಕರಾಗಿದ್ದರು. ಅವರು 10ನೇ ತರಗತಿ ಮತ್ತು ಕಾಲೇಜಿನವರಿಗೆ ಕನ್ನಡ ಪಾಠಗಳನ್ನು ಬೋಧಿಸುತ್ತಿದ್ದರು. ಆದ್ದರಿಂದ ನನಗೆ ಅವರ ಮುಖ ಪರಿಚಯವಿದ್ದರೂ, ಅವರು ಪೂರ್ತಿ ಪರಿಚಯವಾದದ್ದು ಹಾಗು ಆತ್ಮೀಯರಾದದ್ದು ನಾನು 10ನೇ ತರಗತಿಯಲ್ಲಿ ವ್ಯಾಸಂಗ ಮಾಡುವಾಗ. ಅವರು ನಮ್ಮ ಜನಾಂಗದವರೇ (ನಾಯಕ) ಆಗಿದ್ದರೂ, ಯಾವತ್ತೂ ನಾನು ಅವರ ಜಾತಿಯವನೆಂದು ಕಂಡಿಲ್ಲ. ನಾನು ಎಷ್ಟೋ ಸಲ ನಾವು ನಾಯಕರು ಎಂದು ಹೇಳಿ ಪರಿಚಯ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಪಟ್ಟೆ. ಆದರೆ ಅದು ನೆರವೇರಿದ್ದು ನನ್ನ ಆ ಶಾಲೆಯ ಕೊನೆಯ ದಿನದಂದು. ಅಂದರೆ ನಾನು 10 ನೇ ತರಗತಿಯಲ್ಲಿ (1986) ಉತ್ತೀರ್ಣನಾಗಿ ಟಿ.ಸಿ. ಮತ್ತು ಅಂಕಪಟ್ಟಿಗಳನ್ನು ಪಡೆಯಬೇಕಾದರೆ. ಆವಾಗ "ಯಾಕೆ ನಿನ್ನ ಜಾತಿ ಬೇಡ ಅಂತ ಇದೆ? (ಆವಾಗ ಬೇಡ ಅನ್ನುವ ಜಾತಿ ಬ್ಯಾಕ್ವಾರ್ಡ್ ಟ್ರೈಬ್ಸ್ ನಲ್ಲಿ ಸೇರಿಸಲಾಗಿತ್ತು) ಯಾಕೆ ನೀನು ನಾಯಕ ಅಂತ ತಿದ್ದುಪಡಿ ಮಾಡಿಸಿಕೊಂಡಿಲ್ಲ?" ಎಂದರು. ಅಲ್ಲದೆ ನೀನು ಇನ್ನೂ ಹೆಚ್ಚಿನ ಅಂಕಗಳನ್ನು



ಪಡೆಯುತ್ತೀಯಾ ಅಂತ ಇಚ್ಚಿಸಿದ್ದೆ, ಆದರೂ ಪರವಾಗಿಲ್ಲ ನೀನು ಇದೇ ತರಹ ಕಷ್ಟಪಟ್ಟು ಓದಿದರೆ ಮುಂದೆ ಒಳ್ಳೆಯ ಕೆಲಸಕ್ಕೆ ಸೇರುತ್ತೀಯಾ" ಅಂತ ಹೇಳಿ ಆಶೀರ್ವದಿಸಿದರು. ಆ ಮಾತಿನ ಸ್ಫೂರ್ತಿಯಿಂದಲೇ ಈಗ ಒಂದು ಲೋಕ ಪ್ರಸಿದ್ಧ ವೈಜ್ಞಾನಿಕ ಇಸ್ರೋ ಸಂಸ್ಥೆಯಲ್ಲಿ ನಾನು ವಿಜ್ಞಾನಿಯಾಗಿ ಕೆಲಸ ಮಾಡುತ್ತಿದ್ದೇನೆ.

ಇನ್ನು ಅವರ ನಿತ್ಯ ದಿನಚರಿ ಹಾಗು ವೈಯಕ್ತಿಕ ಜೀವನದ ಬಗ್ಗೆ ಹೇಳುವುದಾದರೆ, ಅವರು ಬಹಳ ಸೂಕ್ಷ್ಮ, ಕೋಪಿಷ್ಠ, ಪ್ರಾಮಾಣಿಕ, ಸಮಯಪಾಲನೆ ಹಾಗು ಶಿಸ್ತಿನ ಮನುಷ್ಯ. ಅಲ್ಲದೇ ಆಗಿನ ಕಾಲಕ್ಕೆ ಸಾಹಿತಿಯಾಗಿದ್ದರು, ಕಥೆಗಾರರಾಗಿದ್ದರು. ಆಗ ಅವರಿಗೆ ಸುಮಾರು 50 ವರ್ಷಗಳು ಇರಬಹುದು. ಅವರು ಪ್ರಾಂಶುಪಾಲರಾಗಿದ್ದಾಗ ಅವರ ಒಬ್ಬಳೇ ಮುದ್ದಿನ ಮಗಳನ್ನು ನಮ್ಮ ಸರ್ಕಾರಿ ಕಾಲೇಜಿನಲ್ಲಿ ಓದಿಸುತ್ತಿದ್ದರು ಹಾಗೂ ಅವರ ಸೋದರಳಿಯನಾದ (ತಂಗಿಯ ಮಗ) ರಘುನಾಥ ನಮ್ಮ ಜೊತೆಗೆ ಓದುತ್ತಾ ಇದ್ದರು. ಇದರಿಂದ ಅವರೆಷ್ಟು ಸರಳರು ಎಂದು ತಿಳಿಯಬಹುದು.

ಅವರು ಶಾಲೆ ವೇಳೆ ಆದಮೇಲೆ ಯಾರ ಜೊತೆಗೂ ಹೆಚ್ಚಿಗೆ ಬೆರೆಯುತ್ತಿರಲಿಲ್ಲ. ಯಾಕೆ ಅಂತ ನಮಗೂ ಮೊದಮೊದಲು ಗೊತ್ತಿರಲಿಲ್ಲ. ದಿನ ಕಳೆದಂತೆ ಗೊತ್ತಾಯಿತು, ಅವರು ಸಮಯ ಸಿಕ್ಕಾಗ ಸಾಹಿತ್ಯ ರಚನೆ ಮಾಡುತ್ತಿದ್ದರು. ಅವರು ಸಹಜವಾಗಿ ಸಾಯಂಕಾಲ ಬರೆಯತೊಡಗುತ್ತಿದ್ದರು. ಅವರ ನಿತ್ಯ ದಿನಚರಿಯಲ್ಲಿ ಮುಸ್ಸಂಜೆಯಲ್ಲಿ ನಡಿಗೆ ಮಾಡುತ್ತಾ ಇದ್ದರು. ನಡಿಗೆ ಮುಗಿಸಿ ಪುಸ್ತಕ ಬರೆಯುವುದಕ್ಕೆ ಕುಳಿತುಕೊಳ್ಳುತ್ತಿದ್ದರು. ನಾನು ಕಂಡ ಹಾಗೆ ಅವರು ಒಬ್ಬರೆ ವಾಕಿಂಗ್‌ಗೆ ಹೋಗುತ್ತಿದ್ದರೂ, ಜೊತೆಯಲ್ಲಿ ಅಥವಾ ಅಡ್ಡದಾರಿಯಲ್ಲಿ ಯಾರಾದರೂ ಬಂದರೆ ಅವರನ್ನು ಸ್ವಲ್ಪ ಹೊತ್ತು ಮಾತನಾಡಿಸಿ ನಂತರ ಮುಂದೆ ಹೋಗುತ್ತಿದ್ದರು.

ಅವರು ದಿನ ನಡೆಯುತ್ತಿದ್ದ ದಾರಿ ಸಹ ನಮ್ಮ ಊರಿನ ದಾರಿ. ಗುಡಿಬಂಡೆಯಿಂದ ನಮ್ಮ ಊರಿಗೆ ಸುಮಾರು 8 ಕಿಮೀಗಳು. ಇದು ಚಿಕ್ಕಬಳ್ಳಾಪುರಕ್ಕೆ ಹೋಗುವ ದಾರಿ ಸಹ. ಬೇರೆ ರಸ್ತೆ ಹಾಗೂ ದಾರಿಗಳಿದ್ದರೂ ಅವರು ಯಾವಾಗಲೂ ಒಂದೇ ದಾರಿಯಲ್ಲಿ ವಾಕ್ ಮಾಡುತ್ತಿದ್ದರು. ಅದಕ್ಕೆ ಕಾರಣ ಗುಡಿಬಂಡೆ ಕೆರೆಕಟ್ಟೆ ರಸ್ತೆ. ಆಗಿನ ಕಾಲದಲ್ಲಿ ಕೆರೆ ಪ್ರತಿ ವರ್ಷ ತುಂಬಿ ಹರಿಯುತ್ತಿತ್ತು. ರಸ್ತೆಯ ಒಂದು ಕಡೆ ಕೆರೆ ನೀರು, ಮತ್ತೊಂದೆಡೆ ಕೆರೆ ಕೆಳಗೆ ಭತ್ತದ ಪೈರು, ಎಲ್ಲಿ ನೋಡಿದರೂ ಹಚ್ಚ ಹಸಿರು, ಬಹಳ ಸೊಗಸಾದ ರಸ್ತೆ. ಈ ಕೆರೆ ಆಗಿನ ಕೋಲಾರ ಜಿಲ್ಲೆಯಲ್ಲೇ ಬಹಳ ದೊಡ್ಡದಾದ ಕೆರೆ. ಈ ಕೆರೆಕಟ್ಟೆ ವಿಸ್ತೀರ್ಣ ಸುಮಾರು 2.5 ಕಿಮೀಯಷ್ಟು ಇದೆ. ಗುಡಿಬಂಡೆಯಿಂದ ಸುಮಾರು 3 ಕಿಮೀಯಷ್ಟು ವಾಕ್ ಮಾಡುತ್ತಿದ್ದರು. ಅವರು ವಾಕ್ ಮಾಡುತ್ತಿದ್ದ ಕೊನೆ ತುದಿ ಅಂದರೆ ರೇಣುಮಾಕಲಪಲ್ಲಿ ಮತ್ತು ಪೋಲಂಪಲ್ಲಿ ಕ್ರಾಸ್. ಈ ಪೋಲಂಪಲ್ಲಿ ಕ್ರಾಸ್ ನಿಂದಲೇ ನಮ್ಮ ಊರಿಗೆ ರಸ್ತೆ ಸಂಪರ್ಕವಿತ್ತು. ಅದಕ್ಕೆ ನಾವು ಅವರನ್ನು ಕಂಡರೆ ದಾರಿಯಲ್ಲಿ ಹೆದರುತ್ತಾ ಇದ್ದೆವು ಮತ್ತು ನಮ್ಮ ರಸ್ತೆ ಅಂತ ಹೆಮ್ಮೆ ಪಡುತ್ತಿದ್ದೆವು.

ನಮ್ಮ ಊರಿಗೆ ಒಂದೇ ಬಸ್ ಇದ್ದದ್ದರಿಂದ ಹಾಗು ಆ ಬಸ್ ಇಲ್ಲ ಅಂದರೆ ನಾವು ನಡೆಯಲೇಬೇಕಾದ್ದರಿಂದ, ನಮಗೆ ಈ ದಾರಿಯಲ್ಲಿ ಅವರು ಕೆಲವೊಂದು ಸಲ ದಾರಿ ಮಧ್ಯೆ ಸಿಗುತ್ತಿದ್ದರು.

ನನಗೆ ಅನ್ನಿಸಿದ ಮಟ್ಟಿಗೆ ಅವರು ಆ ಸುಂದರವಾದ ಕೆರೆಕಟ್ಟೆ ರಸ್ತೆಯಲ್ಲಿ ವಾಕ್ ಮಾಡಿ ಮನೆಗೆ ಹೋದ ಮೇಲೆ ಅವರಿಗೆ ಸಾಹಿತ್ಯ ರಚಿಸಲು ಪುಸ್ತಕ/ಕಥೆಗಳನ್ನು ಬರೆಯುವುದಕ್ಕೆ ಸ್ಫೂರ್ತಿ ಹಾಗು ಉತ್ಸಾಹ ಸಿಗುತ್ತಿತ್ತು ಅನ್ನಿಸುತ್ತದೆ.

ಇನ್ನು ನಾವು ಇದ್ದಂತಹ ಸಮಯದಲ್ಲಿ ಅವರು ಶಾಲೆಯ ಶಿಕ್ಷಣವನ್ನು ಬಹಳ ಉನ್ನತಮಟ್ಟಕ್ಕೆ ಬೆಳೆಸಿದ್ದರು. ಕಾರಣ ಅವರು ಶಾಲೆಯ ಶಿಕ್ಷಕರಲ್ಲಿ ತಂದಂತಹ ಬದಲಾವಣೆ. ಸಮಯಕ್ಕೆ ತಕ್ಕಾಗಿ ಪಾಠಗಳು ಹಾಗು ಕಿರುಪರೀಕ್ಷೆಗಳನ್ನು ನಡೆಸುತ್ತಿದ್ದರು. ಅಷ್ಟೇ ಅಲ್ಲದೇ ಅವರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಹ ಮಾಡಿಸುತ್ತಿದ್ದರು. ಆಗಿನ ಕಾಲಕ್ಕೆ ಗುಡಿಬಂಡೆ ಕಾಲೇಜು ವಿದ್ಯಾರ್ಥಿಗಳ ಸಾಂಸ್ಕೃತಿಕ ಕಾರ್ಯಕ್ರಮಗಳು ಬಹಳ ಪ್ರಸಿದ್ಧವಾಗಿದ್ದವು.

ನಾನು ಅವರ ಜೊತೆಯಲ್ಲಿ ಕಂಡಂತೆ ಇತರೆ ಕೆಲವರ ನೆನಪು ಬರುವಂತಹ ಶಿಕ್ಷಕರನ್ನು ಹೇಳಲಿಕ್ಕೆ ಇಷ್ಟಪಡುತ್ತೇನೆ. ಅವರುಗಳು ಬಿ. ನರಸಿಂಹಮೂರ್ತಿ, ಎನ್.ವಿ. ಹನುಮಂತು, ವೀರಭದ್ರಪ್ಪ, ಸಿ. ಚಂದ್ರಶೇಖರ್, ಎಚ್.ಎಸ್.ಗುಂಡಪ್ಪ, ಶಮೀ ಉಲ್ಲಾ ಖಾನ್, ಕೆ.ಸಿ. ಕೃಷ್ಣಾರೆಡ್ಡಿ, ಜಿ.ವಿ. ಜಯದೇವ, ಜಿ.ಬಿ. ಶೆಟ್ಟಪ್ಪ, ಎಂ.ಮಹೇಶಪ್ಪ, ಎ.ಬಿ. ಜಯಣ್ಣ ಹಾಗು ಕೃಪಲಾನಿ.

ಇವರಲ್ಲಿ ನನ್ನ ಪಾಲಿಗೆ ಕೆ.ನಾರಾಯಣಸ್ವಾಮಿಯವರ ಮಾರ್ಗದಲ್ಲಿ ಬೆಳಕು ಚೆಲ್ಲಿದವರು ಬಿ.ನರಸಿಂಹಮೂರ್ತಿ ಅವರು.

ಆದುದರಿಂದ ನಾ ಕಂಡ ಸಿಂಹದಂತಹ ಮೀಸೆ ನಾರಾಯಣಸ್ವಾಮಿಯವರನ್ನು ಮರೆಯುವುದಕ್ಕಾಗುವುದಿಲ್ಲ. ಸದಾ ಅವರ ಬೋಧನೆ ಮಾಡಿದ ವಿದ್ಯೆ ಮತ್ತು ಅವರು ಕಲಿಸಿದಂತಹ ಒಳ್ಳೆಯ ಗುಣಗಳು ನೆನಪಿನಲ್ಲಿ ಇರುತ್ತೆ.





23

# ಆಡಳಿತದಲ್ಲಿ ಅನರ್ಘ್ಯ ರತ್ನ

– ಬಾಮಸಾರಾಧ್ಯ
ಉಪನ್ಯಾಸಕರು, ಬಾಗೇಪಲ್ಲಿ

ಅದೊಂದು ವಿಶಿಷ್ಟವಾದ ಸಮಾರಂಭವಾಗಿತ್ತು. ಸಭೆಯಲ್ಲಿ ನೆರೆದಿದ್ದ ಎಲ್ಲರ ಕಣ್ಣಾಲಿಗಳಲ್ಲೂ ನೀರು ತುಂಬಿತ್ತು. ವೇದಿಕೆಯ ಮೇಲೆ ಅತಿಥಿಗಳೊಂದಿಗೆ ಸುಮಾರು ಮೂವತ್ತು ಅಲೆಮಾರಿ ಮಕ್ಕಳು ಅಲಂಕರಿಸಿದ್ದರು. ಮುಗ್ಧ ಸ್ವಭಾವದ ಮೂರ್ತಿವೆತ್ತ ಮಕ್ಕಳು ತಮಗೂ ಈ ಸಮಾರಂಭಕ್ಕೂ ಸಂಬಂಧವೇ ಇಲ್ಲವೆನ್ನುವಂತೆ ಎತ್ತಲೋ ನೋಡುತ್ತಾ ಕುಳಿತಿದ್ದರು.

ನಿರೂಪಕರು ಚಿಂದಿ ಆಯುವ ಹುಡುಗರ ಒಬ್ಬೊಬ್ಬರ ಜೀವನದ ಹಿನ್ನೆಲೆಯನ್ನು ಬಿಡಿಬಿಡಿಯಾಗಿ ಮನ ಮಿಡಿಯುವಂತೆ ಬಿಚ್ಚಿಡುತ್ತಿದ್ದರು. ಅವು ಅವರು ಬೀದಿಗೆ ಬೀಳಲು ಬಚ್ಚಿಟ್ಟಿದ್ದ ಭಯ ಬೀಳಿಸುವ ಕಾರಣಗಳಾಗಿದ್ದವು.

ಕೆಲವು ಅಲೆಮಾರಿ ಮಕ್ಕಳ ತಂದೆಯರು ಕೊಲೆಗಡುಕರಾಗಿ ಜೈಲು ಸೇರಿದ್ದರೆ ಇನ್ನು ಕೆಲವರು ಕಳ್ಳರಾಗಿ ಊರು ಬಿಟ್ಟು ಪರಾರಿಯಾಗಿದ್ದರು. ಅನೇಕ ಪೋಷಕರು ಕುಡುಕರಾಗಿ, ಭಿಕ್ಷುಕರಾಗಿ ಬದುಕಲು ದಾರಿ ಕಾಣದೆ ನಾನಾ ಕಸುಬುಗಳಲ್ಲಿ ತೊಡಗಿ ತಮ್ಮ ಮಕ್ಕಳನ್ನೂ ವಿಧಿಯಿಲ್ಲದೆ ಭಿಕ್ಷಾಟನೆಗೆ ಹಾಗೂ ಚಿಂದಿ ಆಯುವ ಕೆಲಸಕ್ಕೆ ದೂಡಿದ್ದರು. ಮಕ್ಕಳಿಗೆ ಉಣಬಡಿಸಲು ಕಾಸಿಲ್ಲದೆ ಗಂಡಂದಿರೂ ದಿಕ್ಕಿಲ್ಲದೆ ಕೆಲವು ತಾಯಿಯರು ವೇಶ್ಯಾವಾಟಿಕೆಗೂ ಒಳಗಾಗಿದ್ದು ರೋಗ ರುಜಿನಗಳಿಂದ ನರಳುತ್ತಿದ್ದರು.



ಬೀದಿ ಬದಿಯ ದಿಕ್ಕಿಲ್ಲದ ಮುರಿದು ಬಿದ್ದ ಕಟ್ಟಡಗಳು, ಹಳೆ ಛತ್ರಗಳು, ಬಾಬಯ್ಯ ಗುಡಿಗಳು, ಫುಟ್‌ಪಾತ್‌ಗಳು, ಬಸ್‌ಸ್ಟ್ಯಾಂಡ್‌ಗಳು, ಕೊಳಚೆ ಪ್ರದೇಶಗಳು ಇವರ ತಾಣಗಳಾಗಿದ್ದವು. ಇವುಗಳಿಗೆಲ್ಲಾ ಮೂಲಕಾರಣ ಬಡತನ ಹಾಗೂ ಹಸಿವಾಗಿತ್ತು. ಮಕ್ಕಳು ಬೀದಿಗೆ ಬಿದ್ದು ಚಿಂದಿ ಆಯುವುದನ್ನು ಮಾತ್ರ ಅಲ್ಲದೇ ಭಿಕ್ಷಾಟನೆಯಲ್ಲೂ ತೊಡಗಿ ಕೆಲವೊಮ್ಮೆ ಕಸದ ತೊಟ್ಟಿಗಳಲ್ಲಿ ಬಿದ್ದ ಶ್ರೀಮಂತರು ತಿಂದು ತೇಗಾಡಿ ಹೊರಚೆಲ್ಲಿದ್ದ ಅನ್ನವನ್ನು ನಾಯಿಗಳೊಂದಿಗೆ ಪೈಪೋಟಿ ನಡೆಸಿ ಕಿತ್ತು ತಂದು ಹಂಚಿ ತಿನ್ನುತ್ತಿದ್ದರು.

ಅದು ಶಾಲಾ ಕಾರ್ಯಕ್ರಮವಾಗಿತ್ತು. ನೆಹರು ಜನ್ಮ ಶತಾಬ್ದಿಯನ್ನು ಅರ್ಥಪೂರ್ಣವಾಗಿ ಶಾಲಾ ಅಂಗಳದಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ಮುಖ್ಯ ರೂವಾರಿ ಬಾಗೇಪಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಅಂದಿನ ಪ್ರಾಚಾರ್ಯರಾದ ಕೆ. ನಾರಾಯಣಸ್ವಾಮಿಯವರಾಗಿದ್ದರು.

ಅಲೆಮಾರಿ ಮಕ್ಕಳ ಬಗ್ಗೆ ಕಾಳಜಿ ಹಾಗೂ ಚಿಂತನೆಯನ್ನು ನಡೆಸಿ ಅವರನ್ನು ಸಮಾಜದ ಮುಖ್ಯ ವಾಹಿನಿಗೆ ತರುವ ಮತ್ತು ಅವರ ಬದುಕನ್ನು ಹಸನುಗೊಳಿಸಲು ಕನಸನ್ನು ಹೊತ್ತು ಅದನ್ನು ನನಸನ್ನಾಗಿ ಮಾಡುವ ವಿಶಿಷ್ಟ ಪ್ರಯತ್ನ ಕೆ. ನಾರಾಯಣಸ್ವಾಮಿಯವರದಾಗಿತ್ತು. ಶಾಲಾ ವಿದ್ಯಾರ್ಥಿಗಳಿಗೂ ಅಲೆಮಾರಿ ಮಕ್ಕಳಿಗೂ ನಡುವೆ ಇರುವ ವ್ಯತ್ಯಾಸವನ್ನು ಪರಿಚಯಿಸುವುದಾಗಿತ್ತು.

ಸಮಾರಂಭಕ್ಕೆ 15 ದಿನಗಳ ಮುಂಚೆಯೇ ಪಟ್ಟಣದಲ್ಲಿ ಅಲೆಮಾರಿ ಮಕ್ಕಳ ಪತ್ತೆಯನ್ನು ಹಚ್ಚಿಸಿ ಅವರುಗಳ ಬದುಕಿನ ಹಿನ್ನೆಲೆಯನ್ನು ಸಂಗ್ರಹಿಸಿ ಅವರನ್ನು ಸಮಾರಂಭಕ್ಕೆ ಕರೆತರುವುದರಲ್ಲಿ ಯಶಸ್ವಿಯಾಗಿದ್ದರು. ದಾನಿಗಳಿಂದ ಆ ಮಕ್ಕಳಿಗೆ ಹೊಸ ಬಟ್ಟೆಗಳು ಹಾಗೂ ಧನ ಸಹಾಯವನ್ನು ಸಮಾರಂಭದಲ್ಲಿ ವಿತರಿಸಲಾಯಿತು. ಕೆಲವು ಮಕ್ಕಳನ್ನು ದಾನಿಗಳಿಂದ ದತ್ತು ಪಡೆಯುವ ಹಾಗೂ ಕೆಲವು ಮಕ್ಕಳನ್ನು ಶಾಲೆಗೆ ದಾಖಲಿಸುವ ಕಾರ್ಯವನ್ನು ಮಾಡಲಾಯಿತು. ಸರ್ಕಾರದಿಂದ ಮಾಡಲಾರದ ಕೆಲಸವನ್ನು ಆ ದಿನಗಳಲ್ಲಿ ಕೆ. ನಾರಾಯಣಸ್ವಾಮಿಯವರೇ ಪ್ರಾರಂಭಿಸಿದ್ದರು.

ಸಮಾರಂಭದ ನಂತರ ಅಲೆಮಾರಿ ಮಕ್ಕಳನ್ನು ಶಾಲೆಯ ಒಂದು ಕೊಠಡಿಗೆ ಬಿಡಲಾಯಿತು. ಶಾಲಾ ವಿದ್ಯಾರ್ಥಿಗಳಿಂದ ಮುಂಚಿತವಾಗಿಯೇ ಒಳ್ಳೊಳ್ಳೆಯ ಉಡುಪುಗಳನ್ನು ಅಲ್ಲಿ ಸಂಗ್ರಹಿಸಿಡಲಾಗಿತ್ತು. ಉಡುಪುಗಳನ್ನು ಆರಿಸಿಕೊಳ್ಳುವ ಕಾರ್ಯದಲ್ಲಿ ಚಿಂದಿ ಆಯುವ ಹುಡುಗರು ಖುಷಿಯೋ ಖುಷಿ. ಆ ನಂತರ ಮಕ್ಕಳನ್ನು ಡೆಸ್ಕ್‌ಗಳಲ್ಲಿ ಕುಳ್ಳರಿಸಿ ಔತಣದ ಊಟವನ್ನು ಉಣಬಡಿಸಲಾಯಿತು.

ಕೇವಲ ಇದೊಂದು ದಿನಕ್ಕೆ ಮಾತ್ರವಲ್ಲದೆ ಅಲೆಮಾರಿ ಮಕ್ಕಳ ಬಗ್ಗೆ ನಿಗಾ ವಹಿಸುವ



ಹಾಗೂ ಆಗಿಂದಾಗ್ಗೆ ಅವರಿದ್ದ ಸ್ಥಳಕ್ಕೆ ಸಹಾಯವನ್ನು ತಲುಪಿಸುವ ನಿರಂತರ ಕಾರ್ಯಕ್ರಮಗಳನ್ನೂ ಪ್ರಾಚಾರ್ಯರು ರೂಪಿಸಿದ್ದರು.

**ಶಾಲೆಯೆ ಮನೆ**

**ಆಡಳಿತವೇ ಪತ್ನಿ**

**ಶಿಕ್ಷಕರೇ ಕುಟುಂಬ**

**ವಿದ್ಯಾರ್ಥಿಗಳೇ ಮಕ್ಕಳು**

**ಅನಾಥರೇ ದತ್ತು ಪುತ್ರರು**

**ಸರ್ವತೋಮುಖ ಅಭಿವೃದ್ಧಿಯೇ ಗುರಿ**

ಇದು ನಾವು ಅವರ ಶಾಲಾ ಆಡಳಿತದಲ್ಲಿ ಕಾಣಬಹುದಾದ ಉದಾತ್ತ ಭಾವನೆಗಳು ಹಾಗೂ ಆದರ್ಶಗಳಾಗಿದ್ದವು. ಸದಾ ಶಾಲೆಯ ಬಗ್ಗೆ ಯೋಚಿಸುವ ಹಾಗೂ ಶಾಲಾ ಅಭಿವೃದ್ಧಿಗೆ ಕಾರಣವಾಗಬಹುದಾದ ನಾನಾ ಯೋಜನೆಗಳನ್ನು ಆಡಳಿತದಲ್ಲಿ ಜಾರಿಗೆ ತರುವ ಪ್ರಾಮಾಣಿಕ ಪ್ರಯತ್ನ ಹಾಗೂ ಪಾಲಿಸುವ ಕಟ್ಟುನಿಟ್ಟಿನ ಶಿಸ್ತು ಕೆ. ನಾರಾಯಣಸ್ವಾಮಿಯವರದಾಗಿತ್ತು.

ಮಕ್ಕಳಲ್ಲಿ ಮಾನವೀಯ ಗುಣಗಳನ್ನು ತುಂಬಿ ದೇಶ ಸೇವೆಗೆ ಅವರನ್ನು ಸಜ್ಜುಗೊಳಿಸುವುದೇ ತಮ್ಮ ಕರ್ತವ್ಯವೆಂದು ಭಾವಿಸಿದ್ದರು. ಅವರ ಆಡಳಿತ ಹಾಗೂ ಆಚರಣೆಯಲ್ಲಿ ಎಲ್ಲೋ ಒಂದು ಕಡೆ ಕಾರ್ಲ್ ಮಾರ್ಕ್ಸ್, ಲೆನಿನ್ ಮುಂತಾದ ಮಹಾನ್ ವ್ಯಕ್ತಿಗಳ ತತ್ವ ಸಿದ್ಧಾಂತಗಳನ್ನು ನಾವು ಕಾಣುತ್ತಿದ್ದೆವು.

ಅವರ ಆಡಳಿತದ ಅಭಿರುಚಿಯನ್ನು ಅನುಭವಿಸಿದ ನಾವು ಅವರ ಅನುಯಾಯಿಗಳಾಗಿ ಮಾರ್ಪಟ್ಟಿದ್ದೇವೆ ಹಾಗೂ ಅವರ ಆದರ್ಶಗಳನ್ನು ಅನುಸರಿಸಿದ್ದೇವೆ.

ದೇಶಕ್ಕೆ ಸ್ವಾತಂತ್ರ್ಯ ಬಂದ ವರ್ಷದಲ್ಲಿ ಬಾಗೇಪಲ್ಲಿಯಲ್ಲಿ ಸ್ಥಾಪನೆಯಾದ ಜಿಲ್ಲಾ ಬೋರ್ಡ್ ಪ್ರೌಢಶಾಲೆ ನಂತರ ಸರ್ಕಾರಿ ಪ್ರೌಢಶಾಲೆಯಾಗಿ ಮಾರ್ಪಟ್ಟು 1972-73ರಲ್ಲಿ ಸರ್ಕಾರಿ ಪದವಿಪೂರ್ವ ಕಾಲೇಜಾಗಿ ಪರಿವರ್ತನೆಗೊಂಡಿತು.

ರಾಷ್ಟ್ರಪ್ರಶಸ್ತಿ ವಿಜೇತರಾದ ಎ.ಆರ್. ಹನುಮಂತಾಚಾರ್, ಸುಬ್ಬಾಶಾಸ್ತ್ರಿ, ಶ್ರೀಕಂಠಶಾಸ್ತ್ರಿ, ಬಿ.ವಿ. ರಾಘವನ್ ಮುಂತಾದ ಮೇಲ್ವರ್ಗದ ಜಾತಿಗೆ ಸೇರಿದ ವ್ಯಕ್ತಿಗಳು ಮುಖ್ಯ ಶಿಕ್ಷಕರಾಗಿ ಆಡಳಿತ ನಡೆಸುತ್ತಿದ್ದು ಮೊಟ್ಟ ಮೊದಲ ಬಾರಿಗೆ ದಲಿತ ವರ್ಗಕ್ಕೆ ಸೇರಿದ ಹಾಗೂ ಅಂಬೇಡ್ಕರ್‌ರವರ ಆದರ್ಶಗಳನ್ನು ಪಾಲಿಸುತ್ತಿದ್ದ ವ್ಯಕ್ತಿಗಳಾದ ಕೆ. ನಾರಾಯಣಸ್ವಾಮಿಯವರು ಈ ಕಾಲೇಜಿಗೆ 1975ರಲ್ಲಿ ಪ್ರಾಚಾರ್ಯರಾಗಿ ಪಾದಾರ್ಪಣೆ ಮಾಡಿದರು.



ಮೊದಲಿಗೆ ಬ್ರಿಟೀಷರ ಕಾಲದ ಎದುರುಬದುರುಗಿರುವ ಎರಡು ಮುಸಾಫಿರ್ ಖಾನಾಗಳಲ್ಲಿ ಪ್ರೌಢಶಾಲೆ ಪ್ರಾರಂಭವಾಗಿ ನಂತರ ನಾಲ್ಕು ಚಿಕ್ಕ ಹೆಂಚಿನ ಕೋಣೆಗಳು ಸೇರಿಕೊಂಡು ಶಾಲೆ ನಡೆಯುತ್ತಿತ್ತು. 1963ರ ನಂತರ ಪುನಃ ಆರು ಹೆಂಚಿನ ಕೋಣೆಗಳು ಸೇರ್ಪಡೆಗೊಂಡವು. 1975ರವರೆವಿಗೂ ಇದೇ ಸ್ಥಿತಿ ಇತ್ತು. ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಕೊಠಡಿಗಳಿರಲಿಲ್ಲ. ಶಾಲೆಯ ಪ್ರಾರಂಭದ ದಿನಗಳಲ್ಲಿ ರಸ್ತೆಯ ಆಚೆ ಬದಿಗೆ ಒಂದು ಹಳೆಯ ಶಿಥಿಲಗೊಂಡ ಕಟ್ಟಡದಲ್ಲಿ ಪಾಠ ಪ್ರವಚನ ನಡೆಯುತ್ತಿತ್ತು. ವಿದ್ಯಾರ್ಥಿಗಳು ಅದನ್ನು ಸಿಲೋನ್ ಎಂದು ಕರೆಯುತ್ತಿದ್ದರು. ಏಕೆಂದರೆ ಮಳೆಗಾಲದಲ್ಲಿ ಅದು ಸಂಪೂರ್ಣವಾಗಿ ಜಲಾವೃತ್ತವಾಗುತ್ತಿತ್ತು. ಆ ಕಟ್ಟಡದಲ್ಲಿ ಬೆಳಿಗ್ಗೆ ಹಾಜರಾತಿಯಾಕಿದಾಗ ನೂರಕ್ಕೆ ತೊಂಬತ್ತರಷ್ಟಿದ್ದರೆ ಸಂಜೆಯಾಗುವ ಹೊತ್ತಿಗೆ ಅರ್ಧದಷ್ಟು ವಿದ್ಯಾರ್ಥಿಗಳು ಕಿಟಕಿಯ ಕಿಂಡಿಯ ಮೂಲಕ ಪರಾರಿಯಾಗಿಬಿಡುತ್ತಿದ್ದರು.

1975ರಲ್ಲಿ ಪ್ರಾಚಾರ್ಯರಾಗಿ ಕೆ. ನಾರಾಯಣಸ್ವಾಮಿಯವರು ಕಾಲೇಜಿಗೆ ಬಂದ ನಂತರ ಕೊಠಡಿಗಳ ಸಮಸ್ಯೆಯನ್ನು ಪ್ರಮುಖವಾಗಿ ಮನಗಂಡರು. ಸರ್ಕಾರಕ್ಕೆ ಅರ್ಜಿಯ ಮೇಲೆ ಅರ್ಜಿ ಗುಜರಾಯಿಸಿದರು. ಅರ್ಜಿಗಳ ಹಿಂದೆಯೇ ಕಛೇರಿಗಳಿಗೆ ಸುತ್ತಾಡಿದರು. ಶಾಸಕರಾದ ಮುನಿರಾಜು ಮತ್ತು ಲೋಕಸಭಾ ಸದಸ್ಯರಾದ ಪಿ. ಕೃಷ್ಣರಾವ್‌ರವರನ್ನು ಕಂಡು ಕೊಠಡಿಗಳ ಮಂಜೂರಾತಿಗಾಗಿ ಅವರುಗಳ ಮನವೊಲಿಸಿ ಸರ್ಕಾರದ ಮೇಲೆ ಪ್ರಭಾವ ಬೀರುವಂತೆ ಮಾಡಿದರು. ಕೊನೆಗೆ ಆರು ಕಾಂಕ್ರೀಟ್ ಕೋಣೆಗಳು ಎಲ್ ಆಕಾರದಲ್ಲಿ ಶಾಲೆಗಿಂತಲೂ ದೂರದ ಗೂಳೂರು ಸರ್ಕಲ್‌ನಲ್ಲಿ ನಿರ್ಮಿಸಲು ಆದೇಶವಾಯಿತು. ಗೂಳೂರು ಸರ್ಕಲ್ಲಿನಲ್ಲಿ ನಿರ್ಮಿಸಿದರೆ ಯಾವ ಪ್ರಯೋಜನವೂ ಇಲ್ಲವೆಂದು ಸರ್ಕಾರಕ್ಕೆ ಮನವರಿಕೆ ಮಾಡಿಕೊಟ್ಟು ಶಾಲೆಯ ಆವರಣದಲ್ಲೇ ನಿರ್ಮಿಸಲು ಕಾರಣರಾದರು. ಎಲ್ ಆಕಾರದಲ್ಲಿ ಕಟ್ಟಬೇಕಾಗಿದ್ದ ಆರು ಕೋಣೆಗಳನ್ನು ರಸ್ತೆಗೆ ಎದ್ದು ಕಾಣುವಂತೆ ಒಂದೇ ಸಾಲಿನಲ್ಲಿ ಹಾಗೂ ಮಹಡಿಯಲ್ಲಿ ನಿರ್ಮಿಸುವಂತೆ ನೋಡಿಕೊಂಡರು. ಪುನಃ ಮಹಡಿ ಮೇಲಕ್ಕೆ ಹೆಚ್ಚುವರಿಯಾಗಿ ನಾಲ್ಕು ಕೋಣೆಗಳು ಹಾಕಿಸಿ ಅದು ಪೂರ್ಣಗೊಳ್ಳುವಂತೆ ಮಾಡಿದ್ದರು.

ಬಾಗೇಪಲ್ಲಿ ಪಟ್ಟಣದಲ್ಲಿ ಅದುವರೆವಿಗೆ ಯಾವ ಬೃಹತ್ ಕಟ್ಟಡವಾಗಲಿ ಮಹಡಿಯಾಗಲಿ ಇರಲಿಲ್ಲ. ರಸ್ತೆಯಲ್ಲಿ ಓಡಾಡುವ ಜನ ವಿಸ್ಮಯದಿಂದ ಈ ಕಟ್ಟಡವನ್ನು ನೋಡುತ್ತಿದ್ದರು. ಕೆ. ನಾರಾಯಣಸ್ವಾಮಿಯವರ ದೂರದೃಷ್ಟಿ ಹಾಗೂ ಮುಂದಾಲೋಚನೆ ಎಷ್ಟಿತ್ತೆಂದರೆ ಕಟ್ಟಡದ ಮುಂಭಾಗದಲ್ಲಿ ಕಾಂಪೌಂಡ್ ಒಳಗೆ ಸಾಲುಸಾಲಾಗಿ ಹತ್ತು ಹದಿನೈದು ಅಶೋಕ ಸಸಿಗಳನ್ನು ಅರಣ್ಯ ಇಲಾಖೆಯಿಂದ ಪಡೆದು ಬೆಳೆಸಿದ್ದರು. ಕಟ್ಟಡಪೂರ್ಣಗೊಳ್ಳುವ ಹೊತ್ತಿಗೆ ಆ ಸಸಿಗಳೂ ಗಿಡಗಳಾಗಿ ಮುಗಿಲೆತ್ತರಕ್ಕೆ ಬೆಳೆದು



ಕಟ್ಟಡಕ್ಕೆ ಶೋಭೆಯನ್ನು ಹಾಗೂ ಶಾಲೆಗೆ ಉತ್ತಮ ಪರಿಸರವನ್ನು ತಂದುಕೊಟ್ಟಿತು. ಈಗಲೂ ನಾವು ಅಶೋಕ ವೃಕ್ಷಗಳನ್ನು ಇಲ್ಲಿ ಕಾಣಬಹುದು.

ಕಟ್ಟಡ ನಿರ್ಮಾಣವಾಗುವಾಗ ಅದು ಒಳ್ಳೆಯ ಗುಣಮಟ್ಟದಲ್ಲಿರುವಂತೆ ಉಸ್ತುವಾರಿ ವಹಿಸುತ್ತಿದ್ದರು. ಗೋಡೆಗಳು ಹಾಗೂ ಮೌಲ್ಡಿಂಗ್ ಕ್ಯೂರಿಂಗ್‌ಗೆ ಕೂಲಿಗಳು ಹಾಕುವ ನೀರು ಸಾಲದೆಂದು ಸಂಜೆ ಹಾಗೂ ಬೆಳಿಗ್ಗೆ ತಾವೇ ಖುದ್ದು ನಿಂತು ನೀರು ಹಾಕುತ್ತಿದ್ದರು ಹಾಗೂ ವಿದ್ಯಾರ್ಥಿಗಳಿಂದ ಹಾಕಿಸುತ್ತಿದ್ದರು. ಅವರ ಆದರ್ಶವನ್ನು ಕಂಡು ಶಿಕ್ಷಕರೂ ನೀರು ಹಾಕಲು ಮುಂದಾಗುತ್ತಿದ್ದರು.

ವಿದ್ಯಾರ್ಥಿಗಳ ಸರ್ವತೋಮುಖ ಅಭಿವೃದ್ಧಿಗಾಗಿ ಉತ್ತಮ ಶಿಕ್ಷಣ ನೀಡುವುದರ ಜೊತೆಗೆ ಬೌದ್ಧಿಕ ಬೆಳವಣಿಗೆಯ ಜೊತೆಗೆ ದೈಹಿಕ ಬೆಳವಣಿಗೆಯೂ ಅಷ್ಟೇ. ಪ್ರಾಮುಖ್ಯವೆಂದು ಮನಗಂಡರು. ಶಾಲೆಗೆ ಆಟದ ಮೈದಾನದ ಕೊರತೆಯಿತ್ತು. ಶಾಲೆಯ ಹಿಂಭಾಗದಲ್ಲಿ ಲೋಕೋಪಯೋಗಿ ಇಲಾಖೆಯವರು ದಾನವಾಗಿ ಪಡೆದಿದ್ದ 2 ಎಕರೆ 19 ಗುಂಟೆ ಜಮೀನಿನಲ್ಲಿ ಕ್ವಾಟ್ರಸ್ ನಿರ್ಮಿಸಲು ಯೋಜನೆಯನ್ನು ಹಾಕಿಕೊಂಡಿದ್ದರು. ಮತ್ತೊಮ್ಮೆ ಪ್ರಾಚಾರ್ಯ ನಾರಾಯಣಸ್ವಾಮಿಯವರು ಸರ್ಕಾರಕ್ಕೆ ಅರ್ಜಿಗಳನ್ನು ಸಲ್ಲಿಸಿ ಲೋಕಸಭಾ ಸದಸ್ಯರಾದ ವಿ. ಕೃಷ್ಣರಾವ್‌ರವರನ್ನು ಮುಂದಿಟ್ಟುಕೊಂಡು ಸರ್ವೆ ನಂಬರ್ 171/5 ಮತ್ತು 173ರ ಎರಡು ಎಕರೆ 19 ಗುಂಟೆ ಜಮೀನನ್ನು ಸರ್ಕಾರದ ಆದೇಶದ ಸಂಖ್ಯೆ GO No-ED9 SHS 81 ಬೆಂಗಳೂರು ರಲ್ಲಿ ಲೋಕೋಪಯೋಗಿ ಇಲಾಖೆಯಿಂದ ವಿದ್ಯಾ ಇಲಾಖೆಗೆ ಆಟದ ಮೈದಾನಕ್ಕಾಗಿ ವರ್ಗಾವಣೆ ಮಾಡಿಸಿದರು. ಛಲದಂಕ ಮಲ್ಲನಂತೆ ಬೆಂಬಿಡದ ಬೇತಾಳನಂತೆ ಅವರ ಪ್ರಯತ್ನಗಳು ವಿದ್ಯಾರ್ಥಿಗಳ ದೈಹಿಕ ಚಟುವಟಿಕೆಗಳಿಗೆ ಆ ಜಾಗ ಮೀಸಲಾಗಿರುಸುವಂತೆ ಮಾಡುವಲ್ಲಿ ಯಶಸ್ವಿಯಾಯಿತು.

ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹಾಗೂ ಜ್ಞಾನಾರ್ಜನೆಗೆ ಪ್ರಾಚಾರ್ಯರು ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು. “ತೊಟ್ಟಿಲು ತೂಗುವ ಕೈಗಳು ದೇಶವನ್ನು ತೂಗುವಂತಾಗಬೇಕೆಂದು” ಆಶಿಸುತ್ತಿದ್ದರು. ಮೊದಲಿಂದ ಹೆಣ್ಣಿನ ಬಗ್ಗೆ ಬೆಳೆದು ಬಂದ ಕೀಳು ಭಾವನೆ ಹಾಗೂ ಶೋಷಣೆಗಳನ್ನು ಅವರು ದ್ವೇಷಿಸುತ್ತಿದ್ದರು. ಆದರ್ಶ ಮಹಿಳೆಯರ ಜೀವನ ಚರಿತ್ರೆಗಳನ್ನು ಉಪನ್ಯಾಸಗಳನ್ನು ಏರ್ಪಡಿಸುವುದರ ಮೂಲಕ ಹಾಗೂ ತಾವೇ ವಿವರಿಸುವ ಮೂಲಕ ವಿದ್ಯಾರ್ಥಿನಿಯರಲ್ಲಿ ಸ್ಫೂರ್ತಿಯನ್ನು ತುಂಬುತ್ತಿದ್ದರು. ಇದಕ್ಕೆ ಪೂರಕವಾಗಿ ಕಿತ್ತೂರು ರಾಣಿ ಚೆನ್ನಮ್ಮನ ಹೆಸರಿನಲ್ಲಿ ಶಾಲೆಯ ಆವರಣದಲ್ಲಿ ಒಂದು ರಂಗಮಂದಿರವನ್ನು ನಿರ್ಮಿಸಿ ಅದರಲ್ಲಿ ನಿರಂತರವಾಗಿ ಸಾಂಸ್ಕೃತಿಕ ಹಾಗೂ ಜಾಗೃತಿ



ಕಾರ್ಯಕ್ರಮಗಳು ನಡೆಯುವಂತೆ ಹಾಗೂ ವಿದ್ಯಾರ್ಥಿಗಳಲ್ಲಿ ಮಾನಸಿಕ ಬೆಳವಣಿಗೆ ಹಾಗೂ ನೈತಿಕ ಬೆಳವಣಿಗೆ ಹೆಚ್ಚುವಂತೆ ಮಾಡಿದರು.

ಶಿಕ್ಷಕರನ್ನು ಸದಾ ಕ್ರಿಯಾಶೀಲರಾಗಿ ಇರುವಂತೆ ಪ್ರೇರೇಪಿಸುತ್ತಿದ್ದರು. ಕಟ್ಟುನಿಟ್ಟಿನ ಶಿಸ್ತಿನ ನಿಯಮಗಳನ್ನು ಜಾರಿಗೆ ತಂದಿದ್ದರು. ಶಾಲಾ ಪ್ರಾರ್ಥನೆಗೂ ತಡವಾಗಿ ಬರುವಂತಿಲ್ಲ. ಮನಬಂದಂತೆ ಶಾಲೆಗೆ ರಜೆ ಹಾಕುವಂತಿಲ್ಲ. ಪಾಠದ ಟಿಪ್ಪಣಿ ಪಾಠದ ಯೋಜನೆಯಿಲ್ಲದೆ ಪಾಠ ಪ್ರವಚನ ಮಾಡುವಂತಿಲ್ಲ. ಗೃಹಪಾಠಗಳನ್ನು ತಿದ್ದಬೇಕು. ಪೀರಿಯಡ್ ಬೆಲ್ ಆದ ತಕ್ಷಣ ತರಗತಿಗಳಿಗೆ ಹೋಗಬೇಕು. ತರಗತಿಯಲ್ಲಿ ಕಾಲಹರಣ ಮಾಡಬಾರದು. ಶಿಸ್ತಿನ ಸಿಪಾಯಿಯಂತೆ ಇವುಗಳೆಲ್ಲವನ್ನೂ ಉಸ್ತುವಾರಿ ವಹಿಸುತ್ತಾ ಕಾಲಕಾಲಕ್ಕೆ ಶಿಕ್ಷಕರಿಗೆ ಎಚ್ಚರಿಕೆ ಹಾಗೂ ಮಾರ್ಗದರ್ಶನಗಳನ್ನು ನೀಡುತ್ತಾ ಶಿಕ್ಷಕರಿಂದ ವಿದ್ಯಾರ್ಥಿಗಳಿಗೆ ಹೆಚ್ಚಿನ ಜ್ಞಾನ ಲಾಭ ಉಂಟಾಗುವಂತೆ ಮಾಡುತ್ತಿದ್ದರು. ಅದೆಷ್ಟೋ ಶಿಕ್ಷಕರು ಇವರ ಶಿಸ್ತಿನ ನಿಯಮಗಳಿಗೆ ಒಳಪಡಲಾರದೆ ಬೇರೆಡೆಗೆ ವರ್ಗಾವಣೆಗಳನ್ನು ಹಾಗೂ ನಿಯೋಜನೆಗಳನ್ನು ಮಾಡಿಸಿಕೊಂಡು ಹೋಗಿರುವುದನ್ನು ನಾವು ಕಂಡಿದ್ದೇವೆ. ಕೆಲವೊಮ್ಮೆ ಪ್ರಾಚಾರ್ಯರು ಹಾಗೂ ಶಿಕ್ಷಕರ ನಡುವೆ ಮಾತಿನ ಚಕಮುಖಿಯೂ ನಡೆಯುತ್ತಿತ್ತು. ಶಿಕ್ಷಕರು ಗುಂಪು ಕಟ್ಟಿಕೊಂಡು ವಾಗ್ವಾದಕ್ಕೆ ಇಳಿಯುತ್ತಿದ್ದರು. ಆದರೆ ಯಾವ ಮುಲಾಜಿಗೂ ಹಾಗೂ ರಾಜಿಗೂ ಪ್ರಾಚಾರ್ಯರು ಒಳಗಾಗುತ್ತಿರಲಿಲ್ಲ. ಶಿಕ್ಷಕರಲ್ಲಿ ಕರ್ತವ್ಯಪ್ರಜ್ಞೆ ಹಾಗೂ ಸಮಯ ಪ್ರಜ್ಞೆಯನ್ನು ಮೂಡಿಸುವುದೇ ಅವರ ಮುಖ್ಯ ಗುರಿಯಾಗಿರುತ್ತಿತ್ತು.

ಎಲ್ಲಕ್ಕಿಂತಲೂ ಮಿಗಿಲಾಗಿ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಕಲಾ ವಿಭಾಗದಲ್ಲಿ ಐಚ್ಛಿಕ ವಿಷಯವಾಗಿ ಶಿಕ್ಷಣ - 1 ಮತ್ತು ಶಿಕ್ಷಣ - 2 ವಿಶೇಷವಾಗಿ ತಂದು ಒದಗಿಸಿದ್ದರು. ಆಗ ಕೋಲಾರ ಜಿಲ್ಲೆಯಲ್ಲಿ ಬಾಗೇಪಲ್ಲಿ ಸರ್ಕಾರಿ ಪದವಿಪೂರ್ವ ಕಾಲೇಜು ಒಂದು ಮಾತ್ರ ಇಂತಹ ಸೌಲಭ್ಯವನ್ನು ಹೊಂದಿರುವ ಹೆಗ್ಗಳಿಕೆಯಾಗಿತ್ತು. ಪಿಯುಸಿಯಲ್ಲಿ ವಿದ್ಯಾರ್ಥಿಗಳು ಐಚ್ಛಿಕ ವಿಷಯವಾಗಿ ಶಿಕ್ಷಣ - 1 ಮತ್ತು ಶಿಕ್ಷಣ - 2ನ್ನು ಮಾಡಿ ಮುಗಿಸಿದಲ್ಲಿ ಶಿಕ್ಷಕರ ತರಬೇತಿ ಶಿಕ್ಷಣ ಮಾಡುವ ಅವಶ್ಯಕತೆಯಿರಲಿಲ್ಲ. ಪಿಯುಸಿ ಮುಗಿದ ತಕ್ಷಣ ಇಂತಹ ವಿದ್ಯಾರ್ಥಿಗಳಿಗೆ ಆರು ತಿಂಗಳ ವಿಶೇಷ ತರಬೇತಿ ಇರುತ್ತಿತ್ತು. ಇದಾದನಂತರ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಕೆಲಸ ನಿರ್ವಹಿಸಲು ಅರ್ಜಿ ಸಲ್ಲಿಸಬಹುದಾಗಿತ್ತು. ಅದೆಷ್ಟೋ ವಿದ್ಯಾರ್ಥಿಗಳು ಮದುವೆಯಾದವರು, ವಯಸ್ಸಾದವರು ಪಿಯುಸಿ ಶಿಕ್ಷಣಕ್ಕೆ ದಾಖಲಾದರು. ಅವರಲ್ಲಿ ಅನೇಕ ಮಂದಿ ಶಿಕ್ಷಕ ವೃತ್ತಿಯನ್ನು ಗಿಟ್ಟಿಸಿಕೊಂಡರು. ಮದುವೆಯಾಗಿ ಮಕ್ಕಳಾಗಿ ಪಿಯು ವಿಭಾಗಕ್ಕೆ ಸೇರಿಕೊಂಡು ಶಿಕ್ಷಕರಾಗಿರುವವರು ಇಂದಿಗೂ ಪ್ರಾಚಾರ್ಯ ನಾರಾಯಣಸ್ವಾಮಿಯವರನ್ನು



ಸ್ಮರಿಸಿಕೊಳ್ಳುತ್ತಾರೆ. ತಮಗೆ ಅನ್ನ ಕೊಟ್ಟ ತಂದೆಯೆಂದು ಗುಣಗಾನ ಮಾಡುತ್ತಾರೆ. ಅನೇಕ ಅಡ್ಡಿ ಆತಂಕಗಳ ನಡುವೆಯೂ ಅನುಕೂಲ ಮಾಡಿಕೊಟ್ಟಿದ್ದಾರೆ. ಈ ಕೋರ್ಸ್‌ಗೆ ನಿಯಮಗಳ ಪ್ರಕಾರ ವಿದ್ಯಾರ್ಥಿಗಳ ಆಯ್ಕೆಯನ್ನು ಅವರು ಗಳಿಸಿರುವ ಅಂಕಗಳ ಆಧಾರದ ಮೇಲೆ ಅತ್ಯಂತ ಪಾರದರ್ಶಕತೆಯಿಂದ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ. ಜಿಲ್ಲೆಯ ನಾನಾ ಮೂಲೆಗಳಿಂದ ಬಂದ ವಿದ್ಯಾರ್ಥಿಗಳಿಗೆ ನ್ಯಾಯವನ್ನು ಒದಗಿಸಿಕೊಟ್ಟಿದ್ದಾರೆ. ಈ ಬಗ್ಗೆ ಬಾಗೇಪಲ್ಲಿ ತಾಲ್ಲೂಕಿನ ವಿದ್ಯಾರ್ಥಿಗಳಿಗೆ ಅನ್ಯಾಯವಾಗುತ್ತಿದೆಯೆಂದು ರಾಜಕೀಯ ಮುಖಂಡರೊಡನೆ ವಾಗ್ವಾದಕ್ಕಿಳಿದಿದ್ದೂ ಉಂಟು. ಆದರೆ ಯಾವ ಒತ್ತಡಕ್ಕೂ ಅವರು ಒಳಗಾಗುತ್ತಿರಲಿಲ್ಲ.

ಶಾಲಾ ಪ್ರಾರಂಭಕ್ಕೆ 15 ದಿನ ಮುಂಚೆ ಆ ಸಾಲಿಗೆ ಕ್ಯಾಲೆಂಡರ್ ಆಫ್ ಈವೆಂಟ್ಸ್ ಸಿದ್ಧಪಡಿಸಿ ಅದರಂತೆ ಅಚ್ಚುಕಟ್ಟಾಗಿ ಶೈಕ್ಷಣಿಕ ಕಾರ್ಯಕ್ರಮಗಳ ಜೊತೆಗೆ ಸಾಂಸ್ಕೃತಿಕ ಮತ್ತು ಕ್ರೀಡಾ ಚಟುವಟಿಕೆಗಳನ್ನು ವಿದ್ಯಾರ್ಥಿಗಳ ಸರ್ವತೋಮುಖ ಅಭಿವೃದ್ಧಿಗಾಗಿ ನಡೆಸಿಕೊಂಡು ಹೋಗುತ್ತಿದ್ದರು. ವರ್ಷದಲ್ಲಿ ಎರಡು ಬಾರಿ ಪೋಷಕರ ದಿನಾಚರಣೆ ನಡೆಸಿ ವಿಶಿಷ್ಟವಾಗಿ ಸಮಾರಂಭ ನಡೆಸಿ ಪೋಷಕರ ಮೆಚ್ಚುಗೆಗೆ ಪಾತ್ರರಾಗಿದ್ದರು. ಪೋಷಕರಿಂದ ಧನ ಸಹಾಯ ಪಡೆದು ಬಡ ಮಕ್ಕಳ ವಿದ್ಯಾಭ್ಯಾಸಕ್ಕೆ, ಶಾಲಾಭಿವೃದ್ಧಿಗೆ ಉಪಯೋಗಿಸುತ್ತಿದ್ದರು.

ಪಿ.ಯು. ಮತ್ತು ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷೆಗಳ ಜೊತೆಗೆ ತರಗತಿಗಳ ಪರೀಕ್ಷೆಗಳನ್ನು ಅತ್ಯಂತ ಪಾರದರ್ಶಕತೆಯಿಂದ ನಡೆಸುತ್ತಿದ್ದರು. ಯಾವುದೇ ಅವ್ಯವಹಾರಕ್ಕೆ ಅವಕಾಶವಿರುತ್ತಿರಲಿಲ್ಲ. ವಿದ್ಯಾರ್ಥಿಗಳನ್ನು ಅವರ ಶೈಕ್ಷಣಿಕ ಗುಣಮಟ್ಟದಿಂದ ಅಳೆಯುತ್ತಿದ್ದರು. ಇಲ್ಲಿ ಜಾತಿ ಪ್ರಶ್ನೆಯೇ ಬರುತ್ತಿರಲಿಲ್ಲ. ಪಬ್ಲಿಕ್ ಪರೀಕ್ಷೆಗಳಲ್ಲಿ ಉತ್ತಮ ಫಲಿತಾಂಶ ಆ ಸಮಯದಲ್ಲಿ ಬರುತ್ತಿತ್ತು, ಇದಕ್ಕೆಲ್ಲಾ ಮುಖ್ಯ ಕಾರಣ ನಾರಾಯಣಸ್ವಾಮಿಯವರ ಉತ್ತಮ ಆಡಳಿತವೇ ಆಗಿತ್ತು. ಇಂತಹ ಉತ್ಕೃಷ್ಟ ವ್ಯಕ್ತಿಯನ್ನು ಆಡಳಿತದಲ್ಲಿ ಅನರ್ಘ್ಯರತ್ನವೆಂದರೆ ತಪ್ಪಾಗಲಾರದು.








# ನನ್ನನ್ನು ರೂಪಿಸಿದ ಶಿಲ್ಪಿ ಕೆ.ಎನ್.ಎಸ್.

– ವಿ. ಹನುಮಂತಪ್ಪ
ಸಿವಿಲ್ ನ್ಯಾಯಾಧೀಶರು, ಪಿರಿಯಾಪಟ್ಟಣ

ಸೃಷ್ಟಿಯಲ್ಲಿ ಮಾನವನು ತನ್ನ ಮೇಧಾಶಕ್ತಿಯಿಂದಾಗಿ ಇತರ ಜೀವಿಗಳಿಗಿಂತಲೂ ಭಿನ್ನನೆನಿಸಿಕೊಂಡು ಕಂಡಿದ್ದೆಲ್ಲವನ್ನೂ ಪಡೆದುಕೊಳ್ಳಬೇಕೆಂಬ ಪ್ರಯತ್ನದಲ್ಲಿ ತನ್ನ ಸ್ವಾರ್ಥಕ್ಕಾಗಿ ಎಲ್ಲವನ್ನೂ ಆಕ್ರಮಿಸಿಕೊಳ್ಳುತ್ತಾ ಸುಲಿಗೆ ಕೋರ ನೀತಿಯನ್ನು ಮೈಗೂಡಿಸಿಕೊಂಡಿದ್ದಾನೆ. ಸಮಾಜದಲ್ಲಿ ಕೆಲವೇ ಮಂದಿ ತಾವು ಇತರರಿಗಿಂತ ಶ್ರೇಷ್ಠರು ಮಿಕ್ಕವರೆಲ್ಲ ಕನಿಷ್ಠರೆಂಬ ಭಾವನೆಗೆ ಒಳಗಾಗಿ ಅನಿಷ್ಠ ಜಾತಿಪದ್ಧತಿಯನ್ನು ವೈಭವೀಕರಿಸುತ್ತಾ ಶೋಷಣೆಯನ್ನು ಮುಖ್ಯ ಅಸ್ತ್ರವನ್ನಾಗಿಸಿಕೊಂಡಿದ್ದಾರೆ. ಈ ಶೋಷಣೆಯು ಇಂದು ವ್ಯಕ್ತಿಗೆ ಮಾತ್ರ ಸೀಮಿತವಾಗದೆ, ದೇಶದ ಗಡಿಯಾಚೆಗೂ ವ್ಯಾಪಿಸಿ ಬಲಿಷ್ಠ ರಾಷ್ಟ್ರ ಕನಿಷ್ಠ ರಾಷ್ಟ್ರದ ಮೇಲೆ ಆಕ್ರಮಣ ನಡೆಸಿ ಅಲ್ಲಿನ ಸಂಪತ್ತನ್ನು ಲೂಟಿ ಮಾಡುವುದನ್ನು ಇಂದು ಅವ್ಯಾಹತವಾಗಿ ಕಾಣುತ್ತಿರುವ ಸಂಗತಿ.

ಈ ಶೋಷಣೆಯ ವಿರುದ್ಧ ವ್ಯಕ್ತಿಗತ ಹೋರಾಟಗಳು ಮಾತ್ರವಲ್ಲದೆ ಸ್ಥಳೀಯವಾಗಿ, ಪ್ರಾದೇಶಿಕವಾಗಿ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ದೌರ್ಜನ್ಯದ ವಿರುದ್ಧ ದನಿ ಎತ್ತಿ ದಮನಿತರ ಪರವಾಗಿ ಪ್ರಾಮಾಣಿಕ ಹೋರಾಟ ಮಾಡಿದ ವ್ಯಕ್ತಿಗಳು ಮತ್ತು ಸಂಘಟನೆಗಳು ತುಂಬಾ ಕಡಿಮೆ ಎನ್ನಬಹುದು. ಅಂತಹ ಕೆಲವೇ ವ್ಯಕ್ತಿಗಳಲ್ಲಿ ಕೆ. ನಾರಾಯಣಸ್ವಾಮಿರವರೂ ಒಬ್ಬರು ಎಂದರೆ ತಪ್ಪಾಗಲಾರದು. ಇವರ ಜೀವಮಾನ ಸಾಧನೆಯನ್ನು ಗುರ್ತಿಸಿ



ಕರ್ನಾಟಕ ಸರ್ಕಾರವು 2013 ನವೆಂಬರ್ 1 ರಂದು ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದು ನನ್ನೊಬ್ಬನಿಗಲ್ಲದೆ ನನ್ನಂತೆ ಜೀವನದಲ್ಲಿ ನೋವುಂಡು ಬೆಳೆದ ಎಷ್ಟೋ ಮಂದಿ ದಲಿತರು, ವಿದ್ಯಾರ್ಥಿ ಯುವ ಜನರು, ಬಡ ರೈತರು, ಪ್ರಜ್ಞಾವಂತರ ಪಾಲಿಗೆ ಸಂತಸದ ವಿಷಯವಾಗಿದೆ.

ನನ್ನ ಬದುಕನ್ನು ರೂಪಿಸಿಕೊಳ್ಳಲು, ಜೀವನದಲ್ಲಿ ನಾನೊಬ್ಬ ಪ್ರಜ್ಞಾವಂತನಾಗಿ, ನ್ಯಾಯವಾದಿಯಾಗಿ ಈಗ ನ್ಯಾಯಾಧೀಶನಾಗಿ ಬೆಳೆದು ಬಂದು ಒಂದು ಶಿಲ್ಪವಾಗಿ ರೂಪುಗೊಳಿಸಿದ ಶಿಲ್ಪಿಗಳಲ್ಲಿ ಕೆ.ಎನ್ನೆಸ್‌ರವರು ಪ್ರಮುಖರು. ಆ ಕಾರಣಕ್ಕಾಗಿ ಸಹಜವೆಂಬಂತೆ ರಾಜ್ಯೋತ್ಸವ ಪ್ರಶಸ್ತಿ ಬಂದ ಸುದ್ದಿಯನ್ನು ಮೊದಲಿಗೆ ಹಂಚಿಕೊಂಡಿದ್ದು ರಂಗಣ್ಣ (ಶ್ರೀರಂಗಾಚಾರ್) ರವರೊಂದಿಗೆ, ನಾವಿಬ್ಬರೂ ಸೇರಿ ಈ ಸಂತಸವನ್ನು ಸಂಭ್ರಮವನ್ನಾಗಿಸಲು, ಆ ಸಂಭ್ರಮವು ಗ್ರಾಮೀಣ ಪ್ರದೇಶದ ದಲಿತರು, ವಿದ್ಯಾರ್ಥಿ ಯುವ ಜನರು ಅವರ ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು ಹಬ್ಬವೆಂಬಂತೆ ಆಚರಿಸಬೇಕೆಂಬ ಬಯಕೆಯಿಂದ ಕಾರ್ಯಕ್ರಮವನ್ನು ಆಯೋಜಿಸಿದೆವು. ಇದಕ್ಕೆ ಸಹಕರಿಸಿ ಕಾರ್ಯಕ್ರಮದ ಯಶಸ್ಸಿಗೆ ದುಡಿದವರು ಗೌರಿಬಿದನೂರಿನ ಮೂಲ ದ.ಸಂ.ಸ. ಕಾರ್ಯಕರ್ತರಾದ ಸಿ.ಜಿ. ಗಂಗಪ್ಪ, ಲಚ್ಚಿ, ಪಿ. ನರಸಿಂಹಮೂರ್ತಿ, ಕೃಷ್ಣಪ್ಪ, ರಾಮಕೃಷ್ಣ ಮಾಸ್ತರ್ ಮತ್ತು ಇನ್ನಿತರರು, ಅಂತೂ ನಾವಂದುಕೊಂಡಂತೆ ದಿ. 21-11-2013 ರಂದು ನಡೆದ ಕೆಎನ್ನೆಸ್‌ರವರ ಸನ್ಮಾನ ಕಾರ್ಯಕ್ರಮ ಯಶಸ್ವಿಯಾಯಿತು.

ಕಾರ್ಯಕ್ರಮದ ನಂತರ K.N.S.ರವರೂ ಸೇರಿ ಎಲ್ಲಾ ಆತ್ಮೀಯರಿಗೆ ಊಟದ ವ್ಯವಸ್ಥೆಯನ್ನು ಕಲ್ಲೂಡಿಯ ನಮ್ಮ ಮನೆಯಲ್ಲಿ ಏರ್ಪಡಿಸಿದ್ದೆನು. ಊಟದ ನಂತರ ಹಿರಿಯರು ಆತ್ಮೀಯರಾದ ಡಾ|| ಕೆ.ಪಿ. ನಾರಾಯಣಪ್ಪರವರು ಈ ಹಿಂದೆಯೇ ಪ್ರಾರಂಭಿಸಿದ ಕೆಎನ್ನೆಸ್‌ರವರ 'ಅಭಿನಂದನಾ ಗ್ರಂಥ' ರಚನೆ ಬಗ್ಗೆ ಪ್ರಸ್ತಾಪಿಸಿದರು. ಅದಾದ ಬಳಿಕ ಗ್ರಂಥ ರಚನಾ ಕಾರ್ಯ ಚಟುವಟಿಕೆಗಳು ವೇಗ ಪಡೆದುಕೊಂಡು ಅಭಿನಂದನಾ ಗ್ರಂಥ ರಚನಾ ಸಮಿತಿ ರಚನೆಗೊಂಡಿತು. ಈ ಸಮಿತಿಯಲ್ಲಿ ನಾಡಿನಲ್ಲಿ ಪ್ರಗತಿಪರ ಚಿಂತನೆಗಳೊಂದಿಗೆ ಸೇವೆ ಸಲ್ಲಿಸುತ್ತಿರುವ ಕೆಲವೇ ಮಠಗಳಲ್ಲಿ ಒಂದಾದ ನಿಡುಮಾಮಿಡಿ ಸಂಸ್ಥಾನದ ಪೀಠಾಧ್ಯಕ್ಷರಾದ ಶ್ರೀ ವೀರಭದ್ರ ಚನ್ನಮಲ್ಲ ದೇಶೀಕೇಂದ್ರ ಮಹಾಸ್ವಾಮಿಗಳು ಅಧ್ಯಕ್ಷತೆ ವಹಿಸಿರುವುದು. ಅವರೊಂದಿಗೆ ಕೃಷಿ ವಿಶ್ವವಿದ್ಯಾನಿಲಯದ ನಿವೃತ್ತ ಉಪ ಕುಲಪತಿಗಳಾದ ಡಾ. ಬಿಸಲಯ್ಯನವರು, ಸಂಪಾದಕರಾಗಿ ಡಾ|| ಕೆ.ಪಿ. ನಾರಾಯಣಪ್ಪರವರು, ಕೆಎನ್ನೆಸ್‌ರವರ ಆತ್ಮೀಯ ಬಳಗದಲ್ಲಿ ಮುಖ್ಯರಾಗಿರುವ ವೇಣುಗೋಪಾಲ, ನಾಗರಾಜಪ್ಪ, ರಂಗಣ್ಣನವರು ಮತ್ತು ನಾನು ಸಹ ಸದಸ್ಯನಾಗಿರುವ

ಒಂದು ಸಮಿತಿ ರಚನೆಗೊಂಡಿತು. ಅದರಂತೆ ಸಮಿತಿಯ ಎಲ್ಲಾ ಸದಸ್ಯರು ಒಂದೊಂದು ಲೇಖನವನ್ನು ಬರೆಯಲೇಬೇಕೆಂದು ತೀರ್ಮಾನಿಸಲಾಯಿತು.

ಕೆಎನ್ನೆಸ್‌ರವರ ಕುರಿತು ಬರೆಯಲು ಎಲ್ಲಿಂದ ಪ್ರಾರಂಭಿಸಬೇಕೆನ್ನುವುದು ಪ್ರಯಾಸದ ಕೆಲಸ. ಏಕೆಂದರೆ ಸೂರ್ಯನಿಂದ ಹೊರಟ ಕಿರಣ ಸೌರಮಂಡಲದ ಎಲ್ಲಾ ಗ್ರಹಗಳ ಮೇಲೆ ಬೆಳಕು ಚೆಲ್ಲುವಂತೆ, ಇವರ ಕಾರ್ಯಕ್ರಮಗಳು ಹಲವು ಎಲ್ಲಾ ಕ್ಷೇತ್ರಗಳಿಗೆ ಹರಡಿಕೊಂಡಿವೆ. 'ಅಡುಮುಟ್ಟದ ಸೊಪ್ಪಿಲ್ಲ' ಎಂಬ ನಾಣ್ಣುಡಿಯಂತೆ ಇವರು ದುಡಿಯದ ಕ್ಷೇತ್ರಗಳಿಲ್ಲ. ಇವರು ದುಡಿದ ಕಾರ್ಯಕ್ಷೇತ್ರಗಳು ಹತ್ತು ಹಲವು, ಶಿಕ್ಷಣ, ಪರಿಸರ, ಕೃಷಿ, ಆರೋಗ್ಯ, ಮಹಿಳಾ ಮತ್ತು ಮಾನವ ಹಕ್ಕುಗಳು, ಸಾಮಾಜಿಕ ಹೋರಾಟಗಳು ಹೀಗೆ ಒಂದೆರಡಲ್ಲ. ಆದರೆ ಮೂಲತಃ ಕೆಎನ್ನೆಸ್‌ರವರು ನಮ್ಮೆಲ್ಲರಿಗೂ ಹತ್ತಿರವಾಗುವುದು ಅವರ ಮೂಲ ದಸಂಸದಲ್ಲಿ ತೊಡಗಿಸಿಕೊಂಡು ದಸಂಸದ ಎಲ್ಲಾ ಹೋರಾಟಗಳಲ್ಲಿ ನಮ್ಮೊಂದಿಗೆ ಬೆರೆತು ನಡೆದ ಶ್ರಮದಿಂದಾಗಿ.

ನನ್ನನ್ನು ಅವರಿಗೆ ಪರಿಚಯಿಸಿದ್ದು ರಂಗಣ್ಣನವರು. ಅವರು ಕೆಲಸ ಮಾಡುತ್ತಿದ್ದ ಸಂಘಟನೆಯೊಂದರ ಮಾಸಪತ್ರಿಕೆಯನ್ನು ಗೌರಿಬಿದನೂರು ಮತ್ತು ಸುತ್ತಮುತ್ತಲ ಹಳ್ಳಿಗಳ ಆಯ್ದ ಕೆಲವು ಓದುಗರಿಗೆ ಮತ್ತು ಒಕ್ಕೂಟಗಳಿಗೆ ತಲುಪಿಸುವ ಹೊಣೆಗಾರಿಕೆ ನನ್ನದಾಗಿತ್ತು. ಇಂತಹ ಹೊಣೆಯ ನಿರ್ವಹಣೆಗೆ ಹೊರಟಾಗ ನನಗೆ KNSರವರ ಪರಿಚಯವಾಯಿತು. ಮಾಸಿಕ ಪತ್ರಿಕೆಯಿಂದ ಪ್ರಾರಂಭಗೊಂಡ ಅವರೊಂದಿಗಿನ ಒಡನಾಟವು ಅವರ ಪ್ರಭಾವಕ್ಕೆ ಒಳಗಾಗುವಂತೆ ಮಾಡಿತು. ಕೆಎನ್ನೆಸ್‌ರವರ ಪ್ರೇರಣೆಯಿಂದ ನಾನು ಹತ್ತು ಹಲವು ಉತ್ತಮ ಪುಸ್ತಕಗಳನ್ನು ಓದುವಂತಾಯಿತು. ನಾನು KNSರವರ ಮನೆಗೆ ಹೋದಾಗ ನನಗಾಗಿ ಒಂದು ಪುಸ್ತಕ ತೆಗೆದಿಟ್ಟು, ಅದನ್ನು ಓದಲು ಕೊಡುತ್ತಿದ್ದರು ಮಾತ್ರವಲ್ಲ ಆ ಬಗ್ಗೆ ಚರ್ಚಿಸುತ್ತಿದ್ದರು. ಅಂತಹ ಕೆಲವು ಪುಸ್ತಕಗಳೆಂದರೆ ಅಂಬೇಡ್ಕರ್ ವಾಣಿ, ದಲಿತರ ಕೈಪಿಡಿ, ಆಂಧ್ರಪ್ರದೇಶದ ಮಾನವ ಹಕ್ಕು ಹೋರಾಟಗಾರ ಕನ್ನಾಭಿರಾವ್, ರೈತರ ಆತ್ಮಹತ್ಯೆಗಳು, ಜಾನ್‌ಪರ್ಕಿನ್ಸ್‌ರ ದಿ ಕನ್‌ಫೆಷನ್ ಆಫ್ ಅನ್ ಎಕನಾಮಿಕ್ ಹಿಟ್ ಮ್ಯಾನ್ (ಬಂಜಗೆರೆ ಜಯಪ್ರಕಾಶ್ ಅನುವಾದಿಸಿದ ಪಾಪ ನಿವೇದನೆ), ಜಮೀಲಾರವರ ಸೆಕ್ಸ್‌ವರ್ಕರೊಬ್ಬರ ಆತ್ಮಕತೆ, ಸಿರಿಧಾನ್ಯಗಳು, ಸುಭಾಷ್ ಪಾಳೇಕರ್‌ರವರ ಶೂನ್ಯ ಬಂಡವಾಳದ ಕೃಷಿ, ಒಂದು ಎಕರೆ ಕ್ರಾಂತಿ. ನಮ್ಮ ಮಕ್ಕಳಿಗೆ ನಾವೆಷ್ಟು ವಿಷ ಉಣಿಸುತ್ತಿದ್ದೇವೆ. ಪ್ರಜೆಗೆ ಪ್ರಭುತ್ವದ ಮಾಹಿತಿ ಹಕ್ಕು. ಹೀಗೆ ಹತ್ತು ಹಲವಾರು, ದಿನಪತ್ರಿಕೆಗಳಲ್ಲಿ ಉತ್ತಮ ಲೇಖನ ಪ್ರಕಟವಾದರೆ ಅವುಗಳನ್ನು ಮರೆಯದೆ ಓದಲು ತಿಳಿಸುತ್ತಿದ್ದರು.

ಅಲ್ಲದೆ ಅಂತಹ ಹಲವಾರು ಲೇಖನಗಳನ್ನು ಕೈಪಿಡಿ ರೂಪದಲ್ಲಿ ಮುದ್ರಿಸಿ ಉಚಿತವಾಗಿ ಹಂಚಿರುವ ಉದಾಹರಣೆಗಳಿವೆ. ಒಮ್ಮೆ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟಗೊಂಡ



"ದಲಿತ ನೌಕರರೇ ಚನ್ನಾಗಿದ್ದಿರಾ?" ಅನ್ನುವ ಲೇಖನದಲ್ಲಿ ಇಂದಿನ ದಲಿತ ನೌಕರಶಾಹಿಯು ಕೇವಲ ತಾವು ತಮ್ಮ ಕುಟುಂಬಕ್ಕೆ ಸೀಮಿತವಾಗಿ ತಮ್ಮ ವರ್ಗದ ಜನತೆಯನ್ನು ಮರೆತು ಸ್ವಾರ್ಥಿಗಳಾಗಿದ್ದಾರೆಂದು ಲೇಖಕರು ಮನ ಮುಟ್ಟುವಂತೆ ಬರೆದಿದ್ದರು. ಈ ಲೇಖನವನ್ನು ಓದಿದ KNSರವರು ಅದನ್ನು ಎಲ್ಲಾ ದಲಿತ ನೌಕರರು ಓದಬೇಕು. ಅದರಿಂದ ಕೆಲವರಾದರೂ ಬದಲಾವಣೆಯಾಗಲಿ ಎಂಬ ಸದುದ್ದೇಶದಿಂದ ಲೇಖನವನ್ನು ತಮ್ಮ ಸ್ವಂತ ಹಣಧಿಂದ ಕಿರುಪುಸ್ತಕವಾಗಿ ಮುದ್ರಣ ಮಾಡಿಸಿ, ವಿಳಾಸಗಳನ್ನು ಪಡೆದುಕೊಂಡು ತಾಲ್ಲೂಕಿನ ಪ್ರತಿಯೊಬ್ಬ ದಲಿತ ನೌಕರರಿಗೆ ಅಂಚೆ ಮೂಲಕ ಕಳುಹಿಸಿದರು. ಈ ಕಾರ್ಯದಲ್ಲಿ KNSರವರಿಗೆ ವೈಯುಕ್ತಿಕವಾಗಿ ಯಾವುದೇ ಆರ್ಥಿಕ ಲಾಭವಿಲ್ಲ. ಕೇವಲ ಸಮುದಾಯದ ಜನತೆ ಅದರಲ್ಲೂ ದಲಿತ ವರ್ಗದ ಪ್ರತಿನಿಧಿಗಳಾಗಿರುವ ದಲಿತ ನೌಕರರು ಕನಿಷ್ಟವಾಗಿಯಾದರೂ ಸ್ಪಂದಿಸಿದರೆ ತನ್ನಂತೆ ನೋವುಂಡ ತನ್ನವರಿಗೆ ನೆರವಾಗಲಿ ಎನ್ನುವ ಕಾಳಜಿ ಇತ್ತು ಇದನ್ನು ನೆನಪಿಸಿಕೊಂಡಾಗಲೆಲ್ಲಾ ಅಂಬೇಡ್ಕರ್ ಬಗ್ಗೆ ನಾವು ಹಾಡುತ್ತಿದ್ದಹಾಡು "ಮಲಗಿದವರ ಕೂರಿಸಿದೆ ನಿಲಿಸುವವರು ಯಾರೋ" ನಾಡ ನಡುವಿನಿಂದ ಸಿಡಿದ ನೋವಿನ ಕೂಗೆ ಆಕಾಶದ ಅಗಲಕ್ಕೂ ನಿಂತ ಆಲವೆ" ಎಂಬ ಸಾಲುಗಳು ನೆನಪಿಗೆ ಬರುತ್ತದೆ. ಒಂದು ಕಡೆ ತಮ್ಮವರನ್ನು ನಿರ್ಲಕ್ಷ್ಯಿಸಿರುವ ಅಥವಾ ಶೋಷಣೆ ಮಾಡುತ್ತಿರುವ ದಲಿತ ನೌಕರನಿಗೆ ಮತ್ತು ನಾಯಕರಿಗೆ ತಾವು ನಿಂತು ನೆರಳು ಪಡೆಯುತ್ತಿರುವ ಮರಕ್ಕೆ ಕೈಲಾದರೆ ಸ್ವಲ್ಪ ನೀರು ಹಾಕಿ. ಆದರೆ ಕೊಡಲಿ ಪೆಟ್ಟು ಹಾಕಬೇಡ ಎಂದು ಬೋಧಿಸುವಂತಿತ್ತು. ಅಲ್ಲದೆ ಕುವೆಂಪುರವರ ಕವಿತೆ 'ಸತ್ತಂತಿಹರನು ಬಡಿದೆಚ್ಚರಿಸು ಕಚ್ಚಾಡುವರನು ಕೂಡಿಸು ಒಲಿಸು, ಹೊಟ್ಟೆಯ ಕಿಚ್ಚಿಗೆ ಕಣ್ಣೀರು ಸುರಿಸು ಒಟ್ಟಿಗೆ ಬಾಳುವ ತೆರದಲಿ ಹರಸು" ಎನ್ನುವ ಕವಿತೆಯೂ ನೆನಪಿಗೆ ಬರುತ್ತಿತ್ತು. ದಲಿತ ವರ್ಗವನ್ನು ಬಂಡವಾಳವಾಗಿಸಿಕೊಂಡು ಲಾಭಗಳಿಸುವ ಮನೋಧರ್ಮವಿರುವ ಇಂದಿನ ಕೆಲವು ಸ್ವಾರ್ಥ ದಲಿತ ನಾಯಕರಿಗೆ ಅಂಬೇಡ್ಕರ್ ವಾಣಿ ಎಂದರೆ ತಪ್ಪಾಗಲಾರದು.

ನಾನು ಗೌರಿಬಿದನೂರಿನಲ್ಲಿ ವಕೀಲನಾಗಿ ಕೆಲಸ ಮಾಡುವಾಗ ವಾರದಲ್ಲಿ ಒಂದೆರಡು ಬಾರಿಯಾದರೂ KNSರವರ ಮನೆಗೆ ಭೇಟಿ ಕೊಡುತ್ತಿದ್ದೆನು. ಆ ಸಮಯದಲ್ಲಿ ಸಿ.ಜಿ. ಗಂಗಪ್ಪ, ಲಚ್ಚಿ, ಪಿ. ಮೂರ್ತಿರವರೂ ನನ್ನೊಟ್ಟಿಗೆ ಬರುತ್ತಿದ್ದರು. ಹಲವಾರು ಸಾರಿ ಮನೆಯಲ್ಲಿ KNSರವರ ಶ್ರೀಮತಿಯವರು ಇಲ್ಲದಿದ್ದಾಗ KNSರವರೇ ನಮಗೆ ಚಹಾ ಮಾಡಿಕೊಡುತ್ತಿದ್ದರು. ನನಗಂತೂ ಗ್ರೀನ್ ಟೀ ಕೊಟ್ಟು ಅವರೂ ಅದನ್ನೇ ಸೇವಿಸುತ್ತಿದ್ದರು. KNSರವರ ಕೊಠಡಿಯಲ್ಲಿ ಹಲವು ವಿಷಯಗಳ ಗ್ರಂಥಗಳು ಇದ್ದವು. ಪರಿಸರದ ಬಗೆಗಿನ ಪುಸ್ತಕಗಳು, ಆರೋಗ್ಯ, ಆಹಾರ, ವ್ಯವಸಾಯ, ಜಾಗತೀಕರಣ,



ಶೈಕ್ಷಣಿಕ ವಿಷಯಗಳಿಗೆ ಸಂಬಂಧಿಸಿದ ಬುದ್ಧ, ಬಸವ, ಅಂಬೇಡ್ಕರ್, ಜ್ಯೋತಿ ಬಾಪುಲೆ, ವಾಲ್ಮೀಕಿ, ಅರುಣರಾಯ್, ಸಾವಿತ್ರಿ ಬಾಯಿ ಫುಲೆ ಮುಂತಾದ ಚಿಂತಕರನ್ನು ಕುರಿತ ಅತ್ಯಮೂಲ್ಯವಾದ ಪುಸ್ತಕಗಳು ಮತ್ತು ಲೇಖನಗಳು ಇರುತ್ತಿದ್ದವು. ಅವರ ಕೊಠಡಿಯ ಮಂಚದ ಮೇಲೆ ಹರಡಿದ ಮಾಸಪತ್ರಿಕೆ, ದಿನಪತ್ರಿಕೆಗಳು, ಗೋಡೆಯ ಮೇಲೆ ನೇತು ಹಾಕಿದ್ದ ಪ್ರಶಸ್ತಿ ಫಲಕಗಳು, ಸ್ಮರಣಿಕೆಗಳು, ಅವರ ಕೊಠಡಿಯನ್ನು ಆಕರ್ಷಣೀಯವಾಗಿಸಿದ್ದವು. ಅವರ ಕೊಠಡಿಯೇ ಒಂದು ಗ್ರಂಥಾಲಯ, ಆ ಕೊಠಡಿಯಲ್ಲಿ ಕುಳಿತು ಮಾತಾಡಲು ಪ್ರಾರಂಭಿಸಿದರೆ ಸಮಯ ಕಳೆಯುತ್ತಿದ್ದುದೇ ಅರಿವಾಗುತ್ತಿರಲಿಲ್ಲ. KNSರವರ ಮಾತು ಎಲ್ಲಿ ಪ್ರಾರಂಭವಾಗಿ ಯಾವ ವಿಷಯದಲ್ಲಿ ಮುಕ್ತಾಯವಾಗುತ್ತಿತ್ತೋ ಹೇಳಲಾಗುತ್ತಿರಲಿಲ್ಲ. ನನಗೆ ದ.ಸಂ.ಸ.ದ ಪರಿಚಯ ತೊಂಬತ್ತರ ದಶಕದ ನಂತರ ಆಗಿದ್ದು, ಅದಕ್ಕೂ ಮೊದಲು ಪ್ರಾರಂಭದ ದಿನಗಳಲ್ಲಿ ಸಂಘಟನೆ ಕಟ್ಟಿದ ವಿಧಾನ, ಕಾರ್ಯಕರ್ತರ ಬದ್ಧತೆ, ಹಲವಾರು ಪೂರ್ಣಪ್ರಮಾಣದ ಕಾರ್ಯಕರ್ತರು ತಮ್ಮ ಓದಿಗೆ ತಿಲಾಂಜಲಿಯಿಟ್ಟು ಸಂಘಟನೆಯನ್ನೇ ತಮ್ಮ ಉಸಿರಾಗಿಸಿಕೊಂಡು ದುಡಿದ ಫಲದಿಂದಾಗಿ ದಲಿತರ ಬದುಕಿನಲ್ಲಿ ಆಗಿರುವ ಬದಲಾವಣೆ, ಸರ್ಕಾರದ ಅಭಿವೃದ್ಧಿ ಕಾರ್ಯಗಳು, ಕಾರ್ಯಕರ್ತರ ಬೌದ್ಧಿಕ ಬೆಳವಣಿಗೆಗೆ ಆಯೋಜಿಸುತ್ತಿದ್ದ ವಿಚಾರ ಸಂಕಿರಣಗಳು ನಾಗಸಂದ್ರ ಭೂ ಹೋರಾಟ... ಆಂಧ್ರದ ಪ್ರಜಾ ಚಳವಳಿಗಳ ಪ್ರಭಾವ... ಹೀಗೆ ಅವರ ಮಾತುಗಳನ್ನು ಕೇಳುತ್ತಿದ್ದರೆ ಅವರನ್ನು ಬಿಟ್ಟುಬರಲು ಮನಸ್ಸೇ ಆಗುತ್ತಿರಲಿಲ್ಲ. ಬದಲಿಗೆ ಅಧ್ಯಯನದ ಹಸಿವು ಹೆಚ್ಚಾಗುತ್ತಿತ್ತು.

KNSರವರು ನನಗಾಗಿ ನೀಡಿದ ಪುಸ್ತಕ ಮಾನವ ಹಕ್ಕುಗಳ ಹೋರಾಟಗಾರ ಹಾಗೂ ವಕೀಲರಾದ K.G. ಕನ್ನಾಬಿರಾನ್‌ರವರ ಜೀವನ ಚರಿತ್ರೆಯನ್ನು ಓದಿದ ನಂತರ ವಕೀಲ ವೃತ್ತಿ ಎಂದರೆ ಕೇವಲ ಹಣಗಳಿಸುವ ಉದ್ದಿಮೆ ಅಲ್ಲ. ನೊಂದ ಜನತೆಗೆ ನ್ಯಾಯ ದೊರಕಿಸಿಕೊಡುವುದು ಮತ್ತು ಪ್ರಾಮಾಣಿಕನಾಗಿ ಸೇವೆ ಸಲ್ಲಿಸುವುದೆಂದು ಅರಿತು ನ್ಯಾಯಾಲಯದಲ್ಲಿ ಪ್ರಕರಣ ನಡೆಸುವುದರ ಜೊತೆಗೆ, ಕಾನೂನು ಸೇವಾ ಪ್ರಾಧಿಕಾರದ ಪ್ರತಿಯೊಂದು ಕಾರ್ಯಕ್ರಮಗಳಲ್ಲೂ ಪಾಲ್ಗೊಂಡು ನೊಂದ ಜನತೆಗೆ ಕಾನೂನು ಅರಿವು ಮೂಡಿಸುವುದರೊಂದಿಗೆ ಸಾಕಷ್ಟು ಪ್ರಕರಣಗಳಲ್ಲಿ ಉಚಿತ ಕಾನೂನು ನೆರವು ನೀಡಿ ಪ್ರಕರಣ ನಡೆಸುತ್ತಿದ್ದೇನು. ದ.ಸಂ.ಸ.ದ ಹಳ್ಳಿಗಳಿಗೆ ಹೋಗೋಣ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದು ಕಲಾ ಮಂಡಳಿ ಹಾಡುಗಳನ್ನು ಹಾಡುವ ಮೂಲಕ ದಲಿತ ಜನಾಂಗದಲ್ಲಿ ಜಾಗೃತಿ ಮೂಡಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದೇನು. ನಾನು ಹೀಗೆ ಕಾರ್ಯನಿರ್ವಹಿಸುವುದರ ಹಿಂದೆ KNSರವರು ನನ್ನ ಮೇಲೆ ಬೀರಿದ ಪ್ರಭಾವದ ಛಾಯೆ



ಅವಗಿವೆ. ಹಳ್ಳಿಗಳಲ್ಲಿ ಆಯೋಜಿಸುತ್ತಿದ್ದ ಕಾರ್ಯಕ್ರಮಗಳಿಗೆ ಬಗ್ಗೆ KNSರವರೇ ಪ್ರಮುಖ ಭಾಷಣಕಾರರಾಗಿರುತ್ತಿದ್ದರು.

ತಾವು Class one officer ಆಗಿ ನಿವೃತ್ತಿ ಹೊಂದಿದ್ದರೂ ಸಹ ಯಾವುದೇ ಗತ್ತು, ಬಿಗುಮಾನ ಇಲ್ಲದೆ ಕಾಲೋನಿಗಳ ಬಡಜನತೆಯೊಂದಿಗೆ ಬೆರೆತು ಅವರ ನೋವು ನಲಿವಿನಲ್ಲಿ ಪಾಲ್ಗೊಳ್ಳುತ್ತಿದ್ದರು. ಅವರ ಈ ಸೇವೆ ನನ್ನಲ್ಲಿ ಆಲೋಚನ ತರಂಗಗಳನ್ನು ಮೂಡಿಸಿತು. ನಾನೊಬ್ಬ ವಕೀಲನಾದರೂ ನನ್ನ ಸೇವಾಕ್ಷೇತ್ರ ಕೇವಲ ನಾಲ್ಕು ಗೋಡೆ ಮಧ್ಯದ ಕೋರ್ಟಿಗಿಂತಲೂ ಸಮಾಜದಲ್ಲಿ ತುಳಿತಕ್ಕೊಳಪಟ್ಟ ಜನರ ಮಧ್ಯೆ ದುಡಿಯುವುದು ಆಗಿದೆ ಎಂದು ತೀರ್ಮಾನಿಸುವಂತೆ ಮಾಡಿತು. ರಾತ್ರಿ ಸಮಯದಲ್ಲಿ 'ಹಳ್ಳಿಗಳಿಗೆ ಹೋಗೋಣ' ಕಾರ್ಯಕ್ರಮಗಳಿಗೆ KNSರವರೊಂದಿಗೆ ಹಳ್ಳಿಗಳಿಗೆ ಹೋಗುತ್ತಿದ್ದೆವು. ಇದರಿಂದಾಗಿ ನನ್ನ ವಕೀಲ ವೃತ್ತಿಯಲ್ಲಿಯಲ್ಲೂ ನಾನು ಬೆಳವಣಿಗೆ ಹೊಂದಲು ಸಹಕಾರಿಯಾಯಿತು.

ದ.ಸಂ.ಸ.ದ ಕಾರ್ಯಕ್ರಮಗಳಿಗೆ ಅವಶ್ಯಕತೆಯಿದ್ದ ಕರಪತ್ರ, ಬ್ಯಾನರ್ ತಯಾರಿಸಲು ಹಳ್ಳಿಗಳಿಂದ ಕಾರ್ಯಕರ್ತರನ್ನು ಕರೆತರಲು ವಾಹನಗಳಿಗೆ ತಗಲುವ ವೆಚ್ಚಕ್ಕೆ ಸಂಘಟನೆಯ ಹಿತೈಷಿಗಳಿಂದ ನೌಕರರಿಂದ ವಂತಿಗೆ ಪಡೆದುಕೊಳ್ಳುತ್ತಿದ್ದೆವು. ಹಲವಾರು ಸಂದರ್ಭಗಳಲ್ಲಿ ಹಣಕಾಸಿನ ಮುಗ್ಗಟ್ಟು ಉಂಟಾದಾಗ KNSರವರೇ ಕರಪತ್ರಗಳಿಗೆ ತಗಲುವ ವೆಚ್ಚ ಭರಿಸುತ್ತಿದ್ದರು. ವಾಹನಗಳಿಗೆ ತಗಲುವ ಡೀಸೆಲ್ ಖರ್ಚಿಗೆ ತಗಲುವ ವೆಚ್ಚದಲ್ಲಿ ನಾನು ಸ್ವಲ್ಪ ಭರಿಸುತ್ತಿದ್ದೆನು. ಇದಕ್ಕಾಗಿ ನಾನು ನನ್ನ ವೃತ್ತಿ ಬಾಂಧವರಿಗೆ ಸ್ನೇಹಿತರಿಂದ ಕೊಡಿಸುತ್ತಿದ್ದೆ. V.H. ಹಣ ಕೇಳಿದರೆ ಅದು ಒಳ್ಳೆಯ ಉದ್ದೇಶಕ್ಕಾಗಿಯೇ ಇರುತ್ತದೆ ಎನ್ನುವ ನಂಬಿಕೆ ಅವರಿಗಿತ್ತು.

ಕಾರ್ಯಕ್ರಮಗಳಲ್ಲಿ ಜನರನ್ನು ಸೇರಿಸಿ ಅಧಿಕಾರಿಗಳಿಗೆ ತೋರಿಸಿ ಮತ್ತು ಹೆದರಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುವ ನಾಯಕರಿರುವ ಈ ದಿನಗಳಲ್ಲಿ ತಮ್ಮ ಕೈಯಿಂದ ಹಣ ವ್ಯಯ ಮಾಡಿಕೊಂಡು ಸೇವೆ ಸಲ್ಲಿಸುವ KNSರವರು ನಿಸ್ವಾರ್ಥ ಸೇವೆ ನನ್ನಂತಹ ಎಷ್ಟೋ ಜನರಿಗೆ ಸ್ಫೂರ್ತಿ ನೀಡಿತು.

### ಕೂಲಿಗೆ ಬಂದರು

ದಸಂಸ ರೂಪಿಸುವ ಕಾರ್ಯಕ್ರಮಗಳಿಗೆ ಪ್ರತಿ ಬಾರಿಯು ಬೇರೆಯವರನ್ನು ಅವಲಂಬಿಸುವುದು ಸರಿಯಲ್ಲ. ಏಕೆಂದರೆ ಇಂದಿನ ದಿನಗಳಲ್ಲಿ ದಸಂಸ ಕರಪತ್ರ ಸರ್ಕಾರಿ ಕಛೇರಿಗಳಲ್ಲಿ ಹಣ ಸುಲಿಗೆ ಮಾಡುವ ಅಸ್ತ್ರವಾಗಿದೆ ಎಂದು ಭಾವಿಸಿದ ಅವರು ಹಣ ಕ್ರೂಢೀಕರಿಸುವ ಬಗ್ಗೆ ಯೋಚಿಸಿ ದಸಂಸ ಕಾರ್ಯಕರ್ತರು ತಿಂಗಳಿಗೊಂದು ದಿನ

ಸಂಘಟನೆಗೆ ದುಡಿಯುವುದು, ಆ ಒಂದು ದಿನದ ದುಡಿಮೆಯನ್ನು ಸಂಘಟನೆಯ ಕಾರ್ಯಗಳಿಗೆ ವಿನಿಯೋಗಿಸಿಕೊಳ್ಳುವುದೆಂದು ಹೇಳಿ ಅದಕ್ಕಾಗಿ ರೂಪಿಸಿದ ಯೋಜನೆಯಂತೆ ಪ್ರಾಯೋಗಿಕವಾಗಿ ನಾನು, ಸಿ.ಜಿ., ಹೊಸೂರು ಬಾಲಪ್ಪ, ನಗರಗೆರೆ ಲಕ್ಷ್ಮೀನಾರಾಯಣ (ಲಚ್ಚಿ), ಪಿ. ನರಸಿಂಹಮೂರ್ತಿ, ಮಾಸ್ತರರಾದ ಕೃಷ್ಣಪ್ಪ, ರಾಮಕೃಷ್ಣರವರು, ಹೊಸೂರಿನ ಕೆರೆಯಲ್ಲಿ ಇಡಗೂರು ಸೋಮಯ್ಯ ಹಾಕಿಸುತ್ತಿದ್ದ ಇಟ್ಟಿಗೆ ಗೂಡಿನ ಕೆಲಸಕ್ಕೆ ಹೋಗಿದ್ದೆವು. ಆ ದಿನ KNSರವರೂ ನಮ್ಮೊಟ್ಟಿಗೆ ಕೂಲಿ ಮಾಡಿದರು. ನಿವೃತ್ತಿ ಜೀವನದಲ್ಲಿ ಸರ್ಕಾರದಿಂದ ಬರುವ ಪಿಂಚಣಿ ಪಡೆದು ಮಕ್ಕಳು ಮೊಮ್ಮಕ್ಕಳೊಂದಿಗೆ ನೆಮ್ಮದಿಯ ಜೀವನ ನಡೆಸುವ ಎಷ್ಟು ಜನರನ್ನು ನಾನು ನೋಡಿದ್ದೇನೆ. ನಿವೃತ್ತಿ ನೌಕರರಾಗಿರುವ KNSರವರು ಸಹ ಹಾಗೆ ಇರದೆ ನಮ್ಮೊಂದಿಗೆ ಆ ಇಳಿ ವಯಸ್ಸಿನಲ್ಲಿ ಕೂಲಿಗೆ ಬಂದರು. ಹೀಗೆ ಬಂದ ಅವರಲ್ಲಿ ನಮಗೆ ಒಬ್ಬ ಶ್ರಮಜೀವಿ ಒಬ್ಬ ನಾಯಕ, ಒಬ್ಬ ಮಾರ್ಗದರ್ಶಕರು ಕಾಣಿಸಿದರು. ಸಕಲ ಸುಖ ಸೌಕರ್ಯದ ಸುಪ್ಪತ್ತಿಗೆಯ ಜೀವನ ತ್ಯಜಿಸಿ ಸಾಮಾನ್ಯ ಮನುಷ್ಯನ ತುಡಿತಕ್ಕೆ ನೋವಿಗೆ ಪರಿಹಾರ ಹುಡುಕಲು ಅರಮನೆ ಬಿಟ್ಟು ಬಂದ ಸಾಮಾನ್ಯನಲ್ಲಿ ಸಾಮಾನ್ಯನಾದ ಬುದ್ಧನಂತೆ ಕಂಡರು. ಆ ಸಮಯದಲ್ಲಿ ನಾನು ಒಬ್ಬ ವಕೀಲನೆನ್ನುವುದನ್ನು ಮರೆತು ಅವರೊಂದಿಗೆ ಕೆಲಸದಲ್ಲಿ ತೊಡಗಿಸಿಕೊಂಡಿದ್ದೆನು. ಇಂದು ಎಷ್ಟೋ ಜನ ನಾಯಕರೆನಿಸಿಕೊಂಡವರು ವೇದಿಕೆಯಲ್ಲಿ ಜನಪರ ಭಾಷಣ ಬಿಗಿದು ರಾತ್ರಿ ಬಾರುಗಳಲ್ಲಿ ಮಿಂದು ಮಾತಿಗೂ ಕೃತಿಗೂ ಸಂಬಂಧವಿಲ್ಲದಂತೆ ವರ್ತಿಸುತ್ತಿರುವುದನ್ನು ನಾನು ನೋಡಿದ್ದೇನೆ. ಅಂತಹ ನಾಯಕರು KNSರವರ ಇಂತಹ ನಿಸ್ವಾರ್ಥ ಮನೋಭಾವನೆಯನ್ನು ಕಂಡು ಆತ್ಮ ವಿಮರ್ಶೆ ಮಾಡಿಕೊಳ್ಳಬೇಕು.

ಕೆಎನ್ನೆಸ್‌ರವರಿಗೆ ವೈಯುಕ್ತಿಕವಾಗಿಯಾಗಲೀ, ಕೌಟುಂಬಿಕವಾಗಿಯಾಗಲಿ, ಎಲ್ಲಾ ಸವಲತ್ತುಗಳಿವೆ. ಉತ್ತಮ ಪಿಂಚಣಿ ಪಡೆಯುತ್ತಿದ್ದಾರೆ. ಬ್ಯಾಂಕ್ ನೌಕರಿಯಲ್ಲಿರುವ ಮಗಳು, ಆರೋಗ್ಯ ನೋಡಿಕೊಳ್ಳುವ ಮಡದಿ, ಒಳ್ಳೆ ಮನೆ, ತಮಗೇನಾದರೂ ತೊಂದರೆ ಆಗಿದೆ ಎಂದು ಫೋನ್ ಕರೆ ಮಾಡಿದರೆ ಸಾಕು ಸಹಾಯ ಸಹಕಾರ ಹಸ್ತ ಚಾಚಲು ಧಾವಿಸುವ ಅಪಾರ ಬಂಧು ಬಳಗ, ಉತ್ತಮ ಸ್ಥಾನದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಪಾರ ಶಿಷ್ಯ ವೃಂದವಿದ್ದರೂ ಯಾರಿಂದಲೂ ತಮಗಾಗಿ ಸಹಾಯ ಬೇಡಬೇಕೆಂದು ಎಂದೂ ಅಂದುಕೊಂಡವರಲ್ಲ. ಬದಲಿಗೆ ತಮ್ಮ ಶಿಷ್ಯರಿಗೆ, ಹಿತೈಷಿಗಳಿಗೆ, ಒಡನಾಡಿಗಳಿಗೆನಾದರೂ ತಮ್ಮಿಂದಾಗಲೀ ತನಗೆ ಪರಿಚಯವಿರುವುದರಿಂದ ಸಹಾಯ ವಾಗುತ್ತದೆಂದರೆ, ಸಮಯದ ಪರಿವಿಲ್ಲದೆ, ಆರೋಗ್ಯದ ಬಗ್ಗೆ ತಲೆಕೆಡಿಸಿಕೊಳ್ಳದೆ ತಮ್ಮದೇ ಖರ್ಚಿನಲ್ಲಿ ಸಂಬಂಧಪಟ್ಟವರನ್ನು ಕರೆದುಕೊಂಡು ಹೋಗಿ ಆಸಕ್ತಿಯಿಂದ ಕೆಲಸ ಮಾಡಿ ಎಷ್ಟೋ



ಜನರಿಗೆ, ಪ್ರತಿಭಾವಂತರಿಗೆ ಸೂಕ್ತ ಮತ್ತು ಸಮಂಜಸ ಕೆಲಸ ಕೊಡಿಸಿರುವುದನ್ನು ಮರೆಯುವಂತಿಲ್ಲ. ಅಂತಹ ಸೇವೆ ಪಡೆದ ವ್ಯಕ್ತಿಗಳಿಂದ ಯಾವುದೇ ರೀತಿಯ ಪ್ರತಿಫಲ ನಿರೀಕ್ಷಿಸಿದವರಲ್ಲ. ನನ್ನಮಟ್ಟಿಗೆ ಹೇಳಬೇಕೆಂದರೆ ನಾನು ನಾಲ್ಕೈದು ವರ್ಷ ವಕೀಲನಾಗಿ ಸೇವೆ ಸಲ್ಲಿಸಿದರೂ ಕಾಲ್ನಡಿಗೆಯಲ್ಲಿಯೇ ಓಡಾಡುತ್ತಿದ್ದೆ. ಯಾವುದೆ ಕಛೇರಿ, ಪೊಲೀಸ್ ಠಾಣೆಗೆ ಹೋಗಬೇಕಾದರೆ ಬೇರೆಯ ದ್ವಿಚಕ್ರವಾಹನ ಎರವಲು ತೆಗೆದುಕೊಂಡು ಹೋಗಿದ್ದಕ್ಕೆ KNSರವರ ಸಂಬಂಧಿಕರೊಬ್ಬರ ಎಂ.ವಿ.ಸಿ. ಕೇಸನ್ನು ಗೆದ್ದುಕೊಟ್ಟಾಗ ನಾನು ವಕೀಲ ಶುಲ್ಕ ಬೇಡವೆಂದರೂ ನನ್ನ ಅವಶ್ಯಕತೆ ಗುರುತಿಸಿ ಒತ್ತಾಯ ಮಾಡಿ ಒಂದು ಹಳೆಯ ದ್ವಿಚಕ್ರವಾಹನ ತೆಗೆದುಕೊಳ್ಳಲು ಸಹಕರಿಸಿದರು.

ಅಲ್ಲದೆ KNSರವರ ಪ್ರಭಾವದಿಂದ ನಿರಂತರ ಅಧ್ಯಯನದಿಂದ 2007ರಲ್ಲಿ ನಾನು ಸಿವಿಲ್ ನ್ಯಾಯಾಧೀಶನಾಗಿ ನೇಮಕಗೊಂಡ ವಿಷಯ ತಿಳಿದು ಹರ್ಷಗೊಂಡ KNSರವರು ನಮ್ಮ ಎಲ್ಲಾ ಸಂಗಡಿಗರನ್ನು ಸೇರಿಸಿ, ತಮ್ಮದೇ ಖರ್ಚಿನಲ್ಲಿ ಔತಣಕೂಟ ಏರ್ಪಡಿಸಿದರು. ಮಾತ್ರವಲ್ಲ ಸಮಾನ ಮನಸ್ಕರನ್ನೆಲ್ಲಾ ಸೇರಿಸಿ ಅಭಿನಂದನಾ ಕಾರ್ಯಕ್ರಮ ಆಯೋಜಿಸಿದರು. ವಿಶೇಷವಾಗಿ ಹಾಸ್ಟಲ್ ಮಕ್ಕಳಿಗೆ ನನ್ನನ್ನೇ ಉದಾಹರಣೆಯಾಗಿ ನೀಡಿ ಉತ್ತಮವಾಗಿ ಅಧ್ಯಯನ ಮಾಡುವಂತೆ ಪ್ರೋತ್ಸಾಹಿಸಿದರು. ಆ ಸಂದರ್ಭದಲ್ಲಿ 1993ರಲ್ಲಿ ನನ್ನಿಂದ ದೂರವಾದ ನನ್ನ ತಂದೆ ನೆನಪಾಯಿತು. ನಾನು ವಕೀಲನಾಗಿ ನ್ಯಾಯಾಧೀಶನಾಗಿ ಅನೇಕ ಪ್ರಕರಣಗಳನ್ನು ನೋಡಿದ್ದೇನೆ. ಒಡಹುಟ್ಟಿದ ಸಹೋದರರು, ಜನ್ಮಕೊಟ್ಟ ತಂದೆ ತಾಯಿಗಳ ಮೇಲೆ ಆಸ್ತಿಗಾಗಿ ದಾವೆಗಳು ಹಾಕಿರುವುದು, ಕೊಲೆ ಮಾಡಿರುವುದು. ಆದರೆ ಕೇವಲ ವೈಚಾರಿಕ ಸಂಬಂಧ ಹೊಂದಿದ KNS ನನ್ನ ಬಗ್ಗೆ ಆಡಿದ ಎರಡು ಉತ್ತಮ ನುಡಿಗಳು ತುಳಿತಕ್ಕೊಳಪಟ್ಟ ಜನರ ಸೇವೆ ಮಾಡಲು ನನ್ನನ್ನು ಸದಾ ಎಚ್ಚರವಾಗಿರುವಂತೆ ಮಾಡಿವೆ.

ನಾನು ನ್ಯಾಯಾಧೀಶನಾಗಿ ಸೇವೆ ಸಲ್ಲಿಸುವಾಗ ಕೆಲಸದ ಒತ್ತಡದಿಂದಾಗಿ ಮಧುಮೇಹಕ್ಕೆ ತುತ್ತಾದಾಗ ತುಂಬಾ ಆತಂಕಗೊಂಡು ಕೆಲಸ ತೊರೆಯಬೇಕೆಂದು ನಿರ್ಧರಿಸಿದ್ದೆ ಆಗ ರಂಗಣ್ಣ KNSರವರನ್ನು ಸಂಪರ್ಕಿಸಿ ಸಮಾಲೋಚಿಸಿದೆ. ಆಗ KNSರವರು ತುಂಬಾ ಧೈರ್ಯ ತುಂಬಿದರು. ತಾವು ಸಹ ಸುಮಾರು ವರ್ಷಗಳಿಂದ ಮಧುಮೇಹದಿಂದ ಬಳಲಿದರೂ, ಹೃದಯ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡರೂ ಸಹ ಸಕ್ರಿಯವಾಗಿ ಸೇವೆ ಸಲ್ಲಿಸಿರುವುದು ಹಾಗೂ ಸಂಘಟನೆಯಲ್ಲಿ ಸೇವೆ ಸಲ್ಲಿಸಿದ್ದನ್ನು ವಿವರಿಸಿದರು. ಅಲ್ಲದೆ ಸರ್ಕಾರಿ ಸೇವೆ ಕೆಲವರಿಗೆ ಸಿಕ್ಕುವ ಅವಕಾಶ ಅದನ್ನು ಪ್ರಾಮಾಣಿಕವಾಗಿ ನಿರ್ವಹಿಸುವುದರೊಂದಿಗೆ ಕೆಲವು ಮಾರ್ಗ ಸೂಚಿಗಳನ್ನು

ಪಾಲಿಸುವುದರಿಂದ ಆರೋಗ್ಯ ಸುಧಾರಿಸುವುದಲ್ಲದೆ ಉತ್ತಮ ಸೇವೆ ಸಲ್ಲಿಸಲು ಅನುಕೂಲವಾಗುತ್ತದೆಂದು ಪ್ರೋತ್ಸಾಹಿಸಿದರು. ಅಲ್ಲದೆ ಕನಿಷ್ಟ ವ್ಯಾಯಾಮ, ಉತ್ತಮ ಆಹಾರ, ಪ್ರಾಣಾಯಾಮವು ಮನಸ್ಸಿನ ಒತ್ತಡ ಕಡಿಮೆ ಮಾಡುತ್ತವೆಂದು ತಿಳಿಸಿದ ಮೇರೆಗೆ ಆ ಸೂತ್ರಗಳನ್ನು ಪಾಲಿಸಿದ್ದರಿಂದ ಇಂದಿಗೂ ಮಧುಮೇಹ ಹತೋಟಿಯಲ್ಲಿದೆ.

## ಹಲವು ಹೋರಾಟಗಳು

ಮುಪ್ಪು ದಣಿವು ದೇಹಕ್ಕೆ ಹೊರತು ಮನಸ್ಸಿಗಲ್ಲವೆಂಬ ನುಡಿ KNSರವರ ವಿಷಯದಲ್ಲಿ ಅಕ್ಷರಶಃ ಸತ್ಯವಾಗಿದೆ. ಅವರು ಆಯೋಜಿಸಿದ ಬಹುತೇಕ ಕಾರ್ಯಕ್ರಮಗಳಲ್ಲಿ ನಾನು ಪಾಲ್ಗೊಂಡಿದ್ದೆ. ರೈತರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಸುಭಾಷ್ ಪಾಳೆಕರ್‌ರವರ ಶೂನ್ಯ ಬಂಡವಾಳದ ಕೃಷಿ ಒಂದು ಎಕರೆಯಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರು ಹೇಗೆ ವಿವಿಧ ಬೆಳೆ ಬೆಳೆದು ನೆಮ್ಮದಿ ಜೀವನ ನಡೆಸಬಹುದು, ಸಿರಿಧಾನ್ಯಗಳ ಅವಶ್ಯಕತೆ ಮಳೆ ನೀರು ಕೊಯ್ಲು, ಪ್ರತಿಭಾ ಪುರಸ್ಕಾರ, ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗೆ ಪೋಷಕರಿಗೆ ನೀಡುವ ಮಾರ್ಗಸೂಚಿ, ಮಕ್ಕಳಿಗೆ ನೀಡಬೇಕಾದ ಪೋಷಕಾಂಶ ಆಹಾರ, ಕೃಷಿ ಕಾರ್ಮಿಕರಿಗೆ ಕುರಿ, ಕೋಳಿ ಸಾಕಾಣಿಕೆ ಇತ್ಯಾದಿಗಳ ಬಗ್ಗೆ ಆಯೋಜಿಸಿದ ವಿಚಾರ ಸಂಕಿರಣ, ಕಾರ್ಯಕ್ರಮಗಳು, ಇಂತಹ ಪ್ರಮುಖ ಕಾರ್ಯಕ್ರಮಗಳಲ್ಲಿ ಗೌರಿಬಿದನೂರಿನ ಉತ್ತರ ಪಿನಾಕಿನಿ ನದಿಯಿಂದ ಅವ್ಯಾಹತವಾಗಿ ನಡೆಯುತ್ತಿದ್ದ ಮರಳು ಗಣಿಗಾರಿಕೆ ಮತ್ತು ಸಾಗಾಣಿಕೆ ವಿರುದ್ಧ KNSರವರು ನಡೆಸಿದ 'ಪಿನಾಕಿನಿ ನದಿ ಉಳಿಸಿ' ಹೋರಾಟದಲ್ಲಿ ಪಿನಾಕಿನಿ ನದಿಯಲ್ಲಿ ಗೌರಿಬಿದನೂರಿನಿಂದ ನಡೆಸಿದ ಕಾಲ್ನಡಿಗೆ ಜಾಥ ತುಂಬಾ ಯಶಸ್ವಿಯಾಯಿತು. ಆ ಸಂದರ್ಭದಲ್ಲಿ ನಾನು ತಾಲ್ಲೂಕು ವಕೀಲರ ಸಂಘದ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆ.

KNSರವರ ಹೋರಾಟದ ಪ್ರಭಾವದಿಂದ ಎಲ್ಲಾ ವಕೀಲರನ್ನೂ ಸೇರಿಸಿ ವಕೀಲ ಸಂಘದ ಕಛೇರಿಯಲ್ಲೂ ಒಂದು ಕಾರ್ಯಕ್ರಮ ಆಯೋಜಿಸಿ KNSರವರನ್ನು ಆ ಕಾರ್ಯಕ್ರಮಕ್ಕೆ ಭಾಷಣಕಾರರಾಗಿ ಕರೆದಿದ್ದೆನು. ನದಿ ಪಾತ್ರದಲ್ಲಿ ಮರಳು ತೆಗೆಯುವುದರಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ಸವಿಸ್ತಾರವಾದ ವಿಚಾರ ಹಂಚಿಕೊಂಡರು. ಇದರಿಂದಾಗಿ ವಕೀಲರ ಸಂಘದ ಮುಂದಾಳತ್ವದಲ್ಲಿ ತಾಲ್ಲೂಕಿನ ಎಲ್ಲಾ ಪ್ರಗತಿಪರ ಸಂಘಟನೆಗಳ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಂಡ ಮರಳು ಸಾಗಾಣಿಕೆ ನಿಷೇಧದ ಹೋರಾಟ ಅಭೂತಪೂರ್ವ ಯಶಸ್ಸು ಕಂಡಿತು. ಇದರಿಂದ ಎಚ್ಚೆತ್ತ ಸರ್ಕಾರ ಉತ್ತರ ಪಿನಾಕಿನಿ ನದಿಯಲ್ಲಿ ಮರಳು ಗಣಿಗಾರಿಕೆ ಮತ್ತು ಸಾಗಾಣಿಕೆ ನಿಷೇಧಿಸಿತು. ಸರ್ಕಾರದ ಈ ಆದೇಶದ ಹಿಂದೆ ಅನೇಕ ಜನ ಹಾಗೂ ಸಂಘಟನೆಗಳು ನಡೆಸಿದ



ಹೋರಾಟದಲ್ಲಿ KNSರವರ ಕೊಡುಗೆಯನ್ನು ಮರೆಯಲಾಗದು. ಹೀಗೆ ಬರೆಯುತ್ತಾ ಹೋದರೆ KNSರವರ ಬಗ್ಗೆ ನನ್ನ ಅನುಭವಗಳ ಒಂದು ಗ್ರಂಥವೇ ಬರೆಯಬಹುದು. KNSರವರ ಮಾತು ಮತ್ತು ಕೃತಿಯು ಸಮಾಜ ಸೇವಕರಾದ ಬುದ್ಧ, ಬಸವ, ಜ್ಯೋತಿ ಬಾಫುಲೆ, ಅಂಬೇಡ್ಕರ್‌ರವರ ಹೇಳಿದ ವಿಚಾರಧಾರೆಯೇ ಆಗಿದೆ. ಇವರ ಆಶಯಗಳೇ ನಮ್ಮ ಸಂವಿಧಾನದ ಪ್ರಸ್ತಾವನೆಯಾಗಿದೆ. ಸಂವಿಧಾನದ ಆಶಯಗಳಿಗನುಗುಣವಾಗಿ ಇಂದು ಕಾನೂನು ಸೇವೆಗಳ ಪ್ರಾಧಿಕಾರ ನೊಂದ ಜನತೆಯ ದೀನ ದಲಿತ, ಮಹಿಳೆ, ಮಕ್ಕಳ ಪ್ರಕೃತಿ ವಿಕೋಪ ಬಾಧಿತ ವ್ಯಕ್ತಿಗಳ ಹಕ್ಕು ಸಂರಕ್ಷಣೆ ಅವರಿಗೆ ಕಾನೂನು ಅರಿವು ಮತ್ತು ನೆರವು ನೀಡುವ ಕಾರ್ಯಕ್ರಮಗಳನ್ನು ರೂಪಿಸುತ್ತಿದೆ.

ನಾನು ನ್ಯಾಯವಾದಿಯಾಗಿ ಸಲ್ಲಿಸುತ್ತಿದ್ದ ಸೇವೆಯನ್ನು ಒಬ್ಬ ನ್ಯಾಯಾಧೀಶನಾಗಿ ಕಾನೂನು ಪರಿಧಿಯಲ್ಲಿ ನಿರ್ವಹಿಸುವುದರ ಜೊತೆಗೆ ಕಾನೂನು ಸೇವೆ ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಬಹುದಾಗಿದೆ. KNSರವರ ವ್ಯಕ್ತಿತ್ವದಿಂದ ತಿಳಿದು ಬರುವ ಸಂಗತಿಯೆಂದರೆ ಯಾವುದೇ ವ್ಯಕ್ತಿ ಅವನಿಗಾಗಿ ಅವನು ಬದುಕಿದರೆ ಅವನು ಅವನೇ ಆಗುತ್ತಾನೆ. ಇತರರಿಗೂ ಕೂಡ ಎಂದುಕೊಂಡರೆ ಮಹನೀಯನಾಗುತ್ತಾನೆ. ಸಮಾಜಕ್ಕೆ ಅರ್ಪಿಸಿಕೊಂಡರೆ ಮಹಾತ್ಮನಾಗುತ್ತಾನೆ. ಈ ಗುಣಗಳನ್ನು ಮೈಗೂಡಿಸಿಕೊಂಡು ನಿಸ್ವಾರ್ಥ ಸೇವೆ ಸಲ್ಲಿಸಿದ್ದರಿಂದಲೇ, ಯಾರ ಪ್ರಭಾವವೂ ಇಲ್ಲದೆಯೇ ಕರ್ನಾಟಕ ಸರ್ಕಾರ KNSರವರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿರುವುದು. ಆ ಪ್ರಶಸ್ತಿಗೆ ಭೂಷಣ ತಂದುದ್ದಲ್ಲದೆ ಅದರ ಹಿರಿಮೆ ಹೆಚ್ಚಿಸಿದೆ. ತಮ್ಮ ಇಳಿ ವಯಸ್ಸಿನಲ್ಲಿ ಯುವ ಸಮುದಾಯವನ್ನು ನಾಚಿಸುವಂತಹ ಸೇವೆ ಸಲ್ಲಿಸುತ್ತಿರುವ KNSರವರ ಮಾರ್ಗದರ್ಶನ ನನ್ನಂತಹ ಎಷ್ಟೋ ಜನರಿಗೆ ದಾರಿ ದೀಪವಾಗಲಿ ಅಂತ ಆಶಿಸುತ್ತೇನೆ.





# ಆದರ್ಶಪ್ರಾಯ ಆಡಳಿತಗಾರ

– ಪ್ರೊ. ಮುನಿವೆಂಕಟರೆಡ್ಡಿ
ನಿವೃತ್ತ ಪ್ರಾಂಶುಪಾಲರು, ಶ್ರೀನಿವಾಸಪುರ

ಸನ್ಮಾನ್ಯ ಶ್ರೀ ಕೆ. ನಾರಾಯಣಸ್ವಾಮಿಯವರು ನನಗೆ 1960ರಿಂದಲೂ ಪರಿಚಯ ಮತ್ತು ಒಂದು ವರ್ಷ ಮೈಸೂರಿನ ಡಿ. ಸುಬ್ಬಯ್ಯ ರಸ್ತೆಯಲ್ಲಿನ ಅವರ ಕೊಠಡಿಯಲ್ಲಿ ನನಗೆ ಆಶ್ರಯದಾತರೂ ಹೌದು. ಅವರು ಆ ವೇಳೆಗಾಗಲೇ ಆನರ್ಸ್ ಮುಗಿಸಿ ಎಂ.ಎ. ತರಗತಿಗೆ ಸೇರಿದ ದಿನಗಳಾಗಿದ್ದು ಅಕ್ಷರಶಃ ನಮಗೆ ಮಾರ್ಗದರ್ಶಕರಾಗಿದ್ದರು. ಪರಿಚಯ, ಒಂದೇ ಕೊಠಡಿಯಲ್ಲಿ ವಾಸ ಮತ್ತು ಮಹಾರಾಜ ಕಾಲೇಜಿನ "ಹೆಲ್ತ್ ಕಿಚನ್"ನಲ್ಲಿ ಊಟ ಹೀಗೆ ಸ್ನೇಹಿತರಾಗಿ ಇಂದಿಗೂ ಮುಂದುವರೆದಿದೆ ಆ ಸ್ನೇಹ ಇನ್ನಷ್ಟು ಗಾಢವಾಗಿ.

ಕೆ.ಎಸ್.ಎಸ್.ರವರು ಉಪಾಧ್ಯಾಯರ ಮನೆಯಲ್ಲಿ ಹುಟ್ಟಿದವರು. ಅವರ ತಂದೆ, ತಂಗಿ, ಅಕ್ಕ ಮತ್ತು ಅವರ ಭಾವಂದಿರೂ ಸಹ ಮೇಷ್ಟ್ರುಗಳೇ. ಇವರು ಮೇಷ್ಟ್ರು ಆದರು. ಆನರ್ಸ್ ಮುಗಿದ ವೇಳೆಗಾಗಲೇ ಅವರಿಗೆ ಹಿಂದಿ ಭಾಷೆಯಲ್ಲಿ ಒಳ್ಳೆಯ ಪಾಂಡಿತ್ಯವಿತ್ತು. ಹಿಂದಿ ಭಾಷೆಯ ವಾರ ಮತ್ತು ಮಾಸ ಪತ್ರಿಕೆಗಳಲ್ಲಿ ಪ್ರಕಟವಾದ ಆಯ್ದ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸಿದ ಲೇಖನಗಳು ವಯಸ್ಕರ ಶಿಕ್ಷಣ ಇಲಾಖೆ ಪ್ರಕಟಿಸುತ್ತಿದ್ದ "ಪ್ರಪಂಚ" ಮಾಸ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ಹಿಂದಿ ಅನುವಾದಿತ ಲೇಖನಗಳನ್ನು ಬರೆಯುತ್ತಾ ಬರೆಯುತ್ತಾ ಮುಂದೆ

ಬರಹಗಾರರಾದರೆಂದು ನನ್ನ ಅಭಿಮತ. ಇವರು ಲೇಖನ ಒಂದನ್ನು ತಯಾರಿಸಲು ಕಥಾ ವಸ್ತುವನ್ನು ಸಂಗ್ರಹಿಸುತ್ತಿದ್ದುದು ಮತ್ತು ತಾನು ಏನಾದರೂ ಬರೆಯಬೇಕೆಂದು ಸದಾ ಹವಣಿಸುತ್ತಿದ್ದುದು ವಿದ್ಯಾರ್ಥಿಗಳಾದ ನಮಗೆ ಒಂದು ಯಕ್ಷಪ್ರಶ್ನೆ. ಯಾಕೆಂದರೆ ಪರೀಕ್ಷೆ ಪಾಸು ಮಾಡಲು ಹವಣಿಸುತ್ತಿದ್ದುದೇ ನಮ್ಮ ಕಾಯಕ. ಅವರು ಎಂ.ಎ. ಪಾಸಾದ ನಂತರ ಮತ್ತೊಮ್ಮೆ ಚಿಂತಾಮಣಿಯಲ್ಲಿ ಸೇರಿದೆವು.

ಆ ದಿನಗಳಲ್ಲಿ ಉದ್ಯೋಗ ಗಿಟ್ಟಿಸುವುದು ಕಷ್ಟಸಾಧ್ಯವಾಗಿತ್ತು. ಅವರ ಊರಿನವರೇ ಆದ ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಪ್ರಾಂಶುಪಾಲರಾಗಿದ್ದ ಹೆಚ್. ನರಸಿಂಹಯ್ಯ ಅವರ ಮೇಲೆ KNS ಇರಿಸಿಕೊಂಡಿದ್ದ ಭರವಸೆಯು ಹುಸಿಯಾಯಿತು. ಕೊನೆಗೆ ಆಗ ತಾನೇ ಪ್ರಾರಂಭವಾಗಿದ್ದ ಚಿಂತಾಮಣಿ ಮುನಿಸಿಪಲ್ ಪ್ರಥಮ ದರ್ಜೆ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕಗೊಂಡರು.

ಜೀವನಕ್ಕಾಗಿ ವೃತ್ತಿ ಸಂಪಾದನೆಯಾಯಿತು. ಜೀವನ ಸಂಗಾತಿಯನ್ನು ಪಡೆಯುವ ವಿಷಯದಲ್ಲಿ ಅವರ ಮನೆಯಲ್ಲಿ ಒಂದು ಆಂತರಿಕ ಯುದ್ಧವೇ ಪ್ರಾರಂಭವಾಯಿತು. ಇದು ತೀರಾ ಕೌಟುಂಬಿಕ ವಿಷಯವಾದರೂ ಅವರ ಮದುವೆಯ ರೀತಿ ತುಂಬಾ Unique ಆಗಿತ್ತು. ಅವರ ಮದುವೆ ಅವರ ಸ್ವಂತ ಊರಲ್ಲಿ ಆರ್ಯ ಸಮಾಜದ ಕಟ್ಟುಪಾಡುಗಳು ಹಾಗೂ ನಿಯಮಗಳಂತೆ ನಡೆಯಿತು. ಸಂಸ್ಕೃತ ಶ್ಲೋಕಗಳನ್ನು ಪಠಣ ಮಾಡುತ್ತಿದ್ದ ಪುರೋಹಿತರ ಎಲ್ಲಾ ಮಂತ್ರಗಳನ್ನು ಮತ್ತೊಂದು ಪುರೋಹಿತರ ತಂಡ ಕನ್ನಡಕ್ಕೆ ತರ್ಜುಮೆ ಮಾಡಿ ಅದರ ಅರ್ಥ ಹೇಳಿ ವ್ಯಾಖ್ಯಾನಿಸುತ್ತಿದ್ದರು. ಆ ರೀತಿಯ ಮದುವೆ ಮತ್ತೆ ನಾ ಕಂಡಿದ್ದಿಲ್ಲ.

ಒಬ್ಬ ಉಪನ್ಯಾಸಕರಾಗಿ KNSರವರ ಕಾರ್ಯನಿರ್ವಹಣೆ ಆದರ್ಶಪ್ರಾಯವಾಗಿತ್ತು. ಶಿಸ್ತು, ಸಂಯಮ, ಸರಳ, ಮೃದು ಸ್ವಭಾವದ ಇವರು ಸಾಕಷ್ಟು ಪೂರ್ವ ತಯಾರಿಯೊಂದಿಗೆ ತರಗತಿಗೆ ಆಗಮಿಸುತ್ತಿದ್ದು ಅವರ ಪಾಠ ಸಾಕಷ್ಟು ಪರಿಣಾಮಕಾರಿಯಾಗಿರುತ್ತಿತ್ತೆಂದು ಅವರ ಶಿಷ್ಯರನೇಕರು ತಿಳಿಸುತ್ತಿದ್ದರು ಮತ್ತು ನಮ್ಮ ಮನೆಯಲ್ಲಿಯೇ ಅವರ ಶಿಷ್ಯರ ಗುಂಪಿತ್ತು. ಮಿತ ಭಾಷಿಗಳಾಗಿದ್ದ ಇವರು ನಿರಾಸಕ್ತಿಯಿಂದ ಇರುತ್ತಿದ್ದ ವಿದ್ಯಾರ್ಥಿಗಳನ್ನು ಕಂಡು ಕೆಂಡಾಮಂಡಲವಾಗುತ್ತಿದ್ದುದಕ್ಕೆ ಕಾರಣ ಎಲ್ಲರೂ ಕಲಿಯಲೇಬೇಕೆಂಬ ಹಂಬಲವಲ್ಲದೆ ಮತ್ತೇನೂ ಆಗಿರಲಿಲ್ಲ. ಸತತವಾಗಿ ಒಂದಲ್ಲ ಒಂದು ಅಧ್ಯಯನದಲ್ಲಿ ತೊಡಗಿರುತ್ತಿದ್ದುದು ಅವರ ಒಂದು ವಿಶೇಷ ಗುಣ. ಅವರು ಉಪನ್ಯಾಸಕರಾಗಿ ಒಳ್ಳೆಯ ಹೆಸರು ಪಡೆದು ಚಿಂತಾಮಣಿ ಪಟ್ಟಣದಲ್ಲಿ ಜನಪ್ರಿಯರಾಗಲು ಹೆಚ್ಚು ಸಮಯ ಹಿಡಿಯಲಿಲ್ಲ.

1979-80ರಲ್ಲಿ ಪ.ಪೂ. ಕಾಲೇಜಿನ ಪ್ರಾಂಶುಪಾಲರಾಗಿ KPSC ಯಿಂದ ಆಯ್ಕೆಯಾದ 3 ವರ್ಷಕ್ಕೆ ಶ್ರೀನಿವಾಸಪುರಕ್ಕೆ ಆಗಮಿಸಿದರು. ನಾನು ಉಪನ್ಯಾಸಕನಾಗಿ ಕೆಲಸ ಮಾಡುತ್ತಿದ್ದೆ.

ಒಬ್ಬ ಪ್ರಾಂಶುಪಾಲರಾಗಿ, ಯಾವುದೇ ರೀತಿಯ ಪೂರ್ವಾಗ್ರಹ ಪೀಡಿತರಾಗಿರದೆ ಎಲ್ಲರನ್ನು ತನ್ನೊಂದಿಗೆ ಕೊಂಡೊಯ್ಯುವ ನಾಯಕನ ಗುಣ ಎಷ್ಟೇ ಮೃದು ಭಾಷೆಯಾಗಿದ್ದರೂ ಅಗತ್ಯಬಿದ್ದಲ್ಲಿ ಕಠಿಣ ನಿಲುವನ್ನು ತಳೆದು ತಮ್ಮಲ್ಲಿ ಕೆಲಸ ಮಾಡುವವರನ್ನು ಸರಿದಾರಿಗೆ ತರುವಲ್ಲಿ ಯಶಸ್ವಿಯಾದುದಷ್ಟೇ ಅಲ್ಲ ಎಲ್ಲರೂ ಒಂದು ರೀತಿಯ ಸ್ವಯಂ ಶಿಸ್ತುಪಾಲನೆಗೆ ಬದ್ಧರಾಗಿ ಕೆಲಸ ನಿರ್ವಹಿಸುತ್ತಿದ್ದುದನ್ನು ಕಾಣಬಹುದಿತ್ತು. ಒಟ್ಟಿನಲ್ಲಿ ಒಬ್ಬ ದಕ್ಷ, ಪ್ರಾಮಾಣಿಕ ಸಮರ್ಥ ಅಧಿಕಾರಿಯಾಗಿ ಕಾರ್ಯನಿರ್ವಹಿಸಿ ಆದರ್ಶಪ್ರಾಯರಾಗಿದ್ದರು.

ಕಾಲೇಜಿನ ಆಸ್ತಿ ಮತ್ತು ಬೌದ್ಧಿಕ ಅಭಿವೃದ್ಧಿಯ ಕಡೆಗೆ ಹೆಚ್ಚು ಆಸಕ್ತಿ ವಹಿಸುತ್ತಿದ್ದು ಈ ದಿಸೆಯಲ್ಲಿ ಅವರು ಎಲ್ಲರ ಸಹಕಾರವನ್ನು ಪಡೆಯುತ್ತಿದ್ದರು. ಬಾಗೇಪಲ್ಲಿ ಕಾಲೇಜಿನ ಪ್ರಾಂಶುಪಾಲರಾಗಿದ್ದಾಗ ಅವರು ಕಾಲೇಜಿಗೆ PWD ಇಲಾಖೆಗೆ ಮೀಸಲಾಗಿದ್ದ ಜಮೀನನ್ನು ಕಾಲೇಜಿನ ಅಭಿವೃದ್ಧಿ ದೃಷ್ಟಿಯಿಂದ ಕಾಲೇಜಿನ ವ್ಯಾಪ್ತಿಗೆ ತರುವಾಗ ಅಲ್ಲಿನ MLA ಅವರ ವಿರೋಧವನ್ನು ಸಹ ಎದುರಿಸಿ ಕಾಲೇಜಿನ ಆಸ್ತಿ ಅಭಿವೃದ್ಧಿ ಮಾಡಿದ್ದು ಉಲ್ಲೇಖನಾರ್ಹ. KNS ಅವರು ದೀರ್ಘ ಕಾಲ ನಮ್ಮೊಂದಿಗಿರಲಿ ಎಂಬುದೇ ಈ ಸಂದರ್ಭದಲ್ಲಿ ನನ್ನ ಹಾರೈಕೆ. ಅವರ ಬಗ್ಗೆ ನನ್ನ ಅಭಿಪ್ರಾಯ ಕೇಳಿದ್ದು ಸಂತೋಷವಾಗಿದೆ.











# ದಲಿತ ಮಕ್ಕಳು ನನ್ನ ದತ್ತು ಪುತ್ರರು

– ಹೆಚ್.ಜಿ. ಗುಂಡಪ್ಪ
ನಿವೃತ್ತ ಉಪನ್ಯಾಸಕರು, ಬೆಂಗಳೂರು

ಒಂದು ಸಂಜೆ ನನ್ನ ಆತ್ಮೀಯರಾದ ಶ್ರೀಯುತ ಕೆ.ಎನ್.ಎಸ್.ರವರಿಂದ ದೂರವಾಣಿ ಕರೆ ಬಂತು. ಕುಶಲ ಸಂಭಾಷಣೆಯ ನಂತರ ಒಂದು ಸಿಹಿ ಸುದ್ದಿ. ಅವರಿಗೆ ಎಪ್ಪತ್ತು ವಸಂತಗಳು ಸಂದಿವೆ. ಅವರ ಆತ್ಮೀಯ ಬಳಗದವರಿಂದ "ಅಭಿನಂದನಾ ಗ್ರಂಥ" ಬಿಡುಗಡೆ ಮಾಡಬೇಕೆಂಬ ಹಂಬಲವನ್ನು ವ್ಯಕ್ತವಾಗಿದೆ ಎಂಬ ಸಮಾಚಾರ ಅವರನ್ನು ಕುರಿತು ಒಂದು ಲೇಖನವನ್ನು ಬರೆಯಬೇಕೆಂಬ ಸಂದೇಶ ತಲುಪಿತು. ಸಂತೋಷದಿಂದ ಒಪ್ಪಿಗೆ ಸೂಚಿಸಿದೆ.

ಶ್ರೀಯುತ ಕೆ.ಎನ್.ಎಸ್.ರವರನ್ನು ನೆನಪಿಸಿಕೊಂಡಾಗ ಷೇಕ್ಸ್‌ಪಿಯರ್ ಮಹಾಕವಿಯ ಒಂದು ಹೇಳಿಕೆ ಜ್ಞಾಪಕಕ್ಕೆ ಬಂತು. "Some are born great; some achieve greatness; for some greatness thrust upon them."

ಕೆಲವು ವ್ಯಕ್ತಿಗಳು ಹುಟ್ಟಿನಿಂದಲೇ ಶ್ರೇಷ್ಠತೆಯನ್ನು ಪಡೆದುಕೊಂಡವರಾದರೆ, ಕೆಲವು ವ್ಯಕ್ತಿಗಳು ತಮ್ಮ ಸಾಮರ್ಥ್ಯದಿಂದ, ಬೌದ್ಧಿಕ ಕೌಶಲದಿಂದ ಸಾಧನೆ ಮಾಡಿ ಗಣ್ಯತೆಯನ್ನು ಗಳಿಸಿಕೊಂಡವರಾಗುತ್ತಾರೆ; ಮತ್ತೆ ಕೆಲವರಿಗೆ ಗಣ್ಯತೆಯನ್ನು ಆರೋಪಿಸಲಾಗಿರುತ್ತದೆ. ಈ ಮೂರು ವರ್ಗದ ವ್ಯಕ್ತಿಗಳಲ್ಲಿ ಶ್ರೀಯುತರು ಎರಡನೆಯ ವರ್ಗಕ್ಕೆ ಸೇರುವಂತಹವರು.

ಬಾಲ್ಯ : ಶ್ರೀಯುತರ ಹುಟ್ಟೂರು ಹೊಸೂರು, ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿಗೆ ಸೇರಿದವರು. ತಂದೆ ಶ್ರೀಯುತ

ಕಂಬಣ್ಣನವರು ಪ್ರಾಥಮಿಕ ಶಾಲಾ ಶಿಕ್ಷಕರು, ಅವರ ಚಿಕ್ಕಪ್ಪನವರು ಶ್ರೀಯುತ ಕದಿರಪ್ಪನವರು ಮಾಧ್ಯಮಿಕ ಶಾಲಾ ಶಿಕ್ಷಕರು. ಮಧ್ಯಮವರ್ಗದ ಸುಸಂಸ್ಕೃತ ಕುಟುಂಬ ಪರಿಸರದಲ್ಲಿ ಶಿಕ್ಷಕರಾಗಿದ್ದ ವೆಂಕಟಾಚಲಯ್ಯನವರು, ಕರ್ನಾಟಕ ರಾಜ್ಯದ ಗಾಂಧೀಜಿಯೆಂದು ಹೆಸರು ಪಡೆದುಕೊಂಡು, ನ್ಯಾಷನಲ್ ಕಾಲೇಜಿನ ಪ್ರಾಂಶುಪಾಲರಾಗಿ, ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ಖ್ಯಾತರಾಗಿದ್ದ ಶ್ರೀಯುತ ಕೀರ್ತಿ ಶೇಷ ಹೆಚ್. ನರಸಿಂಹಯ್ಯನವರ ಹುಟ್ಟೂರು ಹೊಸೂರು. ಇವರುಗಳೆಲ್ಲರ ಪ್ರಭಾವಕ್ಕೊಳಗಾದವರು ಶ್ರೀಯುತರು.

ಪ್ರೌಢಶಾಲಾ ಶಿಕ್ಷಣ ಗೌರಿಬಿದನೂರು ಆಚಾರ್ಯ ಪ್ರೌಢಶಾಲೆಯಲ್ಲಿ ಮುಗಿಸಿ, ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಟರ್ ಮೀಡಿಯಟ್ ಮತ್ತು ಕನ್ನಡ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು, ಶಿಕ್ಷಕರಾಗಿಯೇ ವೃತ್ತಿ ಜೀವನ ಪ್ರಾರಂಭಿಸಿದವರು. ಸ್ವಗ್ರಾಮದಲ್ಲಿ ಪ್ರೌಢಶಾಲೆಯಲ್ಲಿ ಸೇವೆ ಸಲ್ಲಿಸಿ ಅನಂತರ ಚಿಂತಾಮಣಿಯ ಪದವಿ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ನಂತರ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಪ್ರಾಂಶುಪಾಲರಾಗಿ ವೃತ್ತಿ ಜೀವನ ಬಾಗೇಪಲ್ಲಿಯಲ್ಲಿ ಪ್ರಾರಂಭಿಸಿದರು. ಈ ಅವಧಿಯಲ್ಲಿ ಅವರ ವ್ಯಕ್ತಿತ್ವ ರೂಪಗೊಳ್ಳುವುದರಲ್ಲಿ ಅನೇಕ ವಿಚಾರವಾದಿಗಳು, ಬುದ್ಧಿ ಜೀವಿಗಳ ಸಂಪರ್ಕ ದೊರೆತು ಅನೇಕ ಲೇಖನಗಳನ್ನು ಬರೆದು ಪ್ರಕಟಿಸಿ ಬರಹಗಾರರಾಗಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

**ಪರಿಚಯ :** ನನ್ನ ಅವರ ಸಂಬಂಧ ಎರಡು ದಶಕಗಳಿಗೂ ಮೀರಿದುದು. ಒಂದು ದಿನ ನನ್ನ ಹಳ್ಳಿ ಹುದುಗೂರಿನಿಂದ ಗೌರಿಬಿದನೂರಿಗೆ ಹೋಗಲು ಬಸ್ ಹತ್ತಿ ಹೊರಟೆ. ನಿಂತು ಪ್ರಯಾಣಿಸುತ್ತಿದ್ದೆ. ನನ್ನ ಪಕ್ಕದಲ್ಲಿ ಕುಳಿತಿದ್ದ ವ್ಯಕ್ತಿ ನನ್ನ ಗಮನಿಸಿದರು. ಒಂದು ವೃತ್ತ ಪತ್ರಿಕೆ, ಪುಸ್ತಕವನ್ನು ಹಿಡಿದುಕೊಂಡು ಕುಳಿತಿದ್ದರು. ಸಾಮಾನ್ಯ ಮೈಕಟ್ಟು, ಸಾಮಾನ್ಯ ಉಡುಗೆ, 5 ಅಡಿ ಎತ್ತರದ ಕನ್ನಡಕಧಾರಿ ವ್ಯಕ್ತಿ. ನನಗೆ ಸ್ವಲ್ಪ ಜಾಗಕೊಟ್ಟು ಕುಳಿತುಕೊಳ್ಳಲು ಅವಕಾಶಕೊಟ್ಟರು. ಪರಸ್ಪರ ಸಂಭಾಷಣೆಯಲ್ಲಿ ತೊಡಗಿದಾಗ ನನ್ನ ಅವರ ಪ್ರಥಮ ಪರಿಚಯ. ಆಗ ನಾನು ಚಿಕ್ಕನಾಯ್ಕನಹಳ್ಳಿಯಲ್ಲಿ ಉಪನ್ಯಾಸಕನಾಗಿದ್ದೆ. ಅವರು ಬಾಗೇಪಲ್ಲಿ ಪದವಿ ಪೂರ್ವ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದರು. ಹೀಗೆ ನನ್ನ ಮತ್ತು ಕೆ.ಎಸ್.ಎಸ್.ರವರ ಪರಿಚಯ ಮತ್ತು ಪರಸ್ಪರ ಸಂಬಂಧ ಪ್ರಾರಂಭ.

ನಾನು ತುಮಕೂರು ಜಿಲ್ಲೆಯಿಂದ ವರ್ಗಾವಣೆಯಾಗಿ ಗುಡಿಬಂಡೆಗೆ ಉಪನ್ಯಾಸಕನಾಗಿ ಬಂದೆ. ಶ್ರೀಯುತರು ಬಾಗೇಪಲ್ಲಿಯಿಂದ ಗುಡಿಬಂಡೆಯ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರಾಗಿ ಬಂದರು. ಆಗಿನ ಗುಡಿಬಂಡೆಯಲ್ಲಿ ಪ್ರಾಂಶುಪಾಲರಾಗಿದ್ದವರು



ಶಾಸಕರಾಗಿದ್ದ ಅಪ್ಪಸ್ವಾಮಿ ರೆಡ್ಡಿಯವರ ಸೋದರರಾಗಿದ್ದ ಶ್ರೀ ವೆಂಕಟಸ್ವಾಮಿ ರೆಡ್ಡಿಗಳು. ಅವರಿಂದ ನಾನು ಚಾರ್ಜ್ ಪಡೆದುಕೊಂಡೆ. ಅವರು ಬಿಡುಗಡೆ ಹೊಂದಿ ಬಾಗೇಪಲ್ಲಿಗೆ ವರ್ಗಾವಣೆಯಾಗಿ ಹೋದರು.

ಮಾರನೆಯ ದಿನವೇ ಶ್ರೀಯುತ ಕೆ.ಎನ್.ಎಸ್.ರವರು ಗುಡಿಬಂಡೆಗೆ ವರ್ಗಾವಣೆಯಾಗಿ ಬಂದು ಅಧಿಕಾರವಹಿಸಿಕೊಂಡರು. ಈ ಸುದ್ದಿ ವಿದ್ಯುತ್ ಸಂಚಲನದಂತೆ ಇಡೀ ಊರಿನಲ್ಲಿ ಹರಡತೊಡಗಿತು. ಹೊಸ ಪ್ರಿನ್ಸಿಪಾಲರು ತುಂಬಾ ಸ್ಟ್ರಿಕ್ಟ್ ಅಂತೆ, ಯಾರ ಮುಲಾಜಿಗೆ ಹೆದರುವುದಿಲ್ಲವಂತೆ, ಎಲ್ಲಾ ಸಿಬ್ಬಂದಿ ವರ್ಗದವರು ಸರಿಯಾಗಿ ಕೆಲಸ ಮಾಡದಿದ್ದರೆ ಮೆಮೊ ಕೊಡುತ್ತಾರಂತೆ. ಇತ್ಯಾದಿ ಮಾತುಗಳು, ಗುಸು-ಗುಸು ಪ್ರಾರಂಭವಾಗತೊಡಗಿತು. ಎಲ್ಲರ ಬಾಯಲ್ಲೂ ಇದೆ ಮಾತು ಕೇಳತೊಡಗಿತು. ವಿದ್ಯಾರ್ಥಿಗಳು ಶಿಸ್ತಿನಿಂದಿರಬೇಕು. ಪಾಠ ಪ್ರವಚನಗಳಿಗೆ ಆದ್ಯತೆ ನೀಡಬೇಕು. ಇತ್ಯಾದಿ ಅಧ್ಯಾಪಕರುಗಳ ಕರ್ತವ್ಯ ನಿರ್ವಹಣೆ ಬಗ್ಗೆ ಶಾಲಾ ಪ್ರಾರ್ಥನೆಯ ವೇಳೆ ತಮ್ಮ ನೀತಿ ನಿಲುವುಗಳ ಬಗ್ಗೆ ಸೂಕ್ಷ್ಮವಾಗಿ ಪರಿಚಯ ಮಾಡಿಕೊಟ್ಟರು. ಹೊಸ ಪ್ರಾಚಾರ್ಯರ ಕಾರ್ಯವೈಖರಿ ಎಲ್ಲರ ಗಮನಸೆಳೆಯಿತು.

ಪ್ರಾಚಾರ್ಯರಾಗಿ ಬಾಗೇಪಲ್ಲಿ ಪದವಿ ಪೂರ್ವ ಕಾಲೇಜಿನ ಅಭಿವೃದ್ಧಿಗಾಗಿ, ಕಟ್ಟಡದ ನಿರ್ಮಾಣಕ್ಕಾಗಿ ವಿಶೇಷವಾಗಿ ಶ್ರಮಿಸಿ ಕೀರ್ತಿಗಳಿಸಿಕೊಂಡು ತಮ್ಮ ಆರೋಗ್ಯದ ಕಡೆ ಹೆಚ್ಚು ಗಮನಕೊಡದೆ ಆತಂಕಕ್ಕೊಳಗಾಗಿದ್ದರು. ಗುಡಿಬಂಡೆ ಪದವಿಪೂರ್ವ ಕಾಲೇಜಿನ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇತ್ತು. ಗಣನೀಯವಾಗಿ ಕೆಲಸದ ಒತ್ತಡವೂ ಇಲ್ಲದಿದ್ದರಿಂದ ಈ ಕಾಲೇಜಿನ ಆಡಳಿತ ನಿರ್ವಹಣೆ ಅವರಿಗೆ ಶ್ರಮದಾಯಕವೆನಿಸಲಿಲ್ಲ. ಆರಾಮವಾಗಿ ಕಾರ್ಯನಿರ್ವಹಿಸಿಕೊಂಡು ಹೋಗಬೇಕೆಂಬುದೇ ಅವರ ಆಶಯವಾಗಿತ್ತು. ಇವರ ಅವಧಿಯಲ್ಲಿ ಕಾಲೇಜಿನ ಕೆಲಸ ಕಾರ್ಯಗಳು, ಪಾಠ ಪ್ರವಚನಗಳು, ಪಠ್ಯೇತರೆ ಚಟುವಟಿಕೆಗಳು ಸುಗಮವಾಗಿ ನಡೆದು ಶಾಲೆ-ಕಾಲೇಜಿನ ಫಲಿತಾಂಶವು ಉತ್ತಮವಾಗಿದ್ದು ಮೇಲಾಧಿಕಾರಿಗಳ ಮೆಚ್ಚುಗೆಗೂ ಊರಿನ ಜನರ ಪ್ರಶಂಸೆಗೊಳಗಾದುದು ಗಮನಾರ್ಹ. ವಿದ್ಯಾರ್ಥಿಗಳಲ್ಲಿ ಪರೀಕ್ಷೆಗಳಲ್ಲಿ ನಕಲು ಮಾಡುವ ದುರಭ್ಯಾಸವನ್ನು ತಪ್ಪಿಸಲು, ಮೇಲ್ವಿಚಾರಕರೆ ಇಲ್ಲದೆ ವಿದ್ಯಾರ್ಥಿಗಳ ಸ್ವಯಂ ಪ್ರೇರಣೆಯಿಂದ ಪ್ರಾಮಾಣಿಕವಾಗಿ ಉತ್ತರ ಬರೆಯುವಂತೆ ಪ್ರೋತ್ಸಾಹಿಸಲಾಯಿತು. ಇದು ಒಂದು ಹೊಸ ಪ್ರಯೋಗ ಇವರ ಅವಧಿಯಲ್ಲಿ ಜಾರಿಗೆ ಬಂದಿತು. ವಿದ್ಯಾರ್ಥಿಗಳಲ್ಲಿ ವೈಚಾರಿಕ ಪ್ರಜ್ಞೆ ಜಾಗೃತಗೊಳಿಸಲು ತರಗತಿಗಳಲ್ಲಿ ಪ್ರಶ್ನೋತ್ತರ ತರಗತಿಗಳು, ಪ್ರಶ್ನೆ ಮಾಡದೆ ಯಾವುದನ್ನು ಅನುಕರಿಸಬಾರದು ಎಂಬ ಭಾವನೆಗಳನ್ನು ವಿದ್ಯಾರ್ಥಿಗಳಲ್ಲಿ ಮೂಡಿಸಲಾಯಿತು. ವೈಜ್ಞಾನಿಕ ಮನೋಭಾವ, ಪರಿಸರ ಪ್ರಜ್ಞೆ ಮತ್ತು ನೈತಿಕ ಮೌಲ್ಯಗಳನ್ನು ಶಿಕ್ಷಣದ ಮೂಲಕ ನೀಡಬೇಕು. ಈ



ಹೊಸ ವಿಚಾರಧಾರೆ ಮೂಡಲು ಪ್ರೇರಣೆ ನೀಡಿತು. ಹೀಗೆ ಇವರ ಅವಧಿಯಲ್ಲಿ ಒಂದು ಗ್ರಾಮಾಂತರ ಪ್ರದೇಶದ ಶಾಲೆಯಲ್ಲಿ ನಡೆದ ಹೊಸ ಪ್ರಯೋಗಗಳು ಎಲ್ಲರ ಪ್ರಶಂಸೆಗೂ ಪಾತ್ರವಾಯಿತು. ಹೀಗೆ ಇವರ ಅವಧಿಯಲ್ಲಿ ಶೈಕ್ಷಣಿಕ ಪ್ರಗತಿ ಕಂಡಿತು. ಮೇಲಧಿಕಾರಿಗಳ ಗಮನ ಸೆಳೆಯುವಂತೆ ಮಾಡಿತು.

ಗುಡಿಬಂಡೆಯ ನೈಸರ್ಗಿಕ ಪರಿಸರ, ಗುಡ್ಡಗಳು ಹಚ್ಚ ಹಸಿರು, ಪೈರು ಪಚ್ಚೆ, ಕೆರೆಯ ಸುತ್ತಮುತ್ತಲಿನ ಗಿಡ-ಮರ ಬಳ್ಳಿಗಳು, ನಮ್ಮ ಮೇಲೆ ವಿಶೇಷ ಪ್ರಭಾವ ಬೀರಿತ್ತು. ನಾವು ಪ್ರಾಂಶುಪಾಲರೊಂದಿಗೆ ಪ್ರತಿ ದಿನ ಸಂಜೆ ವಾಯುವಿಹಾರಕ್ಕೆ ಹೋಗುತ್ತಿದ್ದವು. ಆಗ ಅನೇಕ ತಾತ್ವಿಕ ವಿಷಯಗಳ ಬಗ್ಗೆ ಚರ್ಚೆಯಾಗುತ್ತಿತ್ತು. ಅವರು ತಮ್ಮ ಮಾತುಗಳಲ್ಲಿ ಸಾಮಾಜಿಕ ಬದ್ಧತೆ, ಜಾತಿ ವ್ಯವಸ್ಥೆ ಬಗ್ಗೆ ದೀನ ದಲಿತರು, ಶೋಷಿತ ವರ್ಗ, ದಬ್ಬಾಳಿಕೆ ದಲಿತ ಸಾಹಿತ್ಯ ಇತ್ಯಾದಿ ವಿಷಯುಗಳ ಕುರಿತ ವಾಗ್ವಾದ ನಡೆಯುವುದು, ಮೂಢನಂಬಿಕೆಗಳು, ಪವಾಡಗಳು, ಕಂದಾಚಾರ ಪದ್ಧತಿಗಳು, ವೈಜ್ಞಾನಿಕ ಯುಗದಲ್ಲಿ ಕಂಡುಬರುತ್ತಿರುವ ಸಾಮಾಜಿಕ ಬದಲಾವಣೆಗಳು, ಇವುಗಳೇ ನಮ್ಮ ಸಂಭಾಷಣೆಯ ಪ್ರಮುಖ ವಿಷಯಗಳಾಗುತ್ತಿದ್ದವು. ಸಾಹಿತಿಗಳ ಬಗ್ಗೆಯೂ ಚರ್ಚೆ ನಡೆಯುತ್ತಿತ್ತು. ದಲಿತ ಸಾಹಿತಿಗಳಾದ ಶ್ರೀ ಸಿದ್ಧಲಿಂಗಯ್ಯ, ದೇವನೂರು ಮಹದೇವ, ಬರಗೂರು ರಾಮಚಂದ್ರ, ಪಿ. ಲಂಕೇಶ್, ತೆಲುಗು ಸಾಹಿತಿ ಡಾ. ಸುಂದರಂರವರು ಇವರ ನಿಕಟಸಹವರ್ತಿಗಳಾಗಿದ್ದು ಅವರ ಸಾಹಿತ್ಯ, ಬರಹ, ಲೇಖನಗಳಿಂದ ಪ್ರಭಾವಿತರಾದವರು. ಡಾ. ಅಂಬೇಡ್ಕರ್, ಡಾ. ಲೋಹಿಯಾರವರ ವಿಚಾರಧಾರೆಗಳಿಂದ ಪ್ರಭಾವಿತರಾದವರು. ನಮಗೆ ಲೋಕಾಯತ, ಸಾಹಿತ್ಯ ಗ್ರಂಥಗಳನ್ನು ಅಧ್ಯಯನ ಮಾಡಲು ನೀಡುತ್ತಿದ್ದರು. ಇವರು ಚಳವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ದಲಿತರ ಬಗ್ಗೆ, ಶೋಷಿತ ಜನಾಂಗದ ಬಗ್ಗೆ, ದಬ್ಬಾಳಿಕೆಗೆ, ತುಳಿತಕ್ಕೊಳಗಾದವರ ಬಗ್ಗೆ ವಿಶೇಷ ಕಾಳಜಿ ವಹಿಸುವುದು ಅವರ ಬಗ್ಗೆ ತೀವ್ರ ಸಾಮಾಜಿಕ ಅನುಕಂಪ, ಕಳಕಳಿ ಅವರ ಮಾತುಗಳಲ್ಲಿ ವ್ಯಕ್ತವಾಗುತ್ತಿದ್ದವು. ಆಗಾಗ್ಗೆ ನನ್ನೊಂದಿಗೆ ಸಂಭಾಷಿಸುವಾಗ ದಲಿತ ವಿದ್ಯಾರ್ಥಿಗಳನ್ನು ಇವರು "ನನ್ನ ದತ್ತು ಮಕ್ಕಳೆಂದು" ಹೇಳಿಕೊಳ್ಳುತ್ತಿದ್ದುದನ್ನು ಕೇಳಿದ್ದೇನೆ. ಅವರ ಪುರೋಭಿವೃದ್ಧಿಗಾಗಿ, ವಿದ್ಯಾಭ್ಯಾಸಕ್ಕಾಗಿ ತಮ್ಮ ಸ್ವಂತ ಸಂಪಾದನೆಯ ಹಣವನ್ನು ಧಾರಾಳವಾಗಿ ವೆಚ್ಚ ಮಾಡುತ್ತಿದ್ದುದನ್ನು ಕಂಡಿದ್ದೇನೆ.

ಶ್ರೀಯುತರು ದಲಿತ ಚಳುವಳಿಗಳಲ್ಲಿ ಸಂಘರ್ಷ ಸಮಿತಿಯ ಸಭೆ, ಸಮಾರಂಭಗಳಲ್ಲಿ ಆಹ್ವಾನಿತರಾಗಿ ಭಾಗವಹಿಸುತ್ತಿದ್ದರು. ಶೋಷಣೆ ರಹಿತ ನವಸಮಾಜದ ನಿರ್ಮಾಣವಾಗಬೇಕೆಂಬ ಆದರ್ಶಕ್ಕೆ ಇವರ ವಿಚಾರಧಾರೆ ಸೀಮಿತವಾಗಿತ್ತು. ಈ ನಿಟ್ಟಿನಲ್ಲಿ ಇಲ್ಲಿಯವರೆವಿಗೂ ನಿರಂತರ ಶ್ರಮಿಸುತ್ತಾ ಬಂದಿರುತ್ತಾರೆ.



ಇವರು ತಮ್ಮನ್ನು ದಲಿತ ಸಾಹಿತಿಗಳೊಂದಿಗೆ ಗುರುತಿಸಿಕೊಂಡು ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ತೆಲುಗು ಭಾಷೆಯಿಂದ ಅನೇಕ ಗ್ರಂಥಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿದ್ದಾರೆ. ಕನ್ನಡ, ತೆಲುಗು, ಹಿಂದಿ ಭಾಷೆಯಲ್ಲಿ ಉತ್ತಮ ಪ್ರಭುತ್ವವನ್ನು ಸಂಪಾದಿಸಿಕೊಂಡಿದ್ದಾರೆ. ಇವರ ಲೇಖನಗಳು ಆಗಾಗ್ಗೆ ದಿನ ಪತ್ರಿಕೆಗಳಲ್ಲೂ ಪ್ರಕಟಗೊಂಡಿವೆ. ಇವರು ತಮ್ಮ ಲೇಖನಗಳಲ್ಲಿ ಭಾಷಣಗಳಲ್ಲಿ ತಾವು ನಂಬಿದ ಸಿದ್ಧಾಂತಗಳು, ವೈಚಾರಿಕತೆ ನಿರೂಪಿಸಿಕೊಂಡು ಬಂದಿದ್ದಾರೆ. ಇದರಿಂದಾಗಿ ಇವರಿಗೆ ಅನೇಕ ಪುರಸ್ಕಾರಗಳು, ಸನ್ಮಾನಗಳು, ಪ್ರಶಸ್ತಿಗಳು ದೊರತಿವೆ. ಜನಪ್ರಿಯತೆಯನ್ನು ತಂದು ಕೊಟ್ಟಿರುವುದು ಇವರ ಜೀವಮಾನ ಸಾಧನೆಯೆಂದು ಭಾವಿಸಿದರೆ ಉತ್ಪ್ರೇಕ್ಷೆಯಾಗಲಾರದು.

ಶ್ರೀಯುತರು ಸಮಾಜ ಸೇವೆ, ದಲಿತ ಸಮುದಾಯದ ಉದ್ಧಾರಕ್ಕಾಗಿ ಶ್ರಮಿಸಿರುವುದರ ಜೊತೆಗೆ ಪರಿಸರ ಪ್ರೇಮಿಗಳಾಗಿ ಜನ ಸಮುದಾಯದಲ್ಲಿ ಪರಿಸರ ಪ್ರಜ್ಞೆ ಮೂಡಿಸಲು ಶ್ರಮಿಸಿದ್ದಾರೆ. ನಾನು ಬೇರೆ ಬೇರೆ ಶಾಲಾ ಕಾಲೇಜುಗಳಿಗೆ ಹೋಗಿ ಪರಿಸರಮಾಲಿನ್ಯ, ಪರಿಸರ ಸಂರಕ್ಷಣೆ, ಪರಿಸರ ಪ್ರಜ್ಞೆಯನ್ನು ವಿದ್ಯಾರ್ಥಿಗಳಲ್ಲಿ ಜಾಗೃತಗೊಳಿಸಲು ಪ್ರವಚನ ನೀಡಲು ಪ್ರೋತ್ಸಾಹಿಸಿರುತ್ತಾರೆ. ಆರೋಗ್ಯಕರ ಜೀವನ ನಡೆಸಲು ಆಯಿಲ್ ಪುಲ್ಲಿಂಗ್ ಹೇಗೆ ಸಹಕಾರಿ ಎಂಬುದರ ಬಗ್ಗೆ ಲೇಖನಗಳನ್ನು ಬರೆದು ಇಡೀ ಕರ್ನಾಟಕ ರಾಜ್ಯದಾದ್ಯಂತ ಸಂಚರಿಸಿ ಪ್ರವಚನಗಳನ್ನು ನೀಡಿರುತ್ತಾರೆ. ಮಳೆ ನೀರು ಸಂಗ್ರಹ ಕುರಿತು ಕಾರ್ಯಗಾರಗಳನ್ನು ನಡೆಸಿರುತ್ತಾರೆ. ಮಳೆ ನೀರು ಸಂಗ್ರಹ Rain Water harvest ಬಗ್ಗೆ ಪಾತ್ಯಕ್ಷಿಕೆಗಳನ್ನು ನಡೆಸಿ ಇದರ ಬಗ್ಗೆ ವಿಶೇಷ ಅಧ್ಯಯನ ನಡೆಸಿರುತ್ತಾರೆ. ಅಂತರ್ಜಲ ಕುಸಿತದ ಬಗ್ಗೆ ಕಾಳಜಿ ವಹಿಸಿ ನೀರು ಸಂಗ್ರಹಣೆಗೆ ವ್ಯವಸಾಯಗಾರರಿಗೆ, ರೈತ ಸಮುದಾಯದವರೊಂದಿಗೆ ಸಂಪರ್ಕ ಕಲ್ಪಿಸಿಕೊಂಡು ತಿಳಿವಳಿಕೆ ನೀಡುತ್ತಾ ಬಂದಿರುತ್ತಾರೆ. ಗೋಧಿಹುಲ್ಲಿನ ಬಗ್ಗೆ ಅದರ ಔಷಧಿ ಗುಣಗಳ ಬಗ್ಗೆ ಸಂಬಂಧಪಟ್ಟ ಸಂಶೋಧಕರೊಂದಿಗೆ ಸಂಪರ್ಕ ಹೊಂದಿದ್ದು ಅದರ ಬಗ್ಗೆ ಸಾಕಷ್ಟು ಮಾಹಿತಿಗಳನ್ನು ಸಂಗ್ರಹಿಸಿ ಪ್ರಚಾರ ಕಾರ್ಯ ನಿರ್ವಹಿಸಿರುತ್ತಾರೆ. ಹೀಗೆ ಶಿಕ್ಷಣ, ಸಮಾಜ ಜೀವನ, ಸಾಮಾಜಿಕ ನ್ಯಾಯ, ಸಮಾಜ ಸುಧಾರಣೆಗಳ ಬಗ್ಗೆ ವಿವಿಧ ಕ್ಷೇತ್ರಗಳಲ್ಲಿ ಸೇವಾ ಕ್ಷೇತ್ರ, ಸಾಹಿತ್ಯ, ಸಂಸ್ಕೃತಿಯ ಪ್ರಸಾರ ಕಾರ್ಯದಲ್ಲಿ ಇವರು ನಿರ್ವಹಿಸಿರುವುದು ಅದರಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿರುವುದು ಅವರ ಕ್ರಿಯಾಶೀಲ ಪ್ರವೃತ್ತಿಗೆ ಹಿಡಿದ ಕೈಗನ್ನಡಿಯಾಗಿದೆ.

ಶ್ರೀಯುತರು ತಮ್ಮ ಸ್ವಗ್ರಾಮಕ್ಕೆ ವರ್ಗಾವಣೆಯಾಗಿ ಒಂದು ಕೋಟಾಲದಿನ್ನೆ ಸ್ವತಂತ್ರ ಪದವಿಪೂರ್ವ ಕಾಲೇಜಿನ ಸ್ಥಾಪನೆಗೂ, ಅದರ ಅಭಿವೃದ್ಧಿಗೂ ಶ್ರಮಿಸಿದ್ದಾರೆ. ಕಾಲೇಜಿನ ಪ್ರಾರಂಭದಲ್ಲಿ ತರಗತಿಗಳನ್ನು ನಡೆಸಲು ಕಟ್ಟಡದ ಅಭಾವದಿಂದ ಒಂದು ಕೋಳಿಫಾರಂನಲ್ಲಿ ತರಗತಿಗಳನ್ನು ನಡೆಸಬೇಕಾದ ದುಸ್ಥಿತಿ ಇತ್ತು. ನಾನು ಗುಡಿಬಂಡೆಯಿಂದ



ಕೋಟಾಲದಿನ್ನೆಗೆ ವರ್ಗಾವಣೆಯಾಗಲು ಊರಿನ ಪ್ರಮುಖರಾದ ಶ್ರೀ ಸುಬ್ರಹ್ಮಣ್ಯಂ, ಶಿಕ್ಷಕರಾದ ಕದಿರಪ್ಪನವರು ಇತರರ ಶಿಫಾರಿಸಿನ ಮೇರೆಗೆ ಅಲ್ಲಿಗೆ ಹೋಗಿ ಉಪನ್ಯಾಸಕನಾಗಿ ಕರ್ತವ್ಯ ನಿರ್ವಹಿಸಲು ಪ್ರಾರಂಭಿಸಿದೆ. ಶ್ರೀಯುತ ನಾರಾಯಣ ಸ್ವಾಮಿಗಳು ಮತ್ತು ತಮ್ಮ ಮಗಳು ಗೌರಿಬಿದನೂರಿನಲ್ಲಿ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಂದುವರಿಸಲು ಅನುಕೂಲವಾಯಿತು. ಉತ್ಸಾಹದಿಂದ ಉತ್ತಮ ಕಾರ್ಯನಿರ್ವಹಿಸಿ, ಫಲಿತಾಂಶ ಉತ್ತಮವಾಗಿ ಬರುವಂತೆ ಪಾಠ ಪ್ರವಚನಗಳು ನಡೆದವು. ಆದರೆ ಕಟ್ಟಡ ನಿರ್ಮಾಣಕ್ಕೆ ಸರ್ಕಾರದಿಂದ ಮಂಜೂರಾತಿ ದೊರೆತರೂ ನಿವೇಶನವಿಲ್ಲದೆ ಕಟ್ಟಡದ ಕಾರ್ಯಕ್ಕೆ ಅಡಚಣೆಯಾಯಿತು. ಆಗ ಶ್ರೀಯುತರು ನೆರೆಹೊರೆಯ ಗ್ರಾಮಗಳ ಜನರೊಂದಿಗೆ ನಿರಂತರ ಸಂಪರ್ಕ ಪಡೆದುಕೊಂಡು ಎರಡು ಎಕರೆ ಕೋಟಾದಿನ್ನೆಯ ರಸ್ತೆ ಬದಿಯ ದಿಣ್ಣೆ ಜಮೀನು ದಾನವಾಗಿ ದಾನಿಗಳಿಂದ ಪಡೆಯಲು ಯಶಸ್ವಿಯಾದರು. ನಿವೇಶನ ದೊರೆತ ಮೇಲೆ ವ್ಯವಸ್ಥಿತವಾಗಿ ಕಟ್ಟಡದ ನಿರ್ಮಾಣಕಾರ್ಯ ಯೋಜನೆಯಂತೆ ಪ್ರಾರಂಭವಾಯಿತು. ಈ ಒಂದು ಕಾರ್ಯಪೂರ್ಣಗೊಳ್ಳುವವರೆಗೂ ಕೋಳಿ ಫಾರಂನಲ್ಲಿ ಮುಂದುವರೆಸಲು ಸಾಧ್ಯವಾಗಲಿಲ್ಲ. ಹೊಸೂರಿನ ಸರ್ಕಾರಿ ಪ್ರಾಥಮಿಕ ಶಾಲೆ ಕಟ್ಟಡವಾಗಲಿ, ಖಾಸಗಿ H.N.ಪ್ರೌಢಶಾಲೆಯಲ್ಲಾಗಲೀ ತರಗತಿಗಳನ್ನು ನಡೆಯಲು ಯಾರಿಂದಲೂ ಸಹಕಾರ ದೊರೆಯಲಿಲ್ಲ. ಆಗ ವಿದ್ಯಾ ಇಲಾಖೆಯುವರಿಂದ ಮೇಲಿನ ಅಧಿಕಾರಿಗಳ ಅನುಮತಿ ಪಡೆಯಲು ಶ್ರೀಯುತರು ನಿರಂತರ ಶ್ರಮಿಸ ಬೇಕಾಯಿತು. ಕೊನೆಗೆ ಮುದುಗೆರೆ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಪಾಳಿ(shift system)ಪದ್ಧತಿಯಲ್ಲಿ ಬೆಳಗಿನ ಅವಧಿಯಲ್ಲಿ ಪದವಿಪೂರ್ವ ಕಾಲೇಜನ್ನು ನಡೆಸಲು ತೀರ್ಮಾನಿಸಲಾಯಿತು. ಹೊಸ ಕಟ್ಟಡ ನಿರ್ಮಾಣಕ್ಕೆ ಸುಮಾರು ಎರಡು ಮೂರು ವರ್ಷಗಳು ಬೇಕಾಯಿತು. ಆದರೂ ಪಠ್ಯ ವಿಷಯಗಳ ಬೋಧನೆ ಸುಗಮವಾಗಿ ನಡೆಯಲು ಅಡಚಣೆ ಉಂಟಾಗಲಿಲ್ಲ. ಉತ್ತಮ ಫಲಿತಾಂಶ ಬರುತ್ತಿದ್ದುದರಿಂದ ಕಾಲೇಜಿನ ಕೀರ್ತಿ, ಜನಮನ್ನಣೆ ಪಡೆಯುವಂತಾಯಿತು. ಹೀಗೆ ತಮ್ಮ 5-6 ವರ್ಷಗಳ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದ ಅವಧಿಯಲ್ಲಿ ತಮ್ಮ ಹುಟ್ಟೂರಿನ ಋಣ ತೀರಿಸಲು ಶ್ರೀಯುತರ ಕಾರ್ಯ ನಿರ್ವಹಣೆ ಎಲ್ಲರ ಶ್ಲಾಘನೆಗೆ ಪಾತ್ರವಾಯಿತು.

ಶ್ರೀಯುತರು ಪ್ರಾಂಶುಪಾಲರ ಹುದ್ದೆಯಿಂದ ಬಡ್ತಿ ಪಡೆದು ಉಪನಿರ್ದೇಶಕರಾಗಿ ಬೆಂಗಳೂರು ವಿಭಾಗಕ್ಕೆ ನೇಮಕಗೊಂಡರು. ಆ ನಂತರ ಜಂಟಿ ನಿರ್ದೇಶಕರಾಗಿ ನಿವೃತ್ತಿ ಹೊಂದಿರುತ್ತಾರೆ. ಶಿಕ್ಷಣ ಕ್ಷೇತ್ರದಲ್ಲಿ ವಿವಿಧ ಹುದ್ದೆಗಳಲ್ಲಿ ಯಾವುದೇ ಲೋಪದೋಷಗಳಿಲ್ಲದೆ ತಮ್ಮ ವೃತ್ತಿಯನ್ನು ಪ್ರಾಮಾಣಿಕವಾಗಿ ನಿರ್ವಹಿಸಿ ಇಲಾಖೆಗೆ ತಮ್ಮ ಅಮೂಲ್ಯ ಸೇವೆ ಸಲ್ಲಿಸಿ ನಿವೃತ್ತರಾಗಿ ವಿಶ್ರಾಂತಿ ಜೀವನ ನಡೆಸಿಕೊಂಡು ಬರುತ್ತಿದ್ದಾರೆ.



ವೃತ್ತಿಯಿಂದ ನಿವೃತ್ತರಾದರೂ ತಮ್ಮ ಅನಾರೋಗ್ಯವನ್ನು ಲೆಕ್ಕಿಸದೆ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಅವರ ವ್ಯಕ್ತಿತ್ವದ ವೈಶಿಷ್ಟ್ಯತೆಯಾಗಿದೆ.

"ಚಿಕ್ಕ ಕುಟುಂಬ ಚೊಕ್ಕ ಕುಟುಂಬ" - ಎಂಬ ನಾಣ್ಣುಡಿಗೆ ಅನುಗುಣವಾಗಿ ಶ್ರೀಯುತರದು ಒಂದು ಪುಟ್ಟ ಕುಟುಂಬ. ಒಬ್ಬಳೇ ಸುಪುತ್ರಿ - ಚಿ. ಪದ್ಮ. ಶ್ರೀಮತಿ ನಾರಾಯಣಸ್ವಾಮಿಗಳು ಅನುರೂಪರಾದ ಪತ್ನಿ. ಸಮಾಜ ಸೇವಾ ಕಾರ್ಯದಲ್ಲಿ ಸಹಭಾಗಿಗಳಾಗದಿದ್ದರೂ ಅವರ ಕಾರ್ಯ ನಿರ್ವಹಣೆಗೆ ಅಡ್ಡಿಪಡಿಸಿದವರಲ್ಲ. ನಾನು ಅವರ ಮನೆಗೆ ಹೋದಾಗಲೆಲ್ಲಾ ನನಗೆ ಹಾಲು, ಹಣ್ಣು ನೀಡಿ ಆತ್ಮೀಯತೆಯಿಂದ ಮಾತನಾಡಿಸಿ ಉಪಚರಿಸುತ್ತಿದ್ದುದನ್ನು ನಾನು ಮರೆಯಲಾರೆ. ಚಿ. ಪದ್ಮ ನನಗೆ ಶಿಷ್ಯಳೂ ಹೌದು. ಪದವೀಧರಳಾಗಿ ಬ್ಯಾಂಕ್ ನೌಕರಳಾಗಿ, ಇಬ್ಬರು ಮಕ್ಕಳ ತಾಯಿಯಾಗಿ ಉತ್ತಮ ಪತ್ನಿಯಾಗಿ ಸುಖ ಸಂಸಾರ ಜೀವನ ನಡೆಸುತ್ತಿರುವುದು ಶ್ರೀಯುತರಿಗೆ ನೆಮ್ಮದಿಯನ್ನು ನೀಡಿದೆ. ವೆಚ್ಚಕ್ಕೆ ಹೊನ್ನಿರಲು, ಇಚ್ಛೆಯನರಿತ ಸತಿಇರಲು ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ ಎಂಬ ವಚನಕ್ಕೆ ಅನ್ವಯಿಸುವಂತಿದೆ ಶ್ರೀಯುತರ ಕುಟುಂಬ ಜೀವನ.

ಶ್ರೀಯುತ ನಾರಾಯಣಸ್ವಾಮಿಗಳು ನನಗೆ ಆತ್ಮೀಯ ಮಿತ್ರರು. ನನ್ನ ಬಗ್ಗೆ ಅವರಿಗೆ ಆತ್ಮೀಯ ಭಾವನೆ ಇದೆ. ಅವರ ನಾಸ್ತಿಕ ಚಿಂತನೆಗಳಿಗೂ ನನ್ನ ಆಸ್ತಿಕ ಭಾವನಗಳಿಗೂ ಭೇದ ಭಾವಗಳಿದ್ದರೂ, ತಾತ್ವಿಕವಾಗಿ ಪರಸ್ಪರ ಭಿನ್ನ ನಿಲುವುಗಳನ್ನು ಹೊಂದಿದವರಾದರೂ ಸ್ನೇಹ ಸಂಬಂಧಗಳಿಗೆ ಇವು ಯಾವುವು ಎಂದಿಗೂ ಅಡ್ಡಿ ಬಂದಿಲ್ಲ. ಇಂತಹ ಆತ್ಮೀಯ ಸನ್ಮಿತ್ರರಿಗೆ ಈಗ ಅಭಿನಂದಿಸುವುದು. ಅವರಿಗೆ "ಅಭಿನಂದನಾ ಗ್ರಂಥ" ಸಮರ್ಪಿಸುತ್ತಿರುವುದು ಅವರ ಎಲ್ಲಾ ಅಭಿಮಾನಿಗಳಿಗೂ, ಬಂಧು ಬಳಗದವರಿಗೂ ಅಮಿತ ಆನಂದ ನೀಡಿದೆ. ಈ ಶುಭ ಸಂದರ್ಭದಲ್ಲಿ ಅವರಿಗೆ ಇನ್ನೂ ಪೂರ್ಣ ಆಯುಷ್ಯ, ಆರೋಗ್ಯ, ಶಾಂತಿ, ನೆಮ್ಮದಿ ದೊರೆಯಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.










# ಬಹುಮುಖ ಪ್ರತಿಭೆಯ : ಕೆ. ನಾರಾಯಣಸ್ವಾಮಿ

– ಡಾ. ಎಚ್.ಕೆ. ನರಸಿಂಹಮೂರ್ತಿ

ಉಪನ್ಯಾಸಕರು, ಎಸ್.ಎಂ.ಕೆ.ಆರ್.ವಿ. ಕಾಲೇಜು, ಬೆಂಗಳೂರು
ಮತ್ತು ಪ್ರಗತಿಪರ ಚಿಂತಕರು

**'ನ್ಯಾಯ ಲೌಕಿಕವಾದುದು. ಅದನ್ನು ಯಾರು ಬೇಕಾದರೂ ಉಲ್ಲಂಘಿಸಬಹುದು. ಧರ್ಮ ಸಹೋದರತೆ ಪವಿತ್ರವಾಗಿರುವುದರಿಂದ ಪ್ರತಿಯೊಬ್ಬರು ಗೌರವಿಸಲೇಬೇಕು. ಈ ನನ್ನ ಸಿದ್ಧಾಂತ ಒಂದು ಮಹಾ ಉದ್ಯಮ. ನಾನು ಮತಾಂತರವಾಗಬೇಕಾದ ಅವಶ್ಯಕತೆ ಉಂಟಾಗಿದೆ. ಆದ್ದರಿಂದ ನನ್ನ ಅನುಯಾಯಿಗಳನ್ನು ತ್ರಿಗುಣ ಸಿದ್ಧಾಂತದಿಂದ ವಿಮುಖರನ್ನಾಗಿ ಮಾಡಿ, ನನ್ನ ಸಿದ್ಧಾಂತದ ಕಡೆಗೆ ಆಕರ್ಷಿಸಬೇಕಾಗಿದೆ. ಪ್ರಸ್ತುತ ಭಾರತೀಯರು ಎರಡು ವಿರೋಧಿ ಸಿದ್ಧಾಂತಗಳ ಮಧ್ಯೆ ಜೀವನ ನಡೆಸುತ್ತಿರುವರು. ಅವರ ರಾಜಕೀಯ ಧ್ಯೇಯಗಳು, ಸ್ವಾತಂತ್ರ್ಯ, ಸಮಾನತೆ, ಸಹೋದರತೆಗಳು ರಾಜ್ಯಾಂಗದಲ್ಲಿ ಭದ್ರವಾಗಿದ್ದು, ಅವುಗಳನ್ನೇ ಅವರ ಹಿಂದೂ ಧರ್ಮ ತಿರಸ್ಕರಿಸಿದೆ.**

**- ಡಾ. ಬಿ.ಆರ್. ಅಂಬೇಡ್ಕರ್**

ಭಾರತ ದೇಶದ ಸಮಸ್ಯೆಗಳನ್ನು ಮತ್ತು ಅದರ ಪರಿಹಾರೋಪಾಯಗಳನ್ನು ಚಿಂತಿಸಿದವರಲ್ಲಿ ಗಾಂಧಿ ಮತ್ತು ಅಂಬೇಡ್ಕರ್ ಪ್ರಮುಖರು. ತಮ್ಮ ಆಯುಷ್ಯದ ಬಹುತೇಕ ಭಾಗವನ್ನು ಈ ದೇಶದ ಚಿಂತನೆಯಲ್ಲಿ ಕಳೆದರು ಎಂಬುದರಲ್ಲಿ ಸಂಶಯವಿಲ್ಲ. ಈ ದೇಶದ 'ಸಾಮಾಜಿಕ' ವಿನ್ಯಾಸದ ಬಗ್ಗೆ ಇವರಷ್ಟು ಆಳಕ್ಕೆ ಹೊಕ್ಕವರು ಸಿಕ್ಕುವುದು ತೀರ ಅಪರೂಪ. ಗಾಂಧಿ ಭಾರತೀಯ ಬದುಕಿನ ವೈರುಧ್ಯಗಳಲ್ಲಿ ನರಳಿದವರು. ಅಂಬೇಡ್ಕರ್ ಭಾರತೀಯ ಬದುಕಿನ ವೈರುಧ್ಯಗಳ ಬಗ್ಗೆ ಕೆರಳಿದವರು. ನರಳಿಕೆಯ ಸಂಕಟದ



ಅನುಭವದೊಂದಿಗೆ ಕೆರಳುವಿಕೆಯ ಸಾತ್ವಿಕ ಸಿಟ್ಟನ್ನು ಹಕ್ಕೊತ್ತಾಯ ನೆಲೆಗೆ ತಿದ್ದು ತಂದವರು. ಅಂಬೇಡ್ಕರ್, ವೈರುಧ್ಯಗಳಲ್ಲಿ ತೊಳಲಾಡುವುದಕ್ಕಿಂತ ಹೊಸತೋರಿದವರಲ್ಲಿ ಆಶ್ರಯವನ್ನು ಕಟ್ಟಿದವರು. ಪರ್ಯಾಯಗಳ ಮಹಾಪೂರವೇ ಭಾರತದಲ್ಲಿ ಹರಿದು ಬಂದಿದೆ. ಆದರೆ ಮೂಲಸ್ತರವನ್ನು ಬಿಟ್ಟು ಹೋಗಲಾರದ ಸ್ಥಿತಿಯನ್ನು ಕಂಡು ಅಂಬೇಡ್ಕರ್ ಮರುಗುತ್ತಾರೆ. ತಮ್ಮ ಸ್ಪಷ್ಟ ನಿಲುವಿನ ಕಡೆ ನಿಖರವಾದ ಮಾತುಗಳಲ್ಲಿ ತಿಳಿಸುತ್ತಾರೆ. ಆದರೂ ಭಾರತೀಯ ಜೀವನಕ್ರಮದ ವೈರುಧ್ಯತೆಗಳು ಮತ್ತೆ ಮತ್ತೆ ಅನುಮಾನಗಳನ್ನು ಹುಟ್ಟುಹಾಕುತ್ತಲೇ ಸಮಸ್ಯೆಗಳನ್ನು ಸೃಷ್ಟಿಸುತ್ತಿರುತ್ತದೆ. ಸಮಸ್ಯೆಗಳ ಮಹಾಪೂರವನ್ನೇ ಹರಿಸುತ್ತಿರುವ ಈ ದೇಶಕ್ಕೆ ನಿಜವಾದ ಪರಿಹಾರವೆಂದರೆ, ಒಂದೊಂದು ಸಂಗತಿಗೆ ವಿಷಯಕ್ಕೆ ಮಾತ್ರ ಸೀಮಿತವಾಗದೆ, 'ಅಖಂಡ' ರೂಪಾತ್ಮಕ ಪರಿಹಾರದ ಧ್ಯೇಯವನ್ನಿಟ್ಟುಕೊಳ್ಳಬೇಕು. ಆಗ ಮಾತ್ರ ಒಂದರ ಹಾದಿ ಇತರ ಸಂಗತಿಗಳ ಕ್ರೋಢೀಕರಣ ಸಾಧ್ಯ. ಯಾವುದೇ ವಸ್ತು ವಿಷಯವನ್ನು 'ಅಖಂಡ'ವಾಗಿಟ್ಟು ನೋಡಿದಾಗ ಸಿಗುವ ಪೂರ್ಣಾರ್ಥಕ್ಕೆ ಪರಿಪೂರ್ಣತೆ ಇರುತ್ತದೆ. ಹಾಗೆಂದ ಮಾತ್ರ ಪ್ರತಿಘಟನೆಯ 'ಸತ್ಯ'ಪೂರ್ಣ ಸತ್ಯವಲ್ಲವೆಂದು ಭಾವಿಸಬೇಕಾಗಿಲ್ಲ. ಮಹತ್ವ 'ಪೂರ್ಣತೆ'ಯ ಕಡೆಗೆ ಸಾಗುವ ಮೈಲುಗಲ್ಲುಗಳು ಅವುಗಳು ಎಂಬುದನ್ನು ಮರೆಯಬೇಕಾಗಿಲ್ಲ.

ಸಮಾಜ ಮತ್ತು ಶಿಕ್ಷಣ ಕೇಂದ್ರಿತ ಭಾರತೀಯ ವ್ಯವಸ್ಥೆಯಲ್ಲಿ ಅಕ್ಷರ ಪ್ರಜ್ಞೆ ಮತ್ತು ಸಾಮಾಜಿಕ ಸ್ತರ ವಿನ್ಯಾಸ ಪರಸ್ಪರ ಶೋಷಣೆ ಅಸ್ತ್ರಗಳಾಗಿಯೇ ಝಳಪಿಸಿವೆ. ತಳಸಮುದಾಯಗಳು ಅಕ್ಷರ ವಂಚಿತರಾಗುವುದಕ್ಕೆ ಜಾತಿ ಪರಂಪರೆ ಹೇಗೆ ಮೂಲಕಾರಣವೋ ಹಾಗೇನೇ ಜಾತಿ ನಿರ್ಮೂಲನೆಯ ಮಹಾಕಾರ್ಯಕ್ಕೆ ಅಕ್ಷರಜ್ಞಾನದ ಜಾಗೃತಿಯೂ ಅತ್ಯಾವಶ್ಯಕ. ಜಾತಿ ವಿನಾಶ ಮತ್ತು ಅಕ್ಷರಗಳಿಗೆ ಹಂಬಲತೆಗಳಲ್ಲಿ ಪರಿಶ್ರಮಿಸುವ ದಲಿತ ಸಮುದಾಯಕ್ಕೆ ಒಂದನ್ನೊಂದು ಹಿಂದಿಕ್ಕಿ ಭಾರತೀಯ ಜೀವನಕ್ರಮದ ಶ್ರೇಣೀಕೃತ ವ್ಯವಸ್ಥೆಯನ್ನು ಭೇದಿಸುವ ಸರ್ವತಂತ್ರ ಸಮಾನತೆಯನ್ನು ಸಾಧಿಸುವ ಬಯಕೆ ಇದ್ದೇ ಇರುತ್ತದೆ. ಇದಕ್ಕೆ ಅಗ್ರಪಂಕ್ತಿಯಲ್ಲಿ ಕಾಣಬಹುದಾದವರು ಶ್ರೀಯುತ ಕೆ. ನಾರಾಯಣಸ್ವಾಮಿ ಅವರು.

ಮೂಲತಃ ನಾರಾಯಣಸ್ವಾಮಿಯವರ ಪ್ರಧಾನ ಗುರಿ ಎಂದರೆ ದಲಿತೋದ್ಧಾರ, ಅಸ್ಪೃಶ್ಯತೆಯ ನಿವಾರಣೆ, ಇಳಿವಯಸ್ಸಿನಲ್ಲೂ ಇದಕ್ಕೆ ಮಿಡಿಯುವ ಬಿಸಿ ಭಾವನೆಯ ಸ್ಫೂರ್ತಿ ಇವರ ರಕ್ತದ ಸೆಲೆ. ಈ ನಿಟ್ಟಿನಲ್ಲಿ ನಾರಾಯಣಸ್ವಾಮಿಯವರ ಆಸಕ್ತಿಗಳು ಗಮನಾರ್ಹ. ತನ್ನ ಸಮುದಾಯದ ಕಡೆ ತಿರುಗಿ ನೋಡದ ಜನರ ನಡುವೆ ಅಪವಾದವೆಂಬಂತೆ ಕಂಡುಬರುವ ವಿಶಿಷ್ಟ ವ್ಯಕ್ತಿತ್ವ ನಾರಾಯಣಸ್ವಾಮಿಯವರದ್ದು. ನಾರಾಯಣಸ್ವಾಮಿಯವರು ವ್ಯಕ್ತಿಯಾಗಿ ಮತ್ತು ಉತ್ತಮ ವ್ಯಕ್ತಿತ್ವದ ಸತ್ಯವಾಗಿ



ಕಾಣುತ್ತಾರೆ. ಅವರ ಅನುಭವ ಮತ್ತು ಆಸಕ್ತಿ ಬಹು ವಿಭಿನ್ನ ಹಾಗೂ ಬಹು ಮುಖವಾದದ್ದು. ಬಹುಮುಖಿ ವ್ಯಕ್ತಿತ್ವ ನಾರಾಯಣಸ್ವಾಮಿ ಬಯಲುಸೀಮೆ ಅಪರೂಪದ ಪ್ರತಿಭಾನ್ವಿತ ಸತ್ವ.

'ನೀರಹನಿ - ಜೀವಪನಿ' ಎಂಬಂತೆ ಹನಿ ನೀರಿಗೂ ಬವಣೆಯ ಬೇಗುದಿಯಲ್ಲಿ ಬೆಳೆದ ಬಯಲುಸೀಮೆಯ ಹುಡುಗನಿಗೆ ಈ ನೆಲದ ಬಾಯಾರಿಕೆಯ ಅರಿವಿದೆ. ಈ ಪ್ರಾಂತ್ಯದಲ್ಲಿರುವ ನೀರಿನ ಬವಣೆ ನೀಗಬೇಕಾದರೆ ಏನು ಮಾಡಬೇಕೆಂಬ ಚಿಂತೆ ಬಾಲ್ಯದಿಂದಲೂ ಕೆ. ನಾರಾಯಣಸ್ವಾಮಿಯವರನ್ನು ಕಾಡಿದೆ. ಹಾಗಾಗಿಯೇ ಅದರ ಪರಿಹಾರೋಪಾಯವನ್ನು ತಮ್ಮ ವೈಯಕ್ತಿಕ ನೆಲೆಯಲ್ಲಿ ಕಂಡುಕೊಂಡಿದ್ದಾರೆ. ನಂತರ ಅದರ ಉಪಯೋಗವನ್ನು ಸಮಾಜಕ್ಕೆ ಉಣಬಡಿಸಿದ್ದಾರೆ. "ಯಾವುದೇ ಸಮಸ್ಯೆ ಜೀವ ಹಿಂಡುವ ಕಾಡುವಿಕೆಯನ್ನು ಪಡೆಯದ ಹೊರತು ಪರಿಹಾರ ಗೋಚರವಾಗುವುದಿಲ್ಲ' ಎಂಬುದು ನನ್ನ ನಂಬಿಕೆ. ನಾರಾಯಣಸ್ವಾಮಿಯವರಿಗೆ ತಮ್ಮ ತವರು ಪ್ರದೇಶ 'ಜಲಕ್ಷಾಮ'ವು ಕೂಡ ಹಾಗೇ ಕಾಡಿರಲೇಬೇಕು. ಹಾಗಾಗಿಯೇ ಅವರು 'ಅಂತರಜಲ'ವನ್ನು ಹೆಚ್ಚು ಮಾಡುವ ಆಧುನಿಕ ಮತ್ತು ವೈಜ್ಞಾನಿಕ ವಿಧಾನಗಳನ್ನು ಕಂಡುಕೊಂಡಿದ್ದಾರೆ. ಮಾತ್ರವಲ್ಲದೆ ತಮ್ಮ ಸುತ್ತಮುತ್ತಲಿನ ಮನೆಗಳಿಗೆ ಹಾಗೂ ಅಕ್ಕಪಕ್ಕದ ರೈತರಿಗೆ ತಿಳಿ ಹೇಳಿದ್ದಾರೆ. ವಿಷಪ್ರಾಯವಾದ ಫ್ಲೋರೈಡ್ ಮಿಶ್ರಿತ ನೀರು ಇಂದು ಈ ಭಾಗದ ಜನರ ಪ್ರಾಣವನ್ನು ನಿಧಾನವಾಗಿ ಹೀರುತ್ತಿದೆ. ಯಾವ ಯಾವ ಪ್ರದೇಶದಲ್ಲಿ ಅಂತರ್ಜಲ ಬತ್ತುತ್ತಿದೆಯೇ ಅಲ್ಲೆಲ್ಲವೂ ಅನಿವಾರ್ಯವಾಗಿ ಈ ವಿಷಯುಕ್ತ ನೀರನ್ನು ಕುಡಿದೇ ಬದುಕುತ್ತಿದ್ದಾರೆ. 'ವಿಷಕಂಠ' ವಿಷವನ್ನು ತನ್ನ ಗಂಟಲಲ್ಲಿ ಉಳಿಸಿಕೊಂಡ. ಆದರೆ ಅದಕ್ಕೂ ಮೀರಿ ಈ ಜನತೆ ಮೈತುಂಬ 'ಫ್ಲೋರೋಸಿಸ್' ಕಾಯಿಲೆಯನ್ನು ತುಂಬಿಕೊಳ್ಳುತ್ತಿದ್ದಾರೆ. ನಾರಾಯಣಸ್ವಾಮಿ ಅವರು ಈ ಬಗ್ಗೆ ತೀವ್ರ ಅಧ್ಯಯನ ಮಾಡಿ, ಅದಕ್ಕೆ ಪರಿಹಾರೋಪಾಯಗಳನ್ನು ಕಂಡಿದ್ದಾರೆ. ಆ ಮೂಲಕ ಇದನ್ನು ಜನಾಂದೋಲನದ ಮಾದರಿಯಲ್ಲಿ ಜನಜಾಗೃತಿ ಮೂಡಿಸಿದ್ದಾರೆ. ಸರ್ಕಾರದ ಅನುದಾನಗಳಲ್ಲಿ ಎನ್.ಜಿ.ಓ.ಗಳು ಮಾಡುವ ಈ ಕೆಲಸವನ್ನು ಸ್ವಾಮಿ ಅವರು ನಿಸ್ವಾರ್ಥದಿಂದ ನಿರ್ವಹಿಸಿದ್ದಾರೆನ್ನುವುದು ಅವರ ಸಾಮಾಜಿಕ ಕಾಳಜಿಯನ್ನು ಎತ್ತಿಹಿಡಿಯುತ್ತದೆ.

ಸಲೀಸಾದ 'ಆಯಿಲ್ ಪುಲ್ಲಿಂಗ್' ಎಂಬ ಬಹುರೋಗ ನಿವಾರಣೆಯ ಚಿಕಿತ್ಸಾ ಪದ್ಧತಿಯನ್ನು ಆಂಧ್ರಪ್ರದೇಶದಲ್ಲಿ ಸರ್ಕಾರವೇ ಪ್ರಚುರಪಡಿಸಿರುವುದನ್ನು 90ರ ದಶಕದಲ್ಲಿ ಕಾಣುತ್ತೇವೆ. ಕೆ. ನಾರಾಯಣಸ್ವಾಮಿ ಅವರು ಈ ವಿಧಾನದ ಚಿಕಿತ್ಸೆಯನ್ನು ಪರಿಪೂರ್ಣವಾಗಿ ಗ್ರಹಿಸಿ ಸ್ವತಃ ತಾವು ಅದರ ಫಲಾನುಭವವನ್ನು ಸ್ವೀಕರಿಸಿದ ನಂತರ ಅವನ್ನು ಜನಸಮುದಾಯದಲ್ಲಿ ಪ್ರಚುರಪಡಿಸಲು ಸನ್ನದ್ಧರಾದವರು. ತಮ್ಮ ತವರು ಜಿಲ್ಲೆಯಾದ



ಕೋಲಾರ ಜಿಲ್ಲೆಯಲ್ಲಿ ಮಾತ್ರವಲ್ಲದೆ ಕರ್ನಾಟಕದಾದ್ಯಂತ ಹಲವಾರು ಕಡೆಗಳಲ್ಲಿ ಇದರ ಪ್ರಯೋಜನ ಮಹತ್ವ ಸಾರಿ ಹೇಳಿ, ಬಹುಜನರನ್ನು ಹಲವಾರು ರೋಗಗಳಿಂದ ಮುಕ್ತರನ್ನಾಗಿ ಮಾಡಿದ್ದಾರೆ. 'ಕನ್ನಡಪ್ರಭ' ಎಂಬ ದೈನಿಕದಲ್ಲಿಯೂ ಕೂಡ ಈ ಕುರಿತಂತೆ ಹಲವಾರು ಲೇಖನಗಳನ್ನು ಪ್ರಕಟಿಸಿ 'ಆಯಿಲ್ ಪುಲ್ಲಿಂಗ್' ಚಿಕಿತ್ಸಾ ಪದ್ಧತಿಯನ್ನು ಪ್ರಚಾರ ಮಾಡಿದ್ದಾರೆ. ಈ ಚಿಕಿತ್ಸಾ ವಿಧಾನವು ಬಡವರಿಗೆ ವರದಾನವಾಗಿದೆ. ಇದು ಯಾವುದೇ ರೀತಿಯ ಆರ್ಥಿಕ ಹೊರೆ ಇಲ್ಲದೆ ನೋವಿನ ಬವಣೆಯನ್ನು ನೀಗುವ ಸರಳ ಪದ್ಧತಿಯಾಗಿದೆ.

ಅಕ್ಷರದ ಶಕ್ತಿ ಶಿಕ್ಷಣದ ಮಂತ್ರ : ಅಕ್ಷರದ ಶಕ್ತಿ ಶಿಕ್ಷಣದ ಮಂತ್ರ ಕೆ. ನಾರಾಯಣಸ್ವಾಮಿಯ ವಿಶಿಷ್ಟವಾದ ಮತ್ತು ಅತ್ಯವಶ್ಯಕವೆಂದು ಭಾವಿಸಿ ದುಡಿದು ಸಾರ್ಥಕತೆಯನ್ನು ಸಾಧಿಸಿದ ಕ್ಷೇತ್ರ, ಶಿಕ್ಷಣ ಕ್ಷೇತ್ರ, ಸ್ವಾಮಿಯವರು ಶಿಕ್ಷಣ ಇಲಾಖೆಯಲ್ಲಿ ಅನಾಮತ್ತಾಗಿ 33 ವರ್ಷಗಳ ಕಾಲ ತಮ್ಮನ್ನು ಅರ್ಪಿಸಿಕೊಂಡು ನಡೆದಿದ್ದಾರೆ. ಶಿಕ್ಷಕರಾಗಿ, ಉಪನ್ಯಾಸಕರಾಗಿ ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿರುವುದರ ಜೊತೆಗೆ ಪದವಿಪೂರ್ವ ಶಿಕ್ಷಣ ಇಲಾಖೆಯಲ್ಲಿ ಉಪ ನಿರ್ದೇಶಕರಾಗಿ, ಜಂಟಿ ನಿರ್ದೇಶಕರಾಗಿಯೂ ಸಹ ಸೇವೆ ಸಲ್ಲಿಸಿದ್ದಾರೆ. ಇವರ ಬಹುತೇಕ ಸೇವಾ ಅವಧಿ ಗ್ರಾಮೀಣ ಪ್ರದೇಶದಲ್ಲಿ ಎಂಬುದನ್ನು ಮರೆಯಲಾಗದು. ಶಿಕ್ಷಣವೆಂದರೆ ಕೇವಲ ಬೋಧಿಸುವುದಲ್ಲ. ಭಿನ್ನವಾಗಿ ಸಾಮಾಜಿಕ ಪರಿವರ್ತನೆಯ ಆಶಯದಲ್ಲಿ ದುಡಿಯುವುದು. ಸಮಾಜದ ಆಗುಹೋಗುಗಳಿಗೆ ಕಣ್ಮುಚ್ಚಿ ಕುಳಿತು ಕೇಳುವುದು ಶಿಕ್ಷಣವೇ ಅಲ್ಲ, ಅಂತಹವರು ವಿದ್ಯಾವಂತರೇ ಅಲ್ಲ' ಎಂಬುವ ದೃಷ್ಟಿಕೋನದ ಬೋಧನೆ ಇವರ ಪರಿಪಾಠ, ಹಲವಾರು ಹಂತಗಳಲ್ಲಿ ಸೇವೆ ಸಲ್ಲಿಸಿರುವ ಸ್ವಾಮಿ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದರು ಎಂಬುದನ್ನು ನಂಬಲು ಒಮ್ಮೊಮ್ಮೆ ಕಷ್ಟವೆನಿಸುತ್ತದೆ. ಸಾಮಾನ್ಯವಾಗಿ ಉನ್ನತ ಹುದ್ದೆಗಳಲ್ಲಿ ಸುಳಿದಾಡಿದವರು ಸಾಮಾನ್ಯ ಜನತೆಯಿಂದ ಬಹುದೂರದಲ್ಲಿ ಉಳಿದುಬಿಡುತ್ತಾರೆ. ನಡುವಿನ ಅಂತರವನ್ನು ಉದ್ದೇಶಪೂರ್ವಕವಾಗಿಯೇ ಕಾಯ್ದುಕೊಳ್ಳುತ್ತಾರೆ. ಸರಳವಾಗಿ ಹೇಳಬಹುದಾದುದನ್ನು ಸಹ ಕ್ಲಿಷ್ಟತೆಯಲ್ಲಿ ವಿವರಿಸುತ್ತಾರೆ. ನಾರಾಯಣಸ್ವಾಮಿ ಯವರಲ್ಲಿ ಇಂತಹ ಪ್ರತಿಷ್ಠೆಯ ಗಂಧಗಾಳಿಯೊಂದು ಸೋಂಕು ಇಲ್ಲದಿರುವುದು ಸರಳತೆಯ ಪ್ರತೀಕವಾಗಿವೆ. ಮೊನ್ನೆ ನನ್ನ ವಿದ್ಯಾರ್ಥಿ ಮಿತ್ರ ಮಹಾತ್ಮ ಗಾಂಧೀಜಿಯವರನ್ನು ಕುರಿತು ತಾತ್ಸಾರದ ಧೋರಣೆಯಲ್ಲಿ ಮಾತಾಡಿದ. ಹೊಸ ಪೀಳಿಗೆಗೆ ಗಾಂಧೀಜಿಯನ್ನು ಹೀಗಳೆಯುವುದು ಒಂದು ಫ್ಯಾಷನ್ ಕೂಡ ಆಗಿದೆ. ಈ ದೇಶದ ದುರಂತವೆಂದರೆ ನಮ್ಮ ಮಹಾನ್ ವ್ಯಕ್ತಿಗಳ ಆಶಯಗಳನ್ನು ಯುವಪೀಳಿಗೆಗೆ ಸಮರ್ಥವಾಗಿ ತಲುಪಿಸದೇ ಇರುವುದು. ಅವನ ಮಾತಿಗೆ ನಾನೆಂದೆ 'ನೋಡಿ, ಬ್ರದರ್, ಈ ದೇಶದಲ್ಲಿ ನಾವು ಸ್ವಾತಂತ್ರ್ಯನಂತರ ಹುಟ್ಟಿದೋರು, ಈ ದೇಶದ ಸಂವಿಧಾನದಲ್ಲಿ 'ದಲಿತರ'ನ್ನು ಸೋದರತ್ವದಲ್ಲಿ ಕಾಣಬೇಕೆಂದು ಬರೆದ ನಂತರದ

ಕಾಲದಲ್ಲಿ ಬದುಕಿದೋರು ಹಾಗಾಗಿ ನಮಗೆ ಗಾಂಧಿ ಮತ್ತು ಅಂಬೇಡ್ಕರ್ ಅಷ್ಟು ಸಲೀಸಾಗಿ ಅರ್ಥವಾಗೋಲ್ಲ. ನಿಜವಾಗ್ಲೂ ಅವರನ್ನು ತಿಳಿದುಕೊಳ್ಳಬೇಕಾದರೆ ಒಂದು ಸಾರಿ ಗಾಂಧೀಜಿಯವರ ಸರಳತೆಯ ವಿಷಯವನ್ನು ಯಾವುದಾದರೂ ಒಂದು ಅಂಶದಲ್ಲಿ, ಚಪ್ಪಲಿ ಹಾಕಲ್ಲವೆಂದೂ ಇನ್‌ಶರ್ಟ್ ಮಾಡಲ್ಲವೆಂದೂ, ವಾಚು ಕಟ್ಟಲ್ಲವೆಂದೂ ಯಾವುದಾದರೂ ಬರೆದು ಈ ಸಣ್ಣ ಸಂಗತಿಯನ್ನು ಅಳವಡಿಸಿಕೊಳ್ಳುವ ಪ್ರಯತ್ನ ಮಾಡು, ಆಗ ಅವರ ಸರಳತೆ ಅರ್ಥವಾಗುತ್ತದೆ. ಮತ್ತೆ ಅಂಬೇಡ್ಕರ್ ಅರ್ಥವಾಗಲು ಎಂದಾದರೂ ಒಂದು ಬಾರಿ ಸಾಮಾಜಿಕ ಬಹಿಷ್ಕಾರದ ಅನುಭವವನ್ನು ಪಡೆ, ಯಾವುದಾದರೂ ತಂಡದಿಂದ ನಿನ್ನನ್ನು ನಿಷೇಧಿಸಿದಾಗ ಪ್ರವೇಶ ನೀಡದೇ ಇದ್ದಾಗ, ಸಮೂಹದಿಂದ ದೂರ ತಳ್ಳಿದಾಗ ನೀನೊಬ್ಬ ಹೊರಗುಳಿದಾಗ ಆಗುವ ತಲ್ಲಣ ಅದನ್ನು ತಿಳಿಸುತ್ತದೆ' ಎಂದೆ. ನಂತರ ಕೆಲ ದಿನಗಳಲ್ಲಿ ಬಂದು 'ಸಾರ್ ನೀವು ಸರಿಯಾಗಿ ಹೇಳಿದ್ದೀರಿ' ಕೆ. ನಾರಾಯಣಸ್ವಾಮಿಯವರ ಪ್ರತಿಷ್ಠೆ ರಹಿತ ಸರಳತೆ ಒಮ್ಮೊಮ್ಮೆ ನಮ್ಮನ್ನು ದಿಗ್ಮೂಢರನ್ನಾಗಿಸುತ್ತದೆ.

'ಅಕ್ಷರಕ್ಕೆ ಈ ಸಮಾಜವನ್ನು ಬದಲಾಯಿಸುವ ಶಕ್ತಿ ಇದೆ.' ಹಿರಿಯರು ಹೇಳುವಂತೆ 'ಪೆನ್‌ಈಜ್ ಮೈಟ್ಟೀಯರ್ ದ್ಯಾನ್ ಸೋರ್ಡ್' ಎಂಬ ವಾಕ್ಯ ಕೇಳಿದ್ದೇವೆ. ಸಾಹಿತಿಗಳ ಲೇಖನಿಯ ಹರಿತ ಬಲ್ಲವರೇ ಬಲ್ಲರು, ಜೆಲ್ಲದ ಸವಿ. ಅಕ್ಷರ, ಸಾಮಾಜಿಕ ಬದಲಾವಣೆಯ ಅಸ್ತ್ರವಾಗಿ ತನ್ನನ್ನು ಸಾಕ್ಷೀಕರಿಸಿಕೊಂಡ ಕಾಲಮಾನವೆಂದರೆ ಕರ್ನಾಟಕ ಇತಿಹಾಸದ 12ನೇ ಶತಮಾನದ ಸಾಮಾಜಿಕ ಬದಲಾವಣೆಯ ಕ್ರಾಂತಿಕಾಲ. ವಚನಕಾರರ ಸಾಮಾಜಿಕ ಸಮಾನತೆಯ ಆಶಯಗಳು ಸಾಮಾಜಿಕ ಸಂಸ್ಥೆಗಳನ್ನೇ ಬದಲಾಯಿಸಿದ ಚರಿತ್ರೆ, ಅಕ್ಷರ ಶಕ್ತಿಯ ರುಜುವಾತು. ಕೆ. ನಾರಾಯಣಸ್ವಾಮಿಯವರ ಸಾಮಾಜಿಕ ಮತ್ತು ಶೈಕ್ಷಣಿಕ ಅನುಭವ. ಶೋಷಿತ ಸಮುದಾಯದ ಸಂಕಟಗಳ ಪರಿಹರಿಸುವ ಪ್ರಯತ್ನದ ಸಾಹಿತ್ಯರೂಪಿಯಾಗುತ್ತದೆ. ಹಾಗಾದಾಗ ಅವರೊಳಗಿನ ಸಾಮಾಜಿಕ ಕಾಳಜಿಯ ಸಾಹಿತಿ ಎಚ್ಚರವನ್ನು ಕೂಗುತ್ತ ಮಲಗಿದ ಸಮಾಜವನ್ನು ಎಬ್ಬಿಸುತ್ತಾನೆ. ಈ ನಿಟ್ಟಿನಲ್ಲಿ ಅಂಬೇಡ್ಕರವರನ್ನು 'ಗುರು'ವಾಗಿ ಮಾರ್ಗದರ್ಶಕರಾಗಿ ಸ್ವೀಕರಿಸುತ್ತಾರೆ. ಸಾಮಾಜಿಕ ಅಸಮಾನತೆಯ ತೊಳಲಾಟದಲ್ಲಿ ಬೆಂದು ಬಂದ ನಾರಾಯಣಸ್ವಾಮಿಯವರು 'ದಲಿತ ಚಳುವಳಿ'ಯ ಒಂದು ಭಾಗವೇ ಆಗಿಬಿಡುತ್ತಾರೆ. ಬಿ.ಕೆ., ದೇವನೂರು, ಸಿದ್ಧಲಿಂಗಯ್ಯ, ಕೋಟಗಾನಹಳ್ಳಿ ಮುಂತಾದ ದಲಿತ ಚಿಂತಕರು 'ದಲಿತ ಸಂಘರ್ಷ ಸಮಿತಿ'ಯನ್ನು ಕಟ್ಟುವ ದಿನಮಾನಗಳಲ್ಲಿ ತಾವೂ ಕೂಡ ಇಡೀ ಕರ್ನಾಟಕಾದ್ಯಂತ ಅವರೊಡನೆ ಸಂಚರಿಸಿ 'ದಲಿತ ಪ್ರಜ್ಞೆ'ಯನ್ನು ತಾವು ಕಟ್ಟಿಕೊಂಡಂತೆ, 'ಎಲ್ಲರಿಗೂ ಬಿತ್ತಿದರು. ತಮ್ಮ ಭಾಷಣಗಳ ಮೂಲಕ, ಸಾಹಿತ್ಯದ ಮೂಲಕ ದಲಿತ ಲೋಕ ತೆರೆದುಕೊಳ್ಳಬೇಕಾದ ಬಗೆಯನ್ನು ನಿರೂಪಿಸಿದ್ದಾರೆ.



ಸುಮಾರು 70ರ ದಶಕದಲ್ಲಿ ಕರ್ನಾಟಕದಾದ್ಯಂತ ಹೊಸ ಯುಗದ ಆರಂಭದಂತೆ, ಹೊಸ ಬದುಕನ್ನು ಅರಸುತ್ತಾ ಸಂಘಟಿತವಾದ ದಲಿತ ಸಮುದಾಯ ಇನ್ನೆಂದು ಸಾಧ್ಯವಾಗದ ಮಟ್ಟಿಗೆ ಜನಜಾಗೃತಿಯ ಜನಾಂದೋಲನಗಳನ್ನೇ ಪ್ರಾರಂಭಿಸಿತ್ತು. ಸವರ್ಣೀಯರು ಸಮೇತ ತನ್ನ ಹಿರೀಕರು ನಡೆಸಿಕೊಂಡು ಬಂದಿದ್ದ 'ಅಸ್ಪೃಶ್ಯತೆ'ಯ ಬಗ್ಗೆ ಹಳಿದುಕೊಳ್ಳುತ್ತಿದ್ದರು. ದಲಿತೇತರರು ಈ ಚಳವಳಿಯ ಹೋರಾಟಗಳನ್ನು, ಪ್ರತಿಭಟನೆಗಳನ್ನು, ಹಕ್ಕೊತ್ತಾಯಗಳನ್ನು ಬೆಂಬಲಿಸಿದರು. ತಮಗೆ ತಾವೇ ನಾಚಿ ನೀರಾಗಿಹೋದರು. (2000ದ ನಂತರ ಇದಕ್ಕೆ ತದ್ವಿರುದ್ಧವಾದ ನಡೆಯಿದೆ).

ಈ ಕಾಲಘಟ್ಟದಲ್ಲಿ ಚಳವಳಿಯಲ್ಲಿ ತೊಡಗಿಸಿಕೊಂಡ ಕೆ. ನಾರಾಯಣಸ್ವಾಮಿಯವರು ತಳಸಮುದಾಯಗಳನ್ನು ಮೂಲಸ್ಥರದಲ್ಲಿ ವಿವರಿಸಿಕೊಳ್ಳುವ ಪರಿಯನ್ನು ಕಂಡುಕೊಂಡರು. ಇದರ ಜೊತೆಗೆ 'ದಲಿತ' ಸಮುದಾಯದ ಜಾಗೃತಿ ಮೂಡಿಸಲು 'ಅಂಬೇಡ್ಕರ್ ವಾಣಿ', 'ದಲಿತ ಕೈಪಿಡಿ', 'ಭಂಗೀಜನ ಕಥಾ (ಅಸ್ಪೃಶ್ಯರ ಆತ್ಮಕಥೆ)', 'ನರಬಲಿ', 'ದಿಗಂಬರ ಕವಿಗಳು' ಮುಂತಾದ ದಲಿತ ಕೇಂದ್ರಿತ ಕೃತಿಗಳನ್ನು ರಚಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಶೋಷಿತ ಸಮುದಾಯದ 'ಸೆಕ್ಸ್ ವರ್ಕರ್' ಒಬ್ಬ ಹೆಣ್ಣಿನ ಆತ್ಮಕತೆಯನ್ನು ಕೃತಿಯಾಗಿಸಿದ್ದಾರೆ. ಇದು ಒಂದು ಘಟ್ಟವಾದರೆ, ಲೇಖನಗಳು ಮತ್ತು ಅಂತರ್‌ಜಲ, ಫ್ಲೋರೈಡ್ ಜಲ, ಆಯಿಲ್ ಪುಲ್ಲಿಂಗ್ ಕುರಿತ ಬರಹಗಳು ಮತ್ತೊಂದು ಮಜಲು. ಎರಡೂ ಸಂದರ್ಭದಲ್ಲೂ ಮಿಡಿಯುವ ಜೀವ ಸತ್ವವೆಂದರೆ ಜನಾನುಕೂಲದ ಬಯಕೆ, ಸಾಮಾಜಿಕ ಪ್ರಗತಿಯ ಆಶಯ.

ನಾರಾಯಣಸ್ವಾಮಿಯವರ ಕೃತಿಗಳ ಆಯ್ಕೆ ಮತ್ತು ಕೃತಿಗಳ ರಚನಾ ವಿನ್ಯಾಸವೇ ಇವರ ಮನೋಧರ್ಮವನ್ನು ತಿಳಿಸುತ್ತದೆ. ಜಗದೆಲ್ಲೆಡೆಯ ನೋವಿಗೆ ಸ್ಪಂದಿಸುವ ಮತ್ತು ನೋವಿನ ಘಟನೆಗಳು ಸಂಭವಿಸಿದಾಗ ಸಂಕಟಪಡುವ ಹೆಂಗರುಳಿದೆ. ಮಾತಾಡಿದರೆ ಸಾಕು ಇಳಿವಯಸ್ಸಿನಲ್ಲೂ ಹೋರಾಟದ ಧ್ವನಿಯನ್ನು ಎತ್ತುತ್ತಾರೆ, ಸಮಾಜದ ಬಗ್ಗೆ ಸಿಟ್ಟಿಗೇಳುತ್ತಾರೆ, ಶೋಷಣೆಯ ಬಗ್ಗೆ ಸಿಡಿಮಿಡಿಗೊಳ್ಳುತ್ತಾರೆ. ಬೆಲ್ಚಿ ಪ್ರಕರಣದ ಬಿಹಾರ, ಕಂಬಾಲಪಲ್ಲಿಯ ಕರ್ನಾಟಕ, ಪಾಕಿಸ್ತಾನದ ಅಕ್ಷರ ವಂಚಿತ ಹೆಣ್ಣಿನ ಶೋಷಣೆ, ಸೊಮಾಲಿಯಾದ ಬಡತನ ರಷ್ಯಾದ ಬದಲಾವಣೆ, ಅಮೇರಿಕಾದ ಹಿರಿಯಣ್ಣನ ದೌಲು, ದರ್ಪ, ಶೋಷಕ ಮನೋಧರ್ಮ ಇತ್ಯಾದಿ ಇತ್ಯಾದಿಯಾಗಿ ಎಲ್ಲದಕ್ಕೂ ಮರುಗುತ್ತಾರೆ. ಪ್ರಗತಿಪರ ಚಿಂತನಾವಲಯದಲ್ಲಿ ತಮ್ಮ ಹಿರಿತನದಿಂದ ಪಡೆಯಬಹುದಾದ ಅವಕಾಶಗಳನ್ನು ಎಂದೂ ಇವರು ಬಯಸಿದವರಲ್ಲ. ವ್ಯಕ್ತಿ ನಿಷ್ಠತೆಯನ್ನು ಸಮುದಾಯ ನಿಷ್ಠತೆಯಲ್ಲೇ ಸರಿಸಿಬಿಟ್ಟಿದ್ದಾರೆ. ತಮ್ಮ ಹುಟ್ಟಿಗಿಂತ ಬೆಳೆದ ಬಗೆಯ ವೈಚಾರಿಕ ಮನೋಧರ್ಮಕ್ಕೆ ಇಂದಿಗೂ ಒಪ್ಪಿಸಿಕೊಂಡಿದ್ದಾರೆ. ಇವರನ್ನು ಹೆಚ್ಚು ಕಾಡುವ ಮತ್ತು

ಈಗಲೂ ಇವರು ಹೆಚ್ಚು ಸ್ಪಂದಿಸುವುದೆಂದರೆ 'ಅಸ್ಪೃಶ್ಯತಾ ಆಚರಣೆ'ಯ ವಿಕಾರ ಭಾರತದ ಮನಸ್ಥಿತಿಗೆ ಅದನ್ನು ಕಂಡರೆ, ಅಂತವರನ್ನು ನೋಡಿದರೆ, ವಾಕರಿಸಿಕೊಳ್ಳುತ್ತಾರೆ. ಮನುಷ್ಯನನ್ನು ಮನುಷ್ಯನಂತೆ ಕಾಣದ ದೇವರಾಗಲಿ, ದೇವಪುತ್ರರಾಗಲಿ ಬರೀ ಸುಳ್ಳು ಎಂಬ ಧೋರಣೆ ಇವರ ಮನದಾಳದಲ್ಲಿ ತುಂಬಿದೆ.

ಮೊನ್ನೆ ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿಗೆ ಇವರು ಭಾಜನರಾದಾಗ ನನಗೆ ಬಹಳ ಹೆಮ್ಮೆ ಎನಿಸಿದ್ದು ಎರಡು ಕಾರಣಕ್ಕೆ. ಅವರು ಗೌರಿಬಿದನೂರಿನ ಗ್ರಾಮೀಣ ಪ್ರತಿಭೆ ಎಂಬ ಕಾರಣಕ್ಕೆ ಹಾಗೂ 'ದಲಿತ ಸಂಘರ್ಷ ಸಮಿತಿ'ಯ ಮೊದಲ ಅವಸ್ಥೆಯ ಕಾರ್ಯಕರ್ತರು ಎಂಬುದು ಎರಡನೇಯದು. ನಿಗದಿತವೆಂದು ಒಂದೇ ವೇದಿಕೆ, ತಾತ್ವಿಕತೆ, ಸಿದ್ಧಾಂತವೆಂದು ಸೀಮಿತವಾಗದೆ ಪ್ರಗತಿಪರ ಆಗಬಹುದಾದ ಎಲ್ಲ ಚಳವಳಿಯ ಹೋರಾಟಗಳಲ್ಲೂ ತಮ್ಮನ್ನು ತೊಡಗಿಸಿಕೊಳ್ಳುವ ಮನೋಧರ್ಮ ನಾರಾಯಣಸ್ವಾಮಿಯವರ ಸರಳತೆಯ ಸಡಿಲತೆಗೆ ಸಾಕ್ಷಿಯಾಗಿದೆ. ಸಾಮಾಜಿಕ ನ್ಯಾಯದ ಮತ್ತು ದಲಿತ ಹೋರಾಟದ ಛಲ ಬದುಕಿನ ಅಡಿಗಲ್ಲಾಗಿದೆ.

ಬಡವರನ್ನು ಸ್ಪರ್ಶಿಸುವ, ದಲಿತರನ್ನು ಪ್ರೀತಿಸುವ ನೊಂದವರನ್ನು ಸಂತೈಸುವ, ಸಿರಿವಂತರಿಗೆ ಸಿಟ್ಟಾಗುವ, ಸವರ್ಣೀಯರಿಗೆ ಸಿಡಿಲಾಗುವ ಮನೋಧರ್ಮವನ್ನು ಕಂಡಾಗ ಕೆ. ನಾರಾಯಣಸ್ವಾಮಿ ಅವರ ಆದರ್ಶದ ಬಗ್ಗೆ ಹೆಮ್ಮೆ ಮೂಡುತ್ತದೆ. ಇದು ಇಷ್ಟಕ್ಕೆ ನಿಲ್ಲದೆ ಮುಂದಿನ ತಲೆಮಾರಿಗಿಷ್ಟು ಹಂಚದೆ ಹೋದರೆ 'ಮಾನವೀಯತೆ'ಯನ್ನು ಜಡಗಟ್ಟಿಸುತ್ತೇವೆ. ಕೆ. ನಾರಾಯಣಸ್ವಾಮಿ ಅವರ ಕಾರ್ಯಕ್ಷೇತ್ರ ಗಗನೋಪಮವಾದ ಸಾಮಾಜಿಕ ಕಾಳಜಿಯನ್ನು ಪೂರ್ಣವಾಗಿಡುವುದು ಸುಲಭದ ಮಾತಲ್ಲ. ಎಲ್ಲವನ್ನೂ ಇಡಿಯಾಗಿ ಪ್ರೀತಿಸುವ ವ್ಯಕ್ತಿತ್ವದ ಅಖಂಡ ಮನುಷ್ಯ. ಅವರನ್ನು ಅಂಗೈಯಲ್ಲಿ ಹಿಡಿಯುವುದು ಕಷ್ಟ. ಆಗಸಕ್ಕೆ ಅಂಗೈ ಕನ್ನಡಿ ಹಿಡಿದಿದ್ದೇನೆ. ನನಗೆ ದಕ್ಕಿದಷ್ಟೂ ನಿಮಗೆ ದಕ್ಕುವಷ್ಟು ಮೊಗೆಯುವುದಕ್ಕೇ ಸೀಮಿತ. ಸವೆಸಿದ ಸಾಧನೆಯ ಹಾದಿಯನ್ನು ಹಿಂತಿರುಗಿ ನೋಡಿದರೆ ಎಲ್ಲವೂ ಅನುರಣಿತವಾಗುತ್ತವೆ. ಹೀಗೆ, ಅವಕಾಶ ವಂಚಿತರಿಗೆ ಅಕ್ಷರ ಬೋಧಿಸಿದ ಶಿಕ್ಷಣತಜ್ಞ, ಅವಮಾನಿತ ಸಮಾಜಕ್ಕೆ ಅನುಕಂಪದ ಆಶ್ರಯತಾಣ, ಹುಟ್ಟಿಬಂದ ಪರಿಸರದ 'ಅಸ್ಪೃಶ್ಯತೆಯ ಶಾಪ' ವಿಮೋಚನೆ ಪರಿಚಾರಕ, ವೈಜ್ಞಾನಿಕತೆ ಮತ್ತು ವೈಚಾರಿಕತೆಯ ಅನುಸಂಧಾನದಲ್ಲೇ ಬದುಕಿರುವವರು ಕೆ. ನಾರಾಯಣಸ್ವಾಮಿ. ಎಲ್ಲವೂ ಒಬ್ಬರೇ ಆಗುವುದೇ ನಮ್ಮೆಲ್ಲರಿಗೆ ಪರಮಾಶ್ಚರ್ಯ. ಸ್ವಾಮಿ ಅವರ ಸಾಮಾಜಿಕ ಕಾಳಜಿಯ ಬದ್ಧತೆ ಮತ್ತು ಅನುರೂಪವಾದ ಪ್ರತಿಭೆ ಬಹುರೂಪಿಯಾದುದು.








# ನನ್ನೊಳಗಿನ ನಾನು...!


– ಡಾ. ಸಮತಾ ಬಿ. ದೇಶಮಾನೆ

ಪ್ರಾಧ್ಯಾಪಕರು, ಸಮಾಜ ಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ


ನಳಿನಿ ಜಮೀಲಾರವರು ಮಲಯಾಳಂನಲ್ಲಿ ರಚಿಸಿದ ಜ್ಞಾನ್ ಲೈಂಗಿಕ ತೊಳಿಲಾಳಿ ಎಂಬ ಪುಸ್ತಕವನ್ನು 'ಸೆಕ್ಸ್‌ವರ್ಕರ್ ಒಬ್ಬಳ ಆತ್ಮಕಥನ' ಎಂದು ಕನ್ನಡಕ್ಕೆ ಅನುವಾದಿಸಿದ ಶ್ರೀ ಕೆ. ನಾರಾಯಣಸ್ವಾಮಿಯವರು ಆ ಮೂಲಕ ಇಡೀ ಭಾರತಕ್ಕೆ ಪರಿಚಿತರಾಗಿದ್ದಾರೆ. ಕೃತಿಯೂ ಈಗಾಗಲೇ ತೆಲುಗು, ತಮಿಳು, ಮರಾಠಿ, ಹಿಂದಿ, ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಪ್ರಕಟವಾಗಿದೆ.

ಲೈಂಗಿಕ ಸೇವಕಿ ಕುರಿತ ಆತ್ಮಕಥೆ ಕನ್ನಡದಲ್ಲಿ ಇದೇ ಮೊದಲು. ಶೋಷಿತರಲ್ಲಿ ಶೋಷಿತರಾಗಿದ್ದು ಲೈಂಗಿಕ ವೃತ್ತಿಯಲ್ಲಿಯೇ ಇರುವವರು ತಮ್ಮ ಕಥೆಗಳನ್ನು ತಾವೇ ಬರೆದಿರುವುದು ಬಹಳ ಅಪರೂಪ. ಮೂಲ ಕೃತಿಯು ಮಲಯಾಳಂ ಭಾಷೆಯಲ್ಲಿದ್ದು 'ಜ್ಞಾನ್ ಲೈಂಗಿಕ ತೊಳಿಲಾಳಿ' (ನಾನು ಲೈಂಗಿಕ ಕಾರ್ಮಿಕಳು) ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ.

ಹಿಂದಿನ ರೂಢಿಗ್ರಸ್ಥ ಪರಂಪರೆಯಿಂದ ಬಳಸುತ್ತಿರುವ 'ವೇಶ್ಯೆ', 'ಸೂಳೆ' ಎನ್ನುವ ಪದಗಳನ್ನು ಈ ಸಮುದಾಯದವರು ಸಾರಾಸಗಟಾಗಿ ತಿರಸ್ಕರಿಸಿದ್ದು ಆಂಗ್ಲ ಭಾಷೆಯ 'ಸೆಕ್ಸ್ ವರ್ಕರ್' ಹಾಗೂ ಕನ್ನಡದಲ್ಲಿ ಅದಕ್ಕೆ ಸಮನಾದ ಲೈಂಗಿಕ ಕಾರ್ಮಿಕಳು, ಲೈಂಗಿಕ ಕಾರ್ಯಕರ್ತೆ, ಲೈಂಗಿಕ ಸೇವಕಿ ಇತ್ಯಾದಿ ಎಂದು ಹೇಳಬಹುದು.

ಇಂಥ ಅಪರೂಪದ ನಿರ್ಲಕ್ಷಿತ, ಅಸಹ್ಯವಾದ ಬದುಕು ಎಂದು ಹೇಸಿಗೆಪಡುವ ಹೆಂಗಸರ ಅಂಧಲೋಕದಲ್ಲಿ ವಾಸ್ತವದ ಬೆಳಕು ಮೂಡಿಸಿದವರು ಹಿರಿಯ ಚೇತನ ನಮ್ಮೆಲ್ಲರ ನಡುವಿನ ದಲಿತ ಕ್ರಾಂತಿಯ ಜ್ಞಾನದ ಜ್ಯೋತಿ ಕೆ. ನಾರಾಯಣಸ್ವಾಮಿಯವರು. ಸುಮಾರು ಅರ್ಧಶತಮಾನದಷ್ಟು ಕಾಲ ಸಾಹಿತ್ಯ, ಶಿಕ್ಷಣ, ದಲಿತ, ಪರಿಸರ ಕಾಳಜಿಗಳಿಂದ ಗುರುತಿಸಿಕೊಂಡರೆ ಮೂವತ್ತು ಮೂರು ವರ್ಷ ಶಿಕ್ಷಕರಾಗಿ, ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ, ಉಪನಿರ್ದೇಶಕ ಮತ್ತು ಜಂಟಿ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. 'ಆಯಿಲ್ ಪುಲ್ಲಿಂಗ್' ಎಂಬ ಚಿಕಿತ್ಸಾ ಪದ್ಧತಿಯನ್ನು ಕನ್ನಡಿಗರಿಗೆ ಪರಿಚಯಿಸಿದವರೇ ಶ್ರೀ ಕೆ.ಎನ್.ಎಸ್.ರವರು. 1970ರಿಂದ ಇಂದಿನವರೆಗೆ ಕರ್ನಾಟಕ ದಲಿತ ಸಂಘರ್ಷ ಸಮಿತಿಯೊಂದಿಗೆ ತಾಯಿಬೇರಿನಂತೆ ನಿಷ್ಕಲ್ಮಶವಾಗಿ ಬಡವರ ಪರವಾಗಿ ಹೋರಾಟ ಮಾಡಿದವರಾಗಿದ್ದಾರೆ. ಅವಿಭಜಿತ ಕೋಲಾರ ಜಿಲ್ಲೆಯಲ್ಲಿ ಅಂತರ್ಜಲ ಹಾಗೂ ಪರಿಸರ ನಾಶವಾಗುತ್ತಿರುವುದರ ವಿರುದ್ಧ ರೈತರಿಗೆ, ಯುವ ಜನಾಂಗಕ್ಕೆ, ಗ್ರಾಮೀಣ ಜನತೆಗೆ ಅರಿವು ಮೂಡಿಸುವ ಹತ್ತಾರು ಕಾರ್ಯಕ್ರಮವನ್ನು ಅವರು ಮಾಡಿ ಜನಮನ್ನಣೆ ಗಳಿಸಿದ್ದಾರೆ.

ಅಷ್ಟೇ ಅಲ್ಲದೇ ಗುಡಿಬಂಡೆ, ಬಾಗೇಪಲ್ಲಿ ತಾಲ್ಲೂಕುಗಳಲ್ಲಿ 'ಫ್ಲೋರೋಸಿಸ್' ರೋಗಕ್ಕೆ ತುತ್ತಾಗಿ ನಿತ್ಯವು ನರಳುತ್ತಿರುವ ಕುರಿತು ನೂರಾರು ಕಾರ್ಯಗಾರ ಕಮ್ಮಟ ಶಿಬಿರಗಳನ್ನು ಏರ್ಪಡಿಸುತ್ತಾ ಜನರಲ್ಲಿ ಅರಿವು ಮೂಡಿಸುವತ್ತ ಮುನ್ನಡೆದ ನೆಚ್ಚಿನ ಗುರುಗಳಾಗಿದ್ದಾರೆ.

ಅಪಾರ ಅನುಭವದ ಗಣಿಯಾಗಿರುವ ಶ್ರೀ ಕೆ. ನಾರಾಯಣಸ್ವಾಮಿಯವರು ಅಂಬೇಡ್ಕರ್ ವಾಣಿ, ದಲಿತ ಕೈಪಿಡಿ, ಭಂಗಿ ಜನಕಥಾ, ನರಬಲಿ, ಪೋಷಕರ ಕೈಪಿಡಿ, ಅಯೋಧ್ಯೆಯ ಭುಗಿಲು, ಮಾಹಿತಿ ಹಕ್ಕು, ರೈತರ ನಿರಂತರ ಆತ್ಮಹತ್ಯೆಗಳು ಕೃತಿಗಳನ್ನು ಅಚ್ಚುಕಟ್ಟಾಗಿ ಸರಳವಾದ ಭಾಷೆ ಮತ್ತು ಶೈಲಿಯಿಂದ ಅನುವಾದಿಸಿದ್ದಾರೆ. ಹಾಗೆಯೇ ದಿವಂಗತ ಡಾ. ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯನ್ನು ಡಾ. ಆರ್.ವಿ.ಎಸ್. ಸುಂದರಂ ಅವರೊಂದಿಗೆ ತೆಲುಗು ಭಾಷೆಗೆ ಅನುವಾದಿಸಿದ ಕೀರ್ತಿ ಶ್ರೀ ಕೆ.ಎನ್.ಎಸ್.ರವರಿಗೆ ಸಲ್ಲುತ್ತದೆ. ಅಷ್ಟೇ ಅಲ್ಲದೇ ಮತ್ತೊಂದು ಹೆಜ್ಜೆ ಮುಂದೆ ಹೋಗಿ ತೆಲುಗಿನ ಕ್ರಾಂತಿಕಾರಿ ಸಾಹಿತ್ಯ 'ದಿಗಂಬರ ಕವಿಗಳು' ಕೃತಿಯನ್ನು ಸಹ ಅನುವಾದಿಸಿ ಪ್ರಕಟಿಸಿದ್ದಾರೆ. ಇಂಥ ಹಲವಾರು ಮಹತ್ವದ ಸುಕಾರ್ಯಗಳನ್ನು ಮಾಡಿ ಅಪರೂಪದಲ್ಲೇ ಉತ್ಕೃಷ್ಟ ಎನ್ನುವಂತೆ ನಳಿನಿ ಜಮೀಲಾ ಅವರ 'ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ'ವನ್ನು ಭಾರತೀಯ ಸಾಹಿತ್ಯಕ್ಕೆ ಪರಿಚಯಿಸಿದ ಹೆಮ್ಮೆ ಕೆ.ಎನ್.ಎಸ್. ರವರಿಗಿದೆ. ನಿಜ ಹೇಳಬೇಕೆಂದು ಅತ್ಯಂತ ನಿರ್ಭಯವಾಗಿ ನಿಸ್ಸಂಕೋಚವಾಗಿ, ನಿರ್ದಾಕ್ಷಿಣ್ಯವಾಗಿ, ನಿಷ್ಠುರವಾಗಿ ಬರೆದಿರುವ ಈ ಆತ್ಮಕಥೆ, ಕರುಣಾಜನಕವಾದ ದಾರುಣವಾದ



ವಾಸ್ತವಿಕತೆಯಿಂದ ತತ್ತರಿಸುವಂತೆ ಮಾಡಿ, ಕುತೂಹಲ ಕೆರಳಿಸುತ್ತಾ ಹೋಗುತ್ತದೆ. ಓದುಗರಿಗೆ ಒಂದು ಹೊಸ ಜಗತ್ತಿನಲ್ಲಿ ಪ್ರವೇಶಿಸಿದ ಅನುಭವವಾಗುತ್ತದೆ.

ಹೀಗೂ ಇರಬಹುದೇ ಬದುಕು ಇಷ್ಟು ಕ್ರೂರತ್ವದಿಂದ ಸಿಹಿಯ ಸಿಂಚನ ಕೊಡಬಹುದೇ, ಎಂಥ ವಿಚಿತ್ರ ವಿಸ್ಮಯದ ಸನ್ನಿವೇಶ ಸಂದರ್ಭಗಳ ಸಮಾಗಮದಲ್ಲಿ ಹೆಂಗಸು ಒಂದು ಹೊತ್ತಿನ ತುತ್ತು ಊಟಕ್ಕಾಗಿ ಇಂಥ ಯಾತನೆ ಹೇಗೆ ಸಹಿಸಲು ಸಾಧ್ಯವಿದೆ, ಹೀಗೂ ಉಂಟೇ...? ಎಂದು ಆಶ್ಚರ್ಯವಾದರೆ ಶ್ರೀ ಕೆ. ನಾರಾಯಣಸ್ವಾಮಿಯವರು ನಗ್ನ ಸತ್ಯದ ನಿತ್ಯ ದರ್ಶನವನ್ನು ಅತ್ಯಂತ ಪ್ರಾಮಾಣಿಕತೆಯಿಂದ ಮನಕರಗುವ ಮನಮುದನೀಡುವ ಬದಲು ಹೃದಯಹಿಂಡುವ ಆಕ್ರಂದನ ನರ್ತನ ದೃಶ್ಯವನ್ನು ಎಳೆ ಎಳೆಯಾಗಿ ಅಕ್ಷರದ ರೂಪದಿಂದ ಬರೆದಿದ್ದಾರೆ. ಓದುಗರಿಗೆ ಹೃದಯ ಹಾಗೇನೆ ಕಂಪಿಸುತ್ತದೆ. ಭಯಾನಕತೆಯ ದಿನಗಳು ನಿತ್ಯವು ಕಳೆಯುತ್ತಿದ್ದರು ನಳಿನಿ ಅವರು ಯಾವತ್ತು ಸಾಯುವ ಮನಸ್ಸು ಮಾಡಲಿಲ್ಲ.

ಸಾವನ್ನೇ ಸಾಯಿಸಿ ದಿಟ್ಟತನದಿಂದ ಬದುಕು ಕಟ್ಟಿಕೊಂಡಿರುವುದು ನಿಜವಾದ ಹೆಂಗಸಿನ ಹೆಣ್ತನ ಮತ್ತು ಅವಳ ಅಸ್ತಿತ್ವ ಇಂದು ನಳಿನಿ ಜಮೀಲಾ ಲೈಂಗಿಕ ಸೇವಕಿ, ಕಾರ್ಯಕರ್ತೆ ಅಷ್ಟೇ ಅಲ್ಲದೆ ಓರ್ವ ಮಗಳಾಗಿ, ತಾಯಿಯಾಗಿ, ಪತ್ನಿಯಾಗಿ, ತನ್ನ ಒಡನಾಡಿಗಳ ಹಿತಾಸಕ್ತಿಗಳನ್ನು ಕಾಪಾಡುವ ಹೋರಾಟಗಾರ್ತಿಯಾಗಿ ಮತ್ತು ದಿಟ್ಟ ಬಂಡಾಯಗಾರ್ತಿಯಾಗಿ, 'ಕಾಯಕವೇ ಕೈಲಾಸ' ಎಂದು ತನ್ನ ವೃತ್ತಿಧರ್ಮವನ್ನು ಅತ್ಯಂತ ನಯ ನಾಜೂಕು ಗೌರವದಿಂದ ಪ್ರಾಮಾಣಿಕತೆಯಿಂದ ಪಾಲಿಸಿ, ಜ್ಞಾನ್ ಲೈಂಗಿಕ ತೊಳಿಲಾಳಿ ಎಂಬ ಹೆಸರಿನಲ್ಲಿ ತನ್ನ ಆತ್ಮಕಥೆಯನ್ನು ಬರೆದು ದಾಖಲೆ ಸ್ಥಾಪಿಸಿದ್ದಾರೆ.

ಇಂಥ ಸಾಧಕರ ಜೀವನದ ಕಷ್ಟ ನಷ್ಟಗಳು ಹೇಗೆ ಸಹಜವೆಂಬಂತೆ ಅವರು ನಿಭಾಯಿಸಿ ನಿತ್ಯವು ಯಶಸ್ವಿಯಾದರು, ವೃತ್ತಿ ಯಾವುದಾದರೇನು ಅದು ಬದುಕಿಗೆ ಪೂರಕವಾಗಿರಬೇಕು ಎಂಬುದನ್ನು ಈ ಆತ್ಮಕಥೆಯಿಂದ ನಾವು ಅರಿತುಕೊಳ್ಳಬಹುದಾಗಿದೆ.

ಹೆಜ್ಜೆ ಹೆಜ್ಜೆಗೂ ಅವಮಾನ, ತಿರಸ್ಕಾರ, ಅಪಾಯ, ಮೋಸ, ವಂಚನೆ, ಪ್ರಾಣ ಭೀತಿಗಳಿಗೆ ತುತ್ತಾದರೂ ಅಂಜದೆ, ಅಳುಕದೆ ದಿಟ್ಟತನದಿಂದ ಎದುರಿಸಿದ್ದಾಳೆ. ಒಮ್ಮೆಯಾದರೂ 'ಸಾಕಪ್ಪಾ ಈ ಜೀವ' ಎಂದು ಬದುಕಿನಿಂದ ಪಲಾಯನ ಮಾಡಲು ಬಯಸಲಿಲ್ಲ. ಕಿಂಚಿತ್ತಾದರೂ ಜೀವನೋತ್ಸಾಹ ಕಳೆದುಕೊಳ್ಳುವುದಿಲ್ಲ. ಹೆತ್ತವರು ದೂರ ಮಾಡಿದಾಗ, ಸುತ್ತಲಿನ ಜಗತ್ತು ಜರಿದಾಗ ಅಸಾಧಾರಣ ಜೀವನ ಪ್ರೀತಿ ಪ್ರದರ್ಶಿಸಿದ್ದಾಳೆ. ಜೀವನ್ಮುಖಿಯಾಗಿ ಮುಂದುವರೆಯುತ್ತಾಳೆ. ಇದೇ ನಿಜವಾದ ಸತ್ವ - ಅಥವಾ ಹೆಣ್ತನದ ಪೂಜ್ಯನೀಯವಾದ ಗೌರವಯುತವಾದ ಲಕ್ಷಣ. ವೇಶ್ಯೆ ಎಂದರೆ ಬಿಕರಿಗಿರುವ ವಸ್ತುವೆಂದು ತಿಳಿದಿರುವ ಈ ಕಾಲದಲ್ಲಿ ನಳಿನಿಯವರ ಬದುಕಿನ ಚಿತ್ರಣವನ್ನು ಕಣ್ಣೆದುರಿಗೆ ತಂದು

ನಿಲ್ಲಿಸುವಲ್ಲಿ ಶ್ರೀ ಕೆ. ನಾರಾಯಣಸ್ವಾಮಿರವರು ಶ್ಲಾಘನೀಯವಾದ ಕಾರ್ಯದ ಜೊತೆ ಜೊತೆಗೆ 'ಹೆಣ್ಣಿನೊಳಗೊಂದು ಹೆಣ್ಣು ಮಗಳಿರುವುದನ್ನು ಸುಪ್ತ ಸಮಾಜಕ್ಕೆ ತಿಳಿಸಿದ್ದಾರೆ. ಈ ಕಾರಣದಿಂದ ನಾನು ಅವರಿಗೆ ಹೆಣ್ಣು ಕುಲದ ಸಮಸ್ತರ ಪರವಾಗಿ ಜೈ ಭೀಮ ಹೇಳುವೆ.

ಲೋಕದಲ್ಲಿ ಎಲ್ಲರೂ ಯಾವ ನಿಯಮಗಳನ್ನು ಅನುಸರಿಸುತ್ತಿರುವರೋ ನನಗೆ ತಿಳಿಯದು. ಒಂದು ವೇಳೆ ಹೀಗೆ ಬರೆಯಬಾರದು ಎಂಬ ನಿಯಮ ಇದ್ದದ್ದೇ ಆದಲ್ಲಿ ಅದನ್ನು ನಾನು ಬದಲಾಯಿಸಬೇಕೆಂದಿರುವೆ ಎಂದು ಸಮಾಜದೊಂದಿಗೆ ಸಂವಾದಿಸುವ ನಳಿನಿ ನಿಜವಾದ ಎದೆಗಾರಿಕೆಯ ನೆಲಮೂಲದ ಸ್ತ್ರೀ.

1970ರ ದಶಕದಲ್ಲಿ ಮತ್ತೊಬ್ಬ ಮಹಿಳೆ ತನ್ನ ಕಥೆಯನ್ನು ಬರೆದಾಗ ಹುಟ್ಟಿದ ವಿವಾದವನ್ನು ಈ ಕೃತಿ ನೆನಪಿಸುತ್ತದೆ. ಕೇರಳದ ಪ್ರಮುಖ ಲೇಖಕಿಯೆಂದು ಹೆಸರು ಮಾಡಿದ್ದ ಕಮಲಾದಾಸ್ (ಮಾಧವಿ ಕುಟ್ಟಿ) 'ನನ್ನ ಕಥೆ' ಎನ್ನುವ ಎಲ್ಲವನ್ನೂ ತೆರೆದಿಡುವ ಸಾಹಿತ್ಯ ರಚಿಸಿದರು. ಕಮಲಾದಾಸ್ ಶ್ರೀಮಂತ, ಪ್ರತಿಷ್ಠಿತ ನಾಯರ್ ಕುಟುಂಬದಲ್ಲಿ ಹುಟ್ಟಿ ಬೆಳೆದವಳಾದರೆ, ನಳಿನಿ ಸಾಮಾಜಿಕ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ಇಳವ ಸಮುದಾಯದಿಂದ ಬಂದವಳು. ಕಮಲಾದಾಸ್‌ಳ ತಂದೆ ಒಬ್ಬ ಪ್ರಸಿದ್ಧ ಮಲಯಾಳಂ ಸಾಹಿತಿ ಮತ್ತು ದೊಡ್ಡಪ್ಪ ಕೇರಳದ ಬುದ್ಧಿಜೀವಿಗಳಲ್ಲೊಬ್ಬರು. ನಳಿನಿಯ ಕುಟುಂಬದಲ್ಲಿ ಇಂಥ ಯಾವ ಬೌದ್ಧಿಕ ಹಿನ್ನೆಲೆಯಾಗಲಿ, ಆರ್ಥಿಕ ಸದೃಢತೆಯಾಗಲಿ ಇರಲಿಲ್ಲ.

ತನ್ನ ಒಂಭತ್ತನೆಯ ವಯಸ್ಸಿನಲ್ಲಿಯೇ ಶಾಲೆಯನ್ನು ಬಿಟ್ಟು ದಿನಗೂಲಿಯಾಗಿ, ಮನೆಕೆಲಸದವಳಾಗಿ ಕೆಲಸ ಮಾಡಿ, ಆನಂತರದಲ್ಲಿ ಲೈಂಗಿಕ ವೃತ್ತಿಯನ್ನು ಕೈಗೆತ್ತಿಕೊಂಡವಳು ಜಮೀಲಾ. ಲೈಂಗಿಕ ವೃತ್ತಿಪರರು ಸಾಮಾಜಿಕವಾಗಿ ಅನುಭವಿಸುವ ಯಾತನೆಗೆ, ತಾನು ಸಾಕ್ಷಿಯಾಗಿ ಬರೆದವರು. ಬಡ ಹೆಣ್ಣು ಮಕ್ಕಳ ಜೀವನದಲ್ಲಿ ಲೈಂಗಿಕ ದುಡಿಮೆ ಬೇರೆಲ್ಲ ದೈಹಿಕ ದುಡಿಮೆಗಳಂತೆಯೇ ಅತಿ ಸಾಧಾರಣವಾದುದೆಂಬುದನ್ನು ಪ್ರತಿಷ್ಠಿತ ಸಮಾಜಕ್ಕೆ ತಿಳಿಯಪಡಿಸಲು ಯತ್ನಿಸಿದ್ದಾರೆ. ತೊಳಿಲಾಳಿ ಎಂಬ ಪದವು ಯಾವ ಅಂಜಿಕೆ ಇಲ್ಲದೆ ದುಡಿಮೆ, ಶ್ರಮ, ವೃತ್ತಿ ಎಂಬ ಪದಗಳು ಲೈಂಗಿಕ ದುಡಿಮೆಗೂ ಅನ್ವಯಿಸಿ, ಆ ವೃತ್ತಿಗೂ ತನ್ನದೇ ಆದ ಘನತೆ ಇದೆ ಎಂದಿದ್ದ ಜಮೀಲಾ ನವ ಉದಾರವಾದಿಗಳ ಕೈಯಲ್ಲಿನ ಒಂದು ಪರಿಕರವಾಗಿ, ಒಬ್ಬ ಬಲಿಪಶುವಾಗಿ ಕಂಡರೆ, ಉದಾರವಾದಿಗಳು ಜಮೀಲಾ ಪಾರುಪತ್ಯ ನಡೆಸುವುದರ ಮೇಲೆ ಒತ್ತು ನೀಡಿದರು. ಪರಿಣಾಮವಾಗಿ 'ಆದರ್ಶ ಮಹಿಳೆ' ಅಥವಾ ಅವರ ವಿರುದ್ಧ ದಿಕ್ಕಿನಲ್ಲಿ ನಿಲ್ಲುವ 'ವೇಶ್ಯೆ' ಇವೆರಡು ಅಲ್ಲದ, ಒಂದು ಮೂರನೆಯ ಐಡೆಂಟಿಯ ಭಿನ್ನತ್ವ ಎನ್ನುವ ವ್ಯಕ್ತಿತ್ವದ ದನಿಯೂ ಕ್ಷೀಣವಾಯಿತು. ಹಾಗಾಗಿ, 'ತನ್ನ ಮಗಳೂ ಇಷ್ಟಪಟ್ಟರೆ ಲೈಂಗಿಕ ದುಡಿಮೆಯನ್ನು ವೃತ್ತಿಯಾಗಿ ಸ್ವೀಕರಿಸಲು ತಾನು ಅನುಮತಿಸಲು ಸಿದ್ಧ ಎನ್ನುವ ಈ ಆಪಾದನೆ,



ಇವರಿಂದಾಗಿ ಜಮೀಲಾಳನ್ನು ಒಬ್ಬ 'ಪಶ್ಚಾತ್ತಾಪವಿಲ್ಲದ ಲೈಂಗಿಕ ವ್ಯಾಪಾರಿ' ಎಂದು ಅವರು ಕರೆದರು. ವೇಶ್ಯೆ ಎನ್ನುವ ಸಿದ್ಧಮಾದರಿಯನ್ನು ಜಮೀಲಾ ಪ್ರಶ್ನಿಸಿದ್ದು ಈ ವಿವಾದದಿಂದಾಗಿ ಮರೆಯಾಯಿತು.

ತನ್ನ ಪಾಲಿಗೆ ಬಂದ ಕರ್ತವ್ಯವನ್ನು ನಿಷ್ಠೆ, ನಿರ್ವಂಚನೆ, ಶ್ರದ್ಧೆ, ಪ್ರಾಮಾಣಿಕತೆಯಿಂದ ನಿರ್ವಹಿಸುವವರಲ್ಲಿ ಅಲೌಕಿಕ ಶ್ರದ್ಧೆ ಇರುತ್ತದೆಂದು ಪ್ರಾಚೀನಕಾಲದಿಂದ ಬಂದಿರುವ ನಂಬಿಕೆ. ತಮ್ಮ ಸತ್ಕರ್ಮದ ಬಲದಿಂದ ಅಸಾಧ್ಯವೆಂದು ಭಾವಿಸಿದುದನ್ನೂ ಸಾಧ್ಯವೆಂದು ಮಾಡಿ ತೋರಿಸಬಲ್ಲರು. ನನಗೆ ಹಣ ಕೊಡುವವರು ಹೊಟ್ಟೆಗೆ ಊಟ ಕೊಡುವವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಬೇರೆ ಯಾರೇ ಆಗಿರಲಿ ಎಲ್ಲರಿಂದಲೂ ಆದರದಿಂದ ಸ್ವೀಕರಿಸುತ್ತೇನೆ.

ಧನ, ಜಾತಿ, ಕುಲ, ವಿದ್ಯೆ, ಅಂತಸ್ತು ಅಥವಾ ರೂಪ ಮುಂತಾದ ಯಾವುದೇ ಆಧಾರದ ಮೇಲೆ ಪಕ್ಷಪಾತವನ್ನಾಗಲಿ, ಉಪೇಕ್ಷೆಯನ್ನಾಗಲಿ ವ್ಯಕ್ತಪಡಿಸುವುದಿಲ್ಲ. ತಿರಸ್ಕಾರ ಮತ್ತು ಉಪೇಕ್ಷೆಯ ಭಾವನೆಗಳಿಂದ ಪೂರ್ತಿಯಾಗಿ ಮುಕ್ತಳಾಗಿರುವೆ. ಗ್ರಾಹಕರು ಯಾರೇ ಆಗಿರಲಿ ಮನಃಪೂರ್ವಕವಾಗಿ, ಏಕರೀತಿಯಿಂದ ಸಂತೋಷಪಡಿಸುತ್ತೇನೆ ಎಂಬ ಅವಳ ಮಾತು ಬದ್ಧತೆ ಸಂಕಲ್ಪಕ್ಕೆ ಮಾದರಿ ಎಂದು ತಿಳಿದುಕೊಳ್ಳಬಹುದು.

ನಳಿನಿಯವರ ಅಮ್ಮ ಒಂಟಿಯಾಗಿ ಕುಳಿತು ಅಳುತ್ತಲೇ ಅನೇಕ ರಾತ್ರಿಗಳನ್ನು ಕಳೆಯುತ್ತಿದ್ದಳು. ಅಮ್ಮನನ್ನು ಕಂಡಾಗಲೆಲ್ಲಾ ಅಂತಸ್ತು, ಪ್ರತಿಷ್ಠೆ, ಆಡಂಬರಗಳೆಲ್ಲಾ ಹಣದ ಮೇಲೆ ಅವಲಂಬಿತ ಎಂಬ ಸತ್ಯ ಅರ್ಥವಾಗುತ್ತಿತ್ತು. ದಿನಕ್ಕೆ ಒಂದುವರೆ ರೂಪಾಯಿ ಕೂಲಿಯನ್ನು ಪಡೆಯಲಾಗುತ್ತಿತ್ತು.

ಆ ದಿನಗಳಲ್ಲಿ ಇದು ಬಾಲಕಾರ್ಮಿಕ ಪದ್ಧತಿ ಎಂದು ಯಾರಿಗೂ ತಿಳಿದಿರಲಿಲ್ಲ. ನಂತರದ ದಿನಗಳಲ್ಲಿ ಗಂಡಸರಿಗೆ ಮೂರುವರೆ ರೂಪಾಯಿ, ಹೆಂಗಸರಿಗೆ ಎರಡೂವರೆ ರೂಪಾಯಿ ಕೂಲಿ ಕೊಡುತ್ತಿದ್ದರು. ತಂದೆ ಏನೂ ಕೆಲಸ ಮಾಡದೇ ಸುಮ್ಮನೆ ಮನೆಯಲ್ಲಿಯೇ ಇದ್ದು ಕಾಲಹರಣ ಮಾಡುವುದಲ್ಲದೆ ನನ್ನ ಸಂಪಾದನೆಯ ಮೇಲೆ ಯಜಮಾನಿಕೆ ನಡೆಸಲು ಪ್ರಾರಂಭಿಸಿದ್ದರು. ಅಮ್ಮನ ಮೇಲೆ ವಿಧಿಸುತ್ತಿದ್ದಂತೆ ನನ್ನ ಮೇಲೂ ಷರತ್ತುಗಳನ್ನು ವಿಧಿಸತೊಡಗಿದರು.

ಹಗಲು ರಾತ್ರಿಯ ನಡುವೆ ನಡೆಯುವ ನೂರಾರು ಅವತಾರಗಳ ಬಗ್ಗೆ ನಮಗೆ ತಿಳಿದೇ ಇರುವುದಿಲ್ಲ. ವೇಷಭೂಷಣಗಳು ಅವರವರ ಉದರ ಪೋಷಣೆಗಾಗಿ ಮತ್ತು ಸ್ವಾರ್ಥದ ವಾಂಛೆಗಾಗಿ ಎಂದು ಹೇಳಬಹುದು. ಸಮಾಜದಲ್ಲಿ ಅಸಹಾಯಕರನ್ನು ಮನೋಬಲ ನೈತಿಕತೆಯ ಬೆಂಬಲ ಕೊಟ್ಟು, ನಿಮ್ಮೊಂದಿಗೆ ನಾವಿದ್ದೇವೆ ಕಾನೂನಾತ್ಮಕವಾಗಿ ರಕ್ಷಣೆ



ನೀಡಿ ನಿಮ್ಮ ಇಚ್ಛೆಯಂತೆ ಪ್ರಜಾಪ್ರಭುತ್ವದಡಿಯಲ್ಲಿ ಸುಖದ ನಿದ್ರೆ ಮಾಡಬಹುದೆಂದು ಹೇಳಿ ಸಂತೈಸಬೇಕಾದ ಪೊಲೀಸರು ನಿತ್ಯವು ಕೊಡುವ ಹಿಂಸೆಯನ್ನು ಅನುಭವಿಸಿ ಕೊನೆಗೆ ತಾಳಲಾರದೆ 'ರಾತ್ರಿ ನಮ್ಮ ಬಳಿ ಬರುವವರು ಪೋಲೀಸಿನವರು ನೀವೇ! ಹಗಲು ಸಾಯುವಂತೆ ಥಳಿಸುವವರೂ ನೀವೇ!' ಎಂದು ನಳಿನಿ ಕಣ್ಣೀರು ಸುರಿಸುತ್ತಾ ನುಡಿಯುತ್ತಾರೆ.

ಸಮಾಜದಲ್ಲಿ ಪ್ರತಿಯೊಬ್ಬರಿಗೂ ನಾನು ಬೇಕು ಅಂದರೆ ನನ್ನ ದೇಹ ಬೇಕು ಅವರು ಬಯಸಿದಷ್ಟು ಸಮಯ ಬಯಸಿದಂತ ಭಂಗಿ, ಬಯಸಿದಂತ ರೂಪಗಳಲ್ಲಿ! ಆದರೆ ನನ್ನ ಮಗಳ ಜವಾಬ್ದಾರಿ ಹೊಂದಲು ಯಾರಿಗೂ ಇಷ್ಟವಿರಲಿಲ್ಲ. ಅವರೆಲ್ಲರೂ ಸಮಾಜದ ಪ್ರತಿಷ್ಠಿತ ಹುದ್ದೆಯಲ್ಲಿದ್ದರು. ಅವರ ಅಂತಸ್ತು ಅಧಿಕಾರ ಹುದ್ದೆಗಳಿಂದ ನಳಿನಿಗೆ ಯಾವ ಸಂಬಂಧವು ಇರಲಿಲ್ಲ. ಆದರೆ ಅವರು ಮನಸ್ಸು ಮಾಡಿದರೆ ಬೇರೆ ಊರಲ್ಲಿಟ್ಟು ನನ್ನ ಕಂದನನ್ನು ವಿದ್ಯಾಭ್ಯಾಸ ಕೊಡಿಸಬಹುದಾಗಿತ್ತು. ಅವರಿಗೆ ಅಂಥ ಅವಕಾಶವಿತ್ತು. ಆದರೆ ಬಂದವರು ಆ ಮಗುವಿನ ಕೈಗೆ ಒಂದು ಬಿಸ್ಕಟ್ ಪೊಟ್ಟಣ ಕೊಟ್ಟು, ನನ್ನನ್ನು ಮಂಚಕ್ಕೆ ಎಳೆದು ತರುತ್ತಿದ್ದರು. ಪ್ರತಿಯೊಬ್ಬ ವ್ಯಕ್ತಿಗೂ ಬದುಕಲೂ ಊಟಬೇಕು. ಅದರಂತೆ ಸೆಕ್ಸ್ ಕೂಡ. ಅವರವರ ಕೋರಿಕೆಗಳೆಲ್ಲಾ ಈಡೇರಿದ ಮೇಲೆ ಭರವಸೆಗಳೆಲ್ಲಾ ಗಾಳಿಗೆ ಹಾರಿ ಹೋಗುತ್ತವೆ. ನಾವು ಮಾಡುವ ಕೆಲಸ ಅಪರಾಧವೇ ಆದಲ್ಲಿ ಅದರಲ್ಲಿ ಭಾಗಿಗಳಾದ ಗಂಡಸರೂ ಶಿಕ್ಷಾರ್ಹರಲ್ಲವೇ? ಅವರಿಗೂ ಸಮಾನವಾದ ಶಿಕ್ಷೆಯಾಗಬೇಕು. ಆದರೆ ಅದು ಆಗುತ್ತಿಲ್ಲ...?

ವೇಶ್ಯೆಯರ ಸಾವು - ಬದುಕಿನ ಬಗೆಗೆ ಸಮಾಜಕ್ಕೆ ಎಂದೂ ಆಸಕ್ತಿ ಇರುವುದಿಲ್ಲ. 'ಹೂಸಿದವರಾರು ಎಂದರೆ ಮಾಸಿದ ಸೀರೆಯವರು' ಎಂಬ ಗಾದೆ ನೆನಪಾಗುತ್ತದೆ. ಹಾಗೇ ನಿನ್ನ ಅವಶ್ಯಕತೆ ಮುಗಿದ ನಂತರ ನಿನ್ನನ್ನು ಲೆಕ್ಕಿಸುವುದಿಲ್ಲವೆಂದು ಹೇಳಿದರು. ತನ್ನ ಸ್ವರಕ್ಷಣೆಗಾಗಿ ಕೇವಲ ಅವಕಾಶ ಮತ್ತು ಸ್ವಾರ್ಥದ ತನ್ನ ಬಯಕೆ - ಈಡೇರಿಕೆಗಾಗಿ ಮಾತ್ರ ಆಲೋಚಿಸುವ ಯಾರ ಭಾವನೆಗೆ ಧಕ್ಕೆಯಾಗಿ ಅವರು ನೋವು ಅನುಭವಿಸಿದರೂ ಲೆಕ್ಕಿಸದೇ ಕೇವಲ ತನ್ನ ಬಗ್ಗೆ ಯೋಚಿಸುವವರು ವೇಶ್ಯೆರಿಗಿಂತ ಕೀಳುಮಟ್ಟದ ಮನುಷ್ಯರು.

ನಳಿನಿ ಹೇಳುವಂತೆ ಅನೇಕ ಸಂದರ್ಭಗಳಲ್ಲಿ ಮಸೀದಿ ನನಗೆ ಆಶ್ರಯ ನೀಡಿದೆ. ಅಲ್ಲಿ ಸಿಗುತ್ತಿದ್ದ ಬೆಲ್ಲದೆಯೇ ನನ್ನ ಪ್ರಾಣ ಕಾಪಾಡಿದೆ. ಷಾಹುಲ್ ಜೊತೆಯಲ್ಲಿದ್ದಾಗಲೇ ನನ್ನ ಹೆಸರು ಜಮೀಲಾ ಆಗಿ ಬದಲಾಗಿತ್ತು? ಒಮ್ಮೆ ಒಬ್ಬ ಪೊಲೀಸಿನವ ನನ್ನ ಹೆಸರು ಕೇಳಲು 'ಜಮೀಲಾ' ಎಂದು ಉತ್ತರಿಸಿದೆ. ಅದನ್ನು ಕೇಳಿದ ಮತ್ತೊಬ್ಬ ಪೊಲೀಸಿನವ 'ಸುಳ್ಳು ಹೇಳುತ್ತಿರುವೆ, ನಿನ್ನ ಹೆಸರು ನಳಿನಿ ಅಲ್ಲವೆ' ಎಂದು ಹೇಳಿದ. ಹೀಗೆ ಅಂದಿನಿಂದ ಯಾರು ಕೇಳಿದರೂ ಎರಡೂ ಸೇರಿಸಿ ಹೇಳಲಾರಂಭಿಸಿದೆ. ಇದೀಗ ನನ್ನ ಹೆಸರು ನಳಿನಿ ಜಮೀಲಾ! ಎಂದು ಬರೆಯುತ್ತಾರೆ.



ಸೆಕ್ಸ್ ಕಾರ್ಯ ಹಾಗೂ ಲೈಂಗಿಕ ಶೋಷಣೆಗೆ ವ್ಯತ್ಯಾಸವಿದೆಯೆಂದು ನಳಿನಿ ಅವರ ಅನಿಸಿಕೆ. ಈ ವೃತ್ತಿಗೆ ಬಂದ ಕೆಲವರು ವಿಧಿಯಿಲ್ಲದೆ ಪರಿಸ್ಥಿತಿಗಳಿಂದಾಗಿ ಬಂದಿರಬಹುದು. ಸೆಕ್ಸ್ ರಾಕೆಟ್‌ಗಳು ಎನ್ನುವುದನ್ನು ಪ್ರತ್ಯೇಕವಾಗಿ ಪರಿಶೀಲಿಸಬೇಕಾಗಿರುತ್ತದೆ. ಸೆಕ್ಸ್ ಕೆಲಸದೊಡನೆ ಇದಕ್ಕೆ ಯಾವ ಸಂಬಂಧವೂ ಇರುವುದಿಲ್ಲ. ಸೆಕ್ಸ್ ರಾಕೆಟ್‌ಗಳಲ್ಲಿ ಪರಿಸ್ಥಿತಿ ಭಯಾನಕವಾಗಿರುತ್ತದೆ. ಇವು ಗೂಂಡಾಗಳ ಹತೋಟಿಯಲ್ಲಿರುತ್ತವೆ. ಸೆಕ್ಸ್ ಎನ್ನುವುದು ಅನಿರ್ವಚನೀಯವಾದ ಅನುಭವವಾಗಿದೆ. ಅದಿಲ್ಲದೆ ಯಾವ ಪ್ರಾಣಿ ಪಕ್ಷಿಗಳು ಇಲ್ಲ.

ವೇಶ್ಯೆ ಎಂಬ ಪದ ಸಂಸ್ಕೃತದ್ದು. ಅದರ ಅರ್ಥ ಇತರರನ್ನು ನಾಶಪಡಿಸುವವರು' ಎಂದು ಅದು ಅಪಮಾನಕರವಾದುದು, ಬೇಡ ಎಂದು ಇದೀಗ 'ಸೆಕ್ಸ್ ವರ್ಕರ್' ಎಂಬ ಹೊಸಪದ ಬಳಕೆಗೆ ಬಂದಿದೆ. ಎರಡರಲ್ಲೂ ಪದಗಳ ವ್ಯತ್ಯಾಸವಿದೆಯೇ ಹೊರತು ಅರ್ಥದಲ್ಲಿ ಏನೂ ಇಲ್ಲ. ಸೆಕ್ಸ್‌ವರ್ಕರ್ ಎನ್ನುವುದನ್ನು ಗಂಡು-ಹೆಣ್ಣುಗಳ ಮಧ್ಯೆ ಇರುವ ಸೆಕ್ಸ್‌ಗೆ ಮಾತ್ರ ಸೀಮಿತಗೊಳಿಸಿ ಬಳಸಲಾಗುತ್ತಿದೆ. ಕಣ್ಣಿನಿಂದ ನೋಡಿ ಖುಷಿಪಡುವುದು, ಸ್ಪರ್ಶದಿಂದ ಆನಂದಿಸುವುದು, ಮುದ್ದಿಸುವುದು, ತೀವ್ರ ಶೃಂಗಾರಾನುಭವ - ಇವೆಲ್ಲ ಸೆಕ್ಸಿನ ಬೇರೆ ಬೇರೆ ರೂಪಗಳ ವ್ಯಕ್ತೀಕರಣಗಳೆಂದು ಹೇಳಬಹುದು.

ಸೆಕ್ಸ್ ಸೇವಕಿಯರನ್ನು ನಖಶಿಖಾಂತ ಶೋಷಿಸುವವರು ಮಧ್ಯವರ್ತಿಗಳು ಮತ್ತು ಗಂಡಂದಿರು. ನಿಜವಾಗಿ ಈ ಗಂಡಂದಿರೆನ್ನುವವರೂ ಬ್ರೋಕರುಗಳೆ. ಇವರು ಏನೂ ಕೆಲಸ ಮಾಡದೇ ಇದ್ದರೂ ಅವರಿಗೆ ಹಣ, ಹೆಂಡ, ಕೊಟ್ಟು ಪೋಷಿಸಲೇಬೇಕು. ಯಾವ ಹೆಂಗಸೂ ಸೆಕ್ಸ್ ಕಾರ್ಯಕರ್ತೆಯಾಗಿ ಜನಿಸುವುದಿಲ್ಲ. ಪರಿಸ್ಥಿತಿಗಳ ಮೂಲಕ ಹೀಗೆ ರೂಪುಗೊಳ್ಳುತ್ತಾರೆ. ನಾವು ಎಂದೆಂದಿಗೂ ಸಮಾಜದಿಂದ ಬಹಿಷ್ಕೃತರೇ ಎಂಬ ವಿಷಯವನ್ನು ನಾವು ಕನಸಿನಲ್ಲಿಯೂ ಮರೆಯುವಂತಿಲ್ಲ.

ಕೇರಳದಲ್ಲಿನ ಲೈಂಗಿಕ ಸೇವಕರಲ್ಲಿ ಸ್ತ್ರೀಯರಿಗಿಂತ ಗಂಡುಗಳೇ ಹೆಚ್ಚಾಗಿದ್ದಾರೆ. ಎಷ್ಟುವರ್ಷ ಕಳೆದರೂ ಗಂಡಿನ ಮನೋಭಾವದಲ್ಲಿ ಬದಲಾವಣೆಗಳ ಗಾಳಿ ಬೀಸುತ್ತಲೇ ಇಲ್ಲ. ಅಂತಹ ಆಸೆ ಕೇವಲ ಭ್ರಮೆ! ಹೆಣ್ಣುಗಳೆಂದರೆ ತಮ್ಮ ಭೋಗಕ್ಕಾಗಿ ಸೃಷ್ಟಿಸಲ್ಪಟ್ಟವರೆಂಬ ಧೋರಣೆ ದಿನದಿನಕ್ಕೂ ಹೆಚ್ಚುತ್ತಲೇ ಇದೆ. ಬದುಕಿನಲ್ಲಿ ಹೆಜ್ಜೆ ಹೆಜ್ಜೆಗೂ ಹೋರಾಟ ಮಾಡಬೇಕಾಗಿ ಬಂದುದೂ ನೆನಪುಗಳು ನನ್ನಲ್ಲಿ ಸಜೀವವಾಗಿರಲು ಕಾರಣ ಇರಬಹುದು.

ಬದುಕಿನಲ್ಲಿ ಪ್ರತಿ ಹಂತದಲ್ಲೂ ನಿಂತು ಹಿಂದಕ್ಕೆ ನೋಡಿದರೆ ನಾನು ಹಾದು ಬಂದ ಅನೇಕ ಅಪಾಯಗಳು ಕಾಣಿಸುತ್ತಲೇ ಇರುತ್ತವೆ. ನನ್ನ ಬದುಕನ್ನು ಸಮೀಕ್ಷಿಸಿಕೊಳ್ಳುತ್ತಾ ಪದೇ ಪದೇ ಮೆಲುಕು ಹಾಕುತ್ತಾ ಇದ್ದುದರಿಂದಲೇ ನನ್ನ ನೆನಪುಗಳೆಲ್ಲಾ ಸ್ಪಷ್ಟವಾಗಿ



ಕಾಪಾಡಿಕೊಂಡು ಬರಲು ಸಾಧ್ಯವಾಗಿದೆ ಎಂದುಕೊಂಡಿರುವೆ. ಬದುಕಿನ ವೈವಿಧ್ಯಮಯವಾದ ಅನುಭವಗಳ ನೆನಪುಗಳು ನನ್ನ ಕಷ್ಟಕಾಲದಲ್ಲಿ ಶಕ್ತಿಯನ್ನು, ಧೈರ್ಯವನ್ನು ನೀಡುತ್ತಾ ಬಂದಿವೆ. ದೊಡ್ಡ ಸಮಸ್ಯೆಯೊಂದು ಎದುರಾದಾಗ ಒಂದು ಕ್ಷಣ ನಿಂತು ಹಿಂದಿನ ಅನುಭವಗಳನ್ನು ಸ್ಮರಿಸಿಕೊಳ್ಳುವೆ.

"ಈ ವೃತ್ತಿ ದೈನಂದಿನ ಜೀವನದಲ್ಲಿ ಎಷ್ಟೋ ಬದಲಾವಣೆಗಳನ್ನು ತಂದಿದೆ. ಅದಕ್ಕೂ ಮುಂಚೆ ನನ್ನ ಜೀವನದಲ್ಲಿ ಸುಖವಾಗಲಿ, ಸಂತೋಷವಾಗಲಿ ಏನೇನೂ ಇರಲಿಲ್ಲ. ಕ್ಷಣ ಕ್ಷಣ ಸಾಯುತ್ತಿದ್ದುದರಿಂದ ನನ್ನ ಮೇಲೆ ನನಗೆ ಶ್ರದ್ಧೆ ಇಲ್ಲವಾಗಿತ್ತು. ಗಂಡಸರ ದೃಷ್ಟಿಯಲ್ಲಿ ಯಾವ ಮಹಿಳೆಗೂ ಸಮಾನ ಗೌರವವಿಲ್ಲವೆಂದೂ ನಮಗೆ ಗೊತ್ತು. ಮಕ್ಕಳಿಂದ ದೂರವಾದ ಅವರ ಆರ್ತನಾದ, ಅಸಹಾಯಕತೆ, ಮೂಕವೇದನೆ ಯಾರಿಗೂ ಅರ್ಥವಾಗುವುದಿಲ್ಲ" ಎಂದೂ ಹೇಳುವ ನಳಿನಿ ಅವರನ್ನು ಸಮಾಜ ಗೌರವಿಸುವಂತೆ ಮಾಡಿದ್ದು ಜ್ವಾಲಾಮುಖಿ ಸಂಸ್ಥೆ. ಅಂಬಳ್ಳೂರು ಸಮೀಪ ಇರುವ ಕಲ್ಲೂರಿನಲ್ಲಿ ಜನನ.

ನಳಿನಿ ಜಮೀಲಾ ಕೇರಳದ ಜನರ ಗಮನಕ್ಕೆ ಬಂದಿದ್ದು 2005ರಲ್ಲಿ, ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನದ ಪ್ರತಿಗಳು ನೂರು ದಿನಗಳಲ್ಲಿ 13,000 ಪ್ರತಿಗಳು ಮಾರಾಟವಾಗಿದ್ದವು. ನನ್ನ ಪ್ರಪ್ರಥಮ ಡಾಕ್ಯುಮೆಂಟರಿ 'ಜ್ವಾಲಾಮುಖಿಗಳ್' ಎಂಬುದು. ಎರಡನೆಯದು 'ನಿಶ್ಯಬ್ದರಕ್ಕ ಪೆಟ್ಟಾವರಿತಿಕು ಒರೆಟ್ಟಿನೊಟ್ಟಿಮೆ', ನಳಿನಿ ಅವರು ತೆಗೆದಿದ್ದ ಸಾಕ್ಷಚಿತ್ರಗಳನ್ನು ತಿರುವನಂತಪುರದಲ್ಲಿ ರಷ್ಯನ್ ಕಲ್ಚರಲ್ ಸೊಸೈಟಿಯವರು ಪ್ರದರ್ಶಿಸಿದರು. ಅದೇ ರೀತಿ ಮುಂಬಯಿಯಲ್ಲಿ ನಡೆದ ಅಂತರರಾಷ್ಟ್ರೀಯ ಫಿಲಂ ಫೆಸ್ಟಿವಲ್‌ನಲ್ಲಿಯೂ ಇವುಗಳು ಪ್ರದರ್ಶಿಸಲ್ಪಟ್ಟವು. 2003ರಲ್ಲಿ ಆನಂದೋತ್ಸವದ ಹೆಸರಿನಲ್ಲಿ ಸಮಾವೇಶ ಏರ್ಪಡಿಸಿದಾಗ ಎಲ್ಲಾ ಅನುಭವಗಳನ್ನು ಕೇಳುತ್ತಾ ವಿಷಾದೋತ್ಸವವಾಗಿ ಮಾರ್ಪಡಿಸಿದವು. ಇತರ ದೇಶಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಸಖಿ, ಅನ್ವೇಷಿ, ಸನ್ ಟಿ.ವಿ.ಯಲ್ಲಿ 'ಕಥೆಯಲ್ಲ ಜೀವನ' ಎನ್ನುವ ಕಾರ್ಯಕ್ರಮದಲ್ಲಿ ಹಿರಿಯ ನಟಿ ಲಕ್ಷ್ಮಿ ಅವಕಾಶ ಮಾಡಿಕೊಟ್ಟು ಚೆನ್ನೈಯಲ್ಲಿ ವಿ.ಐ.ಪಿ. ಗೌರವವನ್ನು ತಂದುಕೊಟ್ಟರು.

ಇಂಥ ಏಳುಬೀಳುಗಳ ನಡುವೆ ಶಿಖರ ಸೂರ್ಯವಾಗಿ ಬೆಳೆದು ನಿಂತು ತನ್ನ ಸ್ವಯಂ ಪ್ರಕಾಶವನ್ನು ಸಮಾಜಕ್ಕೆ ಸತ್‌ಪ್ರಜೆಯಾಗಿ, ಚಿಂತಕಿಯಾಗಿ, ಲೈಂಗಿಕ ಕಾರ್ಯಕರ್ತೆಯಾಗಿ ಬದುಕುತ್ತಿರುವ ನಳಿನಿ ಜಮೀಲಾ ಅವರ ಅಪ್ಪಟ ಯಶೋಗಾಥೆಯನ್ನು 2009ರಲ್ಲಿ ಸೃಷ್ಟಿ ಪಬ್ಲಿಕೇಷನ್ಸ್‌ರವರಿಂದ ಕನ್ನಡಕ್ಕೆ ಶ್ರೀ ಕೆ. ನಾರಾಯಣಸ್ವಾಮಿ ಗೌರಿಬಿದನೂರು ಪರಿಚಯಿಸಿದ್ದಾರೆ. ಹೊಸ ಲೋಕ ಅನಾವರಣಗೊಳಿಸಿರುವುದಕ್ಕೆ ಜೈ ಭೀಮಗಳು.



29

# ಮಕ್ಕಳ ಬರುವಿಕೆಗೆ ಕಾತರಿಸುವ ಪೋಷಕರಂತೆ...

– ಕೆ.ಎಂ. ಕೊಮ್ಮಣ್ಣ, ಹ.ಮಾ. ರಾಮಚಂದ್ರ
ಶಿಕ್ಷಕರು, ಕೋಲಾರ

ಆಗಿನ್ನೂ ಕಾಲೇಜಿನ ದಿನಗಳು. ಪಠ್ಯಪುಸ್ತಕದಲ್ಲಿನ ವಿಷಯಗಳನ್ನು ಕಲಿಯಲು ದೂರದ ಹಳ್ಳಿಗಳಿಂದ ಹಾಸ್ಟಲ್ ಸೌಲಭ್ಯ ಸಿಗುತ್ತದೆಂದು ತಿಳಿದು ಕೋಲಾರಕ್ಕೆ ಬಂದೆವು. 1978-79ರ ಸುಮಾರು ಇರಬಹುದು. ಆಗ K.G.F.ನಿಂದ 'ಸಮುದಾಯ ಜಾಥಾ' ಕೋಲಾರಕ್ಕೆ ಬಂದಿತ್ತು. ಆ ಜಾಥಾದಲ್ಲಿ ಬಂದಂತವರು ನೀಡಿದ ನಾಟಕ, ಹಾಡು, ಭಾಷಣಗಳು ವಿಶೇಷತೆಯಿಂದ ಕೂಡಿತ್ತು. ಜೊತೆಗೆ ಹೊಸ ಹೊಸ ಹೆಸರಿನ ಪುಸ್ತಕಗಳು ನಮ್ಮನ್ನು ಆಕರ್ಷಿಸಿದವು. ಹಾಸ್ಟಲ್‌ನಲ್ಲಿದ್ದುದರಿಂದ ಬೇರೆ ಬೇರೆ ಜನ ಬಂದು ಹೊಸ ರೀತಿಯ ನಮ್ಮ ಬದುಕಿನ ವಿವರಗಳ ಕುರಿತು ಹಾಡು ಭಾಷಣ ಕೇಳಿ ಆಸಕ್ತಿ ತೋರುತ್ತಾ ಹೋದವು. ಇಂತಹ ವಿಚಾರಗಳು ನಮ್ಮನ್ನು ಯೋಚಿಸುವಂತೆ ಮಾಡಿದವು.

ಶಾಲಾ ಪುಸ್ತಕಗಳೇ ಓದು ಎಂದು ತಿಳಿದಿದ್ದ ನಮಗೆ ಬಂದವರು ಪರಿಚಯಿಸುತ್ತಿದ್ದ ಗೋದಾವರಿ ಪರುಳೇಕರ್‌ರವರ ಮಾನವ ಎಚ್ಚೆತ್ತಾಗ, ಚಿರಸ್ಮರಣೆ, ಅಂಬೇಡ್ಕರ್ ವಾಣಿ, ದಲಿತ ಕೈಪಿಡಿ, ಹೋರಾಟದ ಹಾಡುಗಳು Be gone god man, gods, demons and spirits ನಂತಹ ಪುಸ್ತಕಗಳು ನಮ್ಮನ್ನು ಗಮನ ಸೆಳೆದವು. ಅನ್ಯಾಯದ ವಿರುದ್ಧ ನಡೆಯುತ್ತಿದ್ದ ಪ್ರತಿಭಟನೆ, ಘೋಷಣೆ, ಹೋರಾಟ, ಧರಣಿ ಸತ್ಯಾಗ್ರಹ Study classನಂತಹ ಸಂಘಟನಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು, ದಲಿತ ಕಾಲನಿಗಳಲ್ಲಿ ರಾತ್ರಿ ಶಾಲೆ ನಡೆಸುವುದು ಮುಂತಾದ ಕಾರ್ಯಕ್ರಮಗಳಲ್ಲಿ ನಮ್ಮನ್ನು ಪೂರ್ಣವಾಗಿ



ತೊಡಗಿಸಿಕೊಳ್ಳುವಂತಾಯಿತು. ಜೊತೆಗೆ 20 ಪೈಸೆಗೆ 'ಪಂಚಮ' ಪತ್ರಿಕೆ ಪಡೆದು ಓದುವುದು, ಅದನ್ನು ಸಭೆ ಸಮಾರಂಭಗಳಲ್ಲಿ ಮಾರಾಟ ಮಾಡತೊಡಗಿದೆವು.

ಹೀಗೆ ವಿದ್ಯಾಭ್ಯಾಸದ ಜೊತೆಗೆ ಸಾಗುತ್ತಿದ್ದ ಕಾರ್ಯಚಟುವಟಿಕೆಗಳಲ್ಲಿ ಹಲವು ಪ್ರಮುಖ ವ್ಯಕ್ತಿಗಳ ಮತ್ತು ಅವರು ಬರೆದಿರುವಂತಹ ಪುಸ್ತಕಗಳ ಪರಿಚಯವಾಗತೊಡಗಿತು. ಅವುಗಳಲ್ಲಿ ಕೆ. ನಾರಾಯಣಸ್ವಾಮಿರವರ ಸಂಪಾದನೆಯ ದಲಿತ ಯುವಕರನ್ನು ಕೈಹಿಡಿದು ನಡೆಸುವಂತಹ "ದಲಿತ ಕೈಪಿಡಿ. ಅಂಬೇಡ್ಕರ್ ವಾಣಿ" ನಮ್ಮನ್ನು ತುಂಬಾ ಪ್ರಭಾವಿಸಿದವು. ಇವು ನಮ್ಮನ್ನು ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವಂತೆ ಮಾಡಿದವು.

ಒಮ್ಮೆ ಕೋಲಾರದ ನಚಿಕೇತ ನಿಲಯದಲ್ಲಿ ನಡೆದ ಜಿಲ್ಲಾ 'ದಸಂಸ' ಸಭೆಯಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ, ದಲಿತ-ವಿದ್ಯಾರ್ಥಿನಿಲಯ ತೆರೆಯಲು ಒತ್ತಾಯಿಸಿ ಒಂದು ದಿನದ ಧರಣಿ ಕಾರ್ಯಕ್ರಮ ನಡೆಸುವುದು ಎಂದು ತೀರ್ಮಾನಿಸಲಾಯಿತು. ಅದರಂತೆ ನಮ್ಮನ್ನು ದೂರದ ತಾಲ್ಲೂಕಾದ ಗೌರಿಬಿದನೂರಿಗೆ ಹೋಗಿ ಧರಣಿ ಕಾರ್ಯಕ್ರಮ ನಡೆಸುವಂತೆ ಜವಾಬ್ದಾರಿ ನೀಡಲಾಯಿತು. ಏಕೆಂದರೆ ಅಲ್ಲಿ 'ದಸಂಸ' ಶಾಖೆ ಪ್ರಾರಂಭವಾಗಿರಲಿಲ್ಲ. ಇದು ನಮಗೊಂದು ಸವಾಲಿನ ಪ್ರಶ್ನೆಯಾಗಿತ್ತು. ಕೋಲಾರ ಬಿಟ್ಟು, ಹೊರಟ ನಮಗೆ ಯಾವುದೇ ಗುರುತು - ಪರಿಚಯ ಸಂಬಂಧಗಳಿಲ್ಲದೆ ಗೌರಿಬಿದನೂರಿಗೆ ಪ್ರಯಾಣ ಬೆಳೆಸಿದೆವು. ಚಿಕ್ಕಬಳ್ಳಾಪುರ ದಾಟಿ ಕಣಿವೆ ಇಳಿಯುತ್ತಿದ್ದಂತೆ ಹೊಸಲೋಕದ ಅನುಭವ, ಬೆಟ್ಟ, ಕಣಿವೆ, ಕಬ್ಬಿನ ಗದ್ದೆಗಳು, ಅಡಿಕೆ ತೋಟಗಳು ರಸ್ತೆಯ ಇಕ್ಕೆಲಗಳಲ್ಲಿ ಕಾಣುತ್ತಿದ್ದವು. ವಿಶಾಲವಾದ ಹಸಿರು ಪ್ರದೇಶ, ನದಿ ಬಯಲು.... ಕಣ್ಣಿಗೆ ಮುದ ನೀಡಿತ್ತು.

ಸ್ಥಳೀಯವಾಗಿ ಪ್ರಾರಂಭಿಸಿದ ಸಂಘಟನೆಗೆ ಗೌರಿಬಿದನೂರಿನ ನ್ಯಾಷನಲ್ ಕಾಲೇಜಿನ ಉಪನ್ಯಾಸಕರಾದ ಪ್ರೊ. ಬಿ. ಗಂಗಾಧರಮೂರ್ತಿ, ರಂಗಾರೆಡ್ಡಿ ಕೋಡಿರಾಂಪುರ, ವೇಣುಗೋಪಾಲ್, ಶಿವಲಿಂಗಯ್ಯ... ಹಾಗೂ ವಿದ್ಯಾರ್ಥಿ ವೃಂದ ಪೂರ್ಣ ಸಹಕಾರ ನೀಡಿದರು. ಹೀಗೆ ಸಾಗುತ್ತಿರುವಾಗ ನಮಗೆ ಅಲ್ಲಲ್ಲಿ ಉಂಟಾಗುತ್ತಿದ್ದ ಸಂಶಯ, ಸಮಸ್ಯೆಗಳಿಗೆ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದುದು, ಕೆ.ಎನ್.ಎಸ್.ರವರು. ಆಗವರು ಬಾಗೇಪಲ್ಲಿ, ಗುಡಿಬಂಡೆ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದರು. ಅವರ ವೃತ್ತಿಜೀವನದಲ್ಲಿ ತಮ್ಮದೇ ಆದ ವಿಶಿಷ್ಟ ಗುಣಗಳಿಂದ ಜನಮನದಲ್ಲಿ ಉಳಿದವರು ಕೆ.ಎನ್.ಎಸ್.ರವರು. ಆಗ ಕಾಗದ ಪತ್ರಗಳ ಮೂಲಕ ಅವರನ್ನು ಭೇಟಿ ಮಾಡುವ ಸಮಯ, ದಿನಾಂಕ ತಿಳಿಸಿ ಅವರ ಬಳಿ ಹೋಗುತ್ತಿದ್ದೆವು. ಅವರು ನಮ್ಮನ್ನು ತಮ್ಮ ಮಕ್ಕಳು ಬರುವಿಕೆಗೆ ಪೋಷಕರು ಕಾಯುವಂತೆ ಬಸ್ ನಿಲ್ದಾಣದಲ್ಲಿ ಕಾದು ಮನೆಗೆ



ಕರೆದುಕೊಂಡು ಹೋಗುತ್ತಿದ್ದರು. ನಮ್ಮನ್ನು ಉಪಚರಿಸುವ ರೀತಿ - ತಂದೆ - ತಾಯಿಗಳಿಂದ ನೂರಾರು ಮೈಲಿ ದೂರವಿದ್ದ ನಮಗೆ ಅವರ ಪ್ರೀತಿ - ಗೌರವ ಮರೆಯಲು ಸಾಧ್ಯವಿಲ್ಲ.

ಮನೆಗೆ ಹೋದ ಕೂಡಲೇ ಕೈಕಾಲು ಮುಖ ತೊಳೆಯಲು ನೀರನ್ನು ಒದಗಿಸುವುದು, ಟವಲ್ ನೀಡುವುದು, ಅವರ ಜೊತೆ ಊಟ ಮಾಡಿ ರಾತ್ರಿ ನಿದ್ದೆ ಬರುವವರೆಗೂ ಸಂಘಟನೆ ಚಟುವಟಿಕೆಗಳ ಕುರಿತು ಚರ್ಚಿಸುವುದು, ಮಾರ್ಗದರ್ಶನ ನೀಡುವುದು, ಸೂಕ್ಷ್ಮ ವಿಷಯಗಳ ಬಗ್ಗೆ ಎಚ್ಚರಿಕೆ ವಹಿಸುವ ಕುರಿತು ಹೇಳುವುದು ಸಾಗುತ್ತಿತ್ತು. ನಂತರ ಬೆಳಿಗ್ಗೆ ನಮಗಿಂತ ಮೊದಲೇ ಎದ್ದು, ಬೆಳಗಿನ ಕಾರ್ಯಗಳು ಮುಗಿಸಿ ಬಸ್ಸಿಗೆ ನಮ್ಮನ್ನು ವಾಪಸ್ಸು ಗೌರಿಬಿದನೂರಿಗೆ ಕಳುಹಿಸಿಕೊಡುತ್ತಿದ್ದರು. ಅವರೊಟ್ಟಿಗೆ ಇದ್ದಷ್ಟು ಸಮಯ ಹೊಸಪುಸ್ತಕಗಳ ಪರಿಚಯ, ಪತ್ರಿಕೆಗಳಲ್ಲಿ ಬರುವಂತಹ ಲೇಖನಗಳ ಬಗ್ಗೆ ಚರ್ಚೆ ಸಂಘಟನೆಗೆ ಅವುಗಳಿಂದಾಗುವ ಅನುಕೂಲಗಳು, ಕಾರ್ಯಕರ್ತರನ್ನು ಸಂಘಟನೆಗೆ ತೊಡಗಿಸಿಕೊಳ್ಳುವುದರ ಬಗ್ಗೆ ಚರ್ಚೆಗಳಾಗುತ್ತಿತ್ತು. ಇವರು ಕಾರ್ಯಕರ್ತರನ್ನು ಕಾಣುವ ರೀತಿ, ಮಮತೆ ವಾತ್ಸಲ್ಯಕ್ಕೆ ಸಾಕ್ಷಿಯಾಗಿತ್ತು. ಸಂಘಟನೆಯಲ್ಲಿ ತೊಡಗಿಸಿಕೊಂಡಿದ್ದ ನಮ್ಮಂತವರಿಗೆ ಇನ್ನಷ್ಟು ಕೆಲಸ ನಿರ್ವಹಿಸುವಂತೆ ಮಾಡುತ್ತಿತ್ತು.

ಇನ್ನೂ ಹಲವಾರು ಬಾರಿ ನಮ್ಮನ್ನು ಕಾಣಲು ಗೌರಿಬಿದನೂರಿಗೆ ಬಂದರೂ ಅವರ ತಂಗಿಯ ಮನೆಗೆ ಹೋಗುವ ಮೊದಲು ನಮ್ಮ ರೂಂಗೆ ಬಂದು ಅವರೇ ನಮ್ಮನ್ನು ಹಾಸಿಗೆಯಿಂದ ಏಳಿಸುತ್ತಿದ್ದ ಉದಾಹರಣೆಗಳಿವೆ. ಕಾರಣ ರಾತ್ರಿ ವೇಳೆ ಹಳ್ಳಿಗಳಿಂದ ಕಾರ್ಯಕ್ರಮ ಮುಗಿಸಿ ತಡರಾತ್ರಿ ಮಲಗುತ್ತಿದ್ದರಿಂದ ಬೆಳಿಗ್ಗೆ ಏಳುವುದು ತಡವಾಗುತ್ತಿತ್ತು. ಅವರದು ಎಂತಹ ಶಿಸ್ತು ಬದ್ಧ ಕ್ರಮವೆಂದರೆ ಅವರು ಎಲ್ಲಿಗೆ ಹೋದರೂ... ಏನೇ ಮಾಡಿದರೂ... ಆ ಬಗ್ಗೆ ಅವರು ಮಾಡಿಕೊಂಡಿದ್ದ ಯೋಜನಾ ಬದ್ಧವಾದ ಸಿದ್ಧತೆ ನಮಗೆ ಇಂದಿಗೂ ಆದರ್ಶವೆಂದರೆ ತಪ್ಪಾಗಲಾರದು. ಒಂದು ಸಣ್ಣ ಭೇಟಿಯಿಂದ ಮಾಡಬೇಕಾದ ಕೆಲಸಗಳ ಪಟ್ಟಿ ಸಿದ್ಧವಾಗಿರುತ್ತಿತ್ತು. ಅದರಂತೆ ಎಲ್ಲಾ ಕೆಲಸಗಳು ಸಾಗುತ್ತಿತ್ತು. ಬಸ್ಸ್‌ನಲ್ಲಿ ಪ್ರಯಾಣಿಸುವಾಗ ಚಿಲ್ಲರೆ ಹಣಕ್ಕೆ ಎಲ್ಲಿಯೂ ಪರದಾಡುವ ಪರಿಸ್ಥಿತಿ ಬಾರದಂತೆ ಕರವಸ್ತ್ರದಲ್ಲಿ ಗಂಟು ಹಾಕಿದ ಚಿಲ್ಲರೆ ಇರುತ್ತಿತ್ತು.

ಹೀಗೆ ಕೆ. ನಾರಾಯಣಸ್ವಾಮಿಯವರು ಸೌಮ್ಯ ಸ್ವಭಾವದ ವ್ಯಕ್ತಿತ್ವ ಸದಾ ಒಂದಲ್ಲ ಒಂದು ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವಿಕೆ, ಇಂದು ಸಂಘಟನೆಯಲ್ಲಿರುವಂತಹ ಬಹುತೇಕರಿಗೆ ಪ್ರಭಾವ ಬೀರುವಂತಹ ಪ್ರತಿಭೆ. ಸಂಘಟನೆಯ ಹಿರಿತಲೆ. ಇವರ ಸರಳ ಜೀವನ ಕ್ರಮ, ಶಿಸ್ತುಬದ್ಧ ಜೀವನ ಸಾವಿರಾರು ಕೋಟಿ ಶಿಷ್ಯರ ಮೇಲೆ ಪ್ರಭಾವ ಬೀರುವಂತಾಗಿದೆ.



# ಕ್ರಿಯಾಶೀಲ ಚಿಂತಕ ಕೆಎನ್ನೆಸ್

– ನಗರಗೆರೆ ರಮೇಶ್

ನಿವೃತ್ತರ ಪ್ರಾಂಶುಪಾಲರು ಹಾಗೂ ಚಿಂತಕರು

ನಾನು ಮೊದಲಬಾರಿ ಕೆ.ಎನ್.ಎಸ್. ಅವರ ಬಗ್ಗೆ ಕೇಳಿದ್ದು ಡಾ. ಆರ್.ವಿ.ಎಸ್. ಸುಂದರಂ ಅವರ ಜತೆಗೂಡಿ ತೆಲುಗಿನ ದಿಗಂಬರ ಕವಿಗಳ ಕವಿತೆಗಳನ್ನು ಕನ್ನಡಕ್ಕೆ ಅನುವಾದ ಮಾಡಿ ವಿಶಿಷ್ಟ ರೀತಿಯಲ್ಲಿ ಅವುಗಳನ್ನು ಜನರ ಗಮನಕ್ಕೆ ತಂದಾಗ. ಬೆಂಗಳೂರಿನಲ್ಲಿ ಒಬ್ಬ ಲೈಂಗಿಕ ಕಾರ್ಯಕರ್ತೆಯ ಕೈಯಲ್ಲಿ ಆ ಸಂಕಲನವನ್ನು ಬಿಡುಗಡೆ ಮಾಡಿಸಿದ್ದು ಯಥಾಕಥಿತ ಶಿಷ್ಟ ಸಮಾಜದ ಹುಬ್ಬೇರುವಂತೆ ಮಾಡಿತು. ಆ ಕೃತಿ ಮತ್ತು ಅದು ಬಿಡುಗಡೆಯಾದ ರೀತಿ ನನ್ನಲ್ಲಿ ಆಸಕ್ತಿಯನ್ನು ಮೂಡಿಸಿದವು. ಆಗ ನಾನು ಗೌರಿಬಿದನೂರಿನ ನ್ಯಾಷನಲ್ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕನಾಗಿದ್ದೆ. ಕೆಎನ್ಎಸ್ ಅವರು ಅಲ್ಲಿಗೆ ಹತ್ತಿರದ ಹೊಸೂರಿನವರೆಂದು ಕೇಳಿ ಆಸಕ್ತಿ ಇನ್ನೂ ಹೆಚ್ಚಾಯಿತು. ಅಂದಿನಿಂದ ಇಂದಿನವರೆಗೂ ಅವರ ಸಮಾಜಮುಖಿ ವ್ಯಕ್ತಿತ್ವವನ್ನು ಗೌರವದಿಂದ ಗಮನಿಸುತ್ತಲೇ ಬಂದಿದ್ದೇನೆ.

ತೆಲುಗಿನ ಪರಿಚಯ ಸಾಕಷ್ಟಿರುವ (ಅವರ ಮನೆ ಮಾತು ತೆಲುಗು) ಕನ್ನಡ ಅಧ್ಯಾಪಕರಾಗಿದ್ದ ಕೆ.ಎನ್.ಎಸ್. ಅವರು ಆನಂತರವೂ ಹಲವು ತೆಲುಗು ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಅಥವಾ ಬೇರೆ ಭಾಷೆಗಳ ಕೃತಿಗಳನ್ನು ತೆಲುಗಿನ ಮೂಲಕ ಕನ್ನಡಿಗರಿಗೆ ಪರಿಚಯಿಸಿದ್ದಾರೆ. ಅಯೋಧ್ಯೆಯ ಸಮಸ್ಯೆಯ ಬಗೆಗಿನ ದಿವಿಕುಮಾರ್ ಅವರ 'ಅಯೋಧ್ಯೆಯ ಭುಗಿಲು', ಮಲೆಯಾಳಂನ



'ಸೆಕ್ಸ್‌ವರ್ಕರ್ ಒಬ್ಬಳ ಆತ್ಮಕಥೆ' (ಮೂಲ ಲೇಖಕಿ : ನಳಿನಿ ಜಮೀಲಾ), ಹಿಂದಿಯ 'ಭಂಗಿಜನಕಥಾ' (ಮೂಲ ಲೇಖಕ : ಭಗವಾನ್ ದಾಸ್), ತೆಲುಗಿನ 'ನರಬಲಿ' (ಮೂಲ ಲೇಖಕ : ನಾರ್ಲ ವೆಂಕಟೇಶ್ವರ ರಾವ್) ಕೆ.ಎನ್.ಎಸ್. ಅವರು ಅನುವಾದಿಸಿರುವ ಮುಖ್ಯ ಕೃತಿಗಳು. ಅಲ್ಲದೆ, ದಲಿತ ಚಳುವಳಿಗಾರರಿಗಾಗಿಯೇ ಅವರು ಹೊರತಂದಿರುವ 'ದಲಿತರ ಕೈಪಿಡಿ' ಜತೆ, 'ಅಂಬೇಡ್ಕರ್ ವಾಣಿ', 'ಮಾಹಿತಿ ಹಕ್ಕು', 'ರೈತರ ನಿರಂತರ ಆತ್ಮಹತ್ಯೆಗಳು' ಸಹ ಗಮನಿಸಬೇಕಾದ ಗ್ರಂಥಗಳು.

ಅವರು ಅನುವಾದಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಕೃತಿಗಳೇ ಅವರ ಒಲವು ಎಂದಿಗೂ ಸಮಾಜದತ್ತಲೇ ಅದರಲ್ಲಿಯೂ, ಸಮಾಜದಲ್ಲಿ ತುಳಿತಕ್ಕೊಳಗಾದವರ ಕಡೆಗೆ, ಎನ್ನುವುದನ್ನು ಸ್ಪಷ್ಟಪಡಿಸುತ್ತವೆ. ಶೋಷಿತರ ವಿಷಯದಲ್ಲಿ ಕೇವಲ ಅಕಾಡೆಮಿಕ್ ಆದ ಆಸಕ್ತಿ ಮಾತ್ರವಲ್ಲದೆ, ಅವರು ಬಿಡುಗಡೆ ಹೊಂದುವುದರಲ್ಲಿಯೂ ಕೆ.ಎನ್.ಎಸ್. ಆಸಕ್ತರಾಗಿದ್ದಾರೆ. ಇಂಥವರು ಕೋಲಾರ ಜಿಲ್ಲೆಯಲ್ಲಿಯೇ ರೂಪು ತಳೆದ ದಲಿತ ಸಂಘರ್ಷ ಸಮಿತಿ ನಡೆಸಿದ ಚಳುವಳಿಯ ಭಾಗವಾಗದಿದ್ದರೆ ಆಶ್ಚರ್ಯದ ಸಂಗತಿಯಾಗುತ್ತಿತ್ತು.

ಅವರು ಅನುವಾದ ಮಾಡಿದ ಕೃತಿಗಳ ಬಗ್ಗೆ ಹೇಳುವಾಗ ಒಂದು ಸಂಗತಿಯನ್ನು ಪ್ರಸ್ತಾಪ ಮಾಡಲೇಬೇಕು. 1972ರಲ್ಲಿ ಆರ್.ವಿ.ಎಸ್. ಸುಂದರಂರವರ ಜತೆಗೂಡಿ ಅನಂತಮೂರ್ತಿಯವರ 'ಸಂಸ್ಕಾರ'ವನ್ನು ತೆಲುಗಿಗೆ ಅನುವಾದ ಮಾಡಿದರು. ಅದನ್ನು ಪ್ರಕಟಿಸಲು ಒಪ್ಪಿಕೊಂಡಿದ್ದ ಗುಂಟೂರಿನಲ್ಲಿ ನೆಲೆಸಿದ್ದ ಕೆಲವರು ಕನ್ನಡಿಗರಿಗೆ ಆ ಕಾದಂಬರಿಯ ವಸ್ತು ಏನು ಎಂಬುದು ತಿಳಿದಿರಲಿಲ್ಲ. ಪುಸ್ತಕದ ಬಿಡುಗಡೆಗೆ ಎಲ್ಲ ಏರ್ಪಾಡುಗಳು ನಡೆದಿದ್ದವು. ಆಗ ಆ ಗ್ರಂಥವನ್ನು ಓದಿದ ಅಲ್ಲಿನ ಒಬ್ಬರಿಗೆ ಆಘಾತವಾಯಿತು. 'ಬ್ರಾಹ್ಮಣವಿರೋಧಿ' ಧೋರಣೆ ತುಂಬಿದೆಯೆಂದೇ ಹೆಸರಾದ 'ಸಂಸ್ಕಾರ'ವನ್ನು ಪ್ರಕಟಿಸಲು ಮುಂದೆ ಬಂದಿದ್ದವರು ತಮ್ಮ ಪ್ರಯತ್ನದಿಂದ ಹಿಂದೆಸರಿದರು. ಆವತ್ತು ಯಾವುದೋ ಕೋಣೆಯನ್ನು ಸೇರಿದ ಪುಸ್ತಕದ ಪ್ರತಿಗಳು ಅಲ್ಲಿಂದ ಬಿಡುಗಡೆಗೊಳ್ಳಲೇ ಇಲ್ಲ. ಬಹಳ ವರ್ಷಗಳ ನಂತರ ಬೇರೆಯೊಬ್ಬರ ಪ್ರಯತ್ನದಿಂದಾಗಿ ಎರಡು ಪ್ರತಿಗಳು ನಾರಾಯಣಸ್ವಾಮಿ ಯವರ ಕೈ ಸೇರಿದವು. ಕ್ರಾಂತಿಕಾರಿ ಸಾಹಿತ್ಯಕ್ಕೆ ಹೆಸರಾದ ತೆಲುಗಿನಲ್ಲಿ 'ಸಂಸ್ಕಾರ'ದಂಥ ಕಾದಂಬರಿ ಪ್ರಕಟ ಗೊಳ್ಳುವುದಕ್ಕೆ ಅಡಚಣೆ ಉಂಟಾದದ್ದು ವಿಪರ್ಯಾಸ.

ದ.ಸಂ.ಸ.ದ ಏಳುಬೀಳುಗಳೆಲ್ಲವನ್ನೂ ತುಂಬ ಹತ್ತಿರದಿಂದಲೇ ಗಮನಿಸಿದ ನಾರಾಯಣಸ್ವಾಮಿಯವರು ಇತರ ಹಲವು ಪ್ರಗತಿಪರರಂತೆಯೇ ಆ ಚಳವಳಿಯ ಬಗ್ಗೆ ಭ್ರಮನಿರಸನಗೊಂಡಿದ್ದಿದೆ. ಆರಂಭದಲ್ಲಿ ಅತ್ಯಂತ ಶಕ್ತಿಶಾಲಿಯಾಗಿದ್ದು, ಕರ್ನಾಟಕಕ್ಕೆ ಹೊಸದಿಕ್ಕು ತೋರಿಸಬಲ್ಲದೆಂಬ ಭರವಸೆಯನ್ನು ಹುಟ್ಟಿಸಿದ ಚಳವಳಿಯು ಬರಬರುತ್ತಾ

ವಿಘಟನೆಗೊಂಡು, ತನ್ನ ಮೊನಚನ್ನು, ಶಕ್ತಿಯನ್ನು ಕಳೆದುಕೊಳ್ಳುವಂತಾಯಿತು. ಅದಕ್ಕೆ ಕಾರಣಗಳು ಈಗ ಆ ಚಳವಳಿಯ ಬಗ್ಗೆ ತಿಳಿದವರೆಲ್ಲರಿಗೂ ಗೊತ್ತು. ಹಾಗೆಂದು ಕೆ.ಎಸ್.ಎಸ್. ಸಮಾಜದಲ್ಲಿ ಚಳುವಳಿಗಳ ಪ್ರಾಮುಖ್ಯತೆಯ ಬಗ್ಗೆಯೇ ನಿರಾಶವಾದಿಗಳಾಗಿಲ್ಲ. ಇಂದಿಗೂ ಸಹ ಕೆಲವು ಮಂದಿ ದಲಿತ ಸಂಘಟನಾಕಾರರಿಗೆ ಮಾರ್ಗದರ್ಶಕರಾಗಿ ಉಳಿದಿದ್ದು, ತಮ್ಮ ಅನಾರೋಗ್ಯ ಪರಿಸ್ಥಿತಿಯ ನಡುವೆಯೂ ದಲಿತ ಸಂಘಟನೆಗಳ ಮತ್ತು ಇತರ ಪ್ರಗತಿಪರ ಸಂಘಟನೆಗಳ ಕಾರ್ಯಕ್ರಮಗಳಲ್ಲಿ ಭಾಗಿಯಾಗುತ್ತಾರೆ. ಚಳವಳಿಗಳೇ ಇಲ್ಲದ ಈ ಕಾಲಘಟ್ಟದಲ್ಲಿ ಯಾವ ಚಳವಳಿಯೂ ಯಶಸ್ವಿಯಾಗುವುದಿಲ್ಲವೆಂದು ಹೇಳುತ್ತಾ ಎಲ್ಲ ಸಾಮಾಜಿಕ ಜವಾಬ್ದಾರಿಗಳಿಂದ ದೂರವಿರುವಂಥವರು ಕೆ.ಎಸ್.ಎಸ್.ರವರಿಂದ ಪಾಠ ಕಲಿಯಬೇಕು.

ಸಾಮಾನ್ಯವಾಗಿ ಮಧ್ಯಮವರ್ಗದ ವ್ಯಕ್ತಿಯೊಬ್ಬನ ಗುರಿ ಒಳ್ಳೆಯ ಉದ್ಯೋಗವನ್ನು ಸಂಪಾದಿಸಿ, ಆ ಮೂಲಕ ತನ್ನ ಸಂಸಾರವನ್ನು ಚೆನ್ನಾಗಿ ನೋಡಿಕೊಳ್ಳುವುದಕ್ಕೆ ಸೀಮಿತಗೊಳ್ಳುತ್ತದೆ. ಆದರೆ, ಕೆಲವು ಅಪವಾದಗಳನ್ನು ಕಾಣುತ್ತೇವೆ. ತಮಗೆ ಭದ್ರತೆಯನ್ನು ಒದಗಿಸುವ ಸ್ಥಾನಮಾನ ಸಿಗುತ್ತಲೇ ಸಂತೃಪ್ತರಾಗುವ ಜಾಯಮಾನವಲ್ಲ ಅವರದು. ತಮ್ಮ ಸುತ್ತಲಿನ ಸಮಾಜದ ಆಗುಹೋಗುಗಳನ್ನು ಓರೆಕೋರೆಗಳನ್ನು ಗಮನಿಸಿ, ಅರ್ಥೈಸಿಕೊಂಡು, ಸಾಧ್ಯವಾದಷ್ಟರಮಟ್ಟಿಗೆ ಸಮಾಜವನ್ನು ಪ್ರಗತಿಯ ಕಡೆ ನಡೆಸುವ ಪ್ರಯತ್ನದಲ್ಲಿ ತೊಡಗಿ, ಆ ಕಾರ್ಯದಲ್ಲಿ ತೃಪ್ತಿಕಾಣುವವರು ಇವರು. ಇಂಥವರ ಪ್ರಯತ್ನಗಳು ತಕ್ಷಣದಲ್ಲಿಯೇ ಫಲಕಾರಿಯಾಗದಿರ ಬಹುದು. ಆದರೆ ಅದರಿಂದ ಅವರು ವಿಚಲಿತರಾಗದೆ, ತಮ್ಮ ಜೀವಿತ ಕಾಲದಲ್ಲಿಯಲ್ಲದಿದ್ದರೆ, ತಮ್ಮ ನಂತರದಲ್ಲಾದರೂ ತಾವು ಬಯಸಿದ ಬದಲಾವಣೆಗಳು ಸಾಧ್ಯವಾಗುತ್ತವೆಂಬ ಆಶಾಭಾವನೆ ಇವರದು.

ಅದೇ ಆಶಾವಾದವನ್ನು ಹೊತ್ತು ಅವರು ದುಡಿಯುತ್ತಲೇ ಇರುತ್ತಾರೆ. ಬದಲಾವಣೆಗಾಗಿ ಕಾಯುವ ತಾಳ್ಮೆ, ಸಾಮಾಜಿಕ ಬದ್ಧತೆಗಳು ಇಲ್ಲದಿದ್ದಲ್ಲಿ, ಜಗತ್ತಿನಾದ್ಯಂತ ಆಗಿರುವ ಹಲವು ಸಾಮಾಜಿಕ ಬದಲಾವಣೆಗಳು ಸಾಧ್ಯವಾಗುತ್ತಿರಲಿಲ್ಲ. ಅಂಥವರಲ್ಲಿ ಕೆಲವರ ಹೆಸರುಗಳು ದೇಶವ್ಯಾಪ್ತಿಯನ್ನು ಗಳಿಸಿದರೆ, ಇನ್ನು ಕೆಲವರು ತಾವು ಕೆಲಸ ಮಾಡುವ ಸೀಮಿತವಲಯದಲ್ಲಿಯೇ ಗುರುತಿಸಲ್ಪಡುತ್ತಾರೆ.

ನಾರಾಯಣಸ್ವಾಮಿಯವರು ಹೀಗೆ ದುಡಿಯುವವರಲ್ಲಿ ಒಬ್ಬರು. ತಮ್ಮ ಸಮಾಜಮುಖಿ ಕಾರ್ಯಗಳ ನಡುವೆ, ತಮಗೆ ಅನ್ನ ನೀಡುವ ವೃತ್ತಿಗೆ ಎಂದೂ ಚ್ಯುತಿತಂದವರಲ್ಲ. ಕನ್ನಡ ಅಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ, ಪದವಿಪೂರ್ವ ಶಿಕ್ಷಣ ಇಲಾಖೆಯಲ್ಲಿ ಜಂಟಿ ನಿರ್ದೇಶಕರಾಗಿ ತಮ್ಮ ಪಾಲಿನ ಕರ್ತವ್ಯವನ್ನು ನಿಷ್ಠೆಯಿಂದ, ಪ್ರಾಮಾಣಿಕವಾಗಿ, ಸಮರ್ಥವಾಗಿ ನಿರ್ವಹಿಸಿದವರು. ಕನ್ನಡ ಅಧ್ಯಾಪಕರಾಗಿದ್ದರಿಂದ

ತಮ್ಮ ಸಾಮಾಜಿಕ ಚಿಂತನೆಯನ್ನು, ಕಾಳಜಿಯನ್ನು ವಿದ್ಯಾರ್ಥಿಗಳಿಗೂ ತಲುಪಿಸುವ ಅವಕಾಶವೂ ದೊರೆತಿದೆ, ಆ ಅವಕಾಶವನ್ನು ಅವರು ಯಶಸ್ವಿಯಾಗಿ ದುಡಿಸಿಕೊಂಡಿದ್ದಾರೆ. ಏಕಕಾಲದಲ್ಲಿ ಒಬ್ಬ ಸಮರ್ಥ ಅಧ್ಯಾಪಕ ಹಾಗೂ ಆಡಳಿತಗಾರ ಮತ್ತು ಸಾಮಾಜಿಕ ಕ್ರಿಯಾಶೀಲ ಚಿಂತಕರೆಂದು ಹೆಸರು ಪಡೆದರು.

ಇತ್ತೀಚಿನ ದಿನಗಳಲ್ಲಿ ಅವರು ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ನೀರಿನ ಅಭಾವವನ್ನು ಕುರಿತ ಅಧ್ಯಯನದಲ್ಲಿ ಮಗ್ನರಾಗಿದ್ದಾರೆ. ಬರಪೀಡಿತ ಪ್ರದೇಶವೆಂದೇ ಕುಖ್ಯಾತಿಯನ್ನು ಪಡೆದಿರುವ ಕೋಲಾರ, ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ನೀರಿನ ಸದ್ಬಳಕೆಯ ಬಗ್ಗೆ, ಪರಿಸರವನ್ನು ಉಳಿಸುವ ಬಗ್ಗೆ ನಡೆಯುತ್ತಿರುವ ಪ್ರಯತ್ನಗಳಲ್ಲಿ ಅವರ ಪಾಲುಗೊಳ್ಳುವಿಕೆಯೂ ಇದೆ. ಈ ಅಧ್ಯಯನದ ಪರಿಣಾಮವಾಗಿ ಅವರು ಒಬ್ಬ 'ಜಲತಜ್ಞ'ರೆಂದೇ ಗುರುತಿಸಲ್ಪಡುತ್ತಿದ್ದಾರೆ.

ಪ್ರಾಥಮಿಕ ಶಾಲಾ ಶಿಕ್ಷಕರ ಕುಟುಂಬದಿಂದ ಬಂದು ಕೇವಲ ಡಿಗ್ರಿ ಪಡೆದ ಉಪನ್ಯಾಸಕರಾಗಿ ಮಾತ್ರವಾಗಿರದೆ, ತಾವು ಪಡೆದ ಪದವಿಯ ಮೂಲಕ ತಮಗೆ ಸಂದ ಜ್ಞಾನವನ್ನು ಸುತ್ತಲಿನ ಎಲ್ಲರಿಗೂ ಹರಡುವ ಕಾಯಕದಲ್ಲಿ ಮಗ್ನರಾಗಿರುವ ನಾರಾಯಣಸ್ವಾಮಿಯವರಂಥವರ ಜೀವನ ಇಂದು ಸ್ವಾರ್ಥದಲ್ಲಿಯೇ ಮುಳುಗಿ, ಸ್ವಕೇಂದ್ರಿತವಾದ ಬಾಳನ್ನು ನಡೆಸುತ್ತಿರುವ ಯುವಪೀಳಿಗೆಗೆ ಆದರ್ಶವಾಗಬೇಕು. ಈ ಕಾರಣದಿಂದಲೇ ಕೆ.ಎನ್.ಎಸ್. ಅವರ ಬದುಕು, ಬರಹ ಮತ್ತು ಕಾರ್ಯತತ್ಪರತೆಗಳ ಬಗೆಗಿನ ಇಂಥ ಅಭಿನಂದನಾ ಗ್ರಂಥ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಈ ಅಭಿನಂದನೆಯಾಗಲಿ, ಅಭಿನಂದನಾ ಗ್ರಂಥವಾಗಲಿ ಕೇವಲ ಅವರನ್ನು ಹಾಡಿ, ಹೊಗಳಿ, ಅಟ್ಟಕ್ಕೇರಿಸುವ ಪ್ರಯತ್ನವಾಗಬಾರದು. ಹಾಗೆ ನೋಡಿದರೆ, ಹೊಗಳಿಕೆಗೆ ಅಟ್ಟಕ್ಕೇರುವವರಲ್ಲ ಕೆ.ಎನ್.ಎಸ್. ಅವರು. ಅವರ ಜೀವನವು ಯುವಕರಲ್ಲಿಯೂ ಅಂಥದೇ ಸಾಮಾಜಿಕ ಕಾಳಜಿಯನ್ನು, ಕ್ರಿಯಾಶೀಲತೆಯನ್ನು ಉಂಟಾಗಿಸುತ್ತದೆಯೆಂದೇ ನನ್ನ ನಂಬಿಕೆ.



31

# ಶ್ರೀಯುತ ಕೆ. ನಾರಾಯಣಸ್ವಾಮಿಯವರು

– ಜಿ. ನಾಗರಾಜು ಗಾಣದ ಹುಣಸೆ

ಸಹ ಸಂಪಾದಕರು, ವಾಲ್ಮೀಕಿ ಕರ್ನಾಟಕ ಪತ್ರಿಕೆ

ಶ್ರೀಯುತ ಕೆ. ನಾರಾಯಣಸ್ವಾಮಿಯವರ ಬಗೆಗೆ ಗೌರವ ವ್ಯಕ್ತ ಮಾಡುವ ಅವಕಾಶ ಲಭಿಸಿರುವುದು ನಿಜಕ್ಕೂ ನನ್ನ ಭಾಗ್ಯವೇ ಸರಿ. ಉದಾತ್ತ ವ್ಯಕ್ತಿಗಳ ಕಾರ್ಯಗಳನ್ನು ಸಾಮಾನ್ಯರು ಅನುಕರಿಸುತ್ತಾರೆ. ಅವರ ಉದಾಹರಣೆಗಳನ್ನೂ ಅನುಸರಿಸುವರು. ಇತರ ಕ್ಷೇತ್ರಗಳಲ್ಲಿರುವಂತೆಯೇ ಶಿಕ್ಷಣ ಕ್ಷೇತ್ರದಲ್ಲಿ ತಮ್ಮ ವಿದ್ವತ್ತು ಮತ್ತು ಧೈರ್ಯಗಳಿಂದ ಆದರ್ಶಗಳನ್ನಿರಿಸಿಕೊಂಡವರು ಹಲವರು. ಅಂಥವರಲ್ಲಿ ಕೆ. ನಾರಾಯಣಸ್ವಾಮಿ ಅವರೂ ಒಬ್ಬರು. ಮುಂದಿನ ಪೀಳಿಗೆಗೆ ಬೆಳಕಾಗಿರುವವರು.

ತಾಳ್ಮೆಯೊಂದಿದ್ದರೆ ಎಂತಹವರನ್ನು ಮನವೊಲಿಸಬಹುದು. ಮಧುರ ನಾಲಿಗೆ ಕಲ್ಲನ್ನು ಕರಗಿಸಬಹುದಂತೆ. ಕೆ. ನಾರಾಯಣಸ್ವಾಮಿಯವರು ತಮ್ಮ ಅಗಾಧ ತಾಳ್ಮೆಯಿಂದ ಜೀವನದಲ್ಲಿ ಉನ್ನತಿಗೆ ಬಂದವರು. ಅವರು ಕಷ್ಟದಲ್ಲಿರುವವರಿಗಾಗಿ, ತುಳಿತಕ್ಕೊಳಗಾದವರಿಗಾಗಿ, ಅನ್ಯಾಯಕ್ಕೊಳಗಾದವರಿಗಾಗಿ ಮರುಗಿದವರು.

ಈ ರಾಜ್ಯದ ಅತ್ಯಂತ ಹಿಂದುಳಿದ ಹಾಗೂ ಬರದ ನಾಡೆಂದೇ ಗುರ್ತಿಸಲ್ಪಡುವ ಇಂದಿನ ಚಿಕ್ಕಬಳ್ಳಾಪುರ ಜಿಲ್ಲೆಯವರಾದ ಇವರು ಶಿಕ್ಷಣ ಇಲಾಖೆಯಲ್ಲಿ 33 ವರ್ಷ ಶಿಕ್ಷಕರಾಗಿ, ಉಪನ್ಯಾಸಕರಾಗಿ, ಕಿರಿಯ ಕಾಲೇಜು ಪ್ರಿನ್ಸಿಪಾಲರಾಗಿ, ಉಪನಿರ್ದೇಶಕರಾಗಿ, ಜಂಟಿ ನಿರ್ದೇಶಕರಾಗಿ ಅನೇಕ ವಿದ್ಯಾರ್ಥಿಗಳಿಗೆ ಸ್ಫೂರ್ತಿಯ ಸೆಲೆಯಾಗಿ, ಇಲಾಖೆಯಲ್ಲಿ ಸಲ್ಲಿಸಿದ ಸೇವೆ ಅಮೋಘವಾದುದಾಗಿದೆ.



ಬಹುಮುಖಿ ವ್ಯಕ್ತಿತ್ವದ ಇವರು ವಿದ್ಯಾರ್ಥಿಗಳಲ್ಲಿ ಭೌತಿಕ ಮತ್ತು ಬೌದ್ಧಿಕ ಪರಿವರ್ತನೆ ತರಲು ನೈತಿಕತೆಯ ಮಟ್ಟಗಳನ್ನು ಹೆಚ್ಚಿಸುವ ಪ್ರಯೋಗಗಳನ್ನು ಮಾಡಿದ್ದಾರೆ. ಜ್ಞಾನವೇ ಸಂಪತ್ತು ಎಂದು ನಂಬಿದವರು. ಜ್ಞಾನ ಸಂಪಾದನೆ ಮತ್ತು ವಿತರಣೆಯಲ್ಲಿ ವಿಶ್ವಾಸವಿಟ್ಟವರು. ಅವರು ತಮ್ಮ ವೃತ್ತಿಯಲ್ಲಿ ತಮ್ಮೆಲ್ಲ ಶಕ್ತಿ ಸಾಮರ್ಥ್ಯಗಳನ್ನು ತೊಡಗಿಸಿದವರು. ವಿದ್ಯಾರ್ಥಿಗಳು ಮತ್ತು ಶಿಕ್ಷಕರ ಮೇಲೆ ಪ್ರಭಾವ ಬೀರಿದವರು.

ಶ್ರೀ ಕೆ. ನಾರಾಯಣಸ್ವಾಮಿಯವರ ಚೇತನ ಪ್ರವಾಹ ಸ್ವರೂಪದ್ದು. ನಿಂತಲ್ಲಿ ನಿಲ್ಲುವ ಜಡ ಚೇತನವಲ್ಲ. ಎಂತಹ ಸಣ್ಣ ವಿಷಯವಾದರೂ ಅವರ ಬಾಯಲ್ಲಿ ಅದು ಹದಗೊಂಡು ಹೊರಬರುತ್ತದೆ. ಎಂತಹ ವ್ಯಕ್ತಿಯಲ್ಲೂ ಅವರ ಮಾತುಗಳು ಆತ್ಮಸ್ಥೈರ್ಯವನ್ನು ತುಂಬಬಲ್ಲವು. ಬಡವರ ಬಗ್ಗೆ, ದೀನದಲಿತರ ಬಗ್ಗೆ ಇವರಿಗೆ ಅಪಾರ ಕಳಕಳಿ. ಅವರ ಸಹಾಯಕ್ಕಾಗಿ ಅವರು ಏನಾದರೂ ಮಾಡಬೇಕೆಂಬ ಹಂಬಲ ಹೊಂದಿದವರು. ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದ ಎಷ್ಟೋ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಪ್ರೇರಣೆ ನೀಡಿದ್ದಾರೆ.

ಶ್ರೀಯುತ ಕೆ. ನಾರಾಯಣಸ್ವಾಮಿಯವರು ಸರ್ಕಾರಿ ಹುದ್ದೆಯಿಂದ ನಿವೃತ್ತರಾದ ನಂತರ ಜನರಲ್ಲಿ ಜಾಗೃತಿ ಹಾಗೂ ಅರಿವು ಮೂಡಿಸುವ ನಿಟ್ಟಿನಲ್ಲಿ ಮಹತ್ತರವಾದ ಹೆಜ್ಜೆಗಳನ್ನಿಟ್ಟಿದ್ದಾರೆ. 90ರ ದಶಕದಲ್ಲಿ ರಾಜ್ಯದಲ್ಲಿಯೇ ಪ್ರಪ್ರಥಮವಾಗಿ ಗೌರಿಬಿದನೂರಿನಲ್ಲಿ ಪ್ರತಿಭಾವಂತ ಮಕ್ಕಳನ್ನು ಪ್ರೋತ್ಸಾಹಿಸಲು ಪ್ರತಿಭಾಪುರಸ್ಕಾರವೆಂಬ ಪರಿಕಲ್ಪನೆಗೆ ಕೈಹಾಕಿದರು. ಜಿಲ್ಲೆಯಲ್ಲಿ ಜಲಸಂರಕ್ಷಣೆಗಾಗಿ ಅನೇಕ ಜಾಗೃತಿ ಶಿಬಿರಗಳನ್ನೇರ್ಪಡಿಸಿ ಶಿಬಿರಕ್ಕೆ ಬೇರೆ ಬೇರೆ ರಾಜ್ಯಗಳ ಜಲತಜ್ಞರು ಹಾಗೂ ಸಮಾಜ ಸೇವಕಾರ್ಯಕರ್ತರನ್ನು ಕರೆಸಿ ಅವರಿಂದ ಅರಿವನ್ನು ಮೂಡಿಸಿದ್ದಾರೆ.

ಫ್ಲೋರೈಡ್ ನೀರು ಸೇವಿಸುವುದರಿಂದ ಆಗುವ ಅನಾಹುತಗಳ ಬಗ್ಗೆ ಗೋಡೆಬರಹ ಹಾಗೂ ಕರಪತ್ರಗಳ ಮೂಲಕ ಜಾಗೃತಿ ಬೆಳೆಸಿದ್ದಾರೆ. ಆಯಿಲ್‌ಪುಲ್ಲಿಂಗ್ ಚಿಕಿತ್ಸಾ ಪದ್ಧತಿಯ ಬಗ್ಗೆ ಲೇಖನಗಳು ಹಾಗೂ ಉಪನ್ಯಾಸ ನೀಡುವ ಮೂಲಕ ಬೆಳಕು ಚೆಲ್ಲಿದ್ದಾರೆ. ದಲಿತ ಸಂಘರ್ಷ ಸಮಿತಿ ರಚನೆಯಲ್ಲಿ ಸಕ್ರಿಯ ಪಾತ್ರವಹಿಸಿ ಇಂದಿಗೂ ಅವರೊಂದಿಗೆ ಕ್ರಿಯಾಶೀಲರಾಗಿ ಒಡನಾಟವಿಟ್ಟುಕೊಂಡಿದ್ದಾರೆ. ದೀನದಲಿತರ ಹಾಗೂ ಅಶಕ್ತರ ಕುರಿತು ಹಿಂದಿ ಹಾಗೂ ತೆಲುಗು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಲೈಂಗಿಕ ಕಾರ್ಯಕರ್ತೆಯರ ಬದುಕಿನ ಜಂಜಾಟಗಳ ಕುರಿತು ಬೆಳಕು ಚೆಲ್ಲುವ ಮಲಯಾಳಂ ಭಾಷೆಯ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿ ಮಾನವೀಯತೆ ಮೆರೆದಿದ್ದಾರೆ. ಇವರ ಸಮಾಜಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರ 2013ನೇ ಸಾಲಿನ ರಾಜ್ಯೋತ್ಸವ

ಪ್ರಶಸ್ತಿ ನೀಡಿ ಗೌರವಿಸಿರುವುದು ಅವರ ಶಿಷ್ಯವೃಂದ ಹಾಗೂ ಅಭಿಮಾನಿಗಳಿಗೆ ಹರ್ಷವಾಗಿದೆ.

ವಾಲ್ಮೀಕಿ ಕರ್ನಾಟಕ ಪತ್ರಿಕೆಯ ಬಗ್ಗೆ ವಿಶೇಷ ಅಭಿಮಾನ ವ್ಯಕ್ತಪಡಿಸುವ ಅವರು ನಾಗರಾಜು ಈ ಪತ್ರಿಕೆ ಸಮಾಜವನ್ನು ಜಾಗೃತಿಗೊಳಿಸುವಲ್ಲಿ ಮಹತ್ತರ ಪಾತ್ರವಹಿಸಿದೆ. ಇನ್ನಷ್ಟು ಪರಿಣಾಮಕಾರಿಯಾಗಿ ನಿರಂತರವಾಗಿ ಪ್ರಕಟಗೊಳ್ಳಲೆಂದು ಆಗಾಗ್ಗೆ ಸಲಹೆ ಸೂಚನೆ ನೀಡುತ್ತಿರುತ್ತಾರೆ. ಇದು ಈ ಸಮುದಾಯದ ಬಗ್ಗೆ ಇವರಿಗಿರುವ ಕಾಳಜಿಯನ್ನೇ ತೋರಿಸುತ್ತದೆ.

ಇಂದು ವಿಚಾರಕ್ಕಿಂತ ಪ್ರಚಾರ, ಪ್ರಚಾರಕ್ಕಿಂತ ಪ್ರದರ್ಶನಕ್ಕೆ ಮಾರುಹೋದವರೇ ಹೆಚ್ಚು. ಆದರೆ ಕೆ. ನಾರಾಯಣಸ್ವಾಮಿಯವರು ಈ ವಿಷಯದಲ್ಲಿ ಬಹಳ ಹಿಂದುಳಿದವರು. ಅವರ ನಿಸ್ವಾರ್ಥ ಕರ್ತವ್ಯಪ್ರಜ್ಞೆ ಅಸಾಧಾರಣ. ಇವರನ್ನು ರಾಜ್ಯೋತ್ಸವ ಪ್ರಶಸ್ತಿ ಅರಸಿ ಬಂತು. ಇದಲ್ಲದೆ ಹಲವಾರು ಸಂಘ-ಸಂಸ್ಥೆಗಳು ಪ್ರಶಸ್ತಿ ನೀಡಿ ಗೌರವಿಸಿವೆ. ಇವೆಲ್ಲಕ್ಕಿಂತ ಜನಮನ ಮಂದಿರದಲ್ಲಿ ಇವರಿಗೆ ಗೌರವ ಲಭಿಸಿದೆ. ಸಮುದಾಯದ ಸ್ಮರಣಾರ್ಹರು.

ತಡವಾಗಿಯಾದರೂ ಕೆ. ನಾರಾಯಣಸ್ವಾಮಿಯವರಿಗೆ ಸಮಾಜದ ಅಭಿನಂದನೆ ಸಲ್ಲುತ್ತಿದೆ. ಸಮಾಜದ ಪ್ರತಿಯೊಬ್ಬ ಸಾಧಕನಿಗೂ ಸಮಾಜದಿಂದ ಅಭಿನಂದನೆ ಸಲ್ಲಬೇಕು. ಸಮಾಜ ಸೇವೆಯಲ್ಲಿ ತೊಡಗಿದವರಿಗೆ ಸಮಾಜಸಲ್ಲಿಸಬಹುದಾದ ಕನಿಷ್ಠ ಋಣವಿದು.








# ದಸಂಸದ ಮೊದಲ ಪುಟದ ಮೊದಲ ಅಕ್ಷರ

– ಸಿ.ಜಿ. ಗಂಗಪ್ಪ

ನಗರಗೆರೆ, ದಸಂಸ ಜಿಲ್ಲಾ ಸಂಚಾಲಕರು, ಚಿಕ್ಕಬಳ್ಳಾಪುರ ಜಿಲ್ಲೆ

1982, ನಾನು ಗೌರಿಬಿದನೂರು ಆಚಾರ್ಯ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದೆ. ಪ್ರತಿ ದಿನ ಹತ್ತು ಗಂಟೆಗೆ ಶಾಲೆಗೆ ಹೋಗಿ ಪ್ರಾರ್ಥನೆಯಲ್ಲಿ ಭಾಗವಹಿಸುವುದು ಕಡ್ಡಾಯವಾಗಿತ್ತು. ಎಂದಿನಂತೆ ಶಾಲೆಗೆ ಹೋಗುತ್ತಿದ್ದೆವು. ಒಂದು ದಿನ ನಮ್ಮ ಶಾಲೆಯ ಪ್ರಾರ್ಥನಾ ಮಂದಿರದ ಗೋಡೆಗಳ ಮೇಲೆ ಕೆಂಪು ಅಕ್ಷರಗಳಲ್ಲಿ (ಕಾವಿ) ಅಸ್ಪೃಶ್ಯರು ಹರಿಜನರಾದರೆ ಉಳಿದವರು ದೈತ್ಯರೆ, ದಲಿತರನ್ನು ಸುಟ್ಟ ಬೆಂಕಿ ದೇಶವನ್ನು ಸುಡುತ್ತದೆ, ಅಂಬೇಡ್ಕರ್‌ವಾದ ಚಿರಾಯುವಾಗಲಿ ಇತ್ಯಾದಿ ಘೋಷಣೆಗಳನ್ನು ಬರೆಯಲಾಗಿತ್ತು. ಆ ಗೋಡೆ ಬರಹಗಳು ಓದಿದ ನನಗೆ ಯಾರು ಈ ರೀತಿ ಬರೆದಿರುವುದು ತಿಳಿದುಕೊಳ್ಳಬೇಕು ಎಂಬ ಕುತೂಹಲ ನನ್ನಲ್ಲಿ ಮೂಡಿತ್ತು. ಇದೇ ಮೊದಲ ಸಲ ಅಂಬೇಡ್ಕರ್, ದಲಿತರು, ಅಸ್ಪೃಶ್ಯರು ಎಂಬ ಪದಗಳು ನಾನು ಓದಿ ತಿಳಿದಿದ್ದು.

1982 ಆಗಸ್ಟ್ 15ರಂದು ಸ್ವಾತಂತ್ರ್ಯ ದಿನಾಚರಣೆಗೆ ಗೌರಿಬಿದನೂರು ಪಟ್ಟಣದ ಎಲ್ಲಾ ಶಾಲೆಯ ವಿದ್ಯಾರ್ಥಿಗಳೂ ಮುನ್ಸಿಪಲ್ ಹೈಸ್ಕೂಲ್ ಆವರಣದಲ್ಲಿ ಸೇರಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮುಗಿಸಿಕೊಂಡು ಪಟ್ಟಣದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೊರಟಿದ್ದೆವು. ನಾನು ಎನ್.ಸಿ.ಸಿ. ವಿದ್ಯಾರ್ಥಿಯಾಗಿದ್ದರಿಂದ ಮೆರವಣಿಗೆ ಮುಂಭಾಗದಲ್ಲಿ ಮಾರ್ಚ್ ಪಾಸ್ಟ್ ಮುಖಾಂತರ ಮೆರವಣಿಗೆಯಲ್ಲಿ ಬರುತ್ತಿದ್ದೆ. ಆಗ ತಾಲ್ಲೂಕು

ಕಛೇರಿಯ ಮುಂಭಾಗದಲ್ಲಿ ಒಂದು ಸಣ್ಣ ಗುಡಾರ ಹಾಕಿಕೊಂಡು ಕೆಲವರು "ಯಾರಿಗೆ ಬಂತು ಎಲ್ಲಿಗೆ ಬಂತು 47ರ ಸ್ವಾತಂತ್ರ" ಎಂಬ ಹಾಡು ಹಾಡುತ್ತಿದ್ದರು. ಈ ಹಾಡು ಕೇಳಿದ ನನಗೆ ಹಾಡುವವರ ಬಳಿ ಹೋಗಬೇಕೆನಿಸಿತು. ಆದರೆ ಎನ್.ಸಿ.ಸಿ. ಸಮವಸ್ತ್ರದಲ್ಲಿದ್ದರಿಂದ ನಾನು ಆ ಕ್ಷಣ ಅಲ್ಲಿಗೆ ಹೋಗಲು ಆಗಲಿಲ್ಲ. ಆದರೆ ನನಗೆ ಅವರನ್ನು ನೋಡಬೇಕೆಂಬ ಕುತೂಹಲ ಇದ್ದಿದ್ದರಿಂದ ನಾನು ಮೆರವಣಿಗೆ ಮುಗಿಸಿಕೊಂಡು ಹಾಸ್ಟೆಲ್ಲಿನಲ್ಲಿ ಊಟ ಮುಗಿಸಿ ಮತ್ತೆ ತಾಲ್ಲೂಕು ಆಫೀಸು ಕಡೆಗೆ ನಡೆದೆ, ಹಾಡುಗಳು ಹಾಡುತ್ತಿದ್ದವರಲ್ಲಿ ಚೋಳಶೆಟ್ಟಿಹಳ್ಳಿ ಚಿಕ್ಕ ವೆಂಕಟರಮಣಪ್ಪನವರು ಮಾತ್ರ ನನಗೆ ಗೊತ್ತಿದ್ದವರು. ಅವರನ್ನು ವಿಚಾರಿಸಿದಾಗ ಆಗ ಅವರು ಹೆಚ್.ಎಂ.ಆರ್. ಹಾಗೂ ಕೊಮ್ಮಣ್ಣನವರನ್ನು ಪರಿಚಯಿಸಿದರು. ಆ ನಂತರ ಅವರು ಡಿ.ಎಸ್.ಎಸ್., ಡಿ.ಎಸ್.ಎಫ್. ಕಾಲೇಜು ಹಾಸ್ಟೆಲ್ ಅವಶ್ಯಕತೆ ಇತ್ಯಾದಿಗಳ ಬಗ್ಗೆ ನಮಗೆ ಮನವರಿಕೆ ಮಾಡಿಕೊಟ್ಟರು. ಆಗ ನಾವು ಕೂಡ ಧರಣಿ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾಗವಹಿಸಿದೆವು. ಈ ಹೋರಾಟದಿಂದಲೇ ಕಾಲೇಜು ಹಾಸ್ಟೆಲ್ ಪ್ರಾರಂಭವಾಗಿದ್ದು. ಹೀಗೆ ನನಗೆ ದ.ಸಂ.ಸ. ಪರಿಚಯವಾಗಿ ಸಕ್ರಿಯ ಕಾರ್ಯಕರ್ತನಾಗಿ ಗುರುತಿಸಿಕೊಳ್ಳುತ್ತಿದ್ದಾಗ ಅನೇಕ ಗೆಳೆಯರು ಪರಿಚಯರಾದರು. ಹೆಚ್.ಎಂ.ಆರ್. ಹಾಗೂ ಕೊಮ್ಮಣ್ಣನವರಂತೂ ನಮ್ಮನ್ನು ಹುರಿದುಂಬಿಸಿ ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು.

1984 ಮೇ ತಿಂಗಳಲ್ಲಿ ನಗರಗೆರೆ ಹೋಬಳಿ ಜಿ. ಕೊತ್ತೂರಿನಲ್ಲಿ ಒಂದು ಶಿಬಿರ ಏರ್ಪಡಿಸಲಾಗಿತ್ತು. ಇದು ಗೌರಿಬಿದನೂರು ತಾಲ್ಲೂಕಿನ ದ.ಸಂ.ಸ. ಪ್ರಥಮ ಶಿಬಿರ, ಈ ಶಿಬಿರಕ್ಕೆ ಕೋಲಾರ ಜಿಲ್ಲೆಯ ನಾನಾ ಕಡೆಗಳಿಂದ ಶಿಬಿರಾರ್ಥಿಗಳು ಬಂದಿದ್ದರು. ಶಿಬಿರದ ಮೊದಲನೆ ದಿನ ಶಿಬಿರವನ್ನು ಉದ್ಘಾಟಿಸಲು ಕೆ. ನಾರಾಯಣಸ್ವಾಮಿಯವರು ಬಂದಿದ್ದರು. ನಾನು ನಗರಗೆರೆಯಿಂದ ಸ್ವಲ್ಪ ತಡವಾಗಿ ಬಂದಿದ್ದರಿಂದ ಶಿಬಿರದ ಉದ್ಘಾಟನೆಯನ್ನು ಮುಗಿಸಿಕೊಂಡು ಕೆ.ಎನ್.ಎಸ್. ಮತ್ತೆ ಬಾಗೇಪಲ್ಲಿಗೆ ಹೋಗಲು ಶಿಬಿರ ಆಯೋಜಿಸಿದ್ದ ಗುಡಿಸಲಿನ ಮುಂದೆ ಒಂದು ಸಣ್ಣ ಹೊಂಗೆ ಮರದ ನೆರಳಿನಲ್ಲಿ ನಿಂತುಕೊಂಡು ಹೆಚ್.ಎಂ.ಆರ್. ಜೊತೆ ಮಾತನಾಡುತ್ತಿದ್ದರು. ಕೈಯಲ್ಲಿ ಒಂದು ಕ್ಯಾಶ್‌ಬ್ಯಾಗ್ ಹಿಡಿದಿದ್ದ ಆ ದಪ್ಪ ಮೀಸೆಯ ಅವರನ್ನು ಕೆ.ಎನ್.ಎಸ್. ಎಂದು ಪರಿಚಯಿಸಿದರು.

ನಾನು ಕೆ.ಎನ್.ಎಸ್.ರವರನ್ನು ಪ್ರಥಮವಾಗಿ ನೋಡಿದ್ದು ಅಲ್ಲೇ. ಈ ಶಿಬಿರದಲ್ಲಿ ಸಿ.ಎಂ. ಮುನಿಯಪ್ಪ, ಎನ್. ವೆಂಕಟೇಶ್, ಪಿಚ್ಚಳ್ಳಿ ಶ್ರೀನಿವಾಸ್ ಹಾಗೂ ಕೆ.ಪಿ. ನಾರಾಯಣಪ್ಪ ಭಾಗವಹಿಸಿದ್ದರು.



ಅಲ್ಲಿಂದ ಕೆ.ಎನ್.ಎಸ್.ರವರು ಅನೇಕ ಬಾರಿ ಗೌರಿಬಿದನೂರಿಗೆ ಬಂದ ಸಂದರ್ಭಗಳಲ್ಲಿ ವಿಚಾರ ವೇದಿಕೆ ಇಂತಹ ಕಾರ್ಯಕ್ರಮಗಳಿಗೆ ಬಂದು ಅನೇಕ ವಿಚಾರಗಳ ಬಗ್ಗೆ ಕಾರ್ಯಕರ್ತರೊಂದಿಗೆ ಮಾತನಾಡುತ್ತಿದ್ದರು. ಗೌರಿಬಿದನೂರಿನಲ್ಲಿ ಕಾಲೇಜು ಹಾಸ್ಟೆಲ್ ಹೋರಾಟ ಯಶಸ್ವಿಯಾದ ಹಿನ್ನೆಲೆಯಲ್ಲಿ ಬಾಗೇಪಲ್ಲಿಯಲ್ಲಿ ಕೂಡಾ ಕೆ.ಎನ್.ಎಸ್. ಮಾರ್ಗದರ್ಶನದಲ್ಲೇ ಹಾಸ್ಟೆಲ್ ಹೋರಾಟ ಪ್ರಾರಂಭವಾಯಿತು. ಯಲ್ಲೋಡು ಅಂಜಿನಪ್ಪ ಈ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ನಂತರ ಗುಡಿಬಂಡೆ ಹಾಸ್ಟೆಲ್ ಹೋರಾಟ ಯಶಸ್ವಿ, ಹೀಗೆ ಅನೇಕ ಹೋರಾಟಗಳಿಗೆ ಕಾರ್ಯಕರ್ತರನ್ನು ತಯಾರಿಸಿ ಅವರಲ್ಲಿ ಚೈತನ್ಯ ತುಂಬಿಸಿ ಅನೇಕ ಹೋರಾಟಗಳಿಗೆ ಸ್ಫೂರ್ತಿದಾಯಕರಾದವರು ಕೆ.ಎನ್.ಎಸ್.ರವರು.

ತಳ ಸಮುದಾಯದ ಯುವಜನರಲ್ಲಿ ವೈಚಾರಿಕ ಸಂಗತಿಗಳನ್ನು ಬಿತ್ತಲು 70ರ ದಶಕದಲ್ಲಿ ದಲಿತ ಕೈಪಿಡಿ, ಅಂಬೇಡ್ಕರ್ ವಾಣಿ, ಇಂತಹ ಕಿರು ಹೊತ್ತಿಗೆಗಳನ್ನು ಕನ್ನಡಕ್ಕೆ ಅನುವಾದಿಸಿದವರು. ಈ ಪುಸ್ತಕಗಳನ್ನು ದ.ಸಂ.ಸ. ಕಾರ್ಯಕರ್ತರಿಗೆ ಓದಿಸುವುದರ ಮುಖಾಂತರ ಪ್ರಭಾವಿತರಾದರು. ಇದರಿಂದ ಅಂಬೇಡ್ಕರ್ ವಿಚಾರಗಳನ್ನು ಹಾಗೆಯೇ ದಲಿತರ ಮೇಲೆ ನಡೆಯುತ್ತಿದ್ದ ಶೋಷಣೆಯನ್ನು ತಿಳಿದುಕೊಳ್ಳಲು ಸಾಧ್ಯವಾಯಿತು. ಅಂಬೇಡ್ಕರ್ ವಾಣಿಯ ಕೆಲವು ಘೋಷವಾಕ್ಯಗಳು ಮೈಸೂರಿನ ಕೆಲವು ಪತ್ರಿಕೆಗಳಲ್ಲಿ ಪ್ರಕಟಗೊಂಡಾಗ ಮೈಸೂರಲ್ಲೂ ಅನೇಕ ಪ್ರಗತಿಪರರನ್ನು ಆಕರ್ಷಿಸಿತು. ಇಂತಹ ವೈಚಾರಿಕತೆಯನ್ನು ಒಬ್ಬರಿಂದ ಒಬ್ಬರಿಗೆ ತಿಳಿಸುವುದರ ಮುಖಾಂತರ ಕರ್ನಾಟಕದಲ್ಲಿ ದಲಿತ ಚಳುವಳಿಗೆ ಪ್ರೇರಕ ಶಕ್ತಿಯಾದವರು ಕೆ.ಎನ್.ಎಸ್.ರವರು.

ಅನೇಕ ಕ್ರಾಂತಿಕಾರಕ ಪ್ರಗತಿಪರ ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಕನ್ನಡ ಓದುಗರಿಗೆ ವಿಶೇಷವಾಗಿ ಪ್ರಗತಿಪರ ಚಿಂತಕರಿಗೆ ಅನುವು ಮಾಡಿಕೊಟ್ಟಿದ್ದಾರೆ. ದಿಗಂಬರ ಕವಿಗಳು ಹಾಗೂ ನರಬಲಿ ಪುಸ್ತಕಗಳು ಅನೇಕ ವೈಚಾರಿಕ ಪಲ್ಲಟಗಳನ್ನು ದೇವರುಗಳ ನಿಜ ಸ್ವರೂಪವನ್ನು ಪಾರ್ವತಿ ಗಣಪತಿ ಶಿವನ ಮನೋಧರ್ಮವನ್ನು ನವ ಸಮಾಜಕ್ಕೆ ವಾಸ್ತವವನ್ನು ತೆರೆದಿಟ್ಟಂತಿದೆ. ಇಂತಹ ವೈಚಾರಿಕ ಚಾರಿತ್ರಿಕ ಸತ್ಯಗಳನ್ನು ಜನ ಮನದೆಡೆಗೆ ಒಗ್ಗಿಸುವ ಪ್ರಯತ್ನದ ಭಾಗವೇ ನರಬಲಿ. ಇಂತಹ ವೈಚಾರಿಕ ಮನೋಭೂಮಿಕೆಯನ್ನು ದಲಿತ ಚಳುವಳಿಯಲ್ಲಿ ಬಿತ್ತಿದ್ದರಿಂದ ಅನೇಕ ಕಾರ್ಯಕರ್ತರು ಬದ್ಧತೆ ಪ್ರಾಮಾಣಿಕತೆಯ ಸಮಾಜದ ಬಗ್ಗೆ ಕಾಳಜಿ ಹೆಚ್ಚಿಸಿಕೊಳ್ಳಲಾಯಿತು. ಜಾತಿ, ಮೌಢ್ಯ, ಕಂದಾಚಾರಗಳ ಬಗ್ಗೆ ಸಿಡಿದೇಳಲು ಸ್ಥೈರ್ಯವನ್ನು ಮೈಗೂಡಿಸಿಕೊಂಡರು. ಇಂತಹ ವೈಚಾರಿಕ ಚಿಂತನೆಗಳು ಚಳವಳಿ ನಡಿಗೆಗೆ ಪೂರಕವಾಯಿತು.



ಭಂಗಿಜನಕಥಾ (ಅಸ್ಪೃಶ್ಯರ ಆತ್ಮಕಥೆ), ಅಯೋಧ್ಯೆಯ ಭುಗಿಲು, ಆಯಾಕಾಲಘಟ್ಟಕ್ಕೆ ಸರಿಹೊಂದುವಂತೆ ಪ್ರಕಟಿಸಲಾಯಿತು. 1991ರಲ್ಲಿ ಬಾಬರಿ ಮಸೀದಿ ಧ್ವಂಸಗೊಂಡ ಸಂದರ್ಭದಲ್ಲಿ ದೇಶಾದ್ಯಂತ ಕೋಮು ದಳ್ಳುರಿಗಳು ಹೆಚ್ಚಾದ ಸಂದರ್ಭದಲ್ಲಿ ಅಯೋಧ್ಯೆಯ ಭುಗಿಲು ಪುಸ್ತಕ ಬಿಡುಗಡೆಯಾಯಿತು. ಅಂತಹ ಸಂದರ್ಭದಲ್ಲಿ ಇಂತಹ ವೈಚಾರಿಕ ಸತ್ಯವನ್ನು ಸಮಾಜಕ್ಕೆ ಹೇಳುವುದು ಅಗತ್ಯ ಅನಿವಾರ್ಯವಾಗಿತ್ತು. ಆದ್ದರಿಂದ ಈ ಪುಸ್ತಕ ಪ್ರಮುಖ ಪಾತ್ರ ವಹಿಸಿತು. ಹೀಗೆ ಕೆ.ಎನ್.ಎಸ್.ರವರು ಸಮಾಜದಲ್ಲಿ ಆಗುತ್ತಿರುವ ಅನ್ಯಾಯಗಳನ್ನು ಎದುರಿಸಲು ಆಯಾ ಸಂದರ್ಭಗಳಲ್ಲಿ ಇಂತಹ ಪುಸ್ತಕಗಳನ್ನು ಪ್ರಕಟಿಸುವುದರ ಮುಖಾಂತರ ತಮ್ಮ ನಿಲುವುಗಳನ್ನು ದೃಢಪಡಿಸಿಕೊಳ್ಳುತ್ತಿದ್ದರು. ಹೀಗೆ ಸಮಾಜ ಬದಲಾವಣೆಗೆ ಮಾರಕವಾಗಿರುವ ಭಾರತದ ಸಾಮಾಜಿಕ ಅಸಮಾನತೆ, ಬಡತನ, ಲಿಂಗತಾರತಮ್ಯ ಇಂತಹ ಅನಿಷ್ಟ ಪದ್ಧತಿಗಳನ್ನು ವಿರೋಧಿಸಿ ಜನಸಾಮಾನ್ಯರಲ್ಲಿ ಸಾಮರಸ್ಯ, ಸಹಬಾಳ್ವೆ, ಸಮಾನತೆ ಸಮಾಜ ರೂಪುಗೊಳ್ಳಬೇಕೆಂಬ ಹಂಬಲ ಹೊತ್ತವರಲ್ಲಿ ಕೆ.ಎನ್.ಎಸ್. ಕೂಡಾ ಒಬ್ಬರು. ಇವರ ಆಶಯಗಳು ಸಮಾಜದ ಬದಲಾವಣೆಯ ಬಯಸುವ ಅನೇಕ ಜನರಿಗೆ ಮಾರ್ಗದರ್ಶನ.

ದನಿ ಇಲ್ಲದ ದಿಕ್ಕಿಲ್ಲದ ನಿರ್ಗತಿಕ ತಳಸಮುದಾಯದ ರೈತರ, ಕೃಷಿಕಾರ್ಮಿಕರ ಶ್ರಾಮಿಕ ಸಮಾಜಕ್ಕೆ ಇವರ ಬರವಣಿಗೆಗಳು ಬಹಳ ಉಪಯುಕ್ತವಾಗಿವೆ. ನಳಿನಿ ಜಮೀಲಾ ಎಂಬ ವೇಶ್ಯೆ ಬಗ್ಗೆ ಪುಸ್ತಕ ಅನುವಾದಿಸಿ ಪ್ರಕಟಿಸಿದರು. ಈ ಪುಸ್ತಕ ಕೇರಳದ ಒಂದು ಅಸಹಾಯಕ ಹೆಣ್ಣು ಮಗಳ ಕಥನ. ಹಸಿವು, ಬಡತನ, ಸಾಮಾಜಿಕ ಅಸ್ಥಿರತೆ, ಪುರುಷನ ಅಧಿಪತ್ಯಕ್ಕೆ ಬಲಿಯಾಗಿ ಅನೇಕ ಸಂಕಟಗಳನ್ನು ನೋವು ನಲಿವುಗಳನ್ನು ಅನುಭವಿಸಿದರು. ಪ್ರತಿನಿತ್ಯ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುವ ನಳನಿ ಜಮೀಲಾ ಅವಳ ಬದುಕು ನರಕಯಾತನೆ. ನಳಿನಿ ಜಮೀಲಾರವರ ಬದುಕಿನಲ್ಲಿ ನಡೆದ ಪ್ರತಿ ಘಟನೆಗಳನ್ನು ವಿವರಿಸುವ ಪುಸ್ತಕವೇ ನಳಿನಿ ಜಮೀಲಳ ಆತ್ಮಕಥೆ. ಈ ಪುಸ್ತಕ ಅನೇಕ ಅಸಹಾಯಕ ಹೆಣ್ಣು ಮಕ್ಕಳಿಗೆ ಲೈಂಗಿಕ ಕಾರ್ಯಕರ್ತರಿಗೆ ಸ್ಫೂರ್ತಿಯಾಗಬೇಕು. ನಮ್ಮ ದೇಶದ ಬಡತನ ಇಂತಹ ಹೆಣ್ಣಿನ ಲೈಂಗಿಕ ಶೋಷಣೆಯಲ್ಲಿ ಕಾಣುತ್ತಿರುವ ಪ್ರತಿಬಿಂಬವೇ ಸರಿ. ಈ ಪುಸ್ತಕ ದೇಶದ ನಾನಾ ಕಡೆಗಳಲ್ಲಿ ನಡೆಯುತ್ತಿರುವ ಶೋಷಣೆ ಅನ್ಯಾಯಗಳ ಬಗ್ಗೆ ತಿಳಿದುಕೊಳ್ಳುವ ತಿಳಿದಿದ್ದನ್ನು ಮತ್ತೆ ಸಮಾಜಕ್ಕೆ ನೀಡುವ ಪ್ರಯತ್ನ ಭಾಗವಾಗಿ ಕೆ.ಎನ್.ಎಸ್.ರವರು ಈ ಪುಸ್ತಕವನ್ನು ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಿ ಸಮಾಜದ ಮುಖ್ಯವಾಹಿನಿಗೆ ನೀಡಿರುವುದು ಅವರ ವೈಚಾರಿಕ ಚಿಂತನೆಗಳನ್ನು ಮತ್ತಷ್ಟು ಗಟ್ಟಿಗೊಳಿಸುತ್ತದೆ.

ಕೆ.ಎನ್.ಎಸ್.ರವರು ಉಪಾಧ್ಯಾಯರಾಗಿ, ಉಪನ್ಯಾಸಕರಾಗಿ, ಪ್ರಿನ್ಸಿಪಾಲರಾಗಿ, ಡಿ.ಡಿ.ಪಿ.ಯು. ಹಾಗೂ ಜೆ.ಡಿ. ಆಗಿ ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದರು. ಎಲ್ಲಿಯೂ



ತಮ್ಮ ವೃತ್ತಿಗೆ ಧಕ್ಕೆ ಬಾರದ ರೀತಿಯಲ್ಲಿ ಪ್ರವೃತ್ತಿಯನ್ನು ಮೈಗೂಡಿಸಿಕೊಂಡವರು. ಅನೇಕ ಮಂದಿ ವಿದ್ಯಾರ್ಥಿಗಳನ್ನು ಆಕಟ್ಟಿಕೊಂಡು (ಸೆಳೆದುಕೊಂಡು) ತಮ್ಮ ಸೇವೆಯಲ್ಲಿ ನಿರತರಾದವರು. ಅವರು ಉದ್ಯೋಗದಲ್ಲಿ ಇದ್ದುಕೊಂಡೆ ತನ್ನ ಬಿಡುವಿನ ವೇಳೆಯಲ್ಲಿ ಸಾಮಾಜಿಕ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಸಮಾಜದ ಬಗ್ಗೆ ಓದು ಬರಹ ಅಲ್ಲಿಂದಲೇ ಶುರು ಮಾಡಿದರು. ಪ್ರಗತಿಪರ ಚಿಂತನೆಗಳ ಬಗ್ಗೆ ಹೆಚ್ಚು ಆಸಕ್ತಿಯನ್ನು ಹೊಂದಿದ್ದು, ದಲಿತ ಚಳವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದವರು. ಶ್ರೀನಿವಾಸಪುರ, ಚಿಂತಾಮಣಿ, ಬಾಗೇಪಲ್ಲಿ, ಗುಡಿಬಂಡೆಯಲ್ಲಿ ಇವರು ಸೇವೆ ಸಲ್ಲಿಸುತ್ತಿರುವಾಗ ಅನೇಕ ವಿದ್ಯಾರ್ಥಿಗಳಿಗೆ ಪ್ರಗತಿಪರ ಚಿಂತನೆಗಳನ್ನು ಬಿತ್ತಿದರು. ಇವರ ಶಿಷ್ಯರು ಈಗಲೂ ಪ್ರಗತಿಪರ ಚಳವಳಿಗಳಲ್ಲಿ ಸಕ್ರಿಯರಾಗಿದ್ದಾರೆ ಹಾಗೂ ಅನೇಕ ಮಂದಿ ಉಪಾಧ್ಯಾಯರುಗಳಾಗಿದ್ದಾರೆ. ಅಲ್ಲದೆ ಬೇರೆ ಬೇರೆ ಇಲಾಖೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಆದರೆ ಈಗಲೂ ಕೆ.ಎನ್.ಎಸ್.ರವರ ಬಗ್ಗೆ ತುಂಬಾ ಗೌರವವನ್ನು ಇಟ್ಟುಕೊಂಡಿದ್ದಾರೆ. ಮಾಸ್ಟರ್ ಏನೇ ಹೇಳಿದರು ಅವರ ಮಾತಿಗೆ ಬೆಲೆ ಕೊಟ್ಟು ಅವರ ಮಾರ್ಗದರ್ಶನ ಪಾಲಿಸುತ್ತಾರೆ. ಕೆ.ಎನ್.ಎಸ್.ರವರು ಆಸ್ತಿ ಅಂತಸ್ತು ಸಂಪಾದಿಸದಿದ್ದರೂ ಅನೇಕ ಶಿಷ್ಯ ಕೋಟಿಯನ್ನು, ಕಾರ್ಯಕರ್ತರ ಪಡೆಯನ್ನು ಪ್ರಗತಿಪರ ಚಿಂತನೆಗಳನ್ನು ಸಮಾಜದ ಗೌರವವನ್ನು ಸಂಪಾದಿಸಿಕೊಂಡಿದ್ದಾರೆ. ಯಾರಿಗೂ ಎಳ್ಳಷ್ಟು ಹಾನಿಗೊಳಿಸದೆ ಎಲ್ಲರ ಶ್ರೇಯಸ್ಸನ್ನು ಬಯಸುವ ಮಾನವ ಹೃದಯಿ ಕೆ.ಎನ್.ಎಸ್.ರವರು.

ಸರ್ಕಾರಿ ನೌಕರರು ನಿವೃತ್ತಿಯಾದ ಮೇಲೆ ರಾಮ ಕೃಷ್ಣ, ಕಾಶಿ-ಕಂಚಿ ಇತ್ಯಾದಿ ಯಾತ್ರಾ ಸ್ಥಳಗಳಿಗೆ ಹೋಗಿ ಕಾಲ ಕಳೆಯುವುದುಂಟು. ಅಲ್ಲದೆ ಮನೆ, ಮಠ, ಹೆಂಡತಿ, ಮಕ್ಕಳು, ಆಸ್ತಿಪಾಸ್ತಿ ಇಂತಹ ತನ್ನ ವೈಯುಕ್ತಿಕ ಬದುಕಿಗೆ ಕಾಲ ವ್ಯಯ ಮಾಡಿ ಜೀವಿಸುವರುಂಟು. ಆದರೆ ಕೆ.ಎನ್.ಎಸ್.ರವರದ್ದು ಭಿನ್ನರಾಗ. 'ಖೈರ್ಲಾಂಜಿ, 'ಕಾರಂಚೇಡು', 'ಚುಂಡೂರು', ಕಿಲ್ವಾನ್‌ಮಣಿ', ಕಂಬಾಲಪಲ್ಲಿಯಂತಹ ದಲಿತರ ನರಮೇಧಗಳ ಬಗ್ಗೆ ಚಿಂತಿಸಿದವರು. ದಿನನಿತ್ಯ ದಲಿತರ ಮೇಲೆ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯಗಳ ವಿರುದ್ಧ ದಸಂಸ ಕಾರ್ಯಕರ್ತರನ್ನು ಹುರಿದುಂಬಿಸಿ ಇಂತಹ ಹೇಯ ಕೃತ್ಯಗಳ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಿ ಜನಾಂದೋಲನವಾಗಲು ಪ್ರೇರಕರಾದರು.

ಬಾಗೇಪಲ್ಲಿ, ಗುಡಿಬಂಡೆ ತಾಲ್ಲೂಕುಗಳಲ್ಲಿ ಕುಡಿಯುವ ನೀರಿನಲ್ಲಿ ಫ್ಲೋರೈಡ್ ಅಂಶಗಳು ಹೆಚ್ಚಿನ ಪ್ರಮಾಣದಲ್ಲಿ ಇರುವುದರಿಂದ ಜನರ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರಿ ಅಂಗವಿಕಲತೆ ಉಂಟಾಗುತ್ತಿತ್ತು. ಅನೇಕ ಮಕ್ಕಳ ದಂತ ವಿರೂಪವಾಗಿ ದಂತ ಕ್ಷಯ ಉಲ್ಬಣವಾಗುತ್ತಿತ್ತು. ಎಳೆಯ ಕಂದಮ್ಮಗಳ ಬದುಕು ಪೋಲಿಯೋ ಎಂಬ ಮಾರಕ ರೋಗಕ್ಕೆ ಬಲಿಯಾಗಿತ್ತು. ಇಂತಹ ಭಯಾನಕ ಪೋಲಿಯೋ ಮತ್ತು ಫ್ಲೋರೈಡ್



ವಿರುದ್ಧ ಸಮರ ಸಾರಲು ಅವರು ಶಿಷ್ಯರನ್ನು ಒಳಗೊಂಡು ಪ್ರತಿ ಗ್ರಾಮ ಪ್ರತಿ ಮನೆಗೆ ಭೇಟಿ ನೀಡಿ ಫ್ಲೋರೈಡ್ ಪೀಡಿತರನ್ನು ಗುರ್ತಿಸಿ ಈ ಬಗ್ಗೆ ಪೂರ್ಣ ಪ್ರಮಾಣದ ವರದಿ ಸಿದ್ಧಗೊಳಿಸಿ ಸರ್ಕಾರಕ್ಕೆ ರವಾನಿಸಲಾಯಿತು. ಈ ವಿಚಾರಗಳ ಬಗ್ಗೆ ಜನ ಜಾಗೃತಿಯಾಗಲು ಈ ಎರಡು ತಾಲ್ಲೂಕುಗಳಲ್ಲಿ ಅನೇಕ ವಿಚಾರ ಸಂಕಿರಣಗಳನ್ನು ಏರ್ಪಡಿಸುತ್ತಿದ್ದರು. ಅಂತರ್ಜಲ ಹೆಚ್ಚಿಸಲು ಚೆಕ್ ಡ್ಯಾಂ ಮಳೆ ಕೊಯ್ಲು ನೀರು ಇಂಗು ಗುಂಡಿಗಳು ಇತ್ಯಾದಿ ಕಾರ್ಯಕ್ರಮಗಳನ್ನು ರೂಪಿಸಲು ಸರ್ಕಾರದ ಗಮನ ಸೆಳೆಯುತ್ತಿದ್ದರು.

ಅಂತರ್ಜಲ ನೀರು ಹಿಂಗಿಸುವ ಬಗ್ಗೆ ಸಮಗ್ರವಾಗಿ ತಿಳಿದುಕೊಳ್ಳಲು ಅಧ್ಯಯನಕ್ಕಾಗಿ ಮಹಾರಾಷ್ಟ್ರದ ಅಣ್ಣಾ ಹಜಾರೆರವರ ಸ್ವಗ್ರಾಮ ರಾಳೇಗಣಸಿದ್ಧಿಗೆ ಭೇಟಿ ನೀಡಿ ಅಣ್ಣಾ ಹಜಾರೆರವರನ್ನು ಸಂಪರ್ಕಿಸಿ, ಚರ್ಚಿಸಿ, ಅಂತರ್‌ಜಲಕ್ಕೆ ಸಂಬಂಧಿಸಿದ ಹಜಾರೆರವರ ಪ್ರಯೋಗಗಳನ್ನು ಅಧ್ಯಯನ ಮಾಡಿ ವಾಪಸ್ಸು ಬಂದ ಮೇಲೆ ನಮ್ಮ ಸುತ್ತಮುತ್ತಲಿನ ಕಡೆ ಇಂತಹ ಪ್ರಯೋಗಗಳನ್ನು ಮಾಡಲು "ಊರಿಗೊಬ್ಬ ಸಾಕು" ಮತ್ತು 'ಮಾಹಿತಿ ಹಕ್ಕು' ಪುಸ್ತಕಗಳನ್ನು ಬರೆದು ಅನೇಕ ಕಡೆ ಪ್ರಚಾರ ಮಾಡಿದರು. ಸಮಾಜದ ಒಳಿತಿಗಾಗಿ ಇಂತಹ ಅನೇಕ ಪ್ರಯೋಗಗಳನ್ನು ಮಾಡಿದ ಕಾಯಕಯೋಗಿ ಕೆ.ಎನ್.ಎಸ್.ರವರು ರೈತರ ನಿರಂತರ ಆತ್ಮಹತ್ಯೆಗಳು ಆಯಿಲ್‌ಪುಲ್ಲಿಂಗ್, 'ಮಕ್ಕಳಿಗೆ ಎಷ್ಟು ವಿಷ ತಿನ್ನಿಸುತ್ತಿದ್ದೇವೆ' ಇಂತಹ ವಿಷಯಾಧಾರಿತ ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದಾರೆ. ಒಂದು ಎಕರೆ ಕ್ರಾಂತಿ. ಶೂನ್ಯ ಬಂಡವಾಳದ ಬೇಸಾಯ ಪದ್ಧತಿ ಸುಭಾಷ್ ಪಾಳೇಕರ್‌ರ ನೈಸರ್ಗಿಕ ಕೃಷಿ ಬಗ್ಗೆ ರೈತರಲ್ಲಿ ಜಾಗೃತಿ ಮೂಡಿಸಿದ್ದರು.

ದಸಂಸ ಗೌರಿಬಿದನೂರು ತಾಲ್ಲೂಕಿನಲ್ಲಿ ಅನೇಕ ಜನಪರ ಹೋರಾಟಗಳನ್ನು ರೂಪಿಸಿ ಯಶಸ್ವಿಯಾಗಿರುವ ಉದಾಹರಣೆಗಳು ನಮ್ಮ ಕಣ್ಣ ಮುಂದೆ ಇವೆ. ನಗರಗೆರೆ, ಮುದಲೋಡು, ಉಪ್ಪರಹಳ್ಳಿ, ನಿವೇಶನಗಳಿಗಾಗಿ ಹೋರಾಟಗಳ ಯಶಸ್ಸು. ಹೆಚ್. ನಾಗಸಂದ್ರ ಭೂ - ಹೋರಾಟ ಅಲ್ಲದೆ ಹೊಸೂರು ಹೋಬಳಿ, ಜೋಡಿ ಬಿಸಲಹಳ್ಳಿಯ ಭೂ-ಹೋರಾಟ ಬಹಳ ಮಹತ್ವವಾದುದ್ದು. ಏಕೆಂದರೆ ನಾವು ಅನೇಕ ಕಡೆ ಸರ್ಕಾರಿ ಜಮೀನುಗಳನ್ನು ಹೋರಾಟದ ಮುಖಾಂತರ ಗಳಿಸಿಕೊಂಡಿರುವುದು ಸರಿಯಷ್ಟೆ. ಆದರೆ ಜೋಡಿ ಬಿಸಲಹಳ್ಳಿ ಭೂ-ಹೋರಾಟ ತುಂಬಾ ಭಿನ್ನವಾದುದ್ದು. ಒಬ್ಬ ಖಾಸಗಿ ಭೂ ಮಾಲಿಕನ ಮೋಸ, ವಂಚನೆಗಳನ್ನು ಬಯಲಿಗೆ ಎಳೆದು ರೂಪಿಸಿದ ಮಹಾನ್ ಹೋರಾಟ. ಜೋಡಿ-ಬಿಸಲಹಳ್ಳಿ ಹೆಸರು ಹೇಳುವಂತೆ ಅದು ಜೋಡಿ ಗ್ರಾಮ. ಈ ಜೋಡಿ ಗ್ರಾಮದಲ್ಲಿ ಗೇಣಿದಾರರೇ ಆ ಗ್ರಾಮದ ಜೀವಾಳ. ಈ ಹಳ್ಳಿಯ ಜೋಡಿದಾರ ಗೇಣಿದಾರರನ್ನು ಶೋಷಣೆ ಮಾಡುತ್ತಾ ಅವರಿಗೆ ಸಿಕ್ಕ ಬೇಕಾಗಿದ್ದ ಭೂಮಿಯನ್ನು ಭೂಮಾಲೀಕನೇ ಕಬಳಿಸಿ ದೌರ್ಜನ್ಯದಿಂದ ಬಡವರ ಜಮೀನುಗಳನ್ನು ವಂಚಿಸಿ ಅಕ್ರಮ ಮಾಡಿಕೊಂಡಿದ್ದಾನೆ. ಈ



ವಿಚಾರವನ್ನು ದಸಂಸ ಗೌರಿಬಿದನೂರು ತಾಲ್ಲೂಕು ಶಾಖೆ ಬಯಲಿಗೆ ಎಳೆದು ಸುಮಾರು 30 ಕಿ.ಮೀ. ಜೋಡಿ ಬಿಸಲಹಳ್ಳಿಯಿಂದ ಗೌರಿಬಿದನೂರು ತಾಲ್ಲೂಕು ಕಛೇರಿಯವರೆಗೆ ಕಾಲ್ನಡಿಗೆ ಜಾಥಾ ಬಂದು ಸರ್ಕಾರದ ಗಮನ ಸೆಳೆಯಲಾಯಿತು. ಈ ಹೋರಾಟಕ್ಕೆ ಮಣಿದ ಸರ್ಕಾರ ಗೇಣಿದಾರರ ಜಮೀನುಗಳನ್ನು ಗುರುತಿಸಿ ಗೇಣಿದಾರರಿಗೆ ಅವರವರ ಜಮೀನುಗಳನ್ನು ಬಿಟ್ಟು ಕೊಡಲಾಯಿತು. ಈ ಹಳ್ಳಿಯ ಎಲ್ಲಾ ಜಾತಿಯ ಬಡ ಗೇಣಿದಾರರಿಗೆ ಜಮೀನು ಸಿಕ್ಕಿತ್ತು. ಈ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಹೋರಾಟ ಮುನ್ನಡೆಸಿದವರು ಕೆ.ಎನ್.ಎಸ್.ರವರು ಇವರಿಗೆ ಪೂರಕವಾಗಿ ಕೆಲಸ ಮಾಡಿದ್ದವರು ಕೆ.ಪಿ. ನಾರಾಯಣಪ್ಪ ಹಾಗೂ ದಸಂಸ ತಾಲ್ಲೂಕು ಶಾಖೆ. ಇಂತಹ ಅನೇಕ ಭೂ-ಹೋರಾಟಗಳಲ್ಲಿ ಭಾಗವಹಿಸಿ ದಸಂಸ ಕಾರ್ಯಕರ್ತರಿಗೆ ಪ್ರೇರಕರಾಗಿ ನಿಂತ ಹೋರಾಟದ ಚಿಲುಮೆ ಕೆ.ಎನ್.ಎಸ್.ರವರು.

ದಲಿತ ಸಂಘರ್ಷ ಸಮಿತಿ ತಾತ್ವಿಕ ತಳಹದಿಗೆ ಚಳವಳಿ ಮುನ್ನಡೆಯಲು ಅದರ ಅಂತರಿಕ ಪ್ರಜಾಪ್ರಭುತ್ವವನ್ನು, ಸಂಘಟನೆಯ ನೈತಿಕ ಮೌಲ್ಯಗಳನ್ನು ರೂಪಿಸಲು ಒಂದು ಸಂವಿಧಾನ ಅನಿವಾರ್ಯವಾಗಿತ್ತು. ಸಂಘಟನೆಯ ಶಿಸ್ತು ಮತ್ತು ಜವಾಬ್ದಾರಿಗಳು, ಕರ್ತವ್ಯಗಳು ಹಾಗೂ ಕಾರ್ಯಕ್ರಮಗಳು ದಸಂಸ ಸಂವಿಧಾನದಲ್ಲಿ ರೂಪಿಸಲಾಗಿದೆ. ಇಂತಹ ಸಂವಿಧಾನವನ್ನು ರಚಿಸಿದವರಲ್ಲಿ ಕೆ.ಎನ್.ಎಸ್. ಹಾಗೂ ಕೋಟಿಗಾನಹಳ್ಳಿ ರಾಮಯ್ಯನವರ ಪಾತ್ರ ಮಹತ್ವವಾಗಿದ್ದು, ಚಳವಳಿಯ ಇಂತಹ ಅನೇಕ ಸೈದ್ಧಾಂತಿಕ ನಿಲುವುಗಳನ್ನು ಮೈಗೂಡಿಸಿಕೊಂಡು ಚಳವಳಿಯ ಗುರಿ ದಾರಿಗಳ ಬಗ್ಗೆ ವಿಮರ್ಶಿಸಿ ಮುನ್ನಡೆದವರು.

ಕೆ.ಎನ್.ಎಸ್.ರವರ ಸಮಕಾಲೀನರಾದ ಬಿ. ಕೃಷ್ಣಪ್ಪ, ದೇವನೂರು ಮಹಾದೇವ, ಡಾ. ಸಿದ್ಧಲಿಂಗಯ್ಯ, ಚಂದ್ರ ಪ್ರಸಾದ್ ತ್ಯಾಗಿ, ಎಮ್.ಡಿ. ಗಂಗಯ್ಯ, ಸಿ.ಎಮ್. ಮುನಿಯಪ್ಪ, ಗಡ್ಡಂ ಎನ್. ವೆಂಕಟೇಶ್, ಎನ್. ಮುನಿಶಾಮಿ, ಹ.ಮಾ. ರಾಮಚಂದ್ರ, ಕೊಮ್ಮಣ್ಣ, ಕೋಟಿಗಾನಹಳ್ಳಿ ರಾಮಯ್ಯ ಇವರುಗಳು ದಲಿತ ಚಳವಳಿಯ ಮೊದಲ ಪುಟದ ಮೊದಲಾಕ್ಷರ ಬರೆದ ಮೊದಲ ಸಾಲಿನ ನಾಯಕರು. ಸಂಘಟನೆಯ ಆಂತರಿಕ ಪ್ರಜಾಪ್ರಭುತ್ವವನ್ನು ತುಂಬಾ ಪ್ರಾಮಾಣಿಕತೆಯಿಂದ ಕಾಪಾಡಿಕೊಂಡು ಬಂದವರು. ಜಾತಿ ರಹಿತ ವರ್ಗ ರಹಿತ ಹೋರಾಟದ ಕನಸು ಹೊತ್ತು, ಹಸಿವು ಅವಮಾನಗಳಿಲ್ಲದ ನವ ಸಮಾಜವನ್ನು ಕಟ್ಟುವ ಹಂಬಲ ಹೊತ್ತವರು. ಇಂತಹ ಸಮಾನ ಮನಸ್ಕರ ಸಂಗಾತಿಯಾಗಿ ತಮ್ಮ ಚಿಂತನೆಗಳನ್ನು ಹಂಚಿಕೊಂಡ ಕೆ.ಎನ್.ಎಸ್. ಸಮ-ಸಮಾಜದ ಕನಸುಗಾರ.

ಕೆ.ಎನ್.ಎಸ್.ರವರಿಗೆ 78 ವರ್ಷ ಕಳೆದರೂ 28 ವರ್ಷದ ಯುವಕನಂತೆ ಕೆಲಸ ಮಾಡುತ್ತಿದ್ದಾರೆ. ಪ್ರತಿ ದಿನ ಏನಾದರೂ ಒಂದು ಸಮಾಜಕ್ಕೆ ಒಳ್ಳೆಯದು ಆಗುವ

ಕೆಲಸದಲ್ಲಿ ತೊಡಗಿಸಿಕೊಂಡಿರುತ್ತಾರೆ. ಇತ್ತೀಚಿಗೆ ಪರಿಸರ ಸಂರಕ್ಷಣೆಗೆ ಪೂರಕವಾಗಿ ಹಸಿರು ಹಳ್ಳಿಗಳನ್ನು ಮಾಡಲು ಪ್ರಯೋಗಿಕವಾಗಿ ನಕ್ಕಲಹಳ್ಳಿ ರಾಮಚಂದ್ರಪುರ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ನಕ್ಕಲಹಳ್ಳಿ ಶಾಲೆಯ ಆವರಣದಲ್ಲಿ ಹಾಗೂ ಊರಿನ ಪ್ರಮುಖ ಬೀದಿಗಳಲ್ಲಿ ಗಿಡಗಳನ್ನು ನೆಟ್ಟು ಅದರ ಪೋಷಣೆಗೆ ಶಿಕ್ಷಕ ಹಾಗೂ ವಿದ್ಯಾರ್ಥಿಗಳನ್ನು ಒಗ್ಗೂಡಿಸಿಕೊಂಡು ಅದರ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದಾರೆ. ಪ್ರತಿ ದಿನ ನಕ್ಕಲಹಳ್ಳಿಗೆ ಹೋಗಿ ಗಿಡಗಳಿಗೆ ತೊಂದರೆಯಾಗದ ರೀತಿಯಲ್ಲಿ ಎಚ್ಚರಿಕೆಯನ್ನು ವಹಿಸುತ್ತಿದ್ದಾರೆ. ಇಂತಹ ಅನೇಕ ಜನಪರ ಜೀವಪರ ಆಲೋಚನೆಗಳನ್ನು ಮೈಗೂಡಿಸಿಕೊಂಡು ಸತ್ಯದ ಹಾದಿಯ ನಡೆಕಾರನಾಗಿ ತನ್ನ ಕಾರ್ಯ ಪ್ರವೃತ್ತಿಯನ್ನು ಮುಂದುವರಿಸಿದ್ದರು ಕೆ.ಎಸ್.ಎಸ್.ರವರ ಇಂತಹ ಅನೇಕ ಸಾಮಾಜಿಕ ಕಳಕಳಿಯ ಆಲೋಚನೆಗಳನ್ನು ಗುರುತಿಸಿದ ಕರ್ನಾಟಕ ಸರ್ಕಾರ 2013ರ ಸಾಲಿನಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ಇಂತಹ ಅನೇಕ ವಿಚಾರಗಳ ಬಗ್ಗೆ ಕೆ.ಎಸ್.ಎಸ್.ರವರಿಗೆ ಇದ್ದ ಬದ್ಧತೆ, ಪ್ರಾಮಾಣಿಕತೆ, ಸರಳತೆ ಅವರ ಸ್ವಾಭಿಮಾನದ ಬದುಕು ಮುಂದಿನ ಪೀಳಿಗೆಗೆ ಮಾರ್ಗದರ್ಶನವಾಗಬೇಕೆಂದು ಆಶಿಸುತ್ತೇನೆ. ಕೆ.ಎಸ್.ಎಸ್.ರವರ ಕುರಿತಂತೆ ಅಭಿನಂದನಾ ಗ್ರಂಥ ಹೊರತರಲು ಆಸಕ್ತಿ ವಹಿಸಿ ಈ ಮಹತ್ ಕಾರ್ಯದಲ್ಲಿ ತೊಡಗಿರುವ ಎಲ್ಲರಿಗೂ ನನ್ನ ಅಭಿನಂದನೆಗಳು.







33

# ಮುಸುಕು ತೆರೆಸಿದರು

– ಎಂ.ಟಿ. ಕಾಂಬಳೆ
ಉಪನ್ಯಾಸಕರು, ಸ.ಪ.ಪೂ. ಕಾಲೇಜು, ಗುಡಿಬಂಡೆ

ಶ್ರೀಯುತ ಕೆ. ನಾರಾಯಣಸ್ವಾಮಿರವರು ಶಿಕ್ಷಣ ಕ್ಷೇತ್ರದಲ್ಲಿ ಮೂವತ್ತೈದು ವರ್ಷಗಳ ಅವಧಿಯಲ್ಲಿ ಉಪನ್ಯಾಸಕರಾಗಿ ಪ್ರಾಂಶುಪಾಲರಾಗಿ, ಶಿಕ್ಷಣ ಇಲಾಖೆಯ ಉಪನಿರ್ದೇಶಕರಾಗಿ ಹಾಗೂ ಜಂಟಿ ನಿರ್ದೇಶಕರಾಗಿ ದಕ್ಷ, ಪ್ರಾಮಾಣಿಕ ಆಡಳಿತಗಾರರಾಗಿ ಕಾರ್ಯನಿರ್ವಹಿಸಿದ್ದಾರೆ.

ಗುಡಿಬಂಡೆಯ ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ 1984ರಿಂದ 1988ರವರೆಗೆ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದ ಬಗ್ಗೆ ಹಳೆಯ ವಿದ್ಯಾರ್ಥಿಗಳ ಮತ್ತು ಅವರ ಜೊತೆಗೆ ಕಾರ್ಯನಿರ್ವಹಿಸಿದ ಸಿಬ್ಬಂದಿ ವರ್ಗದವರು ಇವತ್ತಿಗೂ ಕೂಡ ಅವರ ಸಮಯ ಪರಿಪಾಲನೆ ಕಾರ್ಯ ವೈಖರಿಯ ಬಗ್ಗೆ ಮೆಲುಕು ಹಾಕುತ್ತಾರೆ. ನಿಗಧಿತ ಸಮಯಕ್ಕೆ ಮುಂಚೆ ಕಾಲೇಜಿಗೆ ಹಾಜರಾಗುವುದು, ವಿದ್ಯಾರ್ಥಿಗಳಲ್ಲಿ ನೈತಿಕತೆಯ ಪ್ರಜ್ಞೆ ತುಂಬುವುದು, ತಿಂಗಳಿಗೊಮ್ಮೆ ಘಟಕ ಪರೀಕ್ಷೆಗಳನ್ನು ನಡೆಸಿ, ಕೊಠಡಿ ಮೇಲ್ವಿಚಾರಕರಿಲ್ಲದೇ ವಿದ್ಯಾರ್ಥಿಗಳೇ ಪ್ರಾಮಾಣಿಕವಾಗಿ ಪರೀಕ್ಷೆ ಬರೆಯುವ ವಾತಾವರಣ ನಿರ್ಮಿಸಿದರು. ಇದರಿಂದಾಗಿ ವಿದ್ಯಾರ್ಥಿಗಳಲ್ಲಿ ಆತ್ಮಸ್ಥೈರ್ಯ ಹೆಚ್ಚಾಗುತ್ತಿತ್ತು.

ತಮ್ಮ ಆಡಳಿತದ ಅವಧಿಯಲ್ಲಿ ಅಧೀನ ನೌಕರರ ಕಾರ್ಯಕ್ಷಮತೆಯನ್ನು ಗುರ್ತಿಸಿ ಪ್ರೋತ್ಸಾಹಿಸುತ್ತಿದ್ದರು. ಇವರ ಕಾಲದಲ್ಲಿ ಇವರಿಂದ ಯಾವುದೇ ಸೂಚನೆ, ಆದೇಶವಿಲ್ಲದೆ ಅಧೀನ

ನೌಕರರು ತಮ್ಮ ಕೆಲಸ ಕಾರ್ಯಗಳನ್ನು ಅಚ್ಚುಕಟ್ಟಾಗಿ ನಿಗಧಿತ ಸಮಯದಲ್ಲಿ ಮಾಡಿ ಮುಗಿಸುತ್ತಿದ್ದರು. ಇವರು ಒಂದೂ ದಿನವೂ ಅಧೀನ ನೌಕರರಿಗೆ ಜ್ಞಾಪನಗಳನ್ನು ಕೊಟ್ಟ ಉದಾಹರಣೆಗಳೇ ಇಲ್ಲ. ವೇತನ ಬಿಲ್ಲಿಗೆ ಸಹಿ ಮಾಡುವಾಗ ಜೀವವಿಮಾ ಪಾಲಿಸಿ ಸಂಖ್ಯೆ ಇತ್ಯಾದಿಗಳನ್ನು ಪ್ರತಿ ತಿಂಗಳು ಪರಿಶೀಲಿಸಿದ ನಂತರವೇ ಸಹಿ ಮಾಡುತ್ತಿದ್ದರು. ಜವಾನನಿಂದ ಹಿಡಿದು ಉಪನ್ಯಾಸಕರವರೆಗೆ ಪ್ರತಿಯೊಬ್ಬರನ್ನೂ ಗೌರವದಿಂದ ಕಾಣುತ್ತಿದ್ದರು. ತಮ್ಮ ಬಿಡುವಿನ ಅವಧಿಯಲ್ಲಿ ಕಛೇರಿಯ ಗುಮಾಸ್ತರೊಡನೆ ಸಾಹಿತ್ಯಿಕ ಚರ್ಚೆಯಲ್ಲಿ ತೊಡಗುತ್ತಿದ್ದರು.

ತಿಂಗಳಿಗೊಮ್ಮೆ ಪೋಷಕರ ಸಮಾವೇಶ ನಡೆಸಿ ಪಾಲಕರ ಕರ್ತವ್ಯಗಳ ಬಗ್ಗೆ ವಿವರವಾಗಿ ತಿಳಿಸುತ್ತಾ "ಕೇವಲ ಆಹಾರ, ಉಡುಗೆಗಳನ್ನು ಒದಗಿಸಿ ಶಾಲೆಗೆ ಬೇಕಾದ ಶುಲ್ಕ ಕೊಟ್ಟು ಕಳುಹಿಸಿದರೆ ಸಾಲದು. ಅವರು ಸಮರ್ಥವಾಗಿ ಕಲಿಯಲು ಸಹಕಾರವಾಗಬೇಕಲ್ಲದೆ ಮಕ್ಕಳು ತಮ್ಮನ್ನು ತಾವೇ ಅರಿತುಕೊಳ್ಳುವ ಮನೋಭಾವ ಮೂಡಿಸಬೇಕು. ಪಾಲಕರು ಮೊದಲು ತಮ್ಮಲ್ಲೇ ಒಳ್ಳೆಯ ಗುಣಗಳನ್ನು ರೂಢಿಸಿಕೊಳ್ಳಬೇಕು, ಮನೆಯಲ್ಲಿ ಮಕ್ಕಳೊಂದಿಗೆ ಸೌಜನ್ಯದಿಂದ ನಡೆದುಕೊಳ್ಳಬೇಕು. ಪೋಷಕರು ಮಕ್ಕಳ ಉತ್ತಮ ಭವಿಷ್ಯಕ್ಕೆ ಕಾರಣಕರ್ತರಾಗಿದ್ದಾರೆ. ಅವರಲ್ಲಿ ಸರಳತೆ, ವಿಧೇಯತೆ, ಸಹಕಾರ, ಐಕ್ಯತೆ, ಧೈರ್ಯ, ತ್ಯಾಗ, ಪ್ರಾಮಾಣಿಕತೆ ಇತರ ಸದ್ಗುಣಗಳನ್ನು ಹಂತಹಂತವಾಗಿ ತುಂಬುವ ಕೆಲಸ ಮಾಡಬೇಕು. ಪೋಷಕರು ಕುಡಿತದ ಮಾದಕ ದ್ರವ್ಯದ ಹಾಗೂ ಧೂಮಪಾನದ ದುಷ್ಪರಿಣಾಮಗಳ ಬಗ್ಗೆ ಅರಿತುಕೊಳ್ಳಬೇಕು. ಮಕ್ಕಳಿಗೆ ಉತ್ತಮ ಶಿಕ್ಷಣ ನೀಡುವುದು, ಇದರಿಂದ ಸೇವಾ ಮನೋಭಾವನೆ ಬೆಳೆಯುವುದು. ಸಮಾಜ ಕಟ್ಟುವ ಚಟುವಟಿಕೆಯ ಬೆಳವಣಿಗೆಯಾಗುವುದು ಯಾವ ಐಶ್ವರ್ಯವಿಲ್ಲದಿದ್ದರೂ ಮಕ್ಕಳಿಗೆ ಹಾರೈಕೆಯನ್ನಾದರೂ ನೀಡಬೇಕು" ಎಂದು ಹೇಳುತ್ತಿದ್ದರು.

ಗುಡಿಬಂಡೆ ತಾಲ್ಲೂಕಿನಲ್ಲಿ ಕೃಷಿ ಆಧಾರದ ಮೇಲೆ ಜೀವನ ಸಾಗಿಸುವ ಜನರಿದ್ದಾರೆ. ಇವರ ಜೀವನದ ಮೂಲಾಧಾರ ವ್ಯವಸಾಯ ಇಲ್ಲಿ ಪ್ರಗತಿಪರ ರೈತರಿದ್ದಾರೆ. ಬೆಳೆದ ಬೆಳೆಗೆ ನೀರಿನ ಕೊರತೆಯಿಂದ ಫಸಲು ಕೈಗೆ ಬರದೆ ತಲೆ ಮೇಲೆ ಕೈ ಹೊತ್ತು ಕೂರುವ ಅನಿವಾರ್ಯ ಸ್ಥಿತಿ ಒದಗಿತ್ತು. ಈ ಸಂದರ್ಭದಲ್ಲಿ ಕೆ. ನಾರಾಯಣಸ್ವಾಮಿರವರು ಗುಡಿಬಂಡೆಗೆ ಭೇಟಿ ನೀಡಿದಾಗ ಇಲ್ಲಿನ ರೈತರ ಪರಿಸ್ಥಿತಿಯನ್ನು ಕಂಡು "ಇದಕ್ಕೆ ಮೂಲಕಾರಣ ಅಂತರ್ಜಲದ ಮೇಲೆಯೇ, ಈ ತಾಲ್ಲೂಕಿನಲ್ಲಿ ಕುಡಿಯುವ ನೀರಿನ ಪೂರೈಕೆಯಾಗುತ್ತಿರುವುದು ಈ ಅಂತರ್ಜಲದ ಬಳಕೆಯಿಂದಲೇ, ಕೃಷಿಗಾಗಿ ಬಳಕೆಯಾಗುತ್ತಿರುವ ನೀರಿನಲ್ಲಿ ಅರ್ಧದಷ್ಟು ನೀರು ಬರುತ್ತಿರುವುದು ಅಂತರ್ಜಲ ಮೂಲದಿಂದಲೇ, ನಮ್ಮ ಅವಲಂಬನೆ ಈ ಅಂತರ್ಜಲದ ಮೇಲೆ ನಿಂತಿದೆ. ಇಂದು



ಅಂತರ್ಜಲದ ಮಟ್ಟ ತೀರ ಕೆಳಕ್ಕೆ ಹೋಗಿದೆ. ಕೊಳವೆ ಬಾವಿಗಳಂತೂ ಎಲ್ಲೆಲ್ಲೂ ತಲೆ ಎತ್ತಿ ಭೂಮಿಯೊಳಗಿನ ನೀರು ಸಿಕ್ಕುವುದೇ ಕಷ್ಟವಾಗಿದೆ. ಇರುವ ಕೊಳವೆ ಬಾವಿಗಳು ಮತ್ತು ತೆರೆದ ಬಾವಿಗಳು ಬತ್ತುತ್ತಿವೆ. ಇದು ಹೀಗೇ ಮುಂದುವರಿದರೆ ಅಂತರ್ಜಲವು ಸಂಪೂರ್ಣವಾಗಿ ಬರಿದಾಗುವ ಅಪಾಯವಿದೆ. ಹಿಂದೆ ಆಸ್ತಿಗಾಗಿ, ಸಂಪತ್ತಿಗಾಗಿ, ಹೋರಾಟ ನಡೆದಿದೆ ಇನ್ನು ಮುಂದೆ ಒಂದು ಬಿಂದಿಗೆ ನೀರಿಗಾಗಿ ಹೋರಾಟ ಮಾಡುವ ಪರಿಸ್ಥಿತಿ ಬರುತ್ತದೆ" ಎಂದು ಹೇಳುತ್ತಿದ್ದರು. ಅವರ ಮುನ್ನೆಚ್ಚರಿಕೆಯ ಭವಿಷ್ಯವಾಣಿಯಂತೆ ಈಗ ಕುಡಿಯುವ ನೀರಿಗಾಗಿ ಹೋರಾಟ ಮಾಡುವ ಪರಿಸ್ಥಿತಿ ಬಂದಿದೆ. ನಿಸರ್ಗದತ್ತವಾದ ನೀರನ್ನು ಸುಲಭವಾಗಿ ಪಡೆದುಕೊಳ್ಳುವ ಮಾರ್ಗವೆಂದರೆ ಸಿಗುವ ನೀರನ್ನು ಸಮರ್ಪಕವಾಗಿ ಬಳಸಿಕೊಳ್ಳುವುದು, ನೀರಿನ ದುಂದುವೆಚ್ಚ ತಪ್ಪಿಸುವುದು, ಮಳೆಗಾಲದಲ್ಲಿ ನೀರು ವ್ಯರ್ಥವಾಗಿ ಹೋಗದಂತೆ ನೋಡಿಕೊಳ್ಳುವ ವಿಧಾನವು ಮುಖ್ಯವಾದುದು. ಇದನ್ನೇ ಮಳೆಕೊಯ್ಲು ಎಂದು ಹೇಳುತ್ತಾರೆ. ಮಳೆಗಾಲದಲ್ಲಿ ನೀರನ್ನು ಸಂಗ್ರಹಿಸಿ ಇಟ್ಟುಕೊಳ್ಳುವುದು, ಸಂಗ್ರಹವಾದ ನೀರನ್ನು ಸಮರ್ಪಕವಾಗಿ ಬಳಸಿಕೊಳ್ಳುವುದು. ಪಟ್ಟಣ ಪ್ರದೇಶಗಳಲ್ಲಿ ಈ ಮಳೆಕೊಯ್ಲು ಪ್ರಾಯೋಗಿಕವಾಗಿ ನಡೆಯುತ್ತಿದೆ. ಮನೆಗಳನ್ನು ಕಟ್ಟುವವರು ಮಳೆನೀರನ್ನು ಕೊಯ್ಲು ಮಾಡುವುದು ಕಡ್ಡಾಯವಾಗಬೇಕು. ಆಗ ನೀರಿನ ಕೊರತೆಯನ್ನು ಸ್ವಲ್ಪಮಟ್ಟಿಗಾದರೂ ಕಡಿಮೆ ಮಾಡಬಹುದು. ಹಳ್ಳಿಗಳಲ್ಲಿ ಕೆರೆ, ಕಾಲುವೆಗಳು ಬತ್ತದಂತೆ ಆಗಬೇಕಾದರೆ ನದಿ, ಕೆರೆಗಳಲ್ಲಿರುವ ಮರಳು ಮಾರಾಟ ದಂಧೆ ನಿಲ್ಲಿಸಬೇಕು. ಹೊಲಗಳಲ್ಲಿ ಒಡ್ಡುಗಳನ್ನು ಕಟ್ಟುವ ಪ್ರಯತ್ನ ನಡೆಯಬೇಕು. ಮರಗಿಡಗಳನ್ನು ನಿಷ್ಕಾರಣವಾಗಿ ಕಡಿದು ಕಾಂಕ್ರಿಟಿನ ರಸ್ತೆಯನ್ನು ನಿರ್ಮಿಸುವ ಯೋಜನೆಗಳು ಬದಲಾಗಬೇಕು. ಗುಡ್ಡ ಬೆಟ್ಟಗಳನ್ನು, ಅರಣ್ಯಗಳನ್ನು ನಾವು ನಾಶಮಾಡುತ್ತ ಹೋದರೆ ಮಳೆಯೇ ಕಣ್ಮರೆಯಾಗುವುದೆಂಬ ಎಚ್ಚರ ನಮ್ಮೆಲ್ಲರಲ್ಲೂ ಮೂಡಬೇಕಾಗಿದೆ ಎಂದು ಸಲಹೆ ಸೂಚನೆಗಳನ್ನು ನೀಡುತ್ತಿದ್ದರು.

ಗುಡಿಬಂಡೆ ತಾಲ್ಲೂಕಿನಲ್ಲಿರುವ ಜನತೆಗೆ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಕೈಕಾಲು ನೋವು ಕಾಣಿಸಿಕೊಳ್ಳುತ್ತಿತ್ತು. ಜೊತೆಗೆ ಬೆನ್ನು ಬಾಗಿಸಿಕೊಂಡು, ನೋವನ್ನು ಅನುಭವಿಸುತ್ತ ಮೆಲ್ಲನೆ ಹೆಜ್ಜೆ ಇಡುವ ಪರಿಸ್ಥಿತಿ ಇತ್ತು. ಇದನ್ನು ಕಂಡು ಜನರೆಲ್ಲರೂ ಚಿಕೂನ್‌ಗುನ್ಯಾ ಕಾಯಿಲೆ ಇರಬಹುದೆಂದು ಪಟ್ಟಣದ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು. ವೈದ್ಯರೂ ಸಹ ಚಿಕೂನ್ ಗುನ್ಯ ಎಂದೇ ಪರಿಗಣಿಸಿ ಚಿಕಿತ್ಸೆ ನೀಡುತ್ತಿದ್ದರು. ಆದರೆ ಈ ಕಾಯಿಲೆ ವಾಸಿಯಾಗಲೇ ಇಲ್ಲ. ಇದೇ ಸಂದರ್ಭದಲ್ಲಿ ಶ್ರೀಯುತ ಕೆ. ನಾರಾಯಣಸ್ವಾಮಿರವರು (ಸಮಾಜ ಚಿಕಿತ್ಸಕರು) ಗುಡಿಬಂಡೆ ತಾಲ್ಲೂಕಿಗೆ ಭೇಟಿ ಕೊಟ್ಟ ಸಂದರ್ಭದಲ್ಲಿ ಇಲ್ಲಿಯ ಜನರನ್ನು ಪರೀಕ್ಷಿಸಿದಾಗ ಅವರ ಹಲ್ಲಿನ ಮೇಲೆ



ಕಪ್ಪುಕಲೆ, ಹಳದಿ ಬಣ್ಣದ ಕಲೆ, ಹಲ್ಲು ಸವೆಯುತ್ತಿರುವ ಲಕ್ಷಣ ಕಂಡು, ಇದಕ್ಕೆ ಮೂಲ ಕಾರಣ ಫ್ಲೋರೈಡ್ ಅಂಶದಿಂದ ಕೂಡಿದ ನೀರಿನಿಂದ ಬರುವ ಕಾಯಿಲೆ ಎಂದು ಜನತೆಗೆ ಮನವರಿಕೆ ಮಾಡಿಕೊಟ್ಟರು. ಇಲ್ಲಿನ ಜನರಿಗೆ ಕೊಳವೆಬಾವಿಯಿಂದ ಫ್ಲೋರೈಡ್‌ಯುಕ್ತ ನೀರು ಬರುತ್ತಿದೆ ಎಂಬುದು ಗೊತ್ತಿರಲಿಲ್ಲ. ಇದನ್ನು ಸೇರಿಸಿದ ಹಲವರು ರೋಗದಿಂದ ನರಳುತ್ತಿದ್ದರು. ವೃದ್ಧರು, ಫ್ಲೋರೋಸಿಸ್‌ನಿಂದ ಕುಕ್ಕರಗಾಲಿನಲ್ಲಿ ನಡೆದರೆ, ರೋಗಕ್ಕೆ ತುತ್ತಾದ ಯುವಕರು ಮುದುಕರಂತೆ ಬಾಗಿ ನಡೆಯುವಂತಾಗಿತ್ತು. ಇದನ್ನೆಲ್ಲ ಕಂಡು ಜನರಲ್ಲಿ ಜಾಗೃತಿ ಮೂಡಿಸಿದ ಫಲವಾಗಿ ಮುಂದೆ ಈ ತಾಲ್ಲೂಕಿಗೆ ಫ್ಲೋರೈಡ್ ಮುಕ್ತ ನೀರು ಸರಬರಾಜು ವ್ಯವಸ್ಥೆಯಾಯಿತು.

ಸಮಾಜ ಸೇವಾ ಹೆಸರಿನಲ್ಲಿ ರಾಜಕೀಯ ಅಧಿಕಾರವನ್ನು ಪಡೆದು ಮಿಂಚುತ್ತಿರುವ ದಲಿತ ಸಮುದಾಯದ ರಾಜಕೀಯ ಮುಖಂಡರುಗಳು ದಲಿತರ ಬದುಕಿಗೆ ಹತ್ತಿರವಾಗದೆ ತಮ್ಮ ಅಧಿಕಾರದ ದರ್ಪವನ್ನು ದಲಿತರ ಮೇಲೆ ತೋರಿಸುತ್ತ, ಮೆರೆಯುವ ನಾಯಕರಾದವರೇ ಹೆಚ್ಚು. ವೃತ್ತಿಯಲ್ಲಿ ಸರ್ಕಾರಿ ಸೇವೆಯಲ್ಲಿದ್ದು, ಪ್ರವೃತ್ತಿಯಲ್ಲಿ ದಲಿತರ, ಬಡವರ, ಶೋಷಿತ ಹೆಣ್ಣು ಮಕ್ಕಳ, ಹಿತ ಕಾಪಾಡುವಲ್ಲಿ ಅಗ್ರಸ್ಥಾನವನ್ನು ನೀಡಿದ್ದಲ್ಲದೇ ಸಮಾಜಕ್ಕೂ ಶ್ರೀ ಕೆ. ನಾರಾಯಣಸ್ವಾಮಿರವರು ಉತ್ತಮ ಮಾರ್ಗದರ್ಶಿಗಳಾಗಿದ್ದಾರೆ. ದಲಿತರ ಪಥದಲ್ಲಿ ನಿಂತು ಸದಾ ಸಮಾನತೆಗಾಗಿ ಶೋಷಣೆ ರಹಿತ ಸಮಾಜಕ್ಕಾಗಿ ಹೋರಾಟದ ಬದುಕನ್ನು ನೀಡುವ ಸಾಲಿನಲ್ಲಿ ಸದಾ ಜಾಗೃತಿಯನ್ನು ಮೂಡಿಸುತ್ತಿರುವವರು.

ಮುಸುಕನ್ನು ಹೊದ್ದು ಮಲಗಿದ್ದ ದಲಿತ ಸಮುದಾಯವನ್ನು ತಮ್ಮ "ಅಂಬೇಡ್ಕರ್ ವಾಣಿ" 'ದಲಿತ ಕೈಪಿಡಿ' 'ಭಂಗಿ ಜನರ ಆತ್ಮಕಥನ' ನರಬಲಿ, ಪುಸ್ತಕಗಳ ಮುಖಾಂತರ ಬಡಿದೆಬ್ಬಿಸಿ ಅವರಲ್ಲಿ ಆತ್ಮಸ್ಥೈರ್ಯವನ್ನು ತುಂಬುತ್ತಿರುವ, ಮೌಢ್ಯತೆಯನ್ನು ತೊಲಗಿಸುವ, ವೈಚಾರಿಕ ಕ್ರಾಂತಿಕಾರಿಗಳು.

ದಲಿತ ಯುವಕರಲ್ಲಿ ಆತ್ಮಸ್ಥೈರ್ಯ ತುಂಬುವುದಲ್ಲದೇ ಅವರು ಸ್ವಾಭಿಮಾನದಿಂದ ಬದುಕುವ ಕಲೆಯನ್ನು ಕಲಿಸಿಕೊಟ್ಟವರು. ಅವರಲ್ಲಿ ತುಂಬಿರುವ ವಿಚಾರವಂತಿಕೆ, ಸೃಜನಶೀಲತೆ, ಸರಳತೆ ಮತ್ತು ವಿನಯವಂತಿಕೆ, ಮಾನವೀಯ ಮೌಲ್ಯಗಳು ಎಲ್ಲವನ್ನೂ ಗಮನಿಸಿದರೆ ಇವರು ಸಮಾಜದ 'ನವಮಾರ್ಗದರ್ಶಿ' ಸಮಾಜದ ಚಿಂತಕರು ಎಂಬುದರಲ್ಲಿ ಎರಡು ಮಾತಿಲ್ಲ.







34

# ಪ್ರಗತಿಪರ ಚಿಂತಕ

– ಗಂಗಾಧರ ಬೈಚಾಪುರ

ರಂಗಕರ್ಮಿ, ಬೈಚಾಪುರ, ಗೌರೀಬಿದನೂರು ತಾಲ್ಲೂಕು

**ಕೆ.** ನಾರಾಯಣಸ್ವಾಮಿಯವರು ಅವಿಭಜಿತ ಕೋಲಾರ ಜಿಲ್ಲೆಯಲ್ಲಿ ಅವಿರತ ಸಂಘಟಕರಾಗಿ ದುಡಿದವರು. ಶಿಕ್ಷಣ ಇಲಾಖೆಯಲ್ಲಿ ಕೆಲಸ ಮಾಡುತ್ತಲೇ ದೀನದಲಿತರ ದನಿಯಾಗಿ ಸಂಘಟನೆಗಳನ್ನು ಕಟ್ಟಿದ ಉತ್ತಮ ಸಂಘಟಕರು. ಗೌರೀಬಿದನೂರು ತಾಲ್ಲೂಕಿನಲ್ಲಿ ಹರಿದು ಹಂಚಿಹೋಗಿದ್ದ ಶೋಷಿತ ಸಮುದಾಯವನ್ನು ಒಂದೆಡೆ ಸೇರಿಸುವಲ್ಲಿ ಕೆ. ನಾರಾಯಣಸ್ವಾಮಿಯವರ ಪಾತ್ರ ಪ್ರಧಾನವಾಗಿ ಕೆಲಸ ಮಾಡಿದೆ ಎನ್ನಬೇಕು. ನಾಯಕ ಸಂಘದ ಮುಖಂಡರುಗಳಲ್ಲಿನ ಒಡಕುಗಳನ್ನು ನಿವಾರಿಸಿ ಗೌರೀಬಿದನೂರು ನಾಯಕ ಸಂಘವನ್ನು ಕಟ್ಟುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ಇಂದು ನಾಯಕ ಸಂಘವು ತನ್ನೆಲ್ಲ ಭಿನ್ನಾಭಿಪ್ರಾಯಗಳನ್ನು ಬದಿಗಿರಿಸಿ ಶ್ರೀಯುತ ಬಾಬಣ್ಣ (ನಿವೃತ್ತ ಜಂಟಿ ಕಮೀಷನರ್, ಬಿ.ಬಿ.ಎಂ.ಪಿ.) ಇವರ ನೇತೃತ್ವದಲ್ಲಿ ಹಲವು ಸಮುದಾಯಪರ ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ. ನಾಯಕ ಸಂಘದ ಸುಸಜ್ಜಿತ ಕಟ್ಟಡವು ಗೌರಿಬಿದನೂರಿನಲ್ಲಿ ತಲೆ ಎತ್ತುವ ಸನ್ನಾಹದಲ್ಲಿದೆ, ಗೌರಿಬಿದನೂರಿಗೆ ಹೊಂದಿಕೊಂಡಂತಿರುವ ಮಾದನಾಯಕನಹಳ್ಳಿಯಲ್ಲಿ ನಾಯಕ ಸಂಘಕ್ಕೆ ಸೇರಿದ ನಿವೇಶನವು ಬಿ.ಹೆಚ್. ರಸ್ತೆಯಲ್ಲಿದ್ದು, ಇಲ್ಲಿ ನಾಯಕ ಸಂಘದ ಕಟ್ಟಡದ ನೀಲಿನಕ್ಷೆ ಸಿದ್ಧವಾಗಿದ್ದು, ಬಾಬಣ್ಣನವರ ನೇತೃತ್ವದಲ್ಲಿ

ಹೊಲಿಗೆ ತರಬೇತಿ ಕೇಂದ್ರ, ಕಂಪ್ಯೂಟರ್ ತರಬೇತಿ ಕೇಂದ್ರ ಮುಂತಾದ ಕೌಶಲ್ಯ ಆಧಾರಿತ ತರಬೇತಿಗಳನ್ನು ನಾಯಕ ಸಮುದಾಯದ ಮಹಿಳೆಯರಿಗೆ ಮತ್ತು ಯುವಕರಿಗೆ ಉಚಿತವಾಗಿ ನೀಡಲು ಅವಶ್ಯವಾದ ಕಟ್ಟಡದ ಕಾರ್ಯವು ಪ್ರಗತಿಯಲ್ಲಿದೆ. ಈ ಕಾರ್ಯಗಳಿಗೆ ಸ್ಥಳೀಯ ಸಂಸದ ಶ್ರೀಯುತ ಎಂ. ವೀರಪ್ಪಮೊಯಿಲಿ ಮತ್ತು ಇಂದಿನ ವಿಧಾನಸಭಾ ಉಪಾಧ್ಯಕ್ಷರಾದ ಎನ್.ಹೆಚ್. ಶಿವಶಂಕರರೆಡ್ಡಿ ಇವರ ಅನುದಾನವೂ ಸಹಕಾರಿಯಾಗಲಿದೆ. ಒಟ್ಟಾರೆ ನಾಯಕ ಜನಾಂಗದ ಸಂಪೂರ್ಣ ಸಂಘಟನೆಯನ್ನು ಗೌರಿಬಿದನೂರು ನಾಯಕ ಸಂಘವು ಹೊತ್ತಿದ್ದು ಇದಕ್ಕೆ ಮೂಲ ಪ್ರೇರಕ ಶಕ್ತಿಯಾಗಿ ಶ್ರೀಯುತ ಕೆ. ನಾರಾಯಣಸ್ವಾಮಿಯವರು ಕೆಲಸ ಮಾಡಿದ್ದಾರೆ ಎಂಬುದು ಗಮನಾರ್ಹ ಸಂಗತಿ.

ಇದಲ್ಲದೆ ನಾಯಕ ಸಮುದಾಯದ ಪ್ರತಿಭಾವಂತ ವಿದ್ಯಾರ್ಥಿಗಳಿಗಾಗಿ ಸುಮಾರು 25 ವರ್ಷಗಳಿಂದ ಪ್ರತಿಭಾ ಪುರಸ್ಕಾರ ಕಾರ್ಯಕ್ರಮವನ್ನು ಪ್ರತಿವರ್ಷ ಗೌರಿಬಿದನೂರಿನ ತಾಲ್ಲೂಕು ಕೇಂದ್ರ ಸ್ಥಾನದಲ್ಲಿ ಹಮ್ಮಿಕೊಳ್ಳುತ್ತಿದ್ದು, ಇದರ ಸಂಪೂರ್ಣ ಸಂಘಟನಾ ಶಕ್ತಿಯಾಗಿ ಕೆವಿನ್ನೆಸ್‌ರವರು ಕೆಲಸ ಮಾಡುತ್ತಿದ್ದಾರೆ. ಕೃಷಿಕರಿಗೆ ನೆರವಾಗುವ ಕೃಷಿ ತರಬೇತಿ ಕಾರ್ಯಕ್ರಮಗಳು, ನಿರುದ್ಯೋಗಿ ಯುವಕ / ಯುವತಿಯರಿಗಾಗಿ ಉದ್ಯೋಗ ತರಬೇತಿ ಕಾರ್ಯಕ್ರಮಗಳು ಮುಂತಾಗಿ ಅನೇಕ ಕಾರ್ಯಕ್ರಮಗಳು ಇವರ ನೇತೃತ್ವದಲ್ಲಿ ಆಯೋಜಿಸುತ್ತಿದ್ದು, 79ರ ಇಳಿ ವಯಸ್ಸಿನಲ್ಲಿಯೂ ಕೆವಿನ್ನೆಸ್‌ರವರು ಯುವಕರನ್ನೂ ನಾಚಿಸುವಂತೆ ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ. ಇವರ ಎಲ್ಲ ಕಾರ್ಯಗಳಿಗೂ ವೆಂಕಟೇಶ್ (ಮೇಷ್ಟ್ರು) ಕದಿರಪ್ಪ ಮುಂತಾಗಿ ಅನೇಕರು ಸಹಕಾರ ನೀಡುತ್ತಿದ್ದು, ಹಿಂದಿನ ದಿನಗಳಿಗೆ ಹೋಲಿಸಿದಲ್ಲಿ ನಾಯಕ ಸಂಘವು ಇಂದು ಬಲಿಷ್ಠವಾಗಿ ಬೆಳೆದು ನಿಂತಿದೆ ಎಂದರೆ ಅದಕ್ಕೆ ಕಾರಣ ಶ್ರೀಯುತ ಕೆ. ನಾರಾಯಣಸ್ವಾಮಿಯವರು ಎಂದರೆ ತಪ್ಪಾಗಲಾರದು. ನಾನು ಅವರೆಲ್ಲ ಕಾರ್ಯಗಳಲ್ಲೂ ಜೊತೆಯಾಗಿರುವೆನಾದ್ದರಿಂದ ಅವರ ಮನಸ್ಥಿತಿಯ ಕುರಿತು ನನಗೆ ಒಂದಿಷ್ಟು ಅರಿವಿದೆ ನನ್ನ ಜನ ವಿಚಾರವಂತರಾಗಬೇಕು, ಬುದ್ಧಿವಂತರಾಗಬೇಕು, ತಮ್ಮ ದುಶ್ಚಟಗಳನ್ನು ತೊರೆದು ಸಾಮಾಜಿಕ, ಆರ್ಥಿಕವಾಗಿ ಸಬಲರಾಗಬೇಕು ಎಂಬುದು ಅವರ ಮನದಾಳದ ಆಶಯ. ನಮ್ಮ ಜನಾಂಗದ ವಿದ್ಯಾವಂತರೆಲ್ಲ ಒಟ್ಟಾಗಿ ಹಿಂದುಳಿದವರನ್ನು ಅಭಿವೃದ್ಧಿಗೊಳಿಸುವ ಬಗ್ಗೆ ಚಿಂತಿಸಬೇಕು ಎಂಬುದು ಅವರ ಪ್ರಮುಖ ಆಶಯಗಳಲ್ಲಿ ಒಂದು. ಅವರ ಆಶಯ ನೆರವೇರಿಸುವ ನಿಟ್ಟಿನಲ್ಲಿಯೇ ಅವರ ಕಾರ್ಯಕ್ರಮಗಳ ರೂಪುರೇಷೆಗಳೂ ಸಿದ್ಧವಾಗುತ್ತವೆ ಎಂದು ಹೇಳಬೇಕಾಗಿಲ್ಲ. ಏನೇ ಆದರೂ ಸಮುದಾಯದ ಪರವಾಗಿ ಕೆಲಸ ಮಾಡುವ, ಉನ್ನತ ವ್ಯಕ್ತಿತ್ವ ಹೊಂದಿರುವ

ನಾರಾಯಣಸ್ವಾಮಿಯವರು ನಮ್ಮ ಸಮುದಾಯದರಲ್ಲಿ ಹುಟ್ಟಿ ಬಂದರೆಂಬುದೇ ನಮ್ಮೆಲ್ಲರಿಗೂ ಹೆಮ್ಮೆಯ ವಿಷಯ.

ಶ್ರೀಯುತ ಕೆಎನ್ನೆಸ್‌ರವರು ಸಮುದಾಯಕ್ಕಷ್ಟೇ ಅಲ್ಲದೆ ದೀನದಲಿತರ ಹಿಂದುಳಿದವರ ಉದ್ಧಾರಕ್ಕಾಗಿಯೇ ಹಲವಾರು ರೀತಿಯಲ್ಲಿ ಯತ್ನಿಸುತ್ತಲೇ ಇರುವ ಹಿರಿಯ ಜೀವ. ಅವರ ಆಶಯಗಳನ್ನು ಈಡೇರಿಸುವುದೇ ನಾವು ಅವರಿಗೆ ನೀಡುವ ಗೌರವ ಎಂದು ನಾನು ಭಾವಿಸುತ್ತೇನೆ.

❑






# ಪ್ರತಿಭೆಯ ಮೇರು ಶಿಖರ

– ಅಂಬಿಕಾ
ಉಪನ್ಯಾಸಕರು, ನಾರಾಯಣ ಕಾಲೇಜು, ಬೆಂಗಳೂರು
ಹಾಗೂ ಸಂಶೋಧನಾ ವಿದ್ಯಾರ್ಥಿ

ಗೌರಿಬಿದನೂರು ತಾಲ್ಲೂಕಿನ ಹೊಸೂರು ಗ್ರಾಮದಲ್ಲಿ ಹುಟ್ಟಿ ಬೆಳೆದ ಕೆ. ನಾರಾಯಣಸ್ವಾಮಿಯವರು ಸ್ವಭಾವತಃ ಮೌನಿಯಾದರೂ ಸಾಮಾಜಿಕ ಸ್ತರದ ಎಲ್ಲಾ ಕ್ಷೇತ್ರಗಳಲ್ಲೂ ಪಾಲ್ಗೊಂಡು ಎಲೆಮರೆ ಕಾಯಿಯಂತೆ ಸುದ್ದಿ ಮಾಡಿದವರು. ಆಸ್ತಿ - ಐಶ್ವರ್ಯಗಳನ್ನು ಯಾರು ಬೇಕಾದರೂ ಗಳಿಸಬಹುದು. ಆದರೆ ಸಮಾಜಮುಖಿಯಾಗಿ ನಿಂತು ನಿಷ್ಕಲ್ಮಷವಾಗಿ ಜನಪರವಾದ ಚಟುವಟಿಕೆಗಳಲ್ಲಿ ಅವಿರತವಾಗಿ ತೊಡಗಿಸಿಕೊಂಡು ಅಹೋರಾತ್ರಿ ಜನರ ಅಭಿವೃದ್ಧಿಗೆ ಚಿಂತಿಸುತ್ತಾ ಜನಾಭಿಮಾನವನ್ನು ಗಳಿಸಿಕೊಳ್ಳುವುದು ತುಂಬಾ ಕಷ್ಟದ ಕೆಲಸ. ಈ ನಿಟ್ಟಿನಲ್ಲಿ ಯಶಸ್ವಿಯಾದ 75 ವರ್ಷದ ಕೆ. ನಾರಾಯಣಸ್ವಾಮಿಯವರ ಬದುಕು ಒಂದು ಮಾದರಿ ಎಂದು ಹೇಳಬಹುದು.

ಬಹುಮುಖಿ ಪ್ರತಿಭೆಯ ಕೆ. ನಾರಾಯಣಸ್ವಾಮಿಯವರ ಜೀವನವು ಅವರ ಬದುಕಿನ ಹತ್ತು - ಹಲವಾರು ಮುಖಗಳನ್ನು ದರ್ಶಿಸುತ್ತದೆ. ಕಳೆದ 33 ವರ್ಷಗಳಿಂದಲೂ ಶಿಕ್ಷಣ ಕ್ಷೇತ್ರದಲ್ಲಿ ಒಂದೊಂದೇ ಮೆಟ್ಟಿಲುಗಳನ್ನು ಏರುತ್ತಾ, ಶಿಕ್ಷಕರಾಗಿ, ಉಪನ್ಯಾಸಕರಾಗಿ, ಕಿರಿಯ ಕಾಲೇಜಿನ ಪ್ರಾಂಶುಪಾಲರಾಗಿ, ಸಾಹಿತ್ಯಾರಾಧಕರಾಗಿ, ಸಾಹಿತ್ಯ ರಚನೆಕಾರರಾಗಿ, ಉಪನಿರ್ದೇಶಕರಾಗಿ ಮುಂದುವರಿದು ಜಂಟಿ ನಿರ್ದೇಶಕರಾಗಿ ಪ್ರಾಮಾಣಿಕತೆ, ದಕ್ಷತೆಗೆ



ಪರೋಕ್ಷ ಹೆಸರೆಂಬಂತೆ ಬದುಕಿ ಬಾಳಿ ಕೀರ್ತಿಶಿಖರವನ್ನು ತಬ್ಬಿ ಹಿಡಿದವರು. ಅಲ್ಪಮತಿಯಳಾದ ನಾನು ಕೆ. ನಾರಾಯಣಸ್ವಾಮಿಯವರ ವ್ಯಕ್ತಿತ್ವದ ಶಕ್ತಿಯನ್ನು, ಬದುಕಿನ ಹೋರಾಟವನ್ನು ಕುರಿತು, ಅಭಿನಂದನೆಯ ಅಕ್ಷರ ರೂಪ ಕೊಡುವುದು ಒಂದು ರೀತಿಯಲ್ಲಿ ಸಮುದ್ರದ ನೀರನ್ನು ಬೊಗಸೆಯಲ್ಲಿ ಹಿಡಿಯುವ ಪ್ರಯತ್ನ ಮಾಡಿದಂತೆಯೇ ಸರಿ.

ವೃತ್ತಿಯಿಂದ ಶಿಕ್ಷಣ ಇಲಾಖೆಯ ಪ್ರತಿನಿಧಿಯಾದರೂ ಅವರ ಪ್ರತಿನಿಧಿತ್ವ ಕಂಡುಬರುವುದು ಸಮಾಜಪರವಾದ ಕೆಲಸಗಳಲ್ಲಿ. ಅವರೊಬ್ಬ ಜಲತಜ್ಞನಾಗಿ, ದಲಿತ ಸಮುದಾಯದ ದನಿಯಾಗಿ, ನಿಸರ್ಗ ಚಿಕಿತ್ಸೆಯ ಹರಿಕಾರನಾಗಿ, ಕೃಷಿ ಸೂಕ್ಷ್ಮತೆಗಳಲ್ಲಿ ಪಳಗಿದ ಚಿಂತಕನಾಗಿ ಸಾಮಾಜಿಕ - ಸ್ವಾಸ್ಥ್ಯಗಳನ್ನು ಕಾಪಾಡುತ್ತ ಬಂದವರು ಶ್ರೀಯುತರು. ಕೆ. ನಾರಾಯಣಸ್ವಾಮಿಯವರು, ಸಾಮಾಜಿಕ ಸ್ವಾಸ್ಥ್ಯಕ್ಕಾಗಿ ಆಯ್ದುಕೊಂಡ ಸಮಾಜಮುಖಿ ಕ್ಷೇತ್ರಗಳಿಂದು ದುಡ್ಡು ಮಾಡುವ ದಂಧೆಗಳಾಗಿವೆ. ಈ ಮಾತಿಗೆ ಶ್ರೀಯುತರು ಅಪವಾದ. ಸಮಾಜಸೇವೆಯಲ್ಲಿ ಆತ್ಮತೃಪ್ತಿಯನ್ನರಸುತ್ತಾ ಹೊರಟ ಈ ಸೇವಾ ಜಂಗಮ ಜನಸೇವೆಗಾಗಿ ಸರ್ಕಾರದ ಸವಲತ್ತುಗಳಿಗಾಗಿ ಕೈಚಾಚಿ ನಿಂತವರಲ್ಲ. ಬದಲಾಗಿ ತಮ್ಮ ಸ್ವಂತ ಪರಿಶ್ರಮದಿಂದಲೇ ದುಡಿದ ದುಡ್ಡಿನಲ್ಲಿ ಸೇವೆ ಮಾಡಿದುದರ ಫಲಿತವೋ ಎಂಬಂತೆ ಕೀರ್ತಿಯನ್ನರಸಿ ಹೋಗದ ಇವರ ಅಪ್ರತಿಮ ಅಭಿವೃದ್ಧಿ ಚಿಂತನೆಗೆ ಹತ್ತು ಹಲವಾರು ಪ್ರಶಸ್ತಿಗಳು ಹುಡುಕಿಕೊಂಡು ಬಂದಿವೆ.

ಸಾಹಿತ್ಯಾರಾಧಕರಾಗಿರುವ ಕೆ. ನಾರಾಯಣಸ್ವಾಮಿ ಯವರು ತಮ್ಮನ್ನು ತಾವು ಸಾಹಿತಿಯೆಂದು ಎಂದೂ ಗುರುತಿಸಿಕೊಂಡವರಲ್ಲ. ಬದಲಾಗಿ ಸಾಹಿತ್ಯದ ಗಂಭೀರ ವಿದ್ಯಾರ್ಥಿಯಾಗಿ ಗುರುತಿಸಿಕೊಳ್ಳಲು ಇಚ್ಛೆಪಟ್ಟವರು. ಸಮಾಜದ ಪರಿವರ್ತನೆಗೆ ಕಾರಣವಾಗುವ ಸಾಹಿತ್ಯದ ಬರಹಗಳನ್ನು ಗಂಭೀರವಾಗಿ ತೆಗೆದುಕೊಂಡುದುದರ ಫಲವೋ ಎನ್ನುವಂತೆ ಅವರ ಆಲೋಚನಾ ಲಹರಿಯಲ್ಲರಳಿದ ಬರಹ - ಕೃತಿಗಳು ಹತ್ತು ಹಲವಾರು. ಅವುಗಳಲ್ಲಿ ಮುಖ್ಯವಾದವು, ದಲಿತ ಕೈಪಿಡಿ, ನರಬಲಿ, ಅಂಬೇಡ್ಕರ್ ವಾಣಿ, ದಿಗಂಬರ ಕವಿಗಳು, ಪೋಷಕರ ಕೈಪಿಡಿ, ಭಂಗಿಜನಾ ಕಥಾ ಅನಂತಮೂರ್ತಿ ಯವರ 'ಸಂಸ್ಕಾರ'ದ ತೆಲುಗು ಅನುವಾದ, ಅಯೋಧ್ಯೆಯ ಭುಗಿಲು, ರೈತರ ನಿರಂತರ ಆತ್ಮಹತ್ಯೆಗಳು, ಪ್ರಜೆಗೆ - ಪ್ರಭುತ್ವ ಮಾಹಿತಿ ಹಕ್ಕು ಇತ್ಯಾದಿ ಕೃತಿಗಳು ಅವರಲ್ಲಿನ ಸಾಹಿತ್ಯ ಶಕ್ತಿಯನ್ನು ಎತ್ತಿಹಿಡಿಯುತ್ತವೆ.

70ರ ದಶಕದಲ್ಲಿ ದೇಶದುದ್ದಕ್ಕೂ ದಲಿತರನ್ನು ಕೀಳಾಗಿ ಕಾಣುವ ಶೋಷಣೆಗೆ ಒಳಪಡಿಸುವ ಪ್ರವೃತ್ತಿಗಳು ಕಂಡುಬಂದಾಗ ಸಿಡಿದು ನಿಂತ ಕೆ. ನಾರಾಯಣಸ್ವಾಮಿ ಯವರು, ಅಂದು ದಲಿತ ದೌರ್ಜನ್ಯದ ವಿರುದ್ಧ ಸಮರ ಸಾರಿದ ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಬಿ. ಕೃಷ್ಣಪ್ಪರಂತವರ ಪ್ರತಿಭಟನೆಯ ಹೆಜ್ಜೆಯಲ್ಲಿ ಸಹ ಹೆಜ್ಜೆ ಇಡುವುದರ



ಜೊತೆಗೆ ದಲಿತ ಸಂವೇದನೆಗಳನ್ನು ತಮ್ಮ ಸಂವೇದನೆಗಳಾಗಿ ಮಾರ್ಪಡಿಸಿಕೊಂಡು ನೂರಾರು ಭಾಷಣಗಳನ್ನು ಮಾಡಿ ದಲಿತೋದ್ಧಾರಕ್ಕೆ ಟೊಂಕ ಕಟ್ಟಿ ನಿಂತರು.

ಜಲತಜ್ಞರಾಗಿ ನೀರಿನ ಅಭಾವ ಕ್ಷಾಮದಂತಹ ವಿಷಮ ಪರಿಸ್ಥಿತಿಗಳು ಸಂಭವಿಸಿದಾಗ ಜಲ ಶಿಬಿರವನ್ನು ಏರ್ಪಡಿಸುವುದರ ಮೂಲಕ ಜಲರಕ್ಷಣೆ, ಜಲಸಂವರ್ಧನೆಗೆ ಪೂರಕವಾಗುವ ಪ್ರಜ್ಞೆಯನ್ನು ಅರುಹಿ ಜನಮಾನಸಕ್ಕೆ ಹತ್ತಿರವಾದ ಕೆ. ನಾರಾಯಣಸ್ವಾಮಿಯವರು, ದೇಶದ ಕೃಷಿ ಕ್ಷೇತ್ರ ಕ್ಷಾಮದಿಂದ ಬಿಕ್ಕಟ್ಟಿಗೆ ಸಿಕ್ಕಿ ಹಾಕಿಕೊಂಡಾಗ, ಗ್ರಾಮದ ರೈತರ ಉದ್ಧಾರದಲ್ಲಿ ದೇಶದ ಉದ್ಧಾರವಿದೆ ಎಂಬ ತತ್ತ್ವೋಕ್ತಿಯ ಬೆನ್ನು ಹಿಡಿದು, ಬರಗಾಲದಲ್ಲೂ ಭದ್ರತೆಯ ಭರವಸೆ ಮೂಡಿಸುವ 'ಸಿರಿಧಾನ್ಯ'ಗಳ ಮಹತ್ವವನ್ನು ಪ್ರತಿಪಾದಿಸಿದರು. ಬರೆಯುತ್ತ ಹೋದರೆ ಬರೆಸಿಕೊಳ್ಳುತ್ತಲೇ ಹೋಗುವ ಕೆ. ನಾರಾಯಣಸ್ವಾಮಿ ಯವರ ಪರಿಶುದ್ಧ ವ್ಯಕ್ತಿತ್ವಕ್ಕೆ ಕೊನೆ ಮೊದಲಿಲ್ಲ. ಆದರೂ ಶ್ರೀಯುತರ ಬದುಕಿನ ಸಾರ್ಥಕ ಕ್ಷಣಗಳನ್ನು ಕಟ್ಟಿಕೊಡುವ ಪ್ರಾಮಾಣಿಕ ಪ್ರಯತ್ನ ಸದರಿ ಅಭಿನಂದನಾ ಲೇಖನದ್ದು ಎನ್ನಲು ಹರ್ಷಿಸುತ್ತೇನೆ.







36

# A GENEROUS KANNADA TEACHER

**- Gopala Krishna**
Executive Director and Head
Preclinical & Competitive Intelligence

Purpose : It gives me an immense pleasure to write about my beloved teacher, Sri K. Narayana Swamy, regarding his life-long service to the community and most importantly, to the so called ''less'' privileged. I humbly wish to refer him as SIR in this letter. I have known SIR since 1972 (for nearly 42 years now), from when I joined my Pre-University course at the local college then known as Municipal First Grade College in Chintamani, now a part of Chikkaballapur district. He has been my model teacher ever since.

A brief self introduction : I am Gopala Krishna, born in 1956 in Kaiwara, a village in southern India. My parents, Mr. & Mrs. Channarayappa lived in a small house with little income from farming, particularly by rearing silkworm and selling cocoons. I was the third in a family of six children, studied



up to tenth grade in Kaiwara. As a young boy, I studied at night using kerosene lamps and under street lights, as there was no electricity in my home until 1966. I enjoyed helping my parents earn their livelihood from farming. At times, I also stayed in a few generous teachers' homes, so, I could learn more from the close association. I was first in my family to pass tenth grade with honors. I then, joined Municipal First Grade College in Chintamani to pursue Pre-University course and spent two years living independently in a small rental room with minimal amenities. During this time I was blessed with SIR's contact who was then a generous Kannada teacher for us.

My association with SIR and has contributions to my life : Being from a small village. I was like a fish out of water in Chintamani and did not know how to live independently. During this time. SIR was very generous and took me under his umbrella and provided necessary guidance so I could come up in my life. At the time, SIR was already helping many deserving poor youngsters. He treated me just like his own family member and introduced me to many senior students who had excelled in studies and gone onto higher University studies. He provided free books and study guides purchased from his own funds from "Gadag" publications, for example, so, we could study well and perform well in the exams, as these exams were crucial and stepping stone for higher University education. He also introduced me to several other teachers in core subjects (Physics, Chemistry. Maths, and Biology), for example : Mr. Subramaniyam, Mr. Bhasavaraj, Mr. Sathyanarayana, Mr. Muniyappa, Mr. Chikkasubba Reddy, Mr. Khan Gowri, Mr. Bhakthavathsalam, Mr. Suresh Babu, Mr. Chettyaar and many more. Of particular note. Mr. Bhakthavathsalam



tutored me the subject of mathematics at a discount rate based on a recommendation from SIR, SIR also helped me get college tution fee waiver based on my financial hardship.

SIR always believed in and practiced by the letter - the motto of "Serving to poor, the needy and the deserving, is like serving the LORD. He always did this from this heart and his family was fully supportive of it. He lived a simple life, with the wall-posters in his study room with messages of serving the poor and making a difference. As a young boy, SIR's selfless actions of serving the poor and the needy with uplifting measages and deeds, especially, the younger generation, the STUDENTS from the villages, touched my heart. This made me believe in education, the most important tool in eradicating the poverty, and gave me impetus to study well and excel. With constant mentoring by SIR, his help at multiple levels and with his introductions of me to other contacts, I studied well and passed out of Pre-University with honors. Following this, SIR also introduced me to another well-wisher from our region, Mr. B. Venkataswamy, who was a KEY officer then at the University of Agricultural Sciences, Bangalore, who later provided a helping hand and guidance to further excel at the University level and beyond.

The values, the role modeling, and the teachings I received from SIR formed a firm foundation in my life, so, I could excel. For example, this helped me to achieve first rank at the University level in Bangalore with a gold medal and I was one of three in the country to win a national overseas scholarship by the Indian Government to go abroad, particularly to the United States of America. This helped me open up a world of opportunities in my



life and put me in a position to give something back to the roots that I came from and serve the needy as much as possible, During my career of about 33 years in the United States, I have contributed to discovering, developing and bringing life-saving pharmaceutical drugs to the market, globally, so, I could make a difference to the "waiting" patient. I have been honored with multiple awards for my contributions. Most recently, The West Virginia University honored me with its highest honor as "the WVU Academy of Distringuished Alumni" for my contributions to the field of Genetics and Pharmaceuticals and making a difference in the lives of many globally and attaining national and international recognition in my profession and community.

I attribute my success and wellbeing to the foundation that SIR had instilled in me over 40 years ago. I am truly humbled, honored and thankful to the STARS that brought us together. I know SIR continues the mission of serving the poor through education. I wish him continued success so he can make a difference in the lives of many more, so poverty is eradicated and his vision of "all humans are created equal" would come a step closer to the reality. Again, I appreciate the opportunity to write this letter of commendation for well deserving beloved SIR.





37

# ಸಂವೇದನಾಶೀಲ ವ್ಯಕ್ತಿತ್ವ

– ಡಾ॥ ಕೆ.ಪಿ.ನಾರಾಯಣಪ್ಪ

ಪ್ರಾಧ್ಯಾಪಕರು, ಜಯನಗರ ನ್ಯಾಷನಲ್ ಕಾಲೇಜು

ಹಾಗೂ ಹವ್ಯಾಸಿ ಪತ್ರಕರ್ತರು

ಕೆ. ನಾರಾಯಣಸ್ವಾಮಿರವರ ಬಗ್ಗೆ ಬರೆಯಬೇಕೆಂದು ಕೊಂಡಾಗಲೆಲ್ಲಾ ಎಲ್ಲಿಂದ ಸುರು ಮಾಡಬೇಕೆಂಬ ಗೊಂದಲ ನನ್ನನ್ನು ಕಾಡತೊಡುಗುತ್ತದೆ. ಯಾಕೆಂದರೆ ಅವರನ್ನು ನಾನು ಮೊದಲು ಯಾವಾಗ ನೋಡಿದೆನೆಂಬ ಸಂಗತಿ ಸರಿಯಾಗಿ ನೆನಪು ಆಗುತ್ತಿಲ್ಲ. ಇದಕ್ಕಿಂತಲೂ ಮಿಗಿಲಾಗಿ ಅವರಿಗೆ ಮತ್ತು ನನಗೆ ಗಾಢವಾದ ಸಂಬಂಧ ಯಾವಾಗಿನಿಂದ ಬೆಳೆಯಿತು ಎಂಬುದೂ ಖಚಿತವಾಗಿ ಹೇಳಲಾಗುತ್ತಿಲ್ಲ. ಇಂತಹ ಗೊಂದಲಗಳ ನಡುವೆ ಒಂದು ತೀರ್ಮಾನಕ್ಕೆ ಬಂದು ಇದನ್ನು ಬರೆಯಲು ಮುಂದಾಗಿದ್ದೇನೆ. ಅವರನ್ನು ನಾವೆಲ್ಲಾ ಪ್ರೀತಿತುಂಬಿದ ಗೌರವದಿಂದ ಕರೆಯುವುದು ಕೆಎನ್‌ಎಸ್ ಸರ್ ಎಂದೇ, ಆದ್ದರಿಂದ ಇನ್ನು ಮುಂದೆ ನಾನು 'ಕೆಎನ್‌ಎಸ್' ಎಂದೇ ಬಳಸುತ್ತೇನೆ

ಒಂದಂತೂ ಖಚಿತ ಸರ್ ನನಗೆ ಪರಿಚಯವಾದದ್ದು ದಸಂಸದ ಹಿರಿಯ ಗೆಳೆಯರಾದ ಹ.ಮಾ. ರಾಮಚಂದ್ರ ಮತ್ತು ಕೊಮ್ಮಣ್ಣರವರ ಮೂಲಕ. ನನಗೆ ನೆನಪಿರುವಂತೆ, ನಾನು ಬಿಎ ತರಗತಿಯಲ್ಲಿದ್ದಾಗ ಗೌರಿಬಿದನೂರಿನಲ್ಲಿ ನೂತನವಾಗಿ ಪ್ರಾರಂಭವಾಗಿದ್ದ ಎಸ್ಸಿ ಎಸ್ಟಿ ಕಾಲೇಜು ಹಾಸ್ಟೆಲ್‌ನಲ್ಲಿ ಫ್ರೀ ಬೋರ್ಡ್‌ಆಗಿ ಇದ್ದೆ. ಆಗ ಒಂದು ಭಾನುವಾರದ ದಿನ ಕೆಎನ್‌ಎಸ್ ಸರ್ ಆ ಹಾಸ್ಟೆಲ್‌ಗೆ ಬಂದಿದ್ದರು. ರಾಮಚಂದ್ರಪ್ಪ ಮೇಸ್ಟ್ರು, ಕೊಮ್ಮಣ್ಣ ಮೇಸ್ಟ್ರು ಮತ್ತು ಹಾಸ್ಟೆಲ್ ವಾರ್ಡ್‌ನ್ ಆರ್‌ಆರ್‌ಕೆ ಇದ್ದರು. ಆ ದಿನದಂದು ಯಾವುದೋ ವಿಷಯದ ಬಗ್ಗೆ ಉಪನ್ಯಾಸ

ನೀಡಿದರು. ಅದು ಈಗ ಸರಿಯಾಗಿ ನೆನಪಿಲ್ಲ. ಇಷ್ಟಂತೂ ನೆನಪಿದೆ. ಕೆಎನ್‌ಎಸ್‌ರವರು ಶುಭ್ರವಾದ ಅಂಗಿ, ಬಿಳಿ ಪಂಚೆ ತೊಟ್ಟಿದ್ದರು. ಕೈಯಲ್ಲಿ ಯಾವುದೋ ಪುಸ್ತಕ ಅಥವಾ ನ್ಯೂಸ್ ಪೇಪರ್ ಹಿಡಿದಿದ್ದರು. ನಾವುಗಳು ನಮ್ಮ ಕಾಲೇಜುಗಳಲ್ಲಿ ಅಂಬೇಡ್ಕರ್ ಬಗ್ಗೆ ಮೇಷ್ಟ್ರುಗಳು ಪಾಠ ಮಾಡುತ್ತಿದ್ದ ಬಗ್ಗೆ ಸರ್‌ಗೆ ದೂರು ಕೊಟ್ಟೆವು. ಆಗ ದೇಜಗೌರವರ 'ಅಂಬೇಡ್ಕರ್ ಜೀವನ ಚರಿತ್ರೆಯ' ಪುಸ್ತಕ ನಮಗೆ ಪಠ್ಯವಾಗಿತ್ತು. ನಮ್ಮ ದೂರುಗಳನ್ನು ಸರ್ ಕೇಳಿಸಿಕೊಂಡು ತಲೆ ದೂಗಿದರು. ತೀಕ್ಷ್ಣವಾಗಿಯೇನು ಪ್ರತಿಕ್ರಿಯಿಸಲಿಲ್ಲ. ಆಗ ಇವರು ಗುಡಿಬಂಡೆಯ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದರು. ತಮ್ಮ ಹುಟ್ಟೂರಾದ ಹೊಸೂರಿಗೆ ಹೋಗಲು ಬಂದಿದ್ದರು. ಇದೇ ಸಮಯದಲ್ಲಿ ಹಾಸ್ಟೆಲ್ ವಿದ್ಯಾರ್ಥಿಗಳಾಗಿದ್ದ ನಮ್ಮನ್ನು ಭೇಟಿ ಮಾಡಿದರು.

ಇದಾದ ಮೇಲೆ ಅವರು ಗುಡಿಬಂಡೆಯುಲ್ಲಿದ್ದಾಗ ಎರಡು-ಮೂರು ಬಾರಿ ಅವರನ್ನು ದಲಿತ ಸಂಘರ್ಷ ಸಮಿತಿಯ ಕೆಲಸದ ನಿಮಿತ್ತ ಭೇಟಿ ಮಾಡಿದ್ದೆನು. ಒಂದು ಬಾರಿ ಮಾತ್ರ ಅವರ ಮನೆಯಲ್ಲೇ ರಾತ್ರಿ ಉಳಿದುಕೊಂಡಿದ್ದೆ. ಆದರೆ ಆಗ ನಮ್ಮ ನಡುವೆ ಹೆಚ್ಚು ಆತ್ಮೀಯತೆ ಇರಲಿಲ್ಲವಾದ್ದರಿಂದ ಹೆಚ್ಚು ಮಾತುಕತೆ ನಡೆಯಲಿಲ್ಲ.

ಅವರು ಅಲ್ಲಿಂದ ಗೌರಿಬಿದನೂರು ತಾಲ್ಲೂಕು ಕೋಟಾಲದಿನ್ನೆ ಸರ್ಕಾರಿ ಸ್ವತಂತ್ರ ಪದವಿ ಪೂರ್ವ ಕಾಲೇಜಿಗೆ ವರ್ಗವಾಗಿ ಬಂದ ಮೇಲೆ ನಾನು ಬಹುತೇಕ ನಿತ್ಯ ಭೇಟಿ ಮಾಡುತ್ತಿದ್ದೆನು. ಆಗ ಎಂಎ ಮುಗಿಸಿಕೊಂಡು ಬಂದು ಲೆಕ್ಚರರ್ ಆಗಿ ಕೆಲಸ ಮಾಡುತ್ತಿದ್ದೆ. ಅವರ ಮನೆಗೆ ಭೇಟಿ ನೀಡಿದಾಗಲೆಲ್ಲಾ ನನ್ನೊಂದಿಗೆ ರಾಮಚಂದ್ರಪ್ಪ ಮೇಷ್ಟ್ರು ಇರುತ್ತಿದ್ದರು. ಕೆಲವೊಮ್ಮೆ ನಾನು ಬಾಡಿಗೆಗೆ ಇದ್ದ ಕೆನರಾ ಬ್ಯಾಂಕ್ ಎದುರುಗಡೆಯ ಅಜ್ಜಪ್ಪ ಬಿಲ್ಡಿಂಗ್‌ನ ರೂಮಿಗೆ ಅವರೇ ಬರುತ್ತಿದ್ದರು. ಹೀಗೆ ಒಂದು ದಿನ ಅವರು ಬಂದು ನನ್ನ ರೂಮಿನ ಬಾಗಿಲು ಬಡಿದಾಗ ಅವರು ಎಂದು ತಿಳಿಯದೇ 'ಏ ಯಾರ್ರಿ ಅದು, ನಿಮಗೇನು ಕೆಲಸವಿಲ್ಲವೇ? ಎಂದು ಗಟ್ಟಿಯಾಗಿ ಕೂಗುತ್ತಾ ಬಾಗಿಲು ತೆರೆದಾಗ, ಅದನ್ನು ಕೇಳಿಸಿಕೊಂಡಿದ್ದ ಮೇಷ್ಟ್ರು ಏನೊಂದು ಭಾವಿಸಿದೆ, 'ಕೆಪಿ ಇದ್ದೀಯೇನಪ್ಪಾ ? ಎಂದು ತಣ್ಣಗೆ ಪ್ರಶ್ನಿಸಿದರು. ಆ ಕ್ಷಣದ ಹಿಂದೆ ಇದ್ದ ನನ್ನ ಕೋಪವೆಲ್ಲಾ ಕರಗಿ ಹೋಗಿ ತಣ್ಣಗಾಗಿ, ಅರಿಯದೆ ಮಾಡಿದ ತಪ್ಪಿಗೆ ಕ್ಷಮೆಯಾಚಿಸಿದೆ. 'ಇರಲಿ ಬಿಡಪ್ಪ' ಎಂದು ಸಮಾಧಾನಪಡಿಸಿ ಅವರು ಬಂದ ಉದ್ದೇಶವನ್ನು ತಿಳಿಸಿದರು.(ನನ್ನ ರೂಮ್ ಪಟ್ಟಣದ ಮಧ್ಯದಲ್ಲೇ ಇದ್ದುದರಿಂದ ದಸಂಸದ ಕಾರ್ಯಕರ್ತರು ಪದೇ ಪದೇ ಬರುತ್ತಿದ್ದರು. ಇದರಿಂದ ನನಗೆ ಒಂದು ನಿಮಿಷವೂ ಬಿಡುವಿರುತ್ತಿರಲಿಲ್ಲ)

### ಮೊಪೇಡ್ ಕೊಡಿಸಿದರು :

ಕೆಎನ್‌ಎಸ್‌ರವರು ಪ್ರಿನ್ಸಿಪಾಲರಾಗಿದ್ದ ಕೋಟಾಲದಿನ್ನೆ ಕಾಲೇಜಿನಲ್ಲಿದ್ದ ಕನ್ನಡ ಉಪನ್ಯಾಸಕರಿಗೆ ಬೇರೆಡೆಗೆ ವರ್ಗಾವಣೆಯಾದಾಗ ಅದು ಖಾಲಿಯಾಯಿತು. ಸದರಿ ಹುದ್ದೆಗೆ ಬರುವಂತೆ ನನಗೆ ಸರ್ ಆಹ್ವಾನಿಸಿದರು. ಆಗ ನಾನು ದೊಡ್ಡಬಳ್ಳಾಪುರದ



ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದದ್ದರಿಂದ ಅದು ಖಾಯಂ ಆಗುತ್ತದೆ ಎಂಬ ಭರವಸೆಯಿಂದ ತಡ ಮಾಡಿದೆ. ಆದರೂ ಅವರು ಬೇರೆಯವರಿಗೆ ನೀಡದೆ ನನಗಾಗಿ ಒಂದು ತಿಂಗಳು ಕಾಲ ಖಾಲಿ ಇರಿಸಿಕೊಂಡಿದ್ದರು. ತಿಂಗಳ ನಂತರ ಅಲ್ಲಿಗೆ ಹೋದಾಗ ನನ್ನನ್ನು ಪಾರ್ಟ್ ಟೈಮ್ ಉಪನ್ಯಾಸಕನಾಗಿ ನೇಮಕ ಮಾಡಿಕೊಂಡು ಆದೇಶ ಪತ್ರವನ್ನು ಸ್ವತಃ ತಾವೇ ಬರೆದು ನೀಡಿದರು. ಅದನ್ನು ನಾನು ಇಂದಿಗೂ ಹಾಗೆ ಇಟ್ಟುಕೊಂಡಿದ್ದೇನೆ. ಇಲ್ಲಿ ಅವರು ಕೆಲಸ ಮಾಡುತ್ತಿದ್ದ ರೀತಿ ನನಗಂತೂ ಅಚ್ಚರಿ ಉಂಟು ಮಾಡುತ್ತಿತ್ತು. ಹಾಗೆ ಕೆಲಸ ಮಾಡುವ ಒಬ್ಬ ಪ್ರಿನ್ಸಿಪಾಲರೂ ಈವರೆಗೂ ನನಗೆ ಸಿಕ್ಕಿಲ್ಲ. ಅವರು ಕಾಲೇಜಿಗೆ ಹಾಜರಾಗುತ್ತಿದ್ದ ರೀತಿ. ಕಾಲೇಜಿನ ಹೊರಗಡೆ, ಒಳಗಡೆ ವಿದ್ಯಾರ್ಥಿಗಳ ಶಿಸ್ತನ್ನು ಮೈನ್‌ಟೈನ್ ಮಾಡುತ್ತಿದ್ದ ರೀತಿ ಅನನ್ಯವಾದುದು, ಇತರರಿಗೆ ಮಾದರಿಯಾದುದು.

ನಾನು ಇಲ್ಲಿ ಮೂರುವರೆ ತಿಂಗಳ ಕಾಲ ಕೆಲಸ ಮಾಡಿದೆ. ಮೂರೂವರೆ ತಿಂಗಳ ನಂತರ ಬೇಸಿಗೆ ರಜೆ ಬಂದಿತು. ರಜೆ ಮುಗಿದ ಮೇಲೆ ಖಾಯಂ ಉಪನ್ಯಾಸಕರು ಅಲ್ಲಿಗೆ ವರ್ಗವಾಗಿ ಬಂದರು. ಇದರಿಂದ ನನ್ನ ಪಾರ್ಟ್‌ಟೈಂ ನೇಮಕಾತಿ ಕೊನೆಗೊಂಡಿತ್ತು. ಅಲ್ಲಿಂದ ನಾನು ಗೌರಿಬಿದನೂರು ಪಟ್ಟಣದಲ್ಲಿದ್ದ ನ್ಯಾಷನಲ್ ಕಾಲೇಜಿಗೆ ಬಿಜಿಎಂರವರ ನೆರವಿನಿಂದ ಪಾರ್ಟ್ ಟೈಂ ಲೆಕ್ಚರರ್‌ಆಗಿ ಕೆಲಸಕ್ಕೆ ಸೇರಿಕೊಂಡೆನು. ಆಗ ಪಾರ್ಟ್ ಟೈಮ್ ಉಪನ್ಯಾಸಕ ಕೆಲಸಕ್ಕೆ ಸರ್ಕಾರ ಕೇವಲ 400 ರೂಪಾಯಿಗಳನ್ನು ನೀಡುತ್ತಿತ್ತು. ಇದರ ವಿರುದ್ಧ ಯಾವುದೋ ಕಾಲೇಜಿನ ಉಪನ್ಯಾಸಕರು ಕೋರ್ಟಿಗೆ ಹೋಗಿದ್ದರಿಂದ ಸಂಬಳವನ್ನು 1890 ರೂಗಳು ನೀಡಬೇಕೆಂದು ಕೋರ್ಟ್ ಆದೇಶ ಮಾಡಿತ್ತು. ಅದರ ಪ್ರತಿಯನ್ನು ಗೆಳೆಯ ಡಾ॥ಆರ್.ಗೋಪಾಲಕೃಷ್ಣರವರು ನನಗೆ ನೀಡಿದರು. ಅದನ್ನು ಸರ್‌ಗೆ ನೀಡಿದೆ. ಅವರು ಅನುಮಾನದಿಂದಲೇ ಅದನ್ನು ತೆಗೆದುಕೊಂಡು ಕಡತವನ್ನು ಸಿದ್ಧ ಮಾಡಿ ಇಲಾಖೆಗೆ ಕಳುಹಿಸಿಕೊಟ್ಟರು. ಇವರು ಸಿದ್ಧಪಡಿಸಿ ಕಳುಹಿಸಿಕೊಟ್ಟ ಕಡತವು ಸರಿಯಾಗಿಯೇ ಇರುತ್ತದೆ ಎಂದು ಇಲಾಖೆಯ ಅಧಿಕಾರಿಗಳು ಭಾವಿಸಿರಬೇಕು. ಆದ್ದರಿಂದಲೇ ನಾನು ಆ ಕಾಲೇಜಿನಲ್ಲಿ ಮಾಡಿದ ಮೂರೂವರೆ ತಿಂಗಳ ಕೆಲಸಕ್ಕೆ ಸುಮಾರು ಆರೂವರೆ ಸಾವಿರ ರೂಪಾಯಿಗಳ ಬಾಕಿ ವೇತನ ಬಂದಿತು. ಇದರಿಂದ ಸಂತೋಷಗೊಂಡ ಮೇಸ್ಟ್ರು ಅದನ್ನು ಸಿಕ್ಕ ಸಿಕ್ಕ ದಸಂಸ ಗೆಳೆಯರಿಗೆಲ್ಲಾ ಹೇಳಿಬಿಟ್ಟರು. ಅದು ನನಗೆ ಪೀಕಲಾಟಕ್ಕೆ ಇಟ್ಟುಕೊಂಡು ಬಿಟ್ಟಿತು. ಆಗಿನ್ನೂ ಅವಿವಾಹಿತನಾಗಿದ್ದ ನನಗೆ ಅಷ್ಟು ಹಣದ ಅವಶ್ಯಕತೆ ಇರುವುದಿಲ್ಲ ಎಂದು ಭಾವಿಸಿ ದಸಂಸ ಗೆಳೆಯರು ಯಾರ್‍ಯಾರು ನನ್ನಿಂದ ಸಾಲ ಕೇಳುತ್ತಾರೋ ! ಅವರು ಕೇಳಿದಾಗ ಕೊಡದಿದ್ದರೆ ಅವರು ಎಲ್ಲಿ ಬೇಸರಪಟ್ಟುಕೊಳ್ಳುತ್ತಾರೋ ಎಂಬ ಭೀತಿ ನನ್ನನ್ನು ಕಾಡತೊಡಗಿತು. ಆದ್ದರಿಂದ ಒಂದು ಉಪಾಯ ಹೊಳೆಯಿತು. ಅದರಂತೆ ಅದರಲ್ಲಿನ ಆರು ಸಾವಿರ ರೂಪಾಯಿಗಳನ್ನು ಕೊಟ್ಟು 'ಅವಂತಿ' ಎಂಬ ಮೊಪೇಡನ್ನು ಖರೀದಿಸಿದೆನು.

ಅದುವರೆಗೂ ಇದ್ದ ನನ್ನ ಸೈಕಲ್ ಸವಾರಿ ನಿಂತು ಹೋಗಿ ಪೆಟ್ರೋಲ್ ದ್ವಿಚಕ್ರವಾಹನ ಸವಾರಿ ಪ್ರಾರಂಭವಾಯಿತು. ಹಂತ ಹಂತವಾಗಿ ಅದು ಬದಲಾದದ್ದು ಉಂಟು. ಪಾರ್ಟ್‌ಟೈಂ ಲೆಕ್ಚರರ್ ಆಗಿದ್ದ ನಾನು ಅವಂತಿ ಮೊಫೇಡ್‌ನಲ್ಲಿ ತಿರುಗಾಡುತ್ತಿದ್ದದನ್ನು ಕಂಡು ಕೆಲವು ಖಾಯಂ ಉಪನ್ಯಾಕರು ಅಚ್ಚರಿ ವ್ಯಕ್ತಪಡಿಸಿದರು. ಯಾಕೆಂದರೆ ಹಲವು ಮಂದಿ ಖಾಯಂ ಉಪನ್ಯಾಸಕರು ಆಗ ಸೈಕಲ್‌ನಲ್ಲಿ ಕಾಲೇಜಿಗೆ ಬರುತ್ತಿದ್ದರು. ಆದರೆ ಆ ನನ್ನ ಮೊಪೇಡ್ ಖರೀದಿಯ ಗುಟ್ಟು ಮಾತ್ರ ನನಗೆ ಕೆಎನ್‌ಎಸ್ ಸರ್‌ರವರಿಗೆ ಮಾತ್ರ ಗೊತ್ತಿತ್ತು. ಹೀಗೆ ನಾನು ಮೊಫೇಡ್ ಖರೀದಿಸಲು ನನಗೆ ಪರೋಕ್ಷವಾಗಿ ನೆರವಾದವರು ಇವರು.

## ಸಂವೇದನಾಶೀಲತೆ

ಇದರ ಮೂಲಕ ನಾನು ಏನು ಹೇಳಲು ಬಯಸುತ್ತಿದ್ದೇನೆ ಎಂದರೆ, ತಮ್ಮ ಅತ್ಮೀಯ ವಲಯಕ್ಕೆ ಸೇರಿದವರಿಗೆ ಯಾರಿಗಾದರೂ ಒಳಿತಾದಾಗ ಸದರಿ ವ್ಯಕ್ತಿಗಿಂತಲೂ ಮಿಗಿಲಾಗಿ ಇವರು ಆನಂದವನ್ನು ಪಡುತ್ತಿದ್ದರು. ಹಾಗೆಯೇ ತೊಂದರೆಗೆ ಸಿಲುಕಿದಾಗ ಅವರಿಗಿಂತಲೂ ಇವರೇ ಹೆಚ್ಚು ನೋವನ್ನು ಅನುಭವಿಸುತ್ತಾರೆ. ಅದನ್ನು ತಮ್ಮ ಆತ್ಮೀಯ ವಲಯದೆಲ್ಲರಿಗೂ ಹಂಚುತ್ತಾರೆ. ಹಲವು ಬಾರಿ ಅವರ ಬಗ್ಗೆ ಅನುಕಂಪ ವ್ಯಕ್ತಪಡಿಸುತ್ತಾರೆ. ತಮ್ಮಿಂದಾದರೆ ಅದನ್ನು ಪರಿಹರಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಾರೆ. ಆಗದಿದ್ದರೆ ಯಾರಿಂದ ಆಗುತ್ತದೆ ಎಂದು ಶೋಧ ನಡೆಸುತ್ತಾರೆ. ಅದರ ಮೂಲಕ ಪರಿಹರಿಸಲು ಪ್ರಯತ್ನಿಸುತ್ತಾರೆ. ಇಂತಹ ಅಂತಃಕರಣ ಪೂರ್ವಕ ಅವರ ಆಲೋಚನೆಯು ಎಲ್ಲಾ ಎಲ್ಲೆಗಳನ್ನು ಮೀರಿದ್ದು, ಅದು ನನ್ನ ಬಗ್ಗೆಯಾಗಬಹುದು, ವೇಣುಗೋಪಾಲ್‌ಸರ್‌ರವರ ಬಗ್ಗೆಯಾಗಬಹುದು. ದಸಂಸದ ಗಡ್ಡಂ ವೆಂಕಟೇಶಣ್ಣ, ಮುನಿಸ್ವಾಮಣ್ಣ, ಕೆ.ರಾಮಯ್ಯ, ಸಿ.ಜಿ. ಗಂಗಪ್ಪ, ಮ.ನಾ.ಕೃಷ್ಣಮೂರ್ತಿಯವರ ಬಗ್ಗೆಯಾಗಬಹುದು, ಹೀಗೆ ಎಂದು ಹೇಳಲಿಕ್ಕೆ ಆಗುವುದಿಲ್ಲ. ಆತ್ಮೀಯರಿಗೆ ಕಷ್ಟ ಒದಗಿದ ವಿಷಯ ಇವರಿಗೆ ತಿಳಿದರೆ ಸಾಕು ಅದನ್ನು ಆತ್ಮೀಯ ವಲಯದಲ್ಲಿ ಹಂಚಿಕೊಂಡು ಪರಿಹಾರ ಕಂಡುಕೊಳ್ಳಲು ಮುಂದಾಗುತ್ತಾರೆ. ಇದರಿಂದ ಅವರಿಗೆ ವೈಯಕ್ತಿಕವಾಗಿ ಆಗುವ ಆರ್ಥಿಕ ನಷ್ಟದ ಬಗ್ಗೆ ಕಿಂಚಿತ್ತೂ ಚಿಂತಿಸುವುದಿಲ್ಲ.

ಸಂತೋಷವಾದಾಗಲೂ ಹಾಗೆಯೇ ಅದನ್ನು ಹತ್ತಾರು ಜನರಿಗೆ (ಆತ್ಮೀಯ ವಲಯದ) ಹಂಚಿ ಅದನ್ನು ಸಂಭ್ರಮಿಸುವಂತೆ ಮಾಡುತ್ತಾರೆ. ನನಗೆ ಪಿಎಚ್‌ಡಿ ಪದವಿ ದೊರೆತಾಗ, ಮೊದಲು ಸರ್‌ಗೆ ಫೋನ್ ಮಾಡಿ ಹೇಳಿದೆನು. ಖುಷಿಪಟ್ಟರು. ನಂತರ ಒಂದು ದಿನದ ಬಳಿಕ ಫೋನ್ ಮಾಡಿ 'ಒಂದು ಫಂಕ್ಷನ್ ಮಾಡಿ ನಿನಗೆ ಸನ್ಮಾನ ಮಾಡಬೇಕಪ್ಪ' ಎಂದರು. 'ಫಂಕ್ಷನ್ ಏನೂ ಬೇಡ ಸರ್ ನಿಮ್ಮ ಆಶೀರ್ವಾದವೇ ನನಗೆ ಫಂಕ್ಷನ್ ಇದ್ದಂತೆ' ಎಂದು ನಾನು ಭಾವುಕನಾಗಿ ಹೇಳಿದೆ, ಅದಕ್ಕೆ ಅವರು 'ಅಂಗಲ್ಲಾ ನೀನು ಸುಮ್ಮನಿರು ಸಿದ್ದರಾಮಯ್ಯನವರನ್ನು (ಸಿದ್ದರಾಮಯ್ಯರವರು ಆಗ ಇನ್ನೂ ಮುಖ್ಯಮಂತ್ರಿ ಆಗಿರಲಿಲ್ಲ) ಕರೆಸಿ ಫಂಕ್ಷನ್ ಮಾಡಬೇಕು. ನಾನು ಸಿಜಿಗೆ,



ಲೆಂಕಪ್ಪನಿಗೆ ಹೇಳ್ತಿನಿ, ಡಿಎಸ್ಎಸ್ ಮತ್ತು ಕುರುಬರ ಸಂಘ ಎರಡೂ ಸೇರಿಸಿ ಒಂದು ದೊಡ್ಡ ಫಂಕ್ಷನ್ ಮಾಡೋಣ' ಎಂದು ಹೇಳಿ ನನ್ನ ಬಾಯಿ ಮುಚ್ಚಿಸಿದರು. ಹೀಗೆ ಯಾರೇ ಆಗಲಿ ಸಾಧನೆಯನ್ನು ಮಾಡಿದರು ಅಥವಾ ಯಾರಿಗಾದರೂ ಒಳ್ಳೆಯ ಪದವಿ ದೊರೆಯಿತು, ಸಮಾಜದಲ್ಲಿ ಉತ್ತಮ ಸ್ಥಾನ ದೊರೆಯಿತು ಎಂದು ಗೊತ್ತಾದರೆ ಸಾಕು ಅದಕ್ಕೆ ತಕ್ಷಣ ತೀಕ್ಷ್ಣವಾಗಿ ಸ್ಪಂದಿಸುತ್ತಾರೆ. ಪರಕಾಯ ಪ್ರವೇಶ ಮಾಡಿ ಮನಸ್ಸಾರೆ ಆನಂದಿಸುತ್ತಾರೆ. ಅದು ನೋವಾಗಿದ್ದರೆ ಸಂಕಟಪಡುತ್ತಾರೆ. ಆ ವಿಷಯದಲ್ಲಿ ಲಾಭ ನಷ್ಟಗಳ ಲೆಕ್ಕವನ್ನು ಹಾಕುವುದಿಲ್ಲ. ಲಾಭ ನಷ್ಟವಷ್ಟೇ ಅಲ್ಲ ಮತ್ಯಾವುದನ್ನೂ ಪರಿಗಣಿಸುವುದಿಲ್ಲ. ಎಲ್ಲವೂ ಗೌಣ. ಪಂಪ ಹೇಳಿದಂತೆ ಇವರಲ್ಲೂ 'ಗುಣಕ್ಕೆ ಮತ್ಸರವಿಲ್ಲ' ಇವರ ಇಂತಹ ಸ್ವಭಾವದಿಂದಲೇ ಅವಿಭಜಿತ ಕೋಲಾರ ಜಿಲ್ಲೆಯ ಹಲವು ಮಂದಿ ಹಲವು ತರಹದ ಅನುಕೂಲಗಳನ್ನು ಪಡೆದಿದ್ದಾರೆ ಎಂಬುದು ಕಟುಸತ್ಯ.

## ಸ್ತ್ರೀವಾದಿ

ಇವರು ಸ್ವಭಾವತಃ ಸ್ತ್ರೀವಾದಿ. ಮಹಿಳೆಯರು ಶೋಷಿತರಲ್ಲೇ ಶೋಷಿತರು ಎಂಬುವುದು ಇವರ ವಾದ. ಇದಕ್ಕೆ ಹತ್ತು ಹಲವು ನಿದರ್ಶನಗಳನ್ನು ನೀಡುತ್ತಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಇವರ ಬಳಿ ಅಪಾರವಾದ ಸಾಹಿತ್ಯವಿದೆ. ಇತ್ತೀಚೆಗೆ ಜ್ವಲಂತ ಸಮಸ್ಯೆಗಳಾಗಿರುವ ಕೃಷಿ, ಪರಿಸರ, ನೆಲ, ಜಲ ಎಂಬ ವಿಷಯಗಳ ಕಡೆ ಇವರು ಮನಸ್ಸು ಹೊರಳಿರುವುದರಿಂದ ಸ್ತ್ರೀವಾದಿ ಚಿಂತನೆಗಳನ್ನು ಬದಿಗೆ ಸರಿಸಿದ್ದಾರೆ. ಹಾಗಂತ ಸದರಿ ವಿಷಯವನ್ನು ಮರೆತಿದ್ದಾರೆ ಎಂದೂ ಭಾವಿಸುವಂತಿಲ್ಲ. ಈ ವಿಷಯಕ್ಕೆ ಸಂಬಂಧಿಸಿದಂತೆ ಇವರ ಚಿಂತನೆ ಬದಲಾಗಿಲ್ಲ. ಇವರು ಹೆಣ್ಣು ಮಕ್ಕಳನ್ನು ಮಾತನಾಡಿಸುವುದರಲ್ಲೇ ಇವರ ಧೋರಣೆ ವ್ಯಕ್ತವಾಗುತ್ತದೆ. ನಾನು ಅದನ್ನು ಸೂಕ್ಷ್ಮವಾಗಿ ಗಮನಿಸಿ ಅದನ್ನು ಅನುಕರಿಸುತ್ತಿದ್ದೇನೆ. ಇಂದಿಗೂ ಅದರ ಅನುಕರಣೆ ಮುಂದುವರೆದಿದೆ. ಇದರಲ್ಲಿ ನನಗೆ ಉತ್ತಮ ಪ್ರತಿಕ್ರಿಯೆ ದೊರೆತಿರುವುದರ ಜೊತೆಗೆ ನಾನು ಇದರಲ್ಲಿ ಯಶಸ್ಸು ಗಳಿಸಿದ್ದೇನೆ. ಇಂತಹ ಪ್ರಭಾವಿ ವ್ಯಕ್ತಿತ್ವವನ್ನು ಹೊಂದಿರುವ ಸರ್ ಹಲವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿದ್ದಾರೆ. ದಸಂಸದ ಮೇಲೆ ಇವರು ಮೂಡಿಸಿರುವ ಛಾಪು ಇಂದಿಗೂ ಸಂಘಟನೆಯ ಪ್ರಾರಂಭದ ದಿನಗಳಲ್ಲಿದ್ದ ನಾಯಕರ ಚಿಂತನೆಗಳಲ್ಲಿ ಕಾಣಬಹುದಾಗಿದೆ.

ನನಗೆ ಗೌರಿಬಿದನೂರಿನಿಂದ ಬೆಂಗಳೂರಿಗೆ ವರ್ಗಾವಣೆಯಾದಾಗ ಮೇಸ್ಟ್ರು ಬಹಳ ಚಿಂತೆಗೆ ಒಳಗಾದರು. 'ನೀನು ಇಲ್ಲಿ ಇಲ್ಲದೆ ಹೋದರೆ ನನಗೆ ದಿಕ್ಕೇತೋಚಲ್ಲ, ಎಂದು ಬೇಸರಪಟ್ಟುಕೊಂಡರು. 'ಬದಲಾವಣೆ ಆಗುವ ಹಾಗಿದ್ದರೆ ನೋಡಪ್ಪ, ಇಲ್ಲಿಗೇ ವಾಪಸ್ಸು ಬಂದು ಬಿಡು. ನಾನು ಏನಾದರೂ ಬರೆದರೆ ಇನ್ನು ಮ್ಯಾಲೆ ಯಾರಿಗೆ ತೋರಿಸಲಿ. ಇಲ್ಲಿ ಯಾರೂ ಅಂತಹವರು ಇಲ್ಲವಲ್ಲಪ್ಪ' ಎಂದು ವ್ಯಥೆಪಟ್ಟರು. ಹಾಗೆ ನೋಡಿದರೆ, ನನಗೆ ಬೆಂಗಳೂರಿಗೆ ವರ್ಗಾವಣೆಯಾಗಲು ಅವರ ಪ್ರಭಾವವೇ ಕಾರಣ.



ಅವರು ವಾಣಿಜ್ಯ ತೆರಿಗೆ ಇಲಾಖೆಯ ಸಹಾಯಕ ಆಯುಕ್ತ ಎಚ್. ವೇಣುಗೋಪಾಲ್‌ರವರ ಬೆನ್ನತ್ತಿ ವರ್ಗಾವಣೆ ಮಾಡಿಸಿದರು. ಅವರು ಬಯಸಿದ್ದು ಗೌರಿಬಿದನೂರು ನ್ಯಾಷನಲ್ ಕಾಲೇಜಿನಿಂದ ಅದೇ ಪಟ್ಟಣದಲ್ಲಿರುವ ಸರ್ಕಾರಿ ಕಾಲೇಜಿಗೆ ನನಗೆ ತಾತ್ಕಾಲಿಕ ನಿಯೋಜನೆಯಾಗಬೇಕೆಂದು, ಆದರೆ ಅವರ ಯೋಜನೆ ತಿರುಗುಮುರುಗಾಗಿ ನನಗೆ ಬೆಂಗಳೂರಿಗೆ ವರ್ಗ ಆದಾಗ ತೀವ್ರ ಅಸಂತೃಪ್ತಿ ವ್ಯಕ್ತಪಡಿಸಿದರು. ಆದರೆ ನನ್ನ ಮಡದಿ ಮಕ್ಕಳಿಗೆ ಬೆಂಗಳೂರಿನ ಮೇಲೆ ಹುಟ್ಟಿದ ಮೋಹ, ನನಗೆ ಮಕ್ಕಳ ಶಿಕ್ಷಣದ ಬಗ್ಗೆ ಮೂಡಿದ ಕಾಳಜಿಯಿಂದಾಗಿ ನಾನು ಮೇಸ್ಟ್ರ ಸಲಹೆಯನ್ನು ಒಂದು ರೀತಿಯಲ್ಲಿ ನಿರ್ದಾಕ್ಷಿಣ್ಯವಾಗಿಯೇ ನಿರಾಕರಿಸಿ ಬೆಂಗಳೂರಿಗೆ ಬರುವಂತಾಯಿತು. ಆದರೂ ಮೇಸ್ಟ್ರು ನಿತ್ಯ ಅಥವಾ ಆಗಾಗ್ಗೆ ಫೋನ್ ಮಾಡುವುದನ್ನು ಮಾತ್ರ ಬಿಡಲಿಲ್ಲ. ನಾನೂ ಅಷ್ಟೆಯೇ! ಇದರ ಜೊತೆಗೆ ಅಭಿನಂದನಾ ಗ್ರಂಥದ ಕೆಲಸ ಮಾಡಲು ನನಗೆ ಸಮಯ ದೊರೆಯಿತು. ಇದು ಪರಿಪೂರ್ಣವಾಗಿ ಪ್ರಕಟಗೊಂಡರೆ ನನ್ನ ಬದುಕಿನ ಬಹುದೊಡ್ಡ ಕೆಲಸವೊಂದು ಮಾಡಿದ ಸಂತೃಪ್ತಿ ನನಗೆ ದೊರೆಯುತ್ತದೆ.





38

# ಕಾಲೇಜಿನ ರಾಣಿ ಜೇನು

– ಟಿ. ಕೃಷ್ಣಪ್ಪ
ನಿವೃತ್ತ ಅಧ್ಯಾಪಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಬಾಗೇಪಲ್ಲಿ

ಎಲ್ಲ ವಿದ್ಯಾರ್ಥಿಗಳ ಜೀವನದಲ್ಲಿ ಪರೀಕ್ಷೆಗಳು ಎಲ್ಲ ಹಂತಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ ಎಂಬುದು ನಿರ್ವಿವಾದ ಮಜಲು. ಪರೀಕ್ಷೆಗಳಲ್ಲೂ ಹಲವಾರು ವಿಧ. ಮೌಖಿಕ, ಲಿಖಿತ ಮತ್ತು ಪ್ರಾಯೋಗಿಕ ಪರೀಕ್ಷೆಗಳು.

ಇಲ್ಲಿ ನಾನು ಪ್ರಸ್ತಾಪ ಮಾಡಲಿಚ್ಛಿಸುವುದು ಪ್ರೌಢಶಾಲೆಗೆ ಸಂಬಂಧಿಸಿದ ಪರೀಕ್ಷೆ. ವಿದ್ಯಾರ್ಥಿಯ ಪ್ರಗತಿಯನ್ನು ಅಳೆಯಲು ಬಳಸುವ, ಬಳಸುತ್ತಿದ್ದ ಒಂದು ಪ್ರಮುಖ ಮಾನದಂಡ. ಇದು ಯೂನಿಟ್ ಕಿರು ಪರೀಕ್ಷೆ ಆಗಿರಬಹುದು, ಪ್ರತಿಪಾಠದ ಕೊನೆಯಲ್ಲಿ ನಡೆಸಬಹುದಾದ ಪರೀಕ್ಷೆ ಆಗಿರಬಹುದು, ಅರ್ಧವಾರ್ಷಿಕ ಪರೀಕ್ಷೆ ಆಗಿರಬಹುದು, ಪೂರ್ವ ಸಿದ್ಧತಾ ಪರೀಕ್ಷೆ ಆಗಿರಬಹುದು ಮತ್ತು ಮುಂದಿನ ತರಗತಿಗೆ ವಿದ್ಯಾರ್ಥಿಯನ್ನು ಕಳುಹಿಸಲು ಮಾಡುವ ವಾರ್ಷಿಕ ಪರೀಕ್ಷೆ ಆಗಿರಬಹುದು.

ಈ ಪರೀಕ್ಷೆಗಳಲ್ಲಿ 10ನೇ ತರಗತಿಗೆ ಅಥವಾ ಎಸ್.ಎಸ್.ಎಲ್.ಸಿ.ಗೆ ನಡೆಯುವ ಪರೀಕ್ಷೆ ಬಹಳ ಮಹತ್ತರವಾಗಿರುತ್ತದೆ. ಈ ಪರೀಕ್ಷೆಗೆ ವಿದ್ಯಾರ್ಥಿಗಳನ್ನು ತಯಾರು ಮಾಡುವ ತಾಲೀಮು ಎಲ್ಲಾ ಶಾಲೆಗಳಲ್ಲಿ ಅತ್ಯಂತ ಶ್ರದ್ಧೆಯಿಂದ ನಡೆಯುತ್ತದೆ. ಪ್ರತಿಯೊಂದು ಶಾಲೆಯಲ್ಲಿರುವ ಪ್ರಾಂಶುಪಾಲರಾಗಲಿ / ಮುಖ್ಯ ಶಿಕ್ಷಕರಾಗಲಿ / ಉಪ ಪ್ರಾಂಶುಪಾಲರಾಗಲಿ ಮತ್ತು ಸಹ ಶಿಕ್ಷಕರಾಗಲಿ ಎಲ್ಲರೂ ಒಟ್ಟಿಗೆ ಕಲೆತು ತಮ್ಮದೇ ಆದ



ಯೋಜನೆಗಳನ್ನು ಅವುಗಳ ರೂಪುರೇಷೆಗಳನ್ನು ತಯಾರಿಸಿ, ಶಿಕ್ಷಕರ ಸಭೆಗಳಲ್ಲಿ ಮಂಡಿಸಿ, ಚರ್ಚಿಸಿ ಸೂಕ್ತ ಯೋಜನೆಯನ್ನು ಕಾರ್ಯಗತಗೊಳಿಸಲು ಸಿದ್ಧರಾಗುತ್ತಾರೆ. ಇತ್ತೀಚೆಗಂತೂ ಇದರ ಮಹತ್ವ ಹೆಚ್ಚಾಗುತ್ತಿದೆ.

ಶಿಕ್ಷಣ ಕ್ಷೇತ್ರದಲ್ಲಿ ತಮ್ಮನ್ನು ತಾವು ಸಕ್ರಿಯವಾಗಿ ತೊಡಗಿಸಿಕೊಂಡಿರುವವರಿಗೆ ವೇದ್ಯವಾಗಿರುವ ವಿಷಯವೇ ಸರಿ. ಇದರಲ್ಲಿ ಈಗ ಮಹತ್ವ ಏನೂ ಅನ್ನಿಸುವುದಿಲ್ಲ. ಈ ಅನಿಸಿಕೆಗಳನ್ನು ಬರೆಯುತ್ತಿರುವ ಶಿಕ್ಷಕ ವೃಂದದಲ್ಲಿ ಓರ್ವನಿಂದ ನಾನು ಅಂದಿನ ಕೋಲಾರ ಜಿಲ್ಲೆಗೆ ಸೇರಿದ ಅತ್ಯಂತ ಹಿಂದುಳಿದ ತಾಲ್ಲೂಕಾಗಿದ್ದ ಬಾಗೇಪಲ್ಲಿಯ ಸರ್ಕಾರಿ ಕಿರಿಯ ಕಾಲೇಜಿಗೆ 1975ರಲ್ಲಿ ಪ್ರಾಂಶುಪಾಲರಾಗಿ ಬಂದ ಶ್ರೀಯುತ ಕೆ. ನಾರಾಯಣಸ್ವಾಮಿಯವರ ನೇತೃತ್ವದಲ್ಲಿ ಕೆಲಸ ನಿರ್ವಹಿಸುವ ಒಂದು ಸುವರ್ಣಾವಕಾಶವು ಒದಗಿತ್ತು. ಶ್ರೀಯುತರು ಈ ಹುದ್ದೆಯನ್ನು ಅಲಂಕರಿಸುವುದಕ್ಕೆ ಮೊದಲು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಂತಾಮಣಿ, ಕೋಲಾರ ಜಿಲ್ಲೆಯಲ್ಲಿ ಕನ್ನಡ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸಿದ್ದ ಉತ್ತಮ ಅನುಭವಿಗಳಾಗಿದ್ದರು. ತಮ್ಮ ಹೊಸ ಉದ್ಯೋಗದ ಚುಕ್ಕಾಣಿಯನ್ನು ತಮ್ಮ ಕೈಗೆ ತೆಗೆದುಕೊಳ್ಳುವುದಕ್ಕೆ ಮುನ್ನವೇ ಅದಕ್ಕೆ ಸಂಬಂಧಿಸಿದ ಬಹುತೇಕ ಮಾಹಿತಿಯನ್ನು ತಿಳಿದುಕೊಂಡು ಬಂದಿದ್ದರು. ಇದರಿಂದ ಇವರ ಮುಂದಿನ ಆಡಳಿತಕ್ಕೆ ಉತ್ತಮ ನಾಂದಿಯಾಯಿತು.

ಇದೊಂದು ಸಂಯುಕ್ತ ಪದಪೂರ್ವ ಕಾಲೇಜಾಗಿದ್ದರಿಂದ ಇದರಲ್ಲಿ ಪ್ರೌಢಶಾಲೆ ಮತ್ತು ಕಿರಿಯ ಕಾಲೇಜುಗಳು ಎರಡೂ ಇದ್ದವು. ಎರಡಕ್ಕೂ ಒಬ್ಬರೇ ಪ್ರಾಂಶುಪಾಲರು ಕರ್ತವ್ಯ ನಿರ್ವಹಿಸುತ್ತಿದ್ದರು. ವಿದ್ಯಾರ್ಥಿಗಳ ಸಂಖ್ಯೆ 900ಕ್ಕೂ ಮೇಲ್ಪಟ್ಟು ಇತ್ತು. ಪ್ರತಿ ವರ್ಷ ಪ್ರೌಢಶಾಲೆಯ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ಮತ್ತು ಕಿರಿಯ ಕಾಲೇಜಿನ ದ್ವಿತೀಯ ವರ್ಷದ ವಿದ್ಯಾರ್ಥಿಗಳಿಗೆ ಪಬ್ಲಿಕ್ ಪರೀಕ್ಷೆಗಳು ನಡೆಯುತ್ತಿದ್ದು, ಈ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸಬೇಕಾದ ಪ್ರಮುಖವಾದ ಜವಾಬ್ದಾರಿ ಅವರ ಹೆಗಲ ಮೇಲೆ ಇತ್ತು. ಏಕೆಂದರೆ ಅಗಾಧವಾದ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಸುಮಾರು ಐವತ್ತಕ್ಕೂ ಮೇಲ್ಪಟ್ಟು ಶಿಕ್ಷಕರ / ಉಪನ್ಯಾಸಕರ / ಸಿಬ್ಬಂದಿ ವರ್ಗದವರ ನಿರ್ವಹಣೆ ಮಾಡಬೇಕಾಗಿದ್ದು, ಸಂಸ್ಥೆಯ ಕಿಂಗ್‌ಪಿನ್ ಆಗಿದ್ದರು. ಇವರ ಜೊತೆಗೆ ಪೋಷಕರ, ಸಮಾಜದ ಮತ್ತು ಇಲಾಖೆಯ ಜೊತೆಗೆ ಸಾಮರಸ್ಯ, ಸಮತೋಲನ, ನ್ಯಾಯ, ಪಾರದರ್ಶಕತೆ ಇತ್ಯಾದಿಗಳನ್ನು ಕಾಪಾಡಿಕೊಂಡು ಹೋಗುವ ಜವಾಬ್ದಾರಿಯೂ ಇತ್ತು.

ಈಗ ನಾನು ಸಾದರಪಡಿಸುವ ವಿಷಯ ಪ್ರೌಢಶಾಲೆಗೆ ಹೆಚ್ಚಾಗಿ ಅನ್ವಯವಾಗುತ್ತದೆ. ಅದರಲ್ಲೂ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ಕೇಂದ್ರವನ್ನಾಗಿಸಿಕೊಳ್ಳುತ್ತದೆ. ಸರ್ಕಾರಿ ಶಾಲೆಗಳೆಂದರೆ ಹೆಚ್ಚಿನ ಪೋಷಕರು, ಸಮಾಜ ಒಂದು ಬಗೆಯ ಅನಾದರಣೆ ತೋರುತ್ತಿದ್ದು,



ಅವರ ಕೆಂಗಣ್ಣಿಗೆ ಗುರಿಯಾಗಬೇಕಾಗುತ್ತಿತ್ತು. ಹೆಚ್ಚಿನ ಪೋಷಕರು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಸರ್ಕಾರಿ ಶಾಲೆಗಳನ್ನೇ ಅವಲಂಬಿಸಬೇಕಾಗಿತ್ತು. ಇವರಲ್ಲಿ ಹೆಚ್ಚಿನ ಪೋಷಕರು ಅವಿದ್ಯಾವಂತರು ಮತ್ತು ಕಡಿಮೆ ಓದಿದವರಾಗಿದ್ದು ತಮ್ಮ ಮಕ್ಕಳನ್ನು ಮನೆಯಲ್ಲಿ ಓದಿಸಲು ಆಗುತ್ತಿರಲಿಲ್ಲ. ಅಂದು ಅವರು ಮಾಡಿದ ಬಹು ಮುಖ್ಯ ಪುಣ್ಯ ಕಾರ್ಯವೆಂದರೆ ಎಷ್ಟೋ ಅರಳುವ ಪ್ರತಿಭೆಗಳು ಮುರುಟಿ ಹೋಗುವುದರಿಂದ, ಶಾಲೆಗೆ ಸೇರಿಸಿ ತಪ್ಪಿಸಿದ್ದು.

ಬಹುಮುಖ ಪ್ರತಿಭೆಯ ಶ್ರೀಯುತ ನಾರಾಯಣಸ್ವಾಮಿ ಪ್ರಾಂಶುಪಾಲರ ಪಾತ್ರ ಚಿರಸ್ಮರಣೀಯವಾದದ್ದು. ಇಂದಿಗೂ ಬಾಗೇಪಲ್ಲಿಯ ಸರ್ಕಾರಿ ಕಿರಿಯ ಕಾಲೇಜಿನಲ್ಲಿ ಅವರಿದ್ದ ಕಾಲದಲ್ಲಿ ಓದಿದ ವಿದ್ಯಾರ್ಥಿ ವೃಂದವು, ಪೋಷಕರು, ಸಮಾಜ ಮತ್ತು ಇಲಾಖೆ ಅವರನ್ನು ಸ್ಮರಣೆ ಮಾಡಿಕೊಳ್ಳುತ್ತಾರೆ. ಇಲಾಖೆಯು ಅಂದು ಮಧ್ಯಕಾಲೀನ ಪರೀಕ್ಷೆಗೆ ಮೊದಲು ಒಂದು ಕಿರು ಪರೀಕ್ಷೆ ನಡೆಸಬೇಕೆಂದು ಆದೇಶವನ್ನು ಮಾಡಿತ್ತು. ಆದರೆ ಕೋಲಾರ ಜಿಲ್ಲೆಯಲ್ಲಿ ಶೈಕ್ಷಣಿಕವಾಗಿ ಹಿಂದುಳಿದಿದ್ದ ಬಾಗೇಪಲ್ಲಿಯ ವಿದ್ಯಾರ್ಥಿಗಳ ಶೈಕ್ಷಣಿಕ ಮಟ್ಟವನ್ನು ಉತ್ತಮಪಡಿಸುವ ಸಲುವಾಗಿ ಮತ್ತು ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳು ಪಬ್ಲಿಕ್ ಪರೀಕ್ಷೆಯಲ್ಲಿ ಉತ್ತಮವಾಗಿ ಬರೆದು ಉತ್ತಮ ಫಲಿತಾಂಶ ಪಡೆಯುವ ಸಲುವಾಗಿ 'ಮಾಸಿಕ ಕಿರು ಪರೀಕ್ಷೆಗಳು' ಎಂಬ ಯೋಜನೆಯನ್ನು ಅವರು ಬಂದ ವರ್ಷವೇ ಜಾರಿಗೊಳಿಸಿದರು. ಇದಕ್ಕೆ ಪೂರ್ವಭಾವಿಯಾಗಿ ಎಸ್.ಎಸ್.ಎಲ್.ಸಿ. ತರಗತಿಗಳಿಗೆ ಬೋಧಿಸುವ ಶಿಕ್ಷಕರ ಸಭೆಯೊಂದನ್ನು ಕರೆದು ಹೊಸ ಯೋಜನೆಯ ರೂಪುರೇಷೆಗಳನ್ನು ಸಂಪೂರ್ಣವಾಗಿ ವಿವರಿಸಿ, ಮುಕ್ತವಾಗಿ ಚರ್ಚೆಗೆ ಅವಕಾಶ ಮಾಡಿಕೊಟ್ಟು, ಇದರ ನಿರ್ವಹಣೆಯ ಸಂಪೂರ್ಣ ಜವಾಬ್ದಾರಿಯನ್ನು ಒಬ್ಬ ಶಿಕ್ಷಕರ ನೇತೃತ್ವದಲ್ಲಿ ನಡೆಯುವಂತೆ ನಿರ್ಧಾರ ಕೈಗೊಂಡರು.

ಮಾಸಿಕ ಕಿರು ಪರೀಕ್ಷೆಗಳು ಎಂದಿನ ಕಿರು ಪರೀಕ್ಷೆಗಳಂತಿರದೆ ಹೆಚ್ಚಿನ ಭಿನ್ನತೆಯಿಂದ ಕೂಡಿದ್ದವು. ಹೆಚ್ಚಿನ ಜವಾಬ್ದಾರಿಯನ್ನೊಳಗೊಂಡಿದ್ದವು. ಉದಾಹರಣೆಗೆ ; 1. ಪ್ರತಿ ತಿಂಗಳು ಈ ಮಾಸಿಕ ಕಿರುಪರೀಕ್ಷೆಗಳಿಗೆ ಒಂದು ಹೊಸ ವೇಳಾಪಟ್ಟಿ ತಯಾರಿಸುವುದು.

2. ದೈನಂದಿನ ವೇಳಾಪಟ್ಟಿಯಂತೆ ತರಗತಿಗಳು ನಡೆಯುತ್ತಿದ್ದು, ಈ ಕಿರುಪರೀಕ್ಷೆಗಳು ತರಗತಿ ಮುಗಿದ ನಂತರ ನಡೆಯುವಂತೆ ವ್ಯವಸ್ಥೆಗೊಳಿಸುವುದು.

3. ವಿದ್ಯಾರ್ಥಿಗಳಿಗೆ ನೊಂದಣಿ ಸಂಖ್ಯೆಗಳನ್ನು ನೀಡಿ ಒಂದು ಡೆಸ್ಕ್‌ಗೆ ಇಬ್ಬರು ವಿದ್ಯಾರ್ಥಿಗಳಂತೆ, ಒಂದು ಕೊಠಡಿಗೆ ಗರಿಷ್ಠ (30) ಮೂವತ್ತು ವಿದ್ಯಾರ್ಥಿಗಳನ್ನು ಕೂರಿಸಿ, ಒಬ್ಬರು ಶಿಕ್ಷಕರ ಮೇಲ್ವಿಚಾರಣೆಯಲ್ಲಿ ನಕಲು ಮಾಡಲು, ಮಾತನಾಡಲು ಅವಕಾಶಗಳಿಲ್ಲದಂತೆ ಕಿರುಪರೀಕ್ಷೆ ನಡೆಯುವಂತೆ ಮಾಡುವುದು.

4. ಪ್ರತಿಯೊಬ್ಬ ವಿದ್ಯಾರ್ಥಿಯು 200 ಪೇಜಿನ ಒಂದು ಬರೆಯುವ ಪುಸ್ತಕ ತೆಗೆದುಕೊಂಡು ಅದರಲ್ಲಿ ತನ್ನ ನೋಂದಣಿ ಸಂಖ್ಯೆ, ಹೆಸರು, ತರಗತಿ ಇತ್ಯಾದಿಗಳನ್ನು ಬರೆದು ಅದನ್ನು ಪರೀಕ್ಷಾ ಮುಖ್ಯಸ್ಥರಿಗೆ ಒಪ್ಪಿಸಿ, ಮುಂದೆ ಅದರಲ್ಲಿ ಪ್ರಶ್ನೆ ಪತ್ರಿಕೆಗಳಿಗೆ ಉತ್ತರ ಬರೆಯುವುದು.

5. ಕಿರುಪರೀಕ್ಷೆಗೆ ಪೂರಕವಾಗಿರುವಂತೆ ವಾರ್ಷಿಕ ಪಾಠ ಯೋಜನೆಗಳನ್ನು ಶಿಕ್ಷಕರು ತಯಾರು ಮಾಡಿ, ಅದನ್ನನುಸರಿಸಿ ಪಾಠಗಳನ್ನು ಸಕಾಲದಲ್ಲಿ ಮುಗಿಸಿ ಕಿರುಪರೀಕ್ಷೆಗಳು ಆ ತಿಂಗಳಿನಲ್ಲಿ ಪ್ರಾರಂಭವಾಗುವ 1 ವಾರಕ್ಕೆ ಮೊದಲು ಪ್ರಶ್ನೆ ಪತ್ರಿಕೆಗಳನ್ನು ಆ ತಿಂಗಳಿನ ಪಾಠಗಳು ಮಾತ್ರ ಒಳಗೊಂಡಂತೆ ತಯಾರಿಸಿಕೊಡುವುದು.

6. ಹೀಗೆ ಶಿಕ್ಷಕರಿಂದ ಪಡೆದ ಪ್ರಶ್ನೆಪತ್ರಿಕೆಗಳನ್ನು ಸೈಕ್ಲೋಸ್ಟೈಲ್ ಮಾಡಿಸಿ, ನಂತರದ ಕಾಲದಲ್ಲಿ ನಾವೇ ಮಾಡಿ 2 ದಿನ ಮೊದಲೇ ಸಿದ್ಧ ಮಾಡಿಟ್ಟುಕೊಳ್ಳುವುದು.

7. ನಿಗಧಿತ ತಿಂಗಳಿನಲ್ಲಿ, ನಿಗಧಿತ ದಿನಾಂಕಗಳಂದು ಮೊದಲೇ ತಿಳಿಯಪಡಿಸಿದ ವಿಷಯದ ಪ್ರಶ್ನೆಪತ್ರಿಕೆಗಳನ್ನು ಸೂಚಿಸಿದ ಶಿಕ್ಷಕರುಗಳಿಗೆ ಕೊಟ್ಟು, ಅವರ ನಿರ್ದೇಶನದಂತೆ ವಿದ್ಯಾರ್ಥಿಗಳು ನೊಂದಣಿ ಸಂಖ್ಯೆಯ ಪ್ರಕಾರ ತಮ್ಮ ತಮ್ಮ ಆಸನ ಮತ್ತು ಕೊಠಡಿಗಳಲ್ಲಿ ಕುಳಿತುಕೊಳ್ಳುವುದಕ್ಕೆ ಮೊದಲು ತಮ್ಮ ಪುಸ್ತಕಗಳನ್ನು ಹೊರಗಡೆಯೇ ಬಿಟ್ಟು, ಈಗಾಗಲೇ ತಾವು ಕೊಟ್ಟಿರುವ ನೋಟ್ ಬುಕ್‌ಗಳನ್ನು ಪಡೆದು ಬರೆಯಲು ಸಿದ್ಧರಾಗುವುದು.

8. ಪರೀಕ್ಷೆ ಬರೆಯಲು ನಿರ್ದಿಷ್ಟಪಡಿಸಿದ್ದ ಅವಧಿ ಒಂದು ಗಂಟೆ. ಪುಸ್ತಕದಲ್ಲಿ ಆಯಾ ದಿನದ ದಿನಾಂಕ, ವಿಷಯ ನಮೂದಿಸಿ ಉತ್ತರ ಬರೆದು ಪುಸ್ತಕಗಳನ್ನು ಮೇಲ್ವಿಚಾರಕ ಶಿಕ್ಷಕರಿಗೆ ಹಿಂದುರಿಗಿಸಿ ಹೊರ ಹೋಗುವುದು.

9. ಈ ಪುಸ್ತಕಗಳನ್ನು ಮೇಲ್ವಿಚಾರಕ ಶಿಕ್ಷಕರು ಪಡೆದು, ಅಂದೇ ಸಂಬಂಧಿಸಿದ ಪಾಠ ಮಾಡುವ ಶಿಕ್ಷಕರಿಗೆ ಮೌಲ್ಯಮಾಪನ ಮಾಡಿ ಮುಂದಿನ ಪರೀಕ್ಷೆ ನಡೆಯುವ ದಿನಾಂಕದ ಹಿಂದಿನ ದಿನವೇ ಅಂಕಪಟ್ಟಿ ಸಹಿತ ಹಿಂದಿರುಗಿಸುವುದು. ಹೀಗೆ ವಿದ್ಯಾರ್ಥಿಗಳು ಮುಂದಿನ ಕಿರು ಪರೀಕ್ಷೆ ಅದೇ ಪುಸ್ತಕದಲ್ಲಿ ಬರೆಯುತ್ತಿರುವುದು.

10. ಮೇಲ್ವಿಚಾರಕ ಶಿಕ್ಷಕರು ವಿದ್ಯಾರ್ಥಿಗಳು ಗಳಿಸಿದ ಅಂಕಗಳನ್ನೆಲ್ಲಾ ಕ್ರೋಢೀಕರಿಸಿ ಅಂಕಪಟ್ಟಿಗಳಲ್ಲಿ ನಮೂದಿಸಿ ಮುಂದಿನ ಕ್ರಮಕ್ಕಾಗಿ ಪ್ರಾಂಶುಪಾಲರಿಗೆ ಒಪ್ಪಿಸುವುದು.

11. ಪ್ರಾಂಶುಪಾಲರು ಹೀಗೆ ನಡೆಯುತ್ತಿರುವ ಕಿರು ಪರೀಕ್ಷೆಗಳ ಮೇಲುಸ್ತುವಾರಿಯನ್ನು ಮಾಡುವುದರ ಜೊತೆಗೆ ಅಂಕಪಟ್ಟಿಗಳನ್ನು ವಿದ್ಯಾರ್ಥಿಗಳ ಪೋಷಕರಿಗೆ ಕಳುಹಿಸಿ, ಅವರ ಗಮನಕ್ಕೆ ತಂದು, ಅನುತ್ತೀರ್ಣರಾದ ವಿದ್ಯಾರ್ಥಿಗಳ ಪೋಷಕರನ್ನು ಶಾಲೆಗೆ ಬರಲು



ಹೇಳಿ, ಅವರು ಮುಂದೆ ವಿದ್ಯಾರ್ಥಿಯ ಬಗ್ಗೆ ಕೈಗೊಳ್ಳಬೇಕಾದ ಕ್ರಮಗಳನ್ನು ವಿವರವಾಗಿ ಮನದಟ್ಟು ಮಾಡಿ ಕಳುಹಿಸುವುದು.

12. ವಿವಿಧ ವಿಷಯಗಳನ್ನು ಬೋಧಿಸುವ ಶಿಕ್ಷಕರಿಗೆ ವಿದ್ಯಾರ್ಥಿಗಳು ಬರೆದಿರುವ ಉತ್ತರಗಳನ್ನು ತಿದ್ದುವಾಗ ಯಾರು ಯಾರು ಯಾವ ಯಾವ ಮಟ್ಟದಲ್ಲಿದ್ದಾರೆ, ಮುಂದೆ ಯಾವ ಯಾವ ಕ್ರಮಗಳನ್ನು ಅನುಸರಿಸಬೇಕು ಎಂಬಿತ್ಯಾದಿ ಅಂಶಗಳನ್ನು ಮನಗಂಡು ಅದರಂತೆ ಅವರ ಏಳ್ಗೆಗೆ ಕಾರ್ಯಪ್ರವೃತ್ತರಾಗುವುದು.

ಈ ಮಾಸಿಕ ಕಿರುಪರೀಕ್ಷೆ ನಡೆಸಲು ಅಗತ್ಯವಾಗಿ ಬೇಕಾಗಿದ್ದ ಪ್ರಶ್ನೆಪತ್ರಿಕೆಗಳನ್ನು ಸೈಕ್ಲೋಸ್ಟೇಲ್ ಮಾಡಿಸಲು ಅಗತ್ಯವಾಗಿದ್ದ ಹಣವನ್ನು ನಾಲ್ಕು ಅಥವಾ ಆರು ಕಿರು ಪರೀಕ್ಷೆಗಳಿಗೆ ಅಗತ್ಯವಾದಷ್ಟು ಲೆಕ್ಕಾಚಾರ ಮಾಡಿ ಪ್ರತಿ ವಿದ್ಯಾರ್ಥಿಗೆ ಹಂಚಿ ಅಷ್ಟನ್ನು ಮಾತ್ರ ಅವರಿಂದಲೇ ತೆಗೆದುಕೊಳ್ಳುತ್ತಿದ್ದೆವು. ಕಾರಣ ಇಲಾಖೆ ಕೊಡುತ್ತಿದ್ದ ಸಾದಿಲ್ವಾರು ಮೊತ್ತ ಈ ಬಾಬ್ತಿಗಾಗಿ ಅನ್ವಯವಾಗುತ್ತಿರಲಿಲ್ಲ.

ಮಾನ್ಯ ನಾರಾಯಣಸ್ವಾಮಿಗಳು ಮಾಸಿಕ ಕಿರುಪರೀಕ್ಷೆಗಳನ್ನು ನಡೆಸಿದ್ದರ ನಿರೀಕ್ಷಿತ ಫಲವನ್ನು ಪಡೆದರು.

ವಿದ್ಯಾರ್ಥಿಗಳ ಏಳ್ಗೆಯೇ ತನ್ನ ಪರಮೋಚ್ಛ ಗುರಿಯನ್ನಾಗಿ ಹೊಂದಿದ್ದ ಈ ಮಾಸಿಕ ಕಿರುಪರೀಕ್ಷೆಗಳು ಶ್ರದ್ಧಾಭಕ್ತಿಗಳಿಂದ ಒಂದು ಆರ್ಕೆಸ್ಟ್ರಾದಂತೆ ಉತ್ತಮ ಹೊಂದಾಣಿಕೆಯಿಂದ ಎಲ್ಲಾ ಅಂಗಗಳು ಕೆಲಸ ಮಾಡಿದಾಗ ಮಧುರವಾದ ಸಂಗೀತ ಹೊರಹೊಮ್ಮುವಂತೆ ಮಾನ್ಯ ಪ್ರಾಂಶುಪಾಲರು ನಿರೀಕ್ಷಿಸಿದ ಈ ಕೆಳಗೆ ಪಟ್ಟಿ ಮಾಡಿರುವ ಫಲಿತಾಂಶಗಳನ್ನು ಪಡೆಯಲು ಯಶಸ್ವಿಯಾದರು ಎಂಬುದನ್ನು ಈ ಸಂದರ್ಭದಲ್ಲಿ ತಿಳಿಸಲು ನನಗೆ ಹೆಮ್ಮೆ ಅನಿಸುತ್ತದೆ.

ಇಡೀ ಸಂಸ್ಥೆಯು ಒಂದು ಜೇನುಗೂಡಿನಂತೆ ಕೆಲಸ ಮಾಡತೊಡಗಿತು. ಅದರಲ್ಲಿ ರಾಣಿಜೇನಾಗಿ ಮಾನ್ಯ ನಾರಾಯಣಸ್ವಾಮಿಯರು ಪ್ರಾಮುಖ್ಯತೆ ಪಡೆದರು.

ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳು ಇಡೀ ಶೈಕ್ಷಣಿಕ ವರ್ಷ ಕಡ್ಡಾಯವಾಗಿ ತಮ್ಮ ವ್ಯಾಸಂಗದಲ್ಲಿ ತೊಡಗಬೇಕಾಯ್ತು. ಶಾಲೆಯ ಫಲಿತಾಂಶವು ಉತ್ತಮವಾಯಿತು. ಅನುತ್ತೀರ್ಣತೆಯ ಅಂಚಿನಲ್ಲಿದ್ದ ವಿದ್ಯಾರ್ಥಿಗಳು ಉತ್ತೀರ್ಣರಾದರು. ಮುಂದಿನ ಹಂತಗಳಲ್ಲಿ ಹೆಚ್ಚು ಹೆಚ್ಚು ಅಂಕಗಳನ್ನು ಪಡೆಯುವಲ್ಲಿ ಶಕ್ತರಾಗಿದ್ದರು, ಅಂಕ ಗಳಿಸಿದರೂ ಸಹಾ ಮಾಸಿಕ ಕಿರು ಪರೀಕ್ಷೆಗಳಲ್ಲಿ ಬರೆದು ಬರೆದು ಪಬ್ಲಿಕ್ ಪರೀಕ್ಷೆ ಬರೆಯುವ ಹಂತಕ್ಕೆ ಬಂದಾಗ ಅವರ ಬರವಣಿಗೆಯ ವೇಗ ಹೆಚ್ಚಾಗಿರುತ್ತಿತ್ತು.

ವರ್ಷವಿಡೀ ಓದುತ್ತಿದ್ದುದರಿಂದ ಪಬ್ಲಿಕ್ ಪರೀಕ್ಷೆಯಲ್ಲಿ ಉತ್ತಮವಾಗಿ ಬರೆಯುವ ಮಟ್ಟ ತಲುಪಿರುತ್ತಿದ್ದರು.

ಮಾಸಿಕ ಕಿರುಪರೀಕ್ಷೆಗಳ ಸಂದರ್ಭದಲ್ಲೇ ನಕಲನ್ನು ತಡೆದು ಅಭ್ಯಾಸ ಮಾಡಿದ್ದರಿಂದ, ಇಡೀ ವರ್ಷ ಓದಿನಲ್ಲೇ ತಮ್ಮನ್ನು ತೊಡಗಿಸಿಕೊಂಡಿದ್ದರಿಂದ ಪಬ್ಲಿಕ್ ಪರೀಕ್ಷೆಯಲ್ಲಿ ನಕಲು ಮಾಡುವ ಯೋಚನೆಯೇ ಈ ವಿದ್ಯಾರ್ಥಿಗಳಲ್ಲಿ ಸುಳಿಯುತ್ತಿರಲಿಲ್ಲ. ಈ ನೈತಿಕತೆಯ ಬಗ್ಗೆ ಮಕ್ಕಳಲ್ಲಿ ಅವರ ಅರಿವಿಲ್ಲದಂತೆ ಅವರಲ್ಲಿ ಮೂಡಿಸಿದ್ದು ಕಡಿಮೆ ಸಾಧನೆಯಲ್ಲ.

ನಮ್ಮ ಪರಿಶ್ರಮದ ಪರಮೋಚ್ಚ ಗುರಿ ಪಬ್ಲಿಕ್ ಪರೀಕ್ಷೆಯಲ್ಲಿ ಉತ್ತಮ ಫಲಿತಾಂಶ ಪಡೆಯುವುದಾಗಿತ್ತು. ಇದನ್ನು ಸಾಧಿಸಿದಾಗ ವಿದ್ಯಾರ್ಥಿಗಳಿಗೆ, ಪೋಷಕರಿಗೆ, ಸಮಾಜಕ್ಕೆ, ಶಿಕ್ಷಕ ವೃಂದಕ್ಕೆ ಅದರ ಚುಕ್ಕಾಣಿ ಹಿಡಿದು ನಡೆಸುವ ಪ್ರಾಂಶುಪಾಲರಿಗೆ ಆದ ಆನಂದಕ್ಕೆ ಪಾರವೇ ಇರಲಿಲ್ಲ.

ಇದರಿಂದ ಸಾಧನೆಯಾದ ಮತ್ತೊಂದು ಪ್ರಮುಖ ಅಂಶವು ಗಮನಾರ್ಹವಾದದ್ದು ಮತ್ತು ಉಲ್ಲೇಖನಾರ್ಹವಾಗಿದೆ. ಸಾಮಾನ್ಯವಾಗಿ ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕರು ಮನಸ್ಸಿಟ್ಟು ಶ್ರದ್ಧೆಯಿಂದ ಕೆಲಸ ಮಾಡುವುದೇ ಅಪರೂಪ. ಆದರೆ ಈ ಮಾಸಿಕ ಕಿರುಪರೀಕ್ಷೆಗಳನ್ನು ಹಮ್ಮಿಕೊಂಡಿದ್ದರಿಂದ, ಸದರಿ ಯೋಜನೆ ಕಾರ್ಯಗತವಾಗುತ್ತಿದ್ದಂತೆ ಶಿಕ್ಷಕರು ಇಡೀ ವರ್ಷ ಕಾರ್ಮಿಕ ಜೇನುಹುಳುಗಳು ಹೇಗೆ ನಿರಂತರವಾಗಿ ತಮ್ಮ ಗೂಡಿನ ಹಿತಕ್ಕಾಗಿ ಕರ್ತವ್ಯ ನಿರ್ವಹಿಸುತ್ತವೆಯೋ ಅದೇ ರೀತಿಯಲ್ಲಿ ಶಿಕ್ಷಕರೂ ಸಹಾ ಈಗಾಗಲೇ ತಯಾರು ಮಾಡಿ ಅನುಮೋದನೆ ಪಡೆದಿರುವ ಪಾಠ ಯೋಜನೆಯನ್ನು ಕಡ್ಡಾಯವಾಗಿ ಅನುಷ್ಠಾನಕ್ಕೆ ತರಲೇಬೇಕಾಗಿರುತ್ತದೆ. ನಿಗಧಿತ ಸಮಯದಲ್ಲಿ ಕಿರುಪರೀಕ್ಷೆಗಳಿಗೆ ಉತ್ತರ ಬರೆದಿರುವ ಪುಸ್ತಕಗಳನ್ನು ತಿದ್ದಿ, ಆ ಪುಸ್ತಕಗಳನ್ನು ಮುಂದಿನ ಕಿರುಪರೀಕ್ಷೆಗೆ ಮುನ್ನಾದಿನವೇ ಶಾಲೆಗೆ ಅಂಕಪಟ್ಟಿ ಸಹಿತ ಒಪ್ಪಿಸಬೇಕಾಗಿರುತ್ತದೆ. ನಂತರ ವಿದ್ಯಾರ್ಥಿಗಳು ಬರೆದಿರುವ ಉತ್ತರಗಳ ವಿಮರ್ಶೆ, ಪರಿಹಾರ ಬೋಧನೆ ಇತ್ಯಾದಿ ಕಾರ್ಯಗಳಲ್ಲಿ ತಮಗರಿವಿಲ್ಲದಂತೆ ತಮ್ಮನ್ನು ತೊಡಗಿಸಿಕೊಂಡು ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸುವಲ್ಲಿ ಮಾನ್ಯ ಪ್ರಾಂಶುಪಾಲರಾಗಿದ್ದ ಶ್ರೀಯುತ ನಾರಾಯಣಸ್ವಾಮಿಯವರು ಯಶಸ್ವಿಯಾಗಿದ್ದಾರೆ.

ಮಾನ್ಯ ನಾರಾಯಣಸ್ವಾಮಿಗಳವರ ನಿಯಂತ್ರಣದಲ್ಲಿ ಸಹ ಶಿಕ್ಷಕನಾಗಿ ಅವರ ಕಾರ್ಯವೈಖರಿಯನ್ನೇ ಮುಂದಿನ ನನ್ನ ಕರ್ತವ್ಯದ ಅವಧಿಯಲ್ಲಿ ಅನುಕರಣೆ ಮಾಡಿದ ನಾನು ಕಂಡ ಒಂದು ವಿಶೇಷ ಗುಣವೇನೆಂದರೆ; ಭಾರತ ದೇಶದ ಮೊಟ್ಟ ಮೊದಲ



ಪ್ರಧಾನಮಂತ್ರಿಗಳಾಗಿದ್ದ ದಕ್ಷ, ಪ್ರಾಮಾಣಿಕರಾದ ಪಂಡಿತ್ ಜವಾಹರಲಾಲ್ ನೆಹರೂರವರು ತಮ್ಮ ಕಾರ್ಯಾಲಯದಲ್ಲಿ ಎಲ್ಲರಿಗೂ ಕಾಣಿಸುವ ಹಾಗೆ ಒಂದು ಸೂಚನಾಫಲಕ ಹಾಕಿಸಿದ್ದು, ಅದರಲ್ಲಿದ್ದ ಬರಹ ಹೀಗಿತ್ತು. I am not interested in lame excuses, but I am interested in only getting things done" ಎನ್ನುವ ಗುಂಪಿಗೆ ಸೇರಿದವರಾಗಿದ್ದರಿಂದ ಶ್ರೀಯುತ ನಾರಾಯಣಸ್ವಾಮಿಯವರು ತಾವು ಕೈಗೆತ್ತಿಕೊಂಡ ಯಾವುದೇ ಕೆಲಸವನ್ನು ಅಪೂರ್ಣವಾಗಿ ಬಿಡುತ್ತಿರಲಿಲ್ಲ, ಇದನ್ನೇ ತಮ್ಮ ಅಧೀನದಲ್ಲಿ ಕೆಲಸ ಮಾಡುತ್ತಿದ್ದವರಿಂದಲೂ ನಿರೀಕ್ಷಿಸುತ್ತಿದ್ದರು.

ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರರಾಗಿದ್ದರು. ಪೋಷಕರ ಮೆಚ್ಚುಗೆಗೆ ಪಾತ್ರರಾಗಿದ್ದರು. ಇತರೆ ಶಿಕ್ಷಕರಿಗೆ, ಸಿಬ್ಬಂದಿ ವರ್ಗದವರಿಗೆ Friend, Philosopher, Guide ಆಗಿದ್ದರು. ಇಲಾಖೆಯಲ್ಲಿ ಇವರ ಮಾತಿಗೆ ಬಹಳ ಬೆಲೆ ಇತ್ತು. ಅನೇಕ ಗಣ್ಯರ ಸಂಪರ್ಕ, ಸಖ್ಯ ಬೆಳೆಸಿಕೊಂಡಿದ್ದರು. ಸಂಸ್ಥೆಯ ಅಭಿವೃದ್ಧಿಗಾಗಿ ಈ Good Will ಅನ್ನು ಚೆನ್ನಾಗಿ ಬಳಸಿಕೊಂಡಿದ್ದರು. 'ಸರ್ಕಾರಿ ಸೇವೆ ದೇವರ ಸೇವೆ' ಎಂಬ ನಾಣ್ನುಡಿಗೆ ಗೌರವ ತಂದವರಾಗಿದ್ದರು. ತಮ್ಮ ಸಮಯವನ್ನೆಲ್ಲಾ ಶಾಲೆಯ / ಸಂಸ್ಥೆಯ ಪುರೋಭಿವೃದ್ಧಿಗಾಗಿ, ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ತೊಡಗಿಸಿಕೊಂಡಿದ್ದ ನನ್ನ ಸೇವೆಯ ಅವಧಿಯಲ್ಲಿ ಕಂಡ ಪ್ರಾತಃಸ್ಮರಣೀಯ ವ್ಯಕ್ತಿಯಾಗಿ ಕಂಗೊಳಿಸಿದವರು. ಮುಂದೆ ಇಲಾಖೆಯಲ್ಲಿ ಜಂಟಿ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸಿ ಈಗ ಸರ್ಕಾರಿ ಸೇವೆಯಿಂದ ಮಾತ್ರ ನಿವೃತ್ತರಾಗಿದ್ದು ಸಮಾಜ ಸೇವೆಯತ್ತ ಸಕ್ರಿಯವಾಗಿದ್ದು ಚಿರಸ್ಮರಣೀಯರಾಗಿದ್ದಾರೆ. ನನ್ನ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರಿರುವ ಶ್ರೀಯುತ ನೆಚ್ಚಿನ ಪ್ರಿನ್ಸಿಪಾಲರಿಗೆ ನನ್ನ ಸಾಷ್ಟಾಂಗ ನಮಸ್ಕಾರಗಳು.







39

# ಅರಳುಮರುಳು ಕಣ್ಣಲ್ಲಿ – ದಸಂಸ

– ದೇವನೂರು ಮಹಾದೇವ

ಖ್ಯಾತ ಸಾಹಿತಿ

ದಸಂಸ ಹುಟ್ಟಿ ಹತ್ತತ್ತಿರ ನಲವತ್ತು ವರ್ಷಗಳಾಗುತ್ತ ಬರುತ್ತಿದೆ. ಹಾಗಾಗಿ ದಲಿತ ಸಂಘರ್ಷ ಸಮಿತಿ ಹುಟ್ಟು ಹಾಕಿದವರಿಗೂ ಆಜುಬಾಜೂ 60 ವರ್ಷ ಆಗುತ್ತಿದೆ. ಜೊತೆಗೆ ಇಂದು ದಲಿತ ಸಂಘರ್ಷ ಸಮಿತಿ ನಾಕಾರು ಬಣಗಳೂ ಆಗಿಬಿಟ್ಟಿದೆ. ಯಾರ್ಯಾರು ಯಾವ ಬಣ್ಣ ಬಣ್ಣಗಳಲ್ಲಿದ್ದಾರೆ ಎಂಬುದೂ ತಕ್ಷಣಕ್ಕೆ ತಿಳಿಯುವುದಿಲ್ಲ. ದಲಿತ ಸಂಘರ್ಷ ಸಮಿತಿಯ ಆರಂಭದ ತಲೆಮಾರಿಗೆ ಸೇರಿದ, ವಯಸ್ಸು 60 ಮೀರಿರುವ ನನಗೆ, ನನ್ನಂಥವರಿಗೆ ಇಂದಿನ ದಸಂಸಗಳ ಹೊಸ ಮುಖಗಳನ್ನು ನೋಡಿದರೆ ಕಾಣುವುದು ಹೇಗೆ?

ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಆದ ವಯಸ್ಸಾದವರೊಬ್ಬರು ತಮ್ಮ ಮುಂದೆ ಓಡಾಡುವ ಎಳೆಯರನ್ನು ಗುರುತಿಸುವಂತೆ ದಸಂಸ ಮೊದಲ ತಲೆಮಾರಿಗೆ ಸೇರಿದವರು ಕಣ್ಮುಂದಿನ ದಲಿತ ಸಂಘರ್ಷ ಸಮಿತಿಯವರನ್ನು ಗುರುತಿಸಬೇಕಾಗಿದೆ! ಇದೊಂದು ರೀತಿ ಕಣ್ಣು ಮಸುಕಾದ ಹಿರಿಯನೊಬ್ಬನು ತನ್ನ ಸಂತಾನಗಳ ಬಗ್ಗೆ ವಿಚಾರಿಸಿದಂತೆ. ಇದು ನನ್ನ ಕಣ್ಮುಂದೆ ಒಂದು ದೃಶ್ಯವಾಗಿ ಓಡಾಡತೊಡಗಿತು. ಹೀಗೆ :

'ಅದೇ, ಸಾಗರ್ನ ಜೊತೆ ಜಗಳ ಮಾಡ್ಕಂಡು ಪಾಲು ತಕ್ಕಂಡು ಊರೂರು ತಿರುಗ್ತಾ, ಹೋದ್ ಕಡೆಯೆಲ್ಲಾ ಸುದ್ದಿ ಮಾಡ್ತಾನಲ್ಲಾಪ್ಪ,

ಆ ಲಕ್ಷ್ಮೀನಾರಾಯಣ ಅನ್ನೋನು... ಅವ್ನುವೆ ಸಾಗರ್ನುವೆ ಈಗ್ಲಾರೂ ಮುಖಕ್ಕೆ ಮುಖಕೊಟ್ಟು ಮಾತಾಡೀರ?'

'ಆ ಮಾವಳ್ಳಿ ಶಂಕರ್ನುವೆ ಅದೇ ಲಕ್ಷ್ಮೀನಾರಾಯಣ್ನುವೆ ವ್ಯಾಜ್ಯ ಮಾಡ್ಕಂಡು ಆಫೀಸ್‌ಗೆ ಬೀಗ ಹಾಕ್ಸಿ ಮುಚ್ಚಿಸಿಬುಟ್ರಂತಲ್ಲಪ್ಪಾ. ಯಾವಾಗ್ಲೋ ಒಂದ್ಸಲ ಇಬ್ರಿಗೂ ಬುದ್ಧಿ ಬಂದು ಒಟ್ಟಾಗಿ ಬಾಗ್ಲು ತೆಗಿಸ್ತೀವಿ ಅಂತಿದ್ರಂತಲ್ಲಾ... ಅದು ನಿಜವೆ? ಆಫೀಸಿನ ಬೀಗ ತೆಗೀತೆ?'

'ಆ ಬಾಯಿಬುಟ್ಟರೆ ಸಂಕಟದ ಯೆಂಕ್ಟೇಸನೂವೆ ಆ ಗುರುವೆ, ಅದೇಯಪ್ಪ ಮಂಡ್ಯದಾಚೆಗೆ ಒಂದ್ ಹೆಜ್ಜೆ ಕಿತ್ತಿಡದ ರಾಜ್ಯದ ನಾಯ್ಕ, ಅವ್ನು, ಆ ಗುರು ಅನ್ನೋನು... ಆ ಇಬ್ರೂವೆ ಜೊತೇಲಿ ಇರ್ತೀವಿ ಅಂತ ಹೋದ್ರಲ್ಲಾ ಅವ್ರು... ಅವ್ರಿನ್ನೂ ಜೊತೇಲಿ ಇದ್ದಾರ? ಅಥ್ವಾ ಅವ್ರೂ ಬೇರೆ ಬೇರೆ ಆಗ್ಬುಟ್ರಾ?'

'ಅದಿರ್ಲಿ ಕಣಪ್ಪಾ... ಆ ಹುಲಿಯಂಗೆ ಅಬ್ಬರಿಸ್ತಿದ್ದ ಆ ಸೀಯೆಮ್ ಸೀಯೆಮ್ಮು ಅಂತ ಮುನಿಯಪ್ಪ ಅಂತಿದ್ನಲ್ಲಪ್ಪಾ, ಅವ್ನೆ ಬೇರೆಯವರ ಮನೆ ಕಿದ್ವಂಡೆ ಸೇರ್ಕಂಡುಬುಟ್ನಂತಲ್ಲಾ! ನಿಜವೆ?'

'ಅಕ್ಕನ ಮನೆ ಸೇರ್ಕಂಡು ಅಲ್ಲೆ ಪಳ್ಗಿ ಆಯ್ತೀನಿ ಅಂತ ಹೋದ್ನಲ್ಲಪ್ಪಾ... ಆ ದುಗ್ಗದ ಜಯಣ್ಣ, ಈಗ ಎಲ್ ಅವ್ನೆ, ಹೆಂಗ್ ಅವ್ನೆ? ಅಕ್ಕನ ಜೊತೆ ಹೊಂದ್ಕಂಡು ಹೋಗ್ತಾ ಇದ್ದಾನ...'

'ಮೊಟ್‌ಮೊದ್ಲು ನಮ್ಮಟ್ಟೀಯಿಂದ ಕಾಲೆತ್ತಿ ಆಚೆ ಇಟ್ನಲ್ಲಪ್ಪಾ... ಯಾರ... ಅವ್ನ ಹೆಸ್ರೇನಾ... ಆ ಯಂಕ್ಟಸ್ವಾಮಿ, ದೊಡ್ಡಪ್ಪನ ಮನೆ ಸೇರ್ಕಂಡು ನಮ್ಮ ಮನೆತನದ ಹೆಸರನ್ನೂ ಉಳಿಸ್ತೀನಿ ಅಂತಿದ್ದನಂತಲ್ಲಾ... ಅವ್ನೂವೆ ಹೆಂಗಿದ್ದಾನು?'

'ನಿಂತ್‌ಕಡೆ ನಿಲ್ದೆ ಯಾವಾಗ್ಲೂ ಸಿಡಿಮಿಡಿಗುಟ್ತಿದ್ದನಲ್ಲಪ್ಪ... ಅದಿಯಾ ಆ ರಾಮು... ರಾಮು ಅನ್ನೋನು... ಈಗ ಬೆಟ್ಟದ ಮೇಲೆ ಮಠ ಕಟ್ಕಂಡು ಇದ್ದಾನಂತಲ್ಲಾ! ಈಗ್ಲಾರು ವಸಿ ಸಮಾಧಾನವಾಗಿದ್ದಾನ?'

'ಅಯ್ಯಯೊ... ಆ ಸಿದ್ಲಿಂಗಪ್ಪನಿಗೆ ನಡೆಯಾಕೆ ಆಗ್ದೆ ಕಾರ್ನ್ಲೆ ಓಡಾಡ್ತಾನಂತಲ್ಲಪ್ಪಾ... ಅಪ್ಪೋ ಇಪ್ಪೋ ಕೋಲ್ ಹಿಡ್ಕಂಡು ನಡೆದಾಡು ಅನ್ನು! ಆರೋಗ್ಯಕ್ಕೆ ಒಳ್ಳೇದು'

'ಎಲ್ಲಾ ಇರ್ಲಿ ಕಣಾ! ಆ ದ್ಯಾವನೂರಪ್ಪನಿಗೆ ಏನ್ ಬಂತಪ್ಪಾ? ವಯಸ್ಸಿದ್ದಾಗ ಸುಮ್ಮಿದ್‌ಬುಟ್ಟು ಇಳಿವಯಸಲ್ಲಿ ಮದ್ವೆ ಆಗೋ ಥರ ಈಗ ರಾಜಕೀಯ ಮಾಡೋಕೆ ಹೊಂಟವ್ನಂತಲ್ಲಾ! ಯಾರಾರು ಅವ್ನ್‌ಗೆ ಒಂದು ಬುದ್ಧಿ ಮಾತು ಹೇಳಾಕಾಗಲ್ವೆ?'

... ಬಹುಶಃ ಹೀಗೆ...



ಆ ದೇವನೂರ ಮಹಾದೇವ ಬರೆದ ಅಮಾಸ ಎಂಬ ಕತೆಯಲ್ಲಿನ ಕುರಿಯಯ್ಯನ ಸ್ಥಿತಿಯೇ ದಸಂಸ ಮೊದಲ ತಲೆಮಾರಿಗೆ ಸೇರಿದವರ ಸ್ಥಿತಿಯೂ ಆದಂತೆ ಕಾಣುತ್ತದೆ.

ಹೀಗೆ ಈ ರೀತಿಯ ದೃಶ್ಯಾವಳಿಗಳು ಕಾಣುತ್ತಿರುವುದಕ್ಕೆ - ಈ ಹಿಂದೆ ರಾಜಕಾರಣಿಗಳಿಗೆ ತಮ್ಮ ವೇದಿಕೆ ನೀಡಲು ಸಂಕೋಚಗೊಳ್ಳುತ್ತಿದ್ದ ದಸಂಸವು ಈಗ, ಬೆಂಗಳೂರಿನಲ್ಲಿ ಕಾಂಗ್ರೆಸ್ಸಿನ ಒಂದು ಬಣದೊಟ್ಟಿಗೆ ಗುರುತಿಸಿಕೊಂಡು ದಲಿತರ ಸ್ಥಿತಿಗತಿ, ರಾಜಕಾರಣ ಇತ್ಯಾದಿ ಸಮಾರಂಭ ಮಾಡಿದರೆ, ದಸಂಸದ ಇನ್ನೊಂದು ಬಣವು ಮೈಸೂರಿನಲ್ಲಿ ಕಾಂಗ್ರೆಸ್ಸಿನ ಇನ್ನೊಂದು ಬಣದೊಟ್ಟಿಗೆ ಗುರುತಿಸಿಕೊಂಡು ದಲಿತರ ಸ್ಥಿತಿಗತಿ, ರಾಜಕಾರಣ ಇತ್ಯಾದಿ ಸಮಾರಂಭ ಮಾಡುವ ಸ್ಥಿತಿಗೆ ತಲುಪಿರುವುದು ಕಾರಣವಾಗಿರಬಹುದು.



40

# ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ...?

– ಪ್ರೊ. ವಿ. ಚಂದ್ರಶೇಖರ ನಂಗಲಿ
ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮಾಲೂರು

ಕರ್ನಾಟಕದಲ್ಲಿ ರವಿಕಿರಣಗಳ ಮೊದಲ ಸ್ಪರ್ಶವನ್ನು ಪಡೆಯುವ ಮೂಡಲ ಸೀಮೆಯ ಸಕಲ ಸಹೃದಯರೇ! ನಿಮಗೆಲ್ಲರಿಗೂ ನನ್ನ ಹೃತ್ಪೂರ್ವಕ ನಮಸ್ಕಾರಗಳು.

ಇದೀಗ ತಾನೆ ನಾವೆಲ್ಲರು ಹೆತ್ತ ತಾಯಿಯ ವಿಸ್ತರಣೆಯಾದ ಕೋಲಾರಮ್ಮ, ಭೂಮಿ ತಾಯಿ - ಭುವನೇಶ್ವರಿಯ ಮೆರವಣಿಗೆಯನ್ನು ಮಾಡಿ ಇಲ್ಲಿ ಒಂದಾಗಿ ನೆರೆದಿದ್ದೇವೆ. ವಿದ್ಯಾವಂತ ಜನರ ದೇವರ ಕಲ್ಪನೆಯಲ್ಲಿ ಭೂಮಿತಾಯಿಗೆ ಎಡೆಯಿಲ್ಲ. ಉದಾಹರಣೆಗೆ, ಕನ್ನಡ ಕವಿಗಳು ಕಾವ್ಯಾರಂಭದಲ್ಲಿ ಮಾಡುವ ಇಷ್ಟದೇವತಾ ಪ್ರಾರ್ಥನೆಯಲ್ಲಿ ಭೂಮಿತಾಯಿ ಕಂಡು ಬರುವುದಿಲ್ಲ. ವಿಜ್ಞಾನವನ್ನು ಓದಿಕೊಂಡವರು ಭೂಮಿಯನ್ನು ಸೌರವ್ಯೂಹದ ಒಂದು ಸದಸ್ಯ ಗ್ರಹವೆಂದು ವಸ್ತುನಿಷ್ಠವಾಗಿ ಹೇಳುತ್ತಾರೆ. ಆದರೆ, ಕನ್ನಡ ಜನಪದರು ಬೆಳಗಾದೊಡನೆ ಎದ್ದು ನೆನೆಯುವ ದೇವರು 'ಭೂಮಿತಾಯಿ'.

**ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಾಲಿ?**
**ಎಳ್ಳು ಜೀರಿಗೆ ಬೆಳೆಯೋಳ ಬೂಮ್ತಾಯ್ನ**
**ಎದ್ದೊಂದು ಗಳಿಗೆ ನೆನೆದೇನು?**

ಕನ್ನಡ ಜನಪದ ಸಂಸ್ಕೃತಿಯು ತಾಯಿತತ್ವ ಬಹುಮುಖ್ಯವಾದುದು. ವಿದ್ವಾಂಸರು ಮತ್ತು ವಿಜ್ಞಾನಿಗಳು ಇದನ್ನು



ಗ್ರಹಿಸಿ ತಮ್ಮ ಚಿಂತನೆಯಲ್ಲಿ ಅಳವಡಿಸಿಕೊಳ್ಳಬೇಕಾಗಿದೆ. 'ಹೆತ್ತ ತಾಯಿ'ಯನ್ನು ನೆನೆಸಿಕೊಂಡರೆ ಮಾಸಿದ್ದ ತಲೆಯು ಮಡಿಯಾಯ್ತು ಎನ್ನುವ ಜನಪದರು ತಮ್ಮ ವ್ಯಕ್ತಿತ್ವದ ವಿಕಾಸಕ್ಕೆ ಕಾರಣರಾದ ಕಲ್ಯಾಣ ಶರಣರನ್ನು 'ನನತಾಯಿ' ಎಂದು ಕರೆದಿದ್ದಾರೆ. ಹೀಗೆ ಹೆತ್ತ ತಾಯಿ, ಭೂಮಿತಾಯಿ ಜೊತೆಗೆ ಕಲ್ಯಾಣದ ಶರಣರನ್ನು ಕೂಡ ತಾಯಿಯಾಗಿ ಮನಗಂಡಿರುವ ಬಗೆಯೇ ಕನ್ನಡ ಜನಪದ ಸಂಸ್ಕೃತಿಯ ತಾಯಿತತ್ವವಾಗಿದೆ.

ಸಕಲ ಜೀವರಾಶಿಯ ಅನ್ನನಿಧಿಯಾಗಿ ನಮ್ಮನ್ನು ಹೆತ್ತು, ಹೊತ್ತು, ಪೋಷಿಸುತ್ತಿರುವ ಭೂಮಿತಾಯಿಯ ನಿರ್ವಹಣೆಯು ಆಧುನಿಕ ನಾಗರೀಕತೆಯ ಕಾಲದಲ್ಲಿ ಹೇಗಿದೆ? ಎಂಬ ಚಿಂತನೆಗೆ ತೊಡಗಿದಲ್ಲಿ ಚಿಂತಾಜನಕರಾಗುವ ಪರಿಸ್ಥಿತಿಯಿದೆ. ಕವಿ ಬೇಂದ್ರೆಯವರ ಮಾತುಗಳನ್ನು ಬಳಸಿಕೊಂಡು ಹೇಳುವುದಾದರೆ, ಭೂಮಿ ತಾಯಿ ಚಿಗರಿಗಂಗಳ ಚೆಲುವಿ, ಆಧುನಿಕ ನಾಗರಿಕತೆ ಎಂಬುದು ಬೇಟೆ ನಾಯಿಗಳ ಹಿಂಡಾಗಿ ಕಿತ್ತು ತಿನ್ನುತ್ತಿದೆ. ಬ್ರಿಟಿಷರ ಕಾಲದಲ್ಲಿ ಕೋಲಾರಮ್ಮನ ಗರ್ಭಚೀಲವೆನ್ನ ಬಹುದಾದ ಚಿನ್ನವನ್ನು ಪೂರ್ತಿಯಾಗಿ ತೆಗೆದುಹಾಕಲಾಯ್ತು, ಕೆರೆಗಳ ಸಾಲುಗಳನ್ನೇ ಸೀರೆಯನ್ನಾಗಿ ಉಟ್ಟುಕೊಂಡು ಬೆಟ್ಟಗುಡ್ಡಗಳನ್ನು ಹಾಲುಣಿಸುವ ಎದೆಗಳನ್ನಾಗಿ ಹೊಂದಿರುವ ಕೋಲಾರಮ್ಮನ ಮಡಿಲಿನಲ್ಲಿದ್ದ ದಟ್ಟ ಕುರುಚಲು ಕಾಡುಗಳೆಲ್ಲ ಕೇವಲ ನಲವತ್ತು ವರ್ಷಗಳಲ್ಲಿ ನಿರಂತರ ಲೂಟಿಗೊಳಗಾಗಿ ಸರ್ವ ನಾಶವಾಯ್ತು, ಮಳೆನೀರನ್ನು ಸ್ಪಂಜಿನಂತೆ ತನ್ನಲ್ಲಿ ಶೇಖರಿಸಿಟ್ಟುಕೊಳ್ಳುವ ಭೂಮೇಲ್ಮೈ ಮತ್ತು ಭೂಗರ್ಭದ ಮರಳರಾಶಿಯನ್ನು ಕಳ್ಳ ಕಾಕರಂತೆ ದರೋಡೆ ಮಾಡುತ್ತಾ ಸಕಲ ಜೀವರಾಶಿಯ ಪಾಲಿಗೆ ಅನ್ನಪೂರ್ಣೆಯಾಗಿದ್ದ ಕೋಲಾರಮ್ಮನನ್ನು ನಾವಿಂದು ಬಂಜೆಯಾಗಿಸುವಲ್ಲಿ ಯಶಸ್ವಿಯಾಗಿದ್ದೇವೆ. ಕರ್ನಾಟಕದಲ್ಲಿ ಭವಿಷ್ಯದ ಮರುಭೂಮಿಯಾಗುವ ಎಲ್ಲಾ ಸಾಧ್ಯತೆಗಳು ಮತ್ತು ಗುಣಲಕ್ಷಣಗಳು ಕೋಲಾರ ಜಿಲ್ಲೆಯಲ್ಲಿ ಎದ್ದು ಕಾಣುತ್ತಿವೆ.

ನನ್ನ ಬಾಲ್ಯ ಕಾಲದಲ್ಲಿ ಪ್ರತಿ ಎರಡು ವರ್ಷಗಳಿಗೊಮ್ಮೆ ನಂಗಲಿ ಕೆರೆ ತುಂಬಿ ಕೋಡಿಹರಿಯುತ್ತಿತ್ತು. ರಾಜಕಾಲುವೆಗಳಲ್ಲಿ ಕುಡಿಯುವ ನೀರನ್ನು ಬಿಂದಿಗೆಗಳಲ್ಲಿ ತುಂಬಿಕೊಂಡು ಹೊತ್ತು ಸಾಗುವ ಮಹಿಳೆಯರ, ಹೆಣ್ಣು ಮಕ್ಕಳ ದೃಶ್ಯವನ್ನು ಮರೆಯಲಾರೆ. ನಂಗಲಿಯಲ್ಲಿ ಗದ್ದೆಸಾಲುಗಳ ಹಸಿರು ಪರಿಸರವನ್ನು ನೋಡುತ್ತಿದ್ದರೆ, ಕುವೆಂಪು ಅವರ ಮಲೆನಾಡಿನ ತುಣಕೊಂದು ಹಾಸಿಕೊಂಡಿರುವಂತೆ ಭಾಸವಾಗುತ್ತಿತ್ತು. ನಂತರ, ನನ್ನ ಕಾಲೇಜು ವಿದ್ಯಾಭ್ಯಾಸದ ಕಾಲದಲ್ಲಿ ಅಂದರೆ ಎಪ್ಪತ್ತರ ದಶಕದಲ್ಲಿ ಮೂರ್ನಾಲ್ಕು ವರ್ಷಗಳಿಗೊಮ್ಮೆ ನಂಗಲಿ ಕೆರೆ ತಪ್ಪದೆ ತುಂಬುತ್ತಿತ್ತು. ತೊಂಬತ್ತರ ದಶಕದ ಹೊತ್ತಿಗೆ ಐದಾರು ವರ್ಷಗಳಿಗೊಮ್ಮೆ ತುಂಬುವ ಪರಿಸ್ಥಿತಿ ನಂಗಲಿ ಕೆರೆಗೆ ಎದುರಾಯ್ತು. 2000ದ ಹೊತ್ತಿಗೆ ನಂಗಲಿ ಕೆರೆಯ ರಾಜಕಾಲುವೆಗಳೆಲ್ಲ ಚರಂಡಿಗಳಾಗಿ ಮಾರ್ಪಟ್ಟವು. ನಮ್ಮ



ಪೂರ್ವಿಕರು ಹೇಳುತ್ತಿದ್ದ ಗಾದೆ ಮಾತು "ಚೆರುವು ನಿಂಡಿತೆ ನಂಗಲಿ ಲೇಕಪೋತೆ ಎಂಗಿಲಿ" (ಕೆರೆ ತುಂಬಿದರೆ ನಂಗಲಿ ಇಲ್ಲದಿದ್ರೆ ಎಂಜಲು) ಎಂಬುದು ನಿಜವಾಯ್ತು. ನನಗೆ ತಿಳಿದಂತೆ 2002ರಲ್ಲಿ ನಂಗಲಿ ಕೆರೆ ತುಂಬಿ ಕೋಡಿಹರಿಯಿತು. ಈಗ 2014ನೇ ವರ್ಷ. ಕಳೆದ ಹನ್ನೆರಡು ವರ್ಷಗಳಿಂದ ನಂಗಲಿ ಕೆರೆ ತುಂಬಿಲ್ಲ. ಬದಲಿಗೆ ಗೌರಿಬಿದನೂರಿನ ಚಿತ್ರಾವತಿಯ ಉತ್ತರ ಪಿನಾಕಿನಿ ಮಡಿಲನ್ನು ಬರಿದು ಮಾಡಿದ ಮರಳುಗಣಿಗಾರಿಕೆಯ ಕಬಂಧ ಬಾಹುಗಳು ಮುಳಬಾಗಿಲಿನ ಕೌಂಡಿನ್ಯ ನದಿಯ ಮಡಿಲಿಗೂ ಚಾಚಿಕೊಂಡು ಈ ಪ್ರದೇಶದಲ್ಲೂ ಮರಳು ಗಣಿಗಾರಿಕೆಯ ಅಟ್ಟಹಾಸ ಮೆರೆಯುತ್ತಿದೆ.

ನಾನಿಲ್ಲಿ ನಂಗಲಿ ಕೆರೆಯ ಉದಾಹರಣೆಯನ್ನು ಕೊಟ್ಟಿದ್ದರೂ ಈ ಕೆರೆಯ ವೃತ್ತಾಂತವು ಬಹುತೇಕ ನಾಡಿನ ಎಲ್ಲಾ ಕೆರೆಗಳಿಗೂ ಅನ್ವಯಿಸುತ್ತದೆ. ಕಳೆದ ಹನ್ನೆರಡು ವರ್ಷಗಳಿಂದ ನಂಗಲಿ ಕೆರೆ ತುಂಬದಿರುವುದಕ್ಕೂ ಭೂಮಿಯು ಬಿಸಿಗೋಳವಾಗುತ್ತಿರುವುದಕ್ಕೂ ನೇರವಾದ ಸಂಬಂಧವಿದೆ. ಸ್ಥಳೀಯ ವಿದ್ಯಮಾನಗಳ ಹಿಂದೆ ಜಾಗತಿಕ ತಾಪಮಾನವಿರುವುದನ್ನು ಅರ್ಥಮಾಡಿಕೊಳ್ಳದಿದ್ದರೆ ನಮಗೆ ಯಥಾರ್ಥ ಸತ್ಯದ ದರ್ಶನವಾಗುವುದಿಲ್ಲ. ಇಂದು ಉನ್ನತ ಶಿಕ್ಷಣದಲ್ಲಿ ಬ್ಯುಸಿನೆಸ್ ಮ್ಯಾನೇಜ್‌ಮೆಂಟ್, ಹೋಟೆಲ್ ಮ್ಯಾನೇಜ್‌ಮೆಂಟ್ ಮುಂತಾದ ಕೋರ್ಸುಗಳು ವ್ಯಾಪಾರಿ ದೃಷ್ಟಿಯಿಂದ ಸಾಗುತ್ತಿವೆ. ನಮ್ಮ ದೇಶಕ್ಕೆ ಅಗತ್ಯವಾಗಿರುವುದು ವೇಸ್ಟ್ ಮ್ಯಾನೇಜ್‌ಮೆಂಟ್, ನೇಚರ್ ಮ್ಯಾನೇಜ್‌ಮೆಂಟ್ ರೀತಿಯ ಕೋರ್ಸುಗಳು, ನಿಸರ್ಗದ ಸಹಜ ನೆಲೆಗಳು, ಪರಿಸರದ ಅಂತರ್ ಸಂಬಂಧಗಳು ಬಹು ಸೂಕ್ಷ್ಮವಾದುವು. ಇದು ದೃಗ್ಗೋಚರವಲ್ಲ. ಅಂತರ್ಜಲದಂಥ ವಿದ್ಯಮಾನಕ್ಕೆ ಯುಗಾಂತರಗಳ ಸಂಸ್ಕಾರವಿರುತ್ತದೆ. ಇದು ಖಾಲಿಯಾಗಿ ಹೋದರೆ ಭವಿಷ್ಯತ್ತಿನಲ್ಲಿ ಅತ್ಯಂತ ಘೋರವಾದ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ.

ಭೂತಕಾಲ - ವರ್ತಮಾನ - ಭವಿಷ್ಯಗಳನ್ನು ಏಕಕಾಲಕ್ಕೆ ಒಳಗೊಳ್ಳಬಲ್ಲ, ನಿಸರ್ಗ ಚಿಂತಕರಾದ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ ಕಥನ ಮಥನಗಳನ್ನು ಈ ದೃಷ್ಟಿಯಿಂದ ಗಾಢವಾಗಿ ಪರಿಭಾವಿಸಬೇಕಾಗಿದೆ. ಒಂದು ತೊರೆಯ ಜಾಡನ್ನು ಹಿಡಿದು ಸಾಗುವ ತೇಜಸ್ವಿ ಆ ತೊರೆಗೆ ಜೀವದಾಯಕವಾದ ಜಲಾನಯನ ಪ್ರದೇಶವೊಂದನ್ನು ಕಂಡು ಹಿಡಿಯುತ್ತಾರೆ. ಅಲ್ಲಿ ನೀರು ತೆವಳುತ್ತಾ ಜಿನುಗುತ್ತಾ ತೊಟ್ಟಿಕ್ಕುತ್ತಿರುತ್ತದೆ. ತೊರೆಯ ಮೂಲವನ್ನು ಕಂಡುಹಿಡಿಯಲೇಬೇಕೆಂಬ ಉಮೇದಿನಲ್ಲಿದ್ದ ತೇಜಸ್ವಿಯವರು ಅಲ್ಲಿ ಸುತ್ತಮುತ್ತ ದಟ್ಟವಾಗಿ ಹಬ್ಬಿಕೊಂಡಿದ್ದ ಜರಿಗಿಡಗಳು, ಪಾಚಿ ಮುಂತಾದ ಸಸ್ಯಜಾಲವನ್ನೆಲ್ಲಾ ಕಿತ್ತು ಹಾಕುತ್ತಾರೆ. ಆದರೆ ತೊರೆಯ ಮೂಲವೆನ್ನಬಹುದಾದ ಜಲದ ಕಣ್ಣುಗಳು ಅಥವಾ ನೀರಿನ ಸೆಲೆಗಳು ತೇಜಸ್ವಿಯವರಿಗೆ ಕಾಣುವುದಿಲ್ಲ. ಬದಲಿಗೆ ತೇಜಸ್ವಿಯ ವಿಧ್ವಂಸಕ ಕೃತ್ಯದ ಪರಿಣಾಮವೋ ಎಂಬಂತೆ ತೊಟ್ಟಿಕ್ಕುತ್ತಿದ್ದ ನೀರಿನ ಹನಿಗಳು ಮಾಯವಾಗಿಬಿಡುತ್ತವೆ.



ತೊರೆಯ ಮೂಲವನ್ನು ಕಂಡುಹಿಡಿಯಬೇಕೆಂಬ ಉತ್ಸಾಹದಲ್ಲಿದ್ದ ತೇಜಸ್ವಿಯವರು ಕಡೆಗೆ ಪೆಚ್ಚಾಗಿ ನಿಲ್ಲುತ್ತಾರೆ. ಮನುಷ್ಯರ ಸ್ವಯಂಕೃತಾಪರಾಧದಿಂದ ಸರ್ವನಾಶಗೊಳ್ಳುವ ನಿಸರ್ಗ ಸಹಜ ವಿದ್ಯಮಾನಗಳಿಗೆ ಇಡೀ ಪ್ರಸಂಗವೇ ಅದ್ಭುತ ರೂಪಕವಾಗಿದೆ.

೧೯೫೦-೬೦ರ ದಶಕದ ಬೆಂಗಳೂರು ನನ್ನ ಪಾಲಿಗೆ ಮರೆಯಲಾಗದ ಸಮೃದ್ಧವಾದ ಸ್ಫೂರ್ತಿಯಾಗಿ ಉಳಿದಿದೆ. ಅತ್ಯಂತ ಸಮೃದ್ಧವಾದ ಜೀವರಾಶಿಯಿಂದ ಕೂಡಿ, ಜೀವಿ ವೈವಿಧ್ಯತೆಯ ನೆಲೆಮನೆಯಾಗಿದ್ದ ಬೆಂಗಳೂರನ್ನು ನನ್ನ ನಂತರದ ತಲೆಮಾರುಗಳು ಅನುಭವಿಸಲು ಸಾಧ್ಯವಾಗಲಿಲ್ಲ. ಬೆಂಗಳೂರಿನ ಜೀವಿವೈವಿಧ್ಯತೆಯನ್ನು ಸಾವಿರಾರು ಪುಟಗಳ ಜೀವಂತ ಗ್ರಂಥವೆಂದು ಊಹಿಸಿಕೊಳ್ಳೋಣ. ಈ ಬಗೆಯ ಜೀವಂತ ಗ್ರಂಥದ ಮೊದಲ ಪುಟಗಳನ್ನು ಕಂಡು, ಅನುಭವಿಸಿದ್ದ ಕೆನಿತ್ ಅಂಡರ್‌ಸನ್ ಅವರು ಬೆಂಗಳೂರಿನ ಸುತ್ತಮುತ್ತ ಬದುಕಿದ್ದ ನರಭಕ್ಷಕ ಚಿರತೆಗಳನ್ನು ಬೇಟೆಯಾಡಿದ್ದಾರೆ. ಆದರೆ ನಾನು ಕಂಡು ಅನುಭವಿಸಿದ್ದು ಬೆಂಗಳೂರಿನ ಜೀವಿ ವೈವಿಧ್ಯತೆ ಎಂಬ ಜೀವಂತಗ್ರಂಥದ ಕೊನೆಯ ಪುಟಗಳನ್ನು! ಇದನ್ನು ಇನ್ನು ಮುಂದೆ ಯಾರೂ ನೋಡಲು ಸಾಧ್ಯವಿಲ್ಲ. ಬೆಂಗಳೂರಿನ ಹೃದಯ ಭಾಗದಂತಿರುವ ಮಾಗಡಿ ರಸ್ತೆಯ ಪೋಲೀಸ್ ಕಾಲೋನಿಯಲ್ಲಿ ಬೆಳೆದ ನಾನು, ಈ ಬಿಂದುವಿನಿಂದ ಎಂಟು ದಿಕ್ಕುಗಳವರೆಗೆ ಐದು ಮೈಲಿಗಳ ಸುತ್ತಳತೆಯ ವಿಶಾಲ ಬಯಲು ಪ್ರದೇಶದಲ್ಲಿ ಬೋಳು ತಲೆಯ ರಣಹದ್ದುಗಳು, ಬಗೆಬಗೆಯ ಹಾವುಗಳು, ಹುಲ್ಲುಗಾವಲುಗಳು, ತೋಟದ ಬೆಳೆಗಳು, ವೈವಿಧ್ಯಮಯ ಹಕ್ಕಿಗಳು, ಝುಗಝುಗಿಸುವ ಮಿಂಚು ಹುಳುಗಳು, ವಟಗುಟ್ಟುವ ಕಪ್ಪೆಗಳು, ಮಿರಿಮಿರಿ ಮಿಂಚುವ ಮೀನುಗಳು, ಅಡ್ಡಡ್ಡ ಸಾಗುವ ಏಡಿಕಾಯಿಗಳು, ಯೇಸುವಿನ ಕೊನೆಯ ಭೋಜನದಂತಿದ್ದ ತೊರೆಜಾಲಗಳು, ರಾಜಕಾಲುವೆಗಳು, ಕೆರೆ ಸಾಲುಗಳು ಅಲ್ಲದೆ ಅಸಂಖ್ಯಾತ ಕ್ರಿಮಿ-ಕೀಟಗಳು ನನ್ನ ಬಾಲ್ಯಕಾಲದ ಚಿತ್ತಭಿತ್ತಿಯಲ್ಲಿ ಅಚ್ಚೊತ್ತಿದ ಮತ್ತು ಅಳಿಸಲಾಗದ ಜೀವ ಮುದ್ರೆಗಳಾಗಿವೆ. ಇಂತಹ ಜೀವಿ ವೈವಿಧ್ಯತೆಯನ್ನು ಸಂಪೂರ್ಣವಾಗಿ ಕಳೆದುಕೊಂಡಿರುವ ಬೆಂಗಳೂರು ನಿರ್ಜೀವವಾಗಿದ್ದು ಮಹಾನಗರವಾಗಿ ಮೆರೆಯುತ್ತಿದೆ.

ಮನುಷ್ಯ ಮಾತ್ರರಿಂದ ಕೂಡಿರುವ ಬೆಂಗಳೂರು ಮಹಾನಗರವನ್ನು ನಾನು ಬೃಹತ್ ಮಾನವತೋಪು ಎಂದು ಕರೆಯಲು ಇಚ್ಛಿಸುತ್ತೇನೆ. ತಾನೂ ಬೆಳೆದು ಸಕಲ ಜೀವರಾಶಿಯನ್ನು ಬೆಳೆಸುವುದು ಕಾಡು. ತಾನೊಂದೇ ಬೆಳೆಯುವುದು ತೋಪು. ಜೀವಿ ವೈವಿಧ್ಯತೆಯನ್ನು ಕಳೆದುಕೊಂಡಿರುವ ಬೆಂಗಳೂರು ಮಹಾನಗರದ ಬಗ್ಗೆ ಆಲೋಚಿಸುತ್ತಿದ್ದರೆ, ಒಂದು ತೊರೆಯ ಜಾಡನ್ನು ಹಿಡಿದು ಸಾಗಿದ ತೇಜಸ್ವಿಯವರ ವಿಧ್ವಂಸಕ ಕೃತ್ಯ ನೆನಪಾಗುತ್ತದೆ. ಈ ಕಥನದ ಮೂಲಕ ತೇಜಸ್ವಿಯವರು ನಮಗೆ ನಿಸರ್ಗದ ಸಹಜ ನೆಲೆಗಳು ಮತ್ತು ಪರಿಸರದ ಅಂತರ್ ಸಂಬಂಧಗಳ ಸೂಕ್ಷ್ಮದರ್ಶಕದ ಕಾಣ್ಕೆಯನ್ನೇ



ಕೊಟ್ಟಿದ್ದಾರೆ. ೧೯೬೦ರ ದಶಕದಿಂದ ಆರಂಭವಾದ ಮೊದಲನೆ ಹಸಿರುಕ್ರಾಂತಿ, ಏಕರೂಪಾತ್ಮಕ ಬೇಸಾಯ, ನಗರೀಕರಣ, ಕಾಂಕ್ರೀಟು ಕಾಡುಗಳ ಸಮೃದ್ಧಿ, ಕೈಗಾರಿಕೀಕರಣ, ಕೊಳಚೆ ಪ್ರದೇಶಗಳ ಜನನ, ಬಸ್ ಸ್ಟ್ಯಾಂಡು - ಕ್ರೀಡಾಂಗಣ - ಬಡಾವಣೆಗಳಾಗಿ ಮಾರ್ಪಟ್ಟು ವಂಶ ನಾಶಗೊಂಡ ಕೆರೆ ಸಾಲುಗಳು ಮುಂತಾದ ಕೃತ್ಯಗಳೆಲ್ಲ ಹಿಂಸೆಯನ್ನು ಬಿತ್ತಿ ಹಿಂಸೆಯು ಬೆಳೆ ಪಡೆದಂತೆ ಸ್ವಯಂಕೃತಾಪರಾಧವಾಗಿದೆ. ಭಾಗೀರಥಿಯನ್ನು ಬಲಿಗೊಟ್ಟು ಕೆರೆಯನ್ನು ತುಂಬಿಸಿಕೊಂಡಂತೆ, ಜೀವಿ ವೈವಿಧ್ಯತೆಯನ್ನು ನೈವೇದ್ಯ ಮಾಡಿ ಬೆಂಗಳೂರು ಮಹಾನಗರ ಮನುಷ್ಯರಿಂದ ತುಂಬಿ ತುಳುಕುತ್ತಿದೆ. ಪಾಶ್ಚಾತ್ಯ ದೇಶಗಳಲ್ಲಿ ಮಹಾನಗರಗಳು ಜೀವಿ ವೈವಿಧ್ಯತೆಯ ಆಗರಗಳೂ ಆಗಿ ಜೀವಂತವಾಗಿ ಕಂಗೊಳಿಸುತ್ತಿದ್ದರೆ, ನಮ್ಮ ದೇಶದ ಮಹಾನಗರಗಳು ಜೀವಿ ವೈವಿಧ್ಯತೆಯ ಸ್ಮಶಾನವಾಗಿ ಇಂದ್ರನ ನಂದನವನದಂತೆ ಕೃತಕ ಸೌಂದರ್ಯದಿಂದ ಬೀಗುತ್ತಿವೆ.

ಮನುಷ್ಯರ ಹುಟ್ಟು ನಿಸರ್ಗ ಸಹಜ. ಸಾವು ಕೂಡ ನಿಸರ್ಗ ಸಹಜ. ಆದರೆ ಹುಟ್ಟು - ಸಾವುಗಳ ನಡುವಣ ಬದುಕು - ಸಂಸ್ಕೃತಿ - ನಾಗರಿಕತೆ ಏಕೆ ನಿಸರ್ಗ ಸಹಜವಾಗಿರುವುದಿಲ್ಲ ಎಂಬುದನ್ನು ಪ್ರಜ್ಞಾಪೂರ್ವಕವಾಗಿ ಅರಿತುಕೊಳ್ಳಬೇಕು. ಇಂದಿನ ಸಂದರ್ಭದಲ್ಲಿ

1. ಶಿಕ್ಷಿತರಾಗುವುದೆಂದರೆ ಕನ್ನಡದಿಂದ ದೂರ ಸರಿಯುವುದು

2. ನಾಗರಿಕ (ಸಿಟಿಜನ್)ರಾಗುವುದೆಂದರೆ ನಿಸರ್ಗದಿಂದ ದೂರಾಗುವುದು.

3. ಸೈಬರಿಕ (ನೆಟಿಜನ್)ರಾಗುವುದೆಂದರೆ ಜನ ಸಮುದಾಯಗಳಿಂದ ದೂರಾಗುವುದು ಎಂಬಂಥ ಪರಿಸ್ಥಿತಿಯಿದೆ. ಈ ನೆಲದ ನಮ್ಮ ಭಾಷೆಗಳಿಂದ, ನಮ್ಮ ಪರಿಸರಗಳಿಂದ, ನಮ್ಮ ಜನ ಸಮುದಾಯಗಳಿಂದ ನಮ್ಮನ್ನು ಬೇರ್ಪಡಿಸುತ್ತಿರುವ ಪಟ್ಟಭದ್ರ ಹಿತಾಸಕ್ತಿಗಳಾವುವು? ಎಂಬುದನ್ನು ಮನಗಾಣಬೇಕು.

ನಮ್ಮಲ್ಲಿ "ಅರಿಷಡ್ವರ್ಗಗಳು" ಎಂಬ ಸಾಂಪ್ರದಾಯಿಕವಾದ ಮಾತು ಬಳಕೆಯಲ್ಲಿದೆ. ಕಾಮ - ಕ್ರೋಧ - ಲೋಭ - ಮೋಹ - ಮದ - ಮಾತ್ಸರ್ಯಗಳನ್ನು ಅಂತರಂಗದ ಆರು ಶತ್ರುಗಳೆಂದು ಗುರುತಿಸಿದ್ದಾರೆ. ಪ್ರಸ್ತುತ ಬಹಿರಂಗದ ಅರಿಷಡ್ವರ್ಗಗಳು ಯಾವುವು? ಎಂದು ತಿಳಿಯಬೇಕು. ಮಾನವ ನಿರ್ಮಿತಗಳಾದ ಜಾತಿ - ಮತ, ಧರ್ಮ, ಭಾಷೆ, ಕಾಲ, ದೇಶಗಳೇ ಬಹಿರಂಗದ ಆರು ಶತ್ರುಗಳು. ಜಾತಿ ಕಾಮದಿಂದ ಜಾತ್ಯಾಂಧತೆ, ಮತಕ್ರೋಧದಿಂದ ಮತಾಂಧತೆ, ಧರ್ಮ ಮೋಹದಿಂದ ಧರ್ಮಾಂಧತೆ, ಭಾಷಾ ಮೋಹದಿಂದ ಭಾಷಾಂಧತೆ ಹುಟ್ಟುತ್ತದೆ. ಕುವೆಂಪು ಅವರು ಹೇಳುತ್ತಿರುವ ವಿಶ್ವಮಾನವತ್ವ ಪ್ರಾಪ್ತಿಯಾಗಲು ಈ ಇಬ್ಬಗೆಯ ಅರಿಷಡ್ವರ್ಗಗಳೇ ಅಡೆ-ತಡೆಗಳಾಗಿವೆ. ಇಂತಹ ಆರು ಜೊತೆ ಪಿಶಾಚಿಗಳನ್ನು ನಮ್ಮ ದೇಹ ಮತ್ತು ಮನಸ್ಸಿನೊಳಗೆ ಬಿಟ್ಟುಕೊಳ್ಳಬಾರದು. ಈ



ಪಿಶಾಚಿಗಳು ಉಚ್ಚಾಟನೆಯಾಗದ ಹೊರತು ನಮ್ಮ ದೇಹ ಮತ್ತು ಮನಸ್ಸುಗಳು ದೇವರು ನೆಲೆಸಲು ತಕ್ಕುದಾದ ದೇವಾಲಯವಾಗುವುದಿಲ್ಲ. ಈ ದೃಷ್ಟಿಯಿಂದ ಗೋಡೆ ಬಾಗಿಲುಗಳಿಲ್ಲದ ಮಂಟಪ ಪ್ರಜ್ಞೆ ನಮಗಿಂದು ಅತ್ಯಗತ್ಯ! ಗುಡಿ ಚರ್ಚು ಮಸೀದಿಗಳೆಂಬ ಮಂದಿರ ಪ್ರಜ್ಞೆಯನ್ನು ಬೆಳೆಸಿಕೊಂಡರೆ ನಮಗೆ ಮುಕ್ತಿಯಿಲ್ಲ. ಕುವೆಂಪು ಅವರ ವಿಶ್ವಮಾನವ ತತ್ವದೊಂದಿಗೆ, ವಿಶ್ವಪರಿಸರ ತತ್ವವಾಗಿರುವ "ಭೂಮಿತಾಯಿ" ಕಾಣ್ಕೆಯನ್ನು ನಮ್ಮ ನಡೆ-ನುಡಿ, ರುಚಿ-ಅಭಿರುಚಿ, ಜೀವನ ಶೈಲಿಗಳಲ್ಲಿ ಅಳವಡಿಸಿಕೊಳ್ಳಬೇಕು. ಕುವೆಂಪು ಅವರ 'ಅನಿಕೇತನ'ವು ವಿಶ್ವ ಮಾನವ ಗೀತೆಯಾಗಿರುವಂತೆ ಲಕ್ಷ್ಮೀಪತಿ ಕೋಲಾರ ಅವರ 'ನವಿಲು ಕಿನ್ನರಿ'ಯನ್ನು ವಿಶ್ವ ಪರಿಸರಗೀತೆಯಾಗಿ ಅಂಗೀಕರಿಸಬೇಕೆಂಬ ದೃಷ್ಟಿಯಿಂದಲೇ ಈ ಸಮ್ಮೇಳನದಲ್ಲಿ ಹಾಡಲು ಅವಕಾಶ ಕಲ್ಪಿಸಲಾಗಿದೆ. ವಿಶ್ವ ಶಾಂತಿಯ ಬತ್ತಳಿಕೆಯಲ್ಲಿ 'ನವಿಲು ಕಿನ್ನರಿ'ಯು ವಂದನೆ ಸಲ್ಲಿಸುವ ಭಾವ ಬಾಣವಾಗಿ ಗುರಿ ಮುಟ್ಟಲೆಂದು ಹಾರೈಸುತ್ತೇನೆ.

ಸಾಹಿತ್ಯ ಸಮ್ಮೇಳನಗಳು ಶುದ್ಧಾಂಗವಾಗಿ ಸಾಹಿತ್ಯವೇದಿಕೆಗಳಾಗಬೇಕೆಂಬ ಮಡಿವಂತಿಕೆಯನ್ನು ನಾನು ಒಪ್ಪುವುದಿಲ್ಲ. ಸಾಹಿತ್ಯವು ಸಾಹಿತಿಗಳೆನಿಸಿಕೊಂಡವರ ಖಾಸಗಿ ಆಸ್ತಿಯಾಗುಳಿಯುವುದು ಅದರ ದುರಂತವೆನ್ನಬಹುದು. ಸಾಹಿತ್ಯ ಸಮ್ಮೇಳನಗಳು ವೈವಿಧ್ಯಮಯವಾದ ಜೀವನ ಪ್ರವಾಹದ ಅಭಿವ್ಯಕ್ತಿಯಾಗಿ ಇದು ನಮ್ಮದು ಎಂದು ಅನ್ನಿಸಬೇಕು. ಸಾಹಿತ್ಯವೆಂದರೆ ಲಿಟರೇಚರ್ ಎಂಬ ಅಕ್ಷರ ಜ್ಞಾನವಾಗಿ ಉಳಿಯದೆ, ನಮ್ಮ ಬದುಕಿನ ಎಲ್ಲ ನೆಲೆಗಳ ಯೂನಿಯನ್, ಕಾಂಬಿನೇಷನ್ ಆಗಬೇಕು. ಆದ್ದರಿಂದಲೇ ಪ್ರಸ್ತುತ ಸಾಹಿತ್ಯ ಸಮ್ಮೇಳನಕ್ಕೆ ಭೂಮಿತಾಯಿ ತತ್ವದ ತಳಪಾಯವನ್ನು ನಿರ್ಮಿಸಲಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಅಧ್ಯಕ್ಷರಾದ ಜೆ.ಜಿ. ನಾಗರಾಜ್‌ರವರು ಈ ಆಶಯಕ್ಕೆ ಸ್ಪಂದಿಸುತ್ತಾ ಭೂಮಿತಾಯಿಯ ಸ್ತಬ್ಧ ಚಿತ್ರದ ಮೆರವಣಿಗೆ ಮಾಡಿ ಜಿಲ್ಲೆಯ ಧ್ವನಿಗೆ ಪ್ರತೀಕವಾಗಿದ್ದಾರೆ. ಇಂದು ಸಾಹಿತ್ಯದ ಓದು ಮಾತ್ರವಲ್ಲ. ಪ್ರಕೃತಿ ವಿಜ್ಞಾನಗಳ ಓದು, ಮಾನವಿಕ ಅಧ್ಯಯನಗಳ ಓದು ಮತ್ತು ವಾಣಿಜ್ಯ ಅಧ್ಯಯನಗಳ ಓದು ನಮ್ಮ ಕಾಲದ ಪರಿಸರ ಮಾಲಿನ್ಯದಂತೆಯೇ ಕಲುಷಿತವಾಗಿದೆ. ಕವಿ ಬೇಂದ್ರೆಯವರು 1963ರಲ್ಲಿ ಸಿದ್ಧಪಡಿಸಿದ 'ನನ್ನ ನಾ ಕಂಡಂತೆ' ಎಂಬ ಬರಹದಲ್ಲಿ ಹೇಳಿರುವ ಮಾತುಗಳಿವು... 'ನನ್ನ ತಾಯಿ ನನ್ನನ್ನು ಕಾಪಾಡುತ್ತಿದ್ದಾಳೆ. ತಾಯಿಗೆ ಕೆಡುಕೆನಿಸುವಂಥ ಯಾವುದನ್ನು ಮಾಡಬಾರದೆಂದು ನನ್ನ ಆತ್ಮ ಎಚ್ಚರವಾಗಿರುತ್ತದೆ.' ಬೇಂದ್ರೆಯವರು ಹೆತ್ತ ತಾಯಿ ಮತ್ತು ಭೂಮಿತಾಯಿಯನ್ನು ಅಭೇದ ಕಲ್ಪನೆಯಿಂದ ಮನಗಂಡಿದ್ದು ಲೇಸು ನುಡಿಯನ್ನಾಡಿದ್ದಾರೆ. ಈ ಭೂಮಿ ಇರುವುದು ಮನುಷ್ಯರಿಗೆ ಮಾತ್ರವಲ್ಲ! ಸಕಲ ಜೀವರಾಶಿಯು ಭೂಮಿ ತಾಯಿಯ ಸಂತಾನವಾಗಿದೆ. ನಿಸರ್ಗದ ಸಂಪನ್ಮೂಲಗಳಿರುವುದು

ಮನುಷ್ಯರ ಪ್ರಗತಿಗಾಗಿ ಅಲ್ಲ! ಸಕಲಜೀವರಾಶಿಯ ಹಿತದಲ್ಲಿ ಮನುಷ್ಯರ ಹಿತವಿದೆ ಎಂಬುದನ್ನು ಮರೆಯಬಾರದು. ಮನುಷ್ಯರ ನಡೆ-ನುಡಿ, ರುಚಿ - ಅಭಿರುಚಿ, ಜೀವನಶೈಲಿ, ಶಿಕ್ಷಣ, ಅಭಿವೃದ್ಧಿ ಯೋಜನೆಗಳೆಲ್ಲವು ಜೀವಕೇಂದ್ರಿತ (ಬಯೋಸೆಂಟ್ರಿಕ್) ಆಗಬೇಕು. ಆದರೆ ಇವೆಲ್ಲವು ಇಂದು ಮನುಷ್ಯಕೇಂದ್ರಿತ (ಆಂತ್ರಪೊ-ಸೆಂಟ್ರಿಕ್) ಆಗಿಬಿಟ್ಟಿವೆ. ಇಡೀ ಮನುಕುಲದ ಸ್ವರತಿ ಸಂಪ್ರೀತಿಯನ್ನು ಸುಸ್ಪಷ್ಟವಾಗಿ ಗುರುತಿಸಬಹುದು. ಖಲೀಲ್‌ಗಿಬ್ರಾನ್ ಪ್ರಕಾರ ಆಧುನಿಕ ಮಾನವರ ಗುಣಲಕ್ಷಣಗಳಿವು. '...ಮನುಷ್ಯ ಯಂತ್ರಗಳನ್ನು ಕಂಡುಹಿಡಿದು ಅವುಗಳ ಮೇಲೆ ಚಲಿಸುವುದನ್ನು ಕಲಿತ, ಈಗ ಯಂತ್ರಗಳೇ ಮನುಷ್ಯರನ್ನು ನಡೆಸುತ್ತಿವೆ.'

ನಮ್ಮ ಎಲ್ಲಾ ವಿಧವಾದ ಓದುಗಳು ಭೂಮಿತಾಯಿಯನ್ನು ಕಾಪಾಡಿಕೊಳ್ಳುವ ಓದುಗಳಾಗಬೇಕು. ಮನುಷ್ಯರ ಸ್ವಾರ್ಥ, ಸ್ವಪ್ರತಿಷ್ಠೆ, ಸ್ವಹಿತಾಸಕ್ತಿಗೆ ಬದ್ಧವಾದ ಓದುಗಳನ್ನು ನೋಡುತ್ತಿದ್ದರೆ ಜಿಗುಪ್ಸೆಯಾಗುತ್ತದೆ. 'ನನ್ನ ನಾಕಂಡಂತೆ' ಲೇಖನದಲ್ಲಿ ಬೇಂದ್ರೆ ನುಡಿಗಳಿವು: ... ಪ್ರಕೃತಿ ಕಾಯ್ಕೊಳ್ಳದಾಂವ ಪುರುಷನ ಅಲ್ಲ. ಪ್ರಕೃತಿಯನ್ನು ಧಿಕ್ಕರಿಸುವವ ಎಂಥಾ ಪುರುಷ?... ಇಂಥ ಅರಿವಿನಿಂದಲೇ ಕುವೆಂಪು, ಶಿವರಾಮಕಾರಂತ, ತೇಜಸ್ವಿಯವರ ಕಥನ-ಮಥನಗಳು ಮೂಡಿಬಂದಿವೆ. ವಿವಿಧ ವಾದಗಳಿಂದ (ಇಸಂ) ಮೂಡಿಬಂದಿರುವ ಕನ್ನಡದ ಸಾಹಿತ್ಯ ವಿಮರ್ಶೆಯನ್ನು ಗಮನಿಸಿದರೆ ಸಾಹಿತ್ಯದ ಓದುಗಳು ತೋಪಾಗುವುದನ್ನು ಮನಗಾಣಬಹುದು. ಪ್ರಗತಿಶೀಲವಾದ, ನವ್ಯವಾದ, ಬಂಡಾಯವಾದ, ದಲಿತವಾದ, ಸ್ತ್ರೀವಾದ, ಸಮಾಜವಾದ, ಪರಿಸರವಾದ, ಮುಂತಾದ ಎಲ್ಲಾ ಬಗೆಯ ಓದುಗಳನ್ನು ತನ್ನಲ್ಲಿ ಅರಗಿಸಿಕೊಳ್ಳುವ 'ಭೂಮಿತಾಯಿಓದು' ನಮಗಿಂದು ಬೇಕಾಗಿದೆ.

ಈ ವಿಷಯದಲ್ಲಿ ಅಕ್ಷರಸ್ಥರಾದ ವಿದ್ಯಾವಂತರಿಗಿಂತಲೂ ನಿರಕ್ಷರ ಕುಕ್ಷಿಗಳಾದ ಅವಿದ್ಯಾವಂತ ಜನಪದರೇ ಮಿಗಿಲೆಂಬುದು ನನ್ನ ಅಭಿಪ್ರಾಯ. ಇದನ್ನು ಸಮರ್ಥಿಸಲು ಎವರೆಸ್ಟ್‌ವೀರನೆಂದು ಪ್ರಸಿದ್ಧಿ ಪಡೆದಿರುವ ತೇನ್‌ಸಿಂಗ್ ನೋರ್ಕೆ ಉದಾಹರಣೆ ಕೊಡುತ್ತೇನೆ. ತೇನ್‌ಸಿಂಗ್ ಓದಿಕೊಂಡವನಲ್ಲ. ಅವನಿಗೆ ಬರೆಯುವುದು ಗೊತ್ತಿಲ್ಲ. ಅವನ ಜೀವನ ಚರಿತ್ರೆಯನ್ನು ಬರೆದವರು ಆತನನ್ನು ಸಂದರ್ಶನ ಮಾಡಿದಾಗ ಜಗತ್ತಿನ ಅತ್ಯಂತ ಎತ್ತರವಾದ ಶಿಖರವನ್ನೇರಿದ ಸಾಹಸಿಗಳು ನೀವು. ಆ ಶಿಖರದಲ್ಲಿದ್ದಾಗ ನಿಮಗೆ ಅನ್ನಿಸಿದ್ದೇನು? ಎಂಬ ಪ್ರಶ್ನೆ ಹಾಕಿದರು. ಆಗ ತೇನ್‌ಸಿಂಗ್ ಕೊಟ್ಟ ಉತ್ತರ ಮರೆಯಲಾಗದ್ದು" ...ಅದು ನನ್ನ ಬಾಲ್ಯದ ಕನಸು. ನನ್ನ ತಾಯಿ ತುತ್ತು ತಿನ್ನಿಸುವಾಗ ಆ ಬಂಗಾರದ ಶಿಖರವನ್ನು ತೋರಿಸುತ್ತಾ ತಿನ್ನಿಸುತ್ತಿದ್ದಳು. ಮುಂದೆ ನನ್ನ ಬಾಲ್ಯದಲ್ಲಿ ಚಮರೀ ಮೃಗಗಳನ್ನು ಮೇಯಿಸುವಾಗೆಲ್ಲ ಆ ಬಂಗಾರ ಶಿಖರವನ್ನೇ (ಚೊಮೋಲುಂಗ್ಮಾ)



ನೋಡುತ್ತಾ ಅದು ಮೇಘಗಳಲ್ಲಿ ಮರೆಯಾಗಿ ಮೂಡುವುದನ್ನು ದಿಟ್ಟಿಸುತ್ತಿದ್ದೆ. ಮಗುವೊಂದು ತೆವಳುತ್ತಾ ತಾಯಿಯ ತೊಡೆಯನ್ನೇರಿ ಕುಳಿತುಕೊಳ್ಳುವಂತೆ ನಾನು ಆ ಶಿಖರಮಾತೆಯ ಬಳಿ ತೆವಳುತ್ತಾ ಸಾಗಿ ಕುಳಿತುಕೊಂಡಿದ್ದೆ" ...ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ತೇನ್‌ಸಿಂಗ್ ತನ್ನ ಮಹಾನ್ ಸಾಧನೆಯನ್ನು ಭೂಮಿ ತಾಯಿ ಓದಾಗಿ ಪರಿವರ್ತಿಸಿರುವುದು. ಇದನ್ನೇ ಆದಿಕವಿ ಪಂಪನು 'ನೆಲ ಮುಟ್ಟಲ್ ಅಳ್ತಿ' (ನೆಲ ಮುಟ್ಟುವ ಪ್ರೀತಿ) ಎಂದು ಕರೆದಿದ್ದಾನೆ. ಇದನ್ನು ಬಸವಣ್ಣ ಗೊನೆ ಬಾಳೆಗೆ ಹೋಲಿಸಿ ನಿರೂಪಿಸಿದ್ದಾನೆ :

**ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇಬೇಕು :**
**ದಕ್ಕ ನುಂಗಿದಂತೆ ಬೆರೆದುಕೊಂಡಿರಬೇಡ :**
**ಬೀಗಿ ಬೆಳೆದ ಗೊನೆ ಬಾಳೆಯಂತೆ ಬಾಗಿಕೊಂಡಿದ್ದರೆ :**
**ಬೇಡಿದ ಪದವಿಯನೀವ ಕೂಡಲ ಸಂಗಮದೇವ...**

ಬಸವೇಶ್ವರ ವಚನ ಸಂಗ್ರಹ - 127 ಎಲ್.ಬಿ.

ಮನುಷ್ಯರ ಸಕಲ ಕೃತಿಗಳು, ಎಲ್ಲ ಬಗೆಯ ಓದುಗಳು, ಸಾಮಾಜಿಕ ಅಭಿವೃದ್ಧಿ ಮತ್ತು ಸಾರ್ವಜನಿಕ ಶಿಕ್ಷಣ ಮುಂತಾದವುಗಳೆಲ್ಲವೂ ಬೀಗಿ ಬೆಳೆಯುವಂತೆಯೇ ಬಾಗುವುದನ್ನು ಕಲಿಯಬೇಕು. ಗೂಟನುಂಗಿದಂತೆ ಸೆಟೆದುಕೊಂಡಿರುವುದು ಜೀವಂತಿಕೆಯಲ್ಲ! ಎಂದು ಹೇಳಿ ವಿರಮಿಸುತ್ತೇನೆ. ಎಲ್ಲರಿಗೂ ನಮಸ್ಕಾರ.

**(* ಕೋಲಾರ ಜಿಲ್ಲಾ 13ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಸಮ್ಮೇಳನ ಅಧ್ಯಕ್ಷರ ಭಾಷಣ)**



41

# ಮುಚ್ಚಿ ವಿಲೀನ ಎಂದರೆ ಕೊಂದು ಸ್ವರ್ಗಕ್ಕೆ ಕಳುಹಿಸಲಾಯಿತು ಎಂದಂತೆ

– ದೇವನೂರು ಮಹಾದೇವ

ಖ್ಯಾತ ಸಾಹಿತಿ

ಈಗ ಮೂರು ಸಾವಿರ ಚಿಲ್ಲರೆ ಸರ್ಕಾರಿ ಶಾಲೆಗಳನ್ನು ಮುಚ್ಚಲು ಸರ್ಕಾರ ತುದಿಗಾಲಲ್ಲಿ ನಿಂತಿದೆ. ಇದನ್ನು ಸರ್ಕಾರ 'ಮುಚ್ಚುವುದಲ್ಲ ಬದಲಿಗೆ ವಿಲೀನ' ಎಂದು ಕರೆಯುತ್ತಿದೆ. ಇದು - 'ಕೊಂದದ್ದನ್ನು ಕೊಲೆಯಲ್ಲ; ಸ್ವರ್ಗಕ್ಕೆ ಕಳುಹಿಸುವುದು' ಎಂದಂತೆ.

ಈಗಾಗಲೇ ಕಳೆದ ಹತ್ತು ವರ್ಷದಿಂದ ಸಾವಿರಾರು ಸರ್ಕಾರೀ ಪ್ರಾಥಮಿಕ ಶಾಲೆಗಳನ್ನು ವಿಲೀನಗೊಳಿಸಿ ಸ್ವರ್ಗಕ್ಕೆ ಕಳುಹಿಸಲಾಗಿದೆ. ಇದನ್ನು ಮಕ್ಕಳ ಕೊರತೆಯ ಕಾರಣ ಕೊಟ್ಟು, ಸರ್ಕಾರ ಸಮರ್ಥಿಸಿಕೊಳ್ಳುತ್ತಿದೆ. ಸರಾಸರಿ ಲೆಕ್ಕಕ್ಕೆ ಬಂದರೆ ಒಂದು ಸರ್ಕಾರಿ ಶಾಲೆಯಲ್ಲಿ 120 ಮಕ್ಕಳಿದ್ದರೆ, ಅದೇ ಒಂದು ಖಾಸಗಿ ಶಾಲೆಯಲ್ಲಿ 229 ಮಕ್ಕಳು ಇದ್ದಾರೆ. ಇದರ ಅರ್ಥ ಏನು? ಖಾಸಗಿ ಶಾಲೆಯಲ್ಲಿ ವಿದ್ಯಾರ್ಥಿಗಳ ಕೊರತೆಯಾಗದಂತೆ ಕಾಪಾಡಲು ಖಾಸಗಿ ಹಿತಕ್ಕೆ ಬಲಿಯಾದ ಸರ್ಕಾರ ಮತ್ತು ಅಧಿಕಾರಶಾಹಿಯ ಒಳಸಂಚಲ್ಲವೇ ಇದು? ಜೊತೆಗೆ ಅನಧಿಕೃತ ಶಿಕ್ಷಣ ವ್ಯಾಪಾರಿಗಳೂ ರಾಜ್ಯದ ತುಂಬಾ ಹುಟ್ಟಿಕೊಳ್ಳುತ್ತಿದ್ದಾರೆ. ಈ ಸರ್ಕಾರವೋ ಇದೆಯೋ ಇಲ್ಲವೋ ಎಂಬಂತಿದೆ.

ಒಂದು ನಿಜವಾದ ಸರ್ಕಾರ ಇದ್ದಿದ್ದರೆ ಏನು ಮಾಡ್ತಾ ಇತ್ತು? ತನ್ನ ಮುಖಕ್ಕೆ ತಾನೇ ಉಗಿದುಕೊಳ್ಳುವ ಇಂಥ ಕೆಲಸ ಮಾಡ್ತಾ ಇರಲಿಲ್ಲ. ಬದಲಾಗಿ ಖಾಸಗಿ ಶಿಕ್ಷಣ ವ್ಯಾಪಾರಿಗಳ ಅನಧಿಕೃತ



ಶಾಲೆಗಳನ್ನು ಇಲ್ಲವಾಗಿಸುತ್ತಿತ್ತು. ಜೊತೆಗೆ, ಕನ್ನಡ ಮಾಧ್ಯಮಕ್ಕೆ ಎಂದು ಅನುಮತಿ ಪಡೆದು ಗುಟ್ಟಾಗಿ ಇಂಗ್ಲಿಷ್ ಮಾಧ್ಯಮ ಬೋಧಿಸುವ ಖಾಸಗಿ ಶಾಲೆಗಳ ಮೇಲೆ ಕಟ್ಟುನಿಟ್ಟಿನ ಕ್ರಮ ಜರುಗಿಸಿದ್ದರೂ ಸರ್ಕಾರಿ ಶಾಲೆಗಳಿಗೆ ಮಕ್ಕಳ ಸಂಖ್ಯೆಯ ಕೊರತೆ ಬರುತ್ತಿರಲಿಲ್ಲ. ಇದು ಯಾರಿಗೆ ಗೊತ್ತಿಲ್ಲ?

ಈಗಲೂ ಕಾನೂನು ಕಣ್ಣಿಗೆ ಮಣ್ಣೆರಚುವ ಖಾಸಗಿ ಶಿಕ್ಷಣ ವ್ಯಾಪಾರೀ ಶಾಲೆಗಳನ್ನು ಮುಚ್ಚಿದರೆ ಮಕ್ಕಳ ಹೆಚ್ಚಳದಿಂದ ಮೂರು ಸಾವಿರ ಶಾಲೆಗಳನ್ನು ಮುಚ್ಚುವ ಮಾತಿರಲಿ, ಈಗಾಗಲೇ ಮುಚ್ಚಿರುವ ಸಾವಿರಾರು ಶಾಲೆಗಳನ್ನೂ ಪುನಃ ತೆಗೆಯಬೇಕಾಗಿ ಬರುತ್ತದೆ. ಬಹುಶಃ ಇದೂ ಸಾಲದೆ ಬರಬಹುದು. ಆದ್ದರಿಂದ ಸರ್ಕಾರಕ್ಕೆ ನಾವು ಈಗ ಒಕ್ಕೊರಲಿನಿಂದ ಸರ್ಕಾರಿ ಶಾಲೆಗಳ ಮೇಲೆ ಕಾಗೆ ಹಾರಿಸಬೇಡಿ ಎಂದು ಕೂಗಿ ಹೇಳಬೇಕಾಗಿದೆ. ಮೂರು ಸಾವಿರ ಶಾಲೆಗಳನ್ನು ಮುಚ್ಚಬೇಡಿ ಎಂದು ಮಾತ್ರವಲ್ಲ: ಈಗಾಗಲೇ ಮುಚ್ಚಿರುವ ಶಾಲೆಗಳನ್ನು ಮತ್ತೆ ತೆಗೆಯಿರಿ ಎಂದೂ ಕೇಳಬೇಕಾಗಿದೆ.

ತಾರತಮ್ಯದ ರೋಗಕ್ಕೆ ತುತ್ತಾದ ಭಾರತದಲ್ಲಿ, ಮಕ್ಕಳ ನಡುವೆಯಾದರೂ ಭಿನ್ನ ಭೇದವಿಲ್ಲದ ಏಕರೂಪ ಶಿಕ್ಷಣಕ್ಕಾಗಿ ಒಂದು ಜನಾಂದೋಲನಕ್ಕಾಗಿ ಈ ನೆಲ ಕಾಯುತ್ತಿದೆ. ಇದನ್ನೆಲ್ಲಾ ಸರ್ಕಾರ ಗಮನಿಸಿ ಕಾರ್ಯಪ್ರವೃತ್ತವಾಗಬೇಕು. ಇಲ್ಲದಿದ್ದರೆ 'ಮಾತೃಭೂಮಿಯನ್ನೇ ಮಾರ್ಕೊಂಡು ತಿನ್ನುವವರಿಗೆ ಮಾತೃಭಾಷೆ ಯಾವ ಲೆಕ್ಕ' ಎಂಬ ಅಪವಾದದಿಂದ ಈ ಸರ್ಕಾರಕ್ಕೆ ತಪ್ಪಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲವೇನೋ.

ನಮ್ಮ ಸಂವಿಧಾನದ ಮುನ್ನುಡಿಯು ಸಮಾನತೆಗಾಗಿ ಹಂಬಲಿಸುತ್ತದೆ. ಆದರೆ ನಮ್ಮ ಶಿಕ್ಷಣ ಪದ್ಧತಿಯು ತನ್ನೊಳಗೇ ಅನೇಕಾನೇಕ ಶ್ರೇಣಿ ತಾರತಮ್ಯಗಳನ್ನು ಪಡೆದುಕೊಂಡು ಅಸಮಾನತೆಯನ್ನು ಬೆಳೆಯುತ್ತಿದೆ. ನಮ್ಮ ಅಸಮಾನತೆಗಳ ಸಮಾಜದಲ್ಲಿ, ಸಮಾನತೆಯನ್ನು ಎಳೆಯದರಲ್ಲೇ ಮೊಳಕೆಯಲ್ಲೇ ನಾಳಿನ ಪ್ರಜೆಗಳನ್ನು ಪಳಗಿಸುವ ಪರಿಪಾಠ ನಮ್ಮ ಶಿಕ್ಷಣದಲ್ಲಿ ಇರಬೇಕಿತ್ತು. ಭಾರತದ ನೂರಾರು ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಶ್ರೇಣಿ ದುಃಸ್ವಪ್ನಗಳಿಗೆ - ಎಲ್ಲಾ ಜಾತಿ - ಮತ - ಧರ್ಮ - ವರ್ಗಗಳ ಮಕ್ಕಳೂ ಒಂದೇ ಕಡೆ ಓದುವುದು, ಆಡುವುದು, ತಿನ್ನುವುದು, ಒಡನಾಡುವುದೇ ಭಾರತಕ್ಕೆ ದೊಡ್ಡ ಶಿಕ್ಷಣ ಎಂಬ ಅರಿವು ನಮಗಿರಬೇಕಿತ್ತು. ಈ ಅರಿವು ನಮಗೆ ಬಂದಿದ್ದರೆ ಆಗ ಆ ದುಃಸ್ವಪ್ನವೇ ಒಂದು ಸುಂದರ ಕನಸಾಗಿ ಬದಲಾಗಿಬಿಡುತ್ತಿತ್ತು. ಉಳ್ಳವರು, ಇಲ್ಲದವರು ಎಲ್ಲರೂ ಒಂದೇ ಕಡೆ ಓದುತ್ತಾ ಒಡನಾಡುವ ಕಾರಣದಿಂದಾಗಿಯೇ ಆಗ ಮಾತ್ರವೇ ಸರ್ಕಾರಿ ಶಾಲೆಗಳು ತಂತಾನೇ ಉತ್ತಮ ಶಾಲೆಗಳಾಗಿ ಬಿಡುತ್ತವೆ.





42

# ಪಶುಪಾಲಕ ಮ್ಯಾಸಬೇಡರು

– ಡಾ. ಬಿ. ಪಾಪಣ್ಣ
ಉಪನ್ಯಾಸಕರು, ನ್ಯಾಷನಲ್ ಕಾಲೇಜು, ಜಯನಗರ

ಮ್ಯಾಸಬೇಡರು ಎಂದು ಕರೆಸಿಕೊಳ್ಳುವ, ಗುರುತಿಸಿಕೊಳ್ಳುವ ಈ ಸಮುದಾಯವು ಬುಡಕಟ್ಟು ಸಮುದಾಯವಾಗಿದ್ದು, ಈ ಸಮುದಾಯದ ಲಕ್ಷಣಗಳನ್ನು ತಿಳಿದುಕೊಳ್ಳಬೇಕಾದರೆ ಮೊದಲು ನಾವು ಭಾರತದ ಮೂಲ ಪ್ರಭೇದ ನಿವಾಸಿಗಳ ಪ್ರಭೇದಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಈ ಆದಿವಾಸಿಗಳನ್ನು ಮೂರು ರೀತಿಯ ಪ್ರಭೇದಗಳಲ್ಲಿ ವಿಂಗಡಿಸಲಾಗಿದೆ. ಅವುಗಳೆಂದರೆ, ನೀಗ್ರಾಯಿಡ್, ಅಸ್ಟ್ರಾಲಾಯಿಡ್, ಮಂಗೋಲಾಯಿಡ್ ಎಂಬುವಾಗಿವೆ. ಪ್ರಸ್ತುತ ಈ ಬೇಡ ಬುಡಕಟ್ಟಿನವರು ಪ್ರೋಟೋ ಅಸ್ಟ್ರಾಲಾಯಿಡ್ ಪ್ರಭೇದಕ್ಕೆ ಸೇರಿದವರಾಗಿ ಕಂಡು ಬರುತ್ತಾರೆ. ಈ ಸಮುದಾಯದವರು ದ್ರಾವಿಡ ಸಂಸ್ಕೃತಿಯ ಲಕ್ಷಣಗಳನ್ನು ಮೈಗೂಡಿಸಿಕೊಂಡವರಾಗಿದ್ದಾರೆ.

ಬುಡಕಟ್ಟಿನ ಲಕ್ಷಣಗಳನ್ನೊಳಗೊಂಡ ಈ ಸಮುದಾಯ ಗ್ರಾಮೀಣ ಮತ್ತು ನಗರ ಸಂಸ್ಕೃತಿಯಿಂದ ದೂರವಾಗಿದ್ದು, ನಗರೀಕರಣದ ಪ್ರಭಾವಕ್ಕೆ ಸಿಲುಕದೆ ತಮ್ಮದೇ ಆದ ಅರಣ್ಯ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದ್ದು, ಪ್ರಸ್ತುತ ಆಧುನೀಕರಣ ನಗರೀಕರಣ, ಜಾಗತೀಕರಣಗಳ ಸೆಳೆತಕ್ಕೆ ಸಿಕ್ಕಿ ಜಾತಿಗಳಾಗಿ ಪರಿವರ್ತನೆ ಹೊಂದುತ್ತ ತಮ್ಮ ಮೂಲ ಸ್ವರೂಪದಲ್ಲಿ ಬದಲಾವಣೆಗಳಾಗಿರುವುದನ್ನು ಕಾಣಬಹುದಾಗಿದೆ.

ಬದಲಾವಣೆಯ ಸೆಳೆತಕ್ಕೆ ಸಿಲುಕಿರುವ ಈ ಮ್ಯಾಸಬೇಡರ ಮೂಲ ಮತ್ತು ಪ್ರಸರಣ ಕುರಿತಂತೆ ಪುರಾಣಗಳು, ದಂತ ಕಥೆಗಳು, ಸಾಹಿತ್ಯ



ಕೃತಿಗಳ, ಐತಿಹಾಸಿಕ ದಾಖಲೆಗಳ ಹಿನ್ನೆಲೆಯಲ್ಲಿ ನೋಡುವುದಾದರೆ, ದ್ರಾವಿಡ ಸಂಸ್ಕೃತಿಯ ಲಕ್ಷಣಗಳನ್ನು ಮೈಗೂಡಿಸಿಕೊಂಡಿರುವ ಇವರನ್ನು ದ್ರಾವಿಡ ಭಾಷೆಯಲ್ಲಿ "ವೇಡನ್ ಪಟ್ಟುವನ್ ಎಂಬುದಾಗಿ ಹಳೆಗನ್ನಡದಲ್ಲಿ ವೇಡರ್, ವೇಳರ್, ವಿದಿರ್, ಬಿಲ್ಲ, ಬೇಂಟೆಯವರ್, ಬೇಂಟೆಕಾರ್, ವಿಯದರ್, ಬಯದರ್, ಕಣೆಂದರ್, ಕೋವರ್" ಎಂಬ ಪದಗಳನ್ನು ಬೇಡ ಪದಕ್ಕೆ ಸಂವಾದಿಯಾಗಿ ಬಳಸಲಾಗಿದೆ. ಬೇಡರು ಕಾಶ್ಮೀರದ ಗಿರಿ ಶಿಖರಗಳಿಂದ ದಕ್ಷಿಣ ಭಾರತದ ಕರ್ನಾಟಕದ ಕಡೆಗೆ ವಲಸೆ ಬಂದರೆಂಬುದಾಗಿ ತಿಳಿದು ಬರುತ್ತದೆ.

ಭಾಗವತದ ಶ್ಲೋಕದಲ್ಲಿ "ಭಾರತ ಭಾಗೀರಥಿಯ ದಕ್ಷಿಣ ತೀರದಲ್ಲಿ ತಾಮಸ ನದಿಯ ದಂಡೆಯ ಕ್ರವಂಚ ಕಾಡಿನಲ್ಲಿ, ಕಾಡು ಬೇಡರ ಹೊಟ್ಟೆಯಲ್ಲಿ ಕಿರಾತಕ, ಶಬರ, ವ್ಯಾದ, ಪುಳಿಂದ, ಉಬ್ಬ, ಬಿಲ್ಲ, ಸೆಂಚ, ದರೋಡ ಎಂಬ ಕೊಲೆಗಡುಕರು ಬೇಡರಾಗಿ ಜನಿಸಿದರು. ಬೇಡರೆಂದರೆ ಯಾವ ಕೆಲಸಕ್ಕೆ ಹೆದರರದವರು. ಬೇಡರ ತಂಡಕ್ಕೆಲ್ಲ ದೇವದತ್ತನೆಂಬ ದ್ವಾರಪಾಲಕನು ರತ್ನಾಕರನೆಂಬ ಹೆಸರಿನಿಂದ ದೊರೆಯಾಗಿದ್ದನು. ಅವನೇ ವಾಲ್ಮೀಕಿ"1 ಎಂಬುದಾಗಿ ಹೇಳಲಾಗಿದೆ. ಈ ಹಿನ್ನೆಲೆಯಲ್ಲಿ ಬೇಡ ಸಮುದಾಯದ ಮೂಲ ಪುರುಷ ರಾಮಾಯಣ ಗ್ರಂಥ ಕರ್ತೃ ವಾಲ್ಮೀಕಿ ಎಂಬುದಾಗಿ ಈ ಸಮುದಾಯದ ಜನರಿಗೆ ಆದಿದೈವವಾಗಿ ಗುರುತಿಸಿಕೊಳ್ಳುತ್ತಾನೆ. ವಾಲ್ಮೀಕಿ ಬೇಡನಾಗಿದ್ದು ತನ್ನ ಏಳು ಜನ ಮಕ್ಕಳೊಂದಿಗೆ ಮತ್ತು ಜನರೊಂದಿಗೆ ಸೇರಿ ದಾರಿ ಹೋಕರನ್ನು ಹೆದರಿಸಿ ಬೆದರಿಸಿ ಸುಲಿಗೆ ಮಾಡಿ ಜೀವನ ಸಾಗಿಸುತ್ತಿದ್ದ ತಸ್ಕರನೆಂಬುದಾಗಿ ತಿಳಿದು ಬರುತ್ತದೆ. ಬುಡಕಟ್ಟುಗಳ ಅಧ್ಯಯನ ಮಾಡಿರುವ ಎಡ್ಗರ್ ಥರ್ಸ್ಟನ್ ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಭಾಗದ ಜನರ ನಡವಳಿಕೆಯನ್ನು ವಿವರಿಸುತ್ತ 'Boyas' ಎಂದು ಗುರುತಿಸಿಕೊಳ್ಳುವ ಇವರನ್ನು 'Criminal Tribes', 'ಅಪರಾಧಿ ಬುಡಕಟ್ಟುಗಳು' ಎಂದು ಕರೆಯುತ್ತಾರೆ.

ರಾಮಾಯಣದಲ್ಲಿ ರಾಮನಿಗೆ ಆತಿಥ್ಯ ನೀಡುವ ಹಿರಿಯ ಮಾತೃ ಶಬರಿ ಬೇಡರ ಜನಾಂಗದ ಮಹಿಳೆ, ಹಾಗೆಯೇ ಮಹಾಭಾರತದಲ್ಲಿ ದ್ರೋಣಚಾರ್ಯರಿಗೆ ಗುರುದಕ್ಷಿಣೆಯಾಗಿ ತನ್ನ ಬಲಗೈ ಹೆಬ್ಬೆರಳನ್ನೇ ಅರ್ಪಿಸಿದ ಏಕಲವ್ಯ ಬೇಡರವನು. ಶಿವನ ಕಣ್ಣುಗಳಲ್ಲಿ ನೀರು ಒಸರಿ ಕಣ್ಣು ಹೋದ ಸಂದರ್ಭದಲ್ಲಿ ಶಿವನಿಗೆ ತನ್ನ ಕಣ್ಣುಗಳನ್ನೇ ಅರ್ಪಿಸಿದ ಭಕ್ತ ಬೇಡರ ಕಣ್ಣಪ್ಪ ಬೇಡ ಸಮುದಾಯದವನು, ಶಿವನ ಲೀಲೆಗಳಲ್ಲಿ ಒಂದಾದ ಕಿರಾತ ವೇಷ ಬೇಡರದು, 'ಸಹದೇವ ದಿಗ್ವಿಜಯ' ಕೃತಿಯಲ್ಲಿ ಹೇಳುವಂತೆ ಪಾಂಡವರಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಬೇಡರ ಪಡೆ ಬೆಂಗಾವಲಾಗಿ ಇತ್ತೆಂಬ ವಿಷಯ ತಿಳಿದು ಬರುತ್ತದೆ. ಕರ್ನಾಟಕ ಕಾದಂಬರಿಯಲ್ಲಿ ಬರುವ 'ಕೈರಾತ ಘೋಷಂ' ಕನ್ನಡದ ಗದ್ಯಕೃತಿಯಾದ ವಡ್ಡಾರಾಧನೆಯಲ್ಲಿ ಬರುವ 'ಚಿಲಾತಪುತ' ಸಂಸ್ಕೃತದ 'ಕಿರಾತಪುತ್ರ'

ಇದೇ ಗ್ರಂಥದ ವಿದ್ಯುಚ್ಚೋರನೆಂಬ ರಿಷಿಯಕಥೆ ಬೇಡರಿಗೆ ಸಂಬಂಧಿಸಿದ್ದಾಗಿದೆ. 12ನೆಯ ಶತಮಾನದ ಸಾಮಾಜಿಕ ಸಮಾನತೆಯ ಧಾರ್ಮಿಕ ಕ್ರಾಂತಿಯ ಆಂದೋಲನದಲ್ಲಿ ಹಲವಾರು ಬೇಡ ಜನಾಂಗದ ಶಿವಶರಣರು ಕಂಡುಬರುತ್ತಾರೆ. ಚೆನ್ನಬಸವ ಪುರಾಣದಲ್ಲಿ ಬರುವ ತಳವಾರ ಕಾಮಿದೇವ, ಕೊಟ್ಟೂರು ಬಸವೇಶ್ವರ ಪುರಾಣದಲ್ಲಿ ಬರುವ ಮೋಳಿಗೆಯ ಚಿಕ್ಕಯ್ಯ ಮತ್ತು ಸೋಮನಾಥ ಪುರಾಣ ಮತ್ತು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ ಹೇಳಿರುವ ಮಾತಂಗ ತಮ್ಮ ಅಥವಾ ನನ್ನಯ್ಯನೆಂಬ ಶಿವಭಕ್ತ ಬೇಡರವನೆಂಬುದಾಗಿ ತಿಳಿದುಬರುತ್ತದೆ."

ಕರ್ನಾಟಕದಲ್ಲಿ ಬೇಡರ ಬಗೆಗೆ ಉಲ್ಲೇಖವಿರುವ ಮೊದಲ ಶಾಸನ ಏಳನೆಯ ಶತಮಾನದ 'ಗದ್ದೆ ಮನೆ ಶಾಸನ'ದಲ್ಲಿ ಬರುವ ಬೇಲಳಿಯ ಮಾಳನೆಂಬುವನು ಬೇಡ ಸಮುದಾಯಕ್ಕೆ ಸೇರಿದವನಾಗಿದ್ದು, ಇವನು ಮಲೆಪರ ಜತೆಗಿನ ಕಾಳಗದಲ್ಲಿ ಮಡಿದು ವೀರಸ್ವರ್ಗ ಅಪ್ಪಿದನೆಂಬುದಾಗಿ ತಿಳಿದು ಬರುತ್ತದೆ. ಹಾಗೆಯೇ 1181ರ ಶಾಸನದಲ್ಲಿ 'ತಳರಾಯ' ಎಂಬ ಪದದ ಉಲ್ಲೇಖವಿದೆ. ತಳರಾಯ ಎಂದರೆ - ಹಳಗನ್ನಡದಲ್ಲಿ 'ತಳಾರ' ಎಂದು ತಳಾ - ಎಂದರೆ ಆರಕ್ಷಕ, ಪ್ರಜಾರಕ್ಷಕ, ನಗರ ರಕ್ಷಕ, ದೊಡ್ಡ ಅಧಿಕಾರಿ ಎಂಬ ಅರ್ಥಗಳಿವೆ. ತಲವಾರ್ - ಎಂದರೆ ಹರಿತವಾದ ಕತ್ತಿ ಆಯುಧ - ಇದು ಅವರು ಮಾಡುವ ವೃತ್ತಿ ಕುರಿತು ಬಂದಿದ್ದಾಗಿದ್ದು, ಕೈಯಲ್ಲಿ ಕತ್ತಿ ಹಿಡಿದು ಜನರ ಮಾನ ಪ್ರಾಣ ರಕ್ಷಣೆ ಮಾಡುವವರು ಎಂಬುದಾಗಿದೆ.

ಇತಿಹಾಸದ ಪುಟಗಳಿಂದ ತಿಳಿದು ಬರುವಂತೆ ಕರ್ನಾಟಕದ ಪ್ರಾಚೀನ ಪಾಳೆಯ ಪಟ್ಟುಗಳಲ್ಲಿ ಒಂದಾದ ಕಂಪಲಿ ರಾಜ್ಯದ ದೊರೆ ಕಂಪಿಲರಾಯ ಆತನ ಹೆಂಡತಿ ಹರಿಯಾಲದೇವಿ ಮಗ ಕುಮಾರರಾಮ ಬೇಡ ಜನಾಂಗದ ಪೂವ್ವಾಲಿ, ಗುಜ್ಜಲ ಬೆಡಗಿನವರು. ಈ ಎರಡು ಬೆಡಗು (ಕುಲ, ಬಳಿ)ಗಳನ್ನು ಮ್ಯಾಸ ಬೇಡರಲ್ಲಿ ಕಾಣಬಹುದು. ಹಾಗೆಯೇ ವಿಜಯನಗರ ಸಂಸ್ಥಾಪಕರಾದ ಹಕ್ಕಬುಕ್ಕರು ಬೇಡ ಸಮುದಾಯದವರೆಂಬುದಾಗಿ, ಹಾಗೆಯೇ ಹಲಗಲಿಯಬೇಡರು, ವೀರ ಸಿಂಧೂರ ಲಕ್ಷ್ಮಣ ಬೇಡ ಜನಾಂಗದವರು. ವಿಜಯನಗರ ಸಂಸ್ಥಾನ ಅವನತಿಯ ಅಂಚಿಗೆ ತಲುಪುವ ಸಂದರ್ಭದಲ್ಲಿ ಚಿತ್ರದುರ್ಗದ ಪಾಳೆಯಗಾರರಾದ ಮದಕರಿನಾಯಕನ ಕುಲದವರು ಸ್ವಾತಂತ್ರ್ಯ ಪಾಳೆಯ ಪಟ್ಟು ಎಂಬುದಾಗಿ ಘೋಷಿಸಿಕೊಂಡು ರಾಜ್ಯಭಾರ ಮಾಡಿದರು. ಚಿತ್ರದುರ್ಗ ಮದಕರಿ ನಾಯಕ ಮನೆತನದವರು ಮ್ಯಾಸ ಬೇಡರೆಂಬುದಾಗಿ - ಕಾಮಗೇತಿ ಕುಲದವರೆಂಬುದಾಗಿ ತಿಳಿದುಬರುತ್ತದೆ. ನವಾಬ ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಇವರು ಬೇಡರ ಯುದ್ಧ ಕುಶಲತೆ, ತಂತ್ರಗಳು ಹಾಗೂ ಯುದ್ಧದಲ್ಲಿ ತೋರಿಸುತ್ತಿದ್ದ ಶೌರ್ಯ, ಸಾಹಸಗಳನ್ನು ಕಂಡು ಇವರನ್ನು ಬಲವಂತವಾಗಿ ಮುಸ್ಲಿಂ ಧರ್ಮಕ್ಕೆ ಮತಾಂತರ



ಮಾಡಿಸಿ ತಮ್ಮ ಸೈನ್ಯದಲ್ಲಿ ಸೇರಿಸಿಕೊಳ್ಳುತ್ತಿದ್ದರೆಂಬುದಾಗಿ ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ.

'ಮ್ಯಾಸಬೇಡ' ಶಬ್ದದ ನಿಷ್ಪತ್ತಿ ತಿಳಿದುಕೊಳ್ಳುವುದಕ್ಕೆ ಮೊದಲು 'ಬೇಡ' ಎಂಬ ಪದದ ಕುರಿತಂತೆ ತಿಳಿದುಕೊಳ್ಳೋಣ. 'ಬೇಡ ಎಂದರೆ- ಬೇಟೆಯನ್ನು ವೃತ್ತಿಯಾಗಿ ಉಳ್ಳವನು ಎಂಬುದಾಗುತ್ತದೆ. ಒಟ್ಟಾರೆಯಾಗಿ ಕಾಡಿನಲ್ಲಿ ವಾಸವಿದ್ದುಕೊಂಡು ಬೇಟೆಯನ್ನು ತಮ್ಮ ಜೀವನ ವೃತ್ತಿಯನ್ನಾಗಿಸಿಕೊಂಡ ಸಮುದಾಯ ಎಂಬ ಅರ್ಥವಿದೆ. ಆದಿಮ ಸಂಸ್ಕೃತಿ ಅಲೆಮಾರಿ ಮಾನವ ಅಭಿವೃದ್ಧಿಯೆಡೆಗೆ ಆಧುನಿಕತೆಯೆಡೆಗೆ ಸಾಗಿದ ವಿಕಸನದ ಹಂತಗಳನ್ನು ಮೂರು ಹಂತಗಳಲ್ಲಿ ಗುರುತಿಸಲಾಗುತ್ತಿದ್ದು, ಮೊದಲನೆಯದು ಬೇಟೆ. ಹಾಗಾಗಿ ಎಲ್ಲಾ ಸಮುದಾಯಗಳು ಈ ಬೇಟೆಯ ಹಂತವನ್ನು ಹಾದು ಬಂದಿವೆ. ಅಂದ ಮೇಲೆ ಬೇಡರಿಗೆ ಮಾತ್ರವೇ ವಿಶೇಷವಾಗಿ ಬೇಟೆಯ ಹಣೆಪಟ್ಟಿಯನ್ನು ಕಟ್ಟುವುದು ಅಷ್ಟಾಗಿ ಸರಿ ಕಂಡು ಬರುವುದಿಲ್ಲ ಎಂಬುವುದು ನನ್ನ ಅಭಿಪ್ರಾಯ. ನಾನು ಮುಂದೆ ಮಂಡಿಸಲಿರುವ "ಪಶುಪಾಲಕ ಮ್ಯಾಸಬೇಡರು" ವಿಶೇಷಣದ ಹಿನ್ನೆಲೆಯಲ್ಲಿ ಈ ಮಾತನ್ನು ಇಲ್ಲಿ ಸಮರ್ಥಿಸುತ್ತಿದ್ದೇನೆ. ಮಾನವ ವಿಕಸನದ ಎರಡನೆಯ ಹಂತ ವ್ಯವಸಾಯ. ವ್ಯವಸಾಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು ಹೋಗುವುದಕ್ಕೆ ಸಹಾಯಕವಾಗಿದ್ದ ಮೂರನೆಯ ಹಂತವೇ ಪಶುಪಾಲನೆ. ಪ್ರಸ್ತುತ ಮ್ಯಾಸಬೇಡರೆಂದು ಗುರುತಿಸಿಕೊಳ್ಳುವ ಈ ಸಮುದಾಯದವರು ಅಲೆಮಾರಿ ಜೀವವನ್ನು ಬಿಟ್ಟು ಕಾಡಿನ ಅಂಚಿಗೆ ಅಂಟಿಕೊಂಡಂತೆ ಕಂಡು ಬರುವ ಹುಲ್ಲುಗಾವಲು ಪ್ರದೇಶಗಳಲ್ಲಿ ವ್ಯವಸಾಯದ ಜೊತೆಗೆ ಪಶುಪಾಲನೆ ಮಾಡಿಕೊಂಡು ಬದುಕು ಸಾಗಿಸುತ್ತಿರುವುದನ್ನು ನಾವು ಇಂದಿಗೂ ಕಾಣಬಹುದಾಗಿದೆ.

ಮ್ಯಾಸಬೇಡ ಪದದಲ್ಲಿನ ಪೂರ್ವಪದವಾದ 'ಮ್ಯಾಸ' ಎಂಬುದು ಆ ಸಮುದಾಯದ ಪಶುಪಾಲನ ವೃತ್ತಿ ಮೂಲದಿಂದ ಬಂದ ಪದವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಪೌರಾಣಿಕ ಮತ್ತು ಚಾರಿತ್ರಿಕ ಆಧಾರಗಳು ಹಾಗೂ ಈ ಸಮುದಾಯದವರಲ್ಲಿರುವ ಆಚಾರ ವಿಚಾರ ಸಂಪ್ರದಾಯ, ಆಚರಣೆಗಳೇ ಇದಕ್ಕೆ ಸಾಕ್ಷಿಯಾಗಿವೆ. ಇವರಲ್ಲಿ ನಾವು ಎರಡು ಪಂಗಡಗಳನ್ನು ನೋಡಬಹುದಾಗಿದೆ. 1. ಮ್ಯಾಸಬೇಡರು ಅಥವಾ ನಾಯಕರು, 2. ಊರು ಬೇಡರು ಅಥವಾ ನಾಯಕರು ಎಂಬುದಾಗಿದೆ. ನಾಗರೀಕತೆಯ ಸೆಳೆತಕ್ಕೆ ಸಿಕ್ಕ ಕೆಲವರು ಅನ್ಯ ಸಮುದಾಯದವರೊಂದಿಗೆ ಸೇರಿ ಬುಡಕಟ್ಟಿನ ಪಾವಿತ್ರ್ಯತೆಗೆ ಧಕ್ಕೆ ತಂದರೆಂಬ ಕಾರಣಕ್ಕೆ ಅವರನ್ನು ಕುಲದಿಂದ ಹೊರ ಹಾಕಿದರೂ ನಗರಗಳನ್ನು ಸೇರಿ ಅನ್ಯ ಜನರೊಂದಿಗೆ ಬೆರೆತ ಅವರನ್ನು ಊರು ಬೇಡರೆಂದು, ಕಾಡುಗಳಲ್ಲಿದ್ದುಕೊಂಡು ತಮ್ಮದೇ ಆದ ಪ್ರತ್ಯೇಕತೆಯನ್ನು ಕಾಪಾಡಿಕೊಂಡು ಬಂದವರನ್ನು ಮ್ಯಾಸ ಬೇಡರೆಂದು ಕರೆಯಲಾಯಿತು. ಈ ಎರಡು ಪಂಗಡಗಳ ನಡುವೆ ಕೊಡು ಕೊಳ್ಳುವಿಕೆ ಸಂಬಂಧಗಳು ನಿಷಿದ್ಧವಾಗಿತ್ತು.



ಆದರೆ ನಿಧಾನವಾಗಿ ಮನುಷ್ಯ ನಾಗರೀಕನಾದಂತೆಲ್ಲ, ಹೊಸ ಜಗತ್ತಿಗೆ ತನ್ನನ್ನು ತೆರೆದುಕೊಳ್ಳುವ ಮೂಲಕ ಬದಲಾವಣೆಯ ಮಾರ್ಗದಲ್ಲಿ ಸಾಗಿದರು. ಇದರ ಫಲವಾಗಿ ಈಗ ಕೊಡುಕೊಳ್ಳುವ ಸಂಬಂಧಗಳು ಏರ್ಪಡುತ್ತಿವೆ.

ಮೇಲೆ ತಿಳಿಸಿದ ಎರಡು ಪಂಗಡಗಳಲ್ಲಿ ಗುರುತಿಸಿಕೊಳ್ಳುವ ಇವರು ಅದರಲ್ಲಿ ಮುಖ್ಯವಾಗಿ ಮ್ಯಾಸಬೇಡರೆಂದು ಕರೆಯಲ್ಪಡುವ ಸಮುದಾಯ ಮಧ್ಯ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಮೊಳಕಾಲ್ಮೂರು ಮತ್ತು ಚಿತ್ರದುರ್ಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದು, ಉಳಿದಂತೆ ಹೊಳಲ್ಕೆರೆ ಹಿರಿಯೂರು ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕು ದಾವಣಗೆರೆ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು ಬಳ್ಳಾರಿ, ಹೊಸಪೇಟೆಯಲ್ಲಿ ಹಾಗೆಯೇ ತುಮಕೂರು ಜಿಲ್ಲೆಯ ಪಾವಗಡ, ಮಧುಗಿರಿ ಆಂಧ್ರಪ್ರದೇಶ ರಾಜ್ಯದ ಮಡಕಶಿರಾ ತಾಲ್ಲೂಕು ಅನಂತಪುರಂ, ಕಲ್ಯಾಣಿ ದುರ್ಗ, ರಾಯದುರ್ಗ ಜಿಲ್ಲೆಗಳಲ್ಲಿ ಚದುರಿದಂತೆ ಕಂಡು ಬರುತ್ತಾರೆ. ಇವರ ಮಾತೃಭಾಷೆ ತೆಲುಗು ಆಡಳಿತಾತ್ಮಕವಾಗಿ ಮತ್ತು ಶಿಕ್ಷಣ ಮಾಧ್ಯಮ ಸಂಬಂಧಿಸಿದಂತೆ ಕನ್ನಡ ಭಾಷೆಯಾಗಿದ್ದು, ಒಂದು ರೀತಿಯಲ್ಲಿ 'ಕಂದೆಲುಗು' ಇವರ ಮನೆ ಮಾತಾಗಿದೆ ಎಂದರೆ ತಪ್ಪಾಗಲಾರದು.

'ಮ್ಯಾಸ ಬೇಡ' ಎಂಬ ಪದ ವಿಶೇಷ ಕುರಿತಂತೆ ಪಾಶ್ಚಾತ್ಯ ಬುಡಕಟ್ಟು ಅಧ್ಯಯನಕಾರನಾದ ಎಡ್ಗರ್‌ಥರ್‌ಸ್ಟನ್ ಹೇಳುವ ಕತೆ" ಬೇಡರ ಹೆಣ್ಣು ಮಗಳಿಗೆ ಇಬ್ಬರು ಗಂಡು ಮಕ್ಕಳಿದ್ದು, ಹೊಲದಲ್ಲಿ ದುಡಿಯಲು ಹೋದ ಹಿರಿಯ ಮಗನಿಗೆ ಬುತ್ತಿ ಕಟ್ಟಿ ಕೊಟ್ಟು, ಅವನು ಹೊರಡುವ ಸಂದರ್ಭಕ್ಕೆ ಸರಿಯಾಗಿ ಕಿರಿಯ ಮಗ ಬಂದು ನನಗೆ ಹಸಿವಾಗಿದೆ ತಿನ್ನುವುದಕ್ಕೆ ಏನಾದರೂ ಕೊಡು ಎಂದು ಕೇಳಲು. ಆಗ ತಾಯಿ ಅವನಿಗೆ ನವಣೆ ಮತ್ತು ಸಜ್ಜೆಯಿಂದ ತಯಾರಿಸಿದ ಅಂಬಲಿ ಮತ್ತು ತರಕಾರಿಗಳಿಂದ ತಯಾರಿಸಿದ ನೀರನ್ನು ಬಡಿಸುತ್ತಾಳೆ. ಆಗ ಮನೆಯಲ್ಲಿ ವಿಶೇಷವಾದ ಪರಿಮಳದಿಂದ ಕೂಡಿದ ಮಾಂಸದಡುಗೆಯ ವಾಸನೆಯನ್ನು ಗ್ರಹಿಸಿದ ಕಿರಿಯ ಮಗ ತಾಯಿ ಅಣ್ಣನಿಗೆ ಮಾಂಸದಡುಗೆ ಊಟವನ್ನು ಬುತ್ತಿಕಟ್ಟಿ, ನನಗೆ ಮಾತ್ರ ಅನ್ನ ತರಕಾರಿ ಸಾರಿನ ಊಟ ಬಡಿಸುತ್ತಿದ್ದಾಳೆಂದು ತಿಳಿದು ಸಿಟ್ಟಿನಿಂದ ಹೊಡೆಯಲು ಆಕೆ ಅಲ್ಲಿಯೇ ಸಾವನ್ನಪ್ಪುತ್ತಾಳೆ. ನಂತರ ಕಿರಿಮಗ ಅಡುಗೆ ಮನೆಗೆ ಹೋಗಿ ನೋಡಲು ಮಣ್ಣಿನ ಮಡಿಕೆಯಲ್ಲಿ ಸಂಗ್ರಹಿಸಿಟ್ಟಿದ್ದ ಕೊಳೆತು ನಾರುವ ಗಿಡ ಮೂಲಿಕೆಗಳು ಮತ್ತು ಹಣ್ಣಿನ ಮರದ ತೊಗಟೆಗಳು ಕಂಡು ಇದರಿಂದ ಬಂದ ಪರಿಮಳವನ್ನು ನಾನು ತಪ್ಪಾಗಿ ತಿಳಿದು ತಾಯಿಯ ಸಾವಿಗೆ ಕಾರಣನಾದೆ ಎಂದು ಪಶ್ಚಾತ್ತಾಪದಿಂದ ಮನೆ ಬಿಟ್ಟು ಕಾಡಿಗೆ ಹೋಗಿ ಸೇರಿಕೊಂಡನು. ಅಂದಿನಿಂದ ಅವನು ಕಾಡು ಬೇಡ (ಮ್ಯಾಸಬೇಡ)ನಾದನು. ಹೀಗೆ ಕಾಡಿನಲ್ಲಿ ನೆಲೆ ನಿಂತವನೇ ಮ್ಯಾಸಬೇಡರ ಪೂರ್ವಜ, ಇವನ ಅನುಯಾಯಿಗಳೇ ಮ್ಯಾಸಬೇಡರು" ಎಂಬುದಾಗಿ ತಿಳಿಸುತ್ತಾರೆ.



ಅತಿ ಹೆಚ್ಚಿನ ಮ್ಯಾಸಬೇಡರನ್ನು ಒಳಗೊಂಡಿರುವ ಭಾಗದಲ್ಲಿ ಗೊಲ್ಲರು ವಾಸವಾಗಿದ್ದು, ಅವರಲ್ಲೂ ಕೂಡ ಊರುಗೊಲ್ಲರು, ಕಾಡುಗೊಲ್ಲರು, ಕರಡಿಗೊಲ್ಲರು ತಾಳಿಕಟ್ಟಿದ ಗೊಲ್ಲರು ಎಂಬ ಪಂಗಡಗಳಿವೆ. ಇವುಗಳಲ್ಲಿ ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಮೂಲದಲ್ಲಿ ಒಂದೇ ಬುಡಕಟ್ಟಿನವರಾಗಿದ್ದರೆಂದು "ಇಬ್ಬರೂ ಅಣ್ಣ ತಮ್ಮಂದಿರಾಗಿದ್ದರು. ಇವರು ಪಶುಪಾಲನ ವೃತ್ತಿ ಕೈಗೊಂಡು ಕಾಲಕಳೆಯುತ್ತಿದ್ದರು. ಹೀಗಿರುವಾಗ ಹಿರಿಯವನು ದನಗಳನ್ನು ಮೇಯಿಸುವುದಕ್ಕೆ ಕಾಡಿಗೆ ಹೋಗಲು ಕಿರಿಯವನು ಕೊಟ್ಟಿಗೆಯಲ್ಲಿರುವ ಕರುವಿನ ಕಾಲು ಕತ್ತರಿಸಿ ತಿನ್ನುತ್ತಿದ್ದನು. ದನಗಳನ್ನು ಮೇಯಿಸಿಕೊಂಡು ಹಿಂತಿರುಗಿ ಬಂದ ಅಣ್ಣನಿಗೆ ತಮ್ಮನು ಕರುವಿನ ಕಾಲು ತಿನ್ನುತ್ತಿದ್ದದ್ದನ್ನು ಕಂಡು "ಕರುವಿನ ಕಾಲು ತಿನ್ನಬೇಡ ಕಂಕಾ" ಎಂಬುದಾಗಿ ಬಯ್ದು ಅಂದಿನಿಂದ ಅವನು ತನ್ನ ತಮ್ಮನಿಂದ ಬೇರೆಯಾಗಿ ದನಗಳನ್ನು ಮೇಯಿಸುತ್ತ ಗೊಲ್ಲನಾದ. ಬೇಡದ ಕೆಲಸ ಮಾಡಿದ ತಮ್ಮ ದನದ ಮಾಂಸ ತಿನ್ನಬಾರದೆಂದು ಹೇಳಿದರೂ ಕೇಳದೆ ತಿಂದು ಬೇಡನಾದ ಎಂಬುದಾಗಿ ತಿಳಿದುಬರುತ್ತದೆ. ಕಂಕಾ - ಎಂದರೆ - ಏನೂ ತಿಳಿಯದವನು, ದಡ್ಡ, ಪೆದ್ದ ಎಂದು ಅರ್ಥ. ಈಗಲೂ ಮ್ಯಾಸಬೇಡರನ್ನು 'ಕಂಕಾ', 'ಕಂಕಾ ನಾಯಕರು' ಎಂಬುದಾಗಿ ವ್ಯಂಗ್ಯಾರ್ಥದಲ್ಲಿ ಸಂಬೋಧಿಸುವುದನ್ನು ಕಾಣಬಹುದು.

ಇದೇ ರೀತಿಯಲ್ಲಿ ಮತ್ತೊಂದು ದಂತ ಕಥೆಯಿದೆ. 'ಆಗ ತಾನೇ ಕರು ಹಾಕಿದ ಹಸುವಿನ ಗರ್ಭಕೋಶದ ಮಾಂಸ (ಇದನ್ನು 'ಮಾಸು' ಎಂಬುದಾಗಿ ಕರೆಯುತ್ತಾರೆ.)ವನ್ನು ಕಂಡು ಹಸಿವಿನಿಂದ ಕಂಗೆಟ್ಟಿದ್ದ ತಮ್ಮನ್ನು ಆ ಮಾಂಸವನ್ನು ತಿಂದನೆಂಬ ಕಾರಣದಿಂದ ಅವನ ಅಣ್ಣ ಅವನಿಂದ ಬೇರೆಯಾದನು. ಇದರಿಂದ ಮಾಂಸ ತಿಂದವನು ಮ್ಯಾಸನಾದ. ಬೇಡದ ಕೆಲಸ ಮಾಡಿ ಮ್ಯಾಸಬೇಡನಾದ ಎಂಬ ಕಥೆಯನ್ನು 'ಮ್ಯಾಸಬೇಡ' ಎಂಬ ಪದಕ್ಕೆ ದಂತಕಥೆ ಒಂದು ಇರುವುದನ್ನು ನಾವು ಕಾಣಬಹುದು.

ಎಡ್ಗರ್ ಥರ್ಸ್ಟನ್ ಅವರು ಬೇಡರನ್ನು ಕುರಿತಂತೆ "Bedars are split into two main divisions of use or village men and myasa or grassland men."

ಇಲ್ಲಿ ಮ್ಯಾಸ ಎಂದರೆ ಹುಲ್ಲುಗಾವಲು ಪ್ರದೇಶದಲ್ಲಿ ವಾಸ ಮಾಡುವ ಮನುಷ್ಯ ಎಂಬ ಅರ್ಥ ಕೊಡಲಾಗಿದೆ. ಈ ಕಾರಣದಿಂದ ಬೇಡ ಶಬ್ದದ ಪೂರ್ವದ ಪದ 'ಮ್ಯಾಸ' ವಿಶೇಷಣ ಪಶುಗಳನ್ನು 'ಮೇಯಿಸುವ' ವೃತ್ತಿ ಮೂಲದಿಂದ ಬಂದಿರಬೇಕೆಂಬುದನ್ನು ಸೂಚಿಸುತ್ತದೆ. ಪಶುಗಳನ್ನು ಮೇಯಿಸುವ ಶಬ್ದ ಕ್ರಮೇಣ ಮೇಸು - ಮ್ಯಾಸು - ಮ್ಯಾಸು - ಮ್ಯಾಸ ಎಂದು ರೂಪಾಂತರಗೊಂಡಂತೆ ಕಂಡುಬರುತ್ತದೆ. ಮೈಸೂರು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಈ ಬುಡಕಟ್ಟಿನವರನ್ನು 'ನಾಸು ಬೇಡರು' ಎಂದು ಗುರುತಿಸಲಾಗುತ್ತದೆ.

ಪಶುಪಾಲಕ ವೃತ್ತಿ ಮೂಲದ ಬೇಡರನ್ನು ಸಮರ್ಥಿಸುವಂತೆ ಕರ್ನಾಟಕ ರಾಜ್ಯದ ಮಧ್ಯ ಕರ್ನಾಟಕದ ಭೌಗೋಳಿಕ ಪ್ರದೇಶವಾದ ಚಿತ್ರದುರ್ಗ ಜಿಲ್ಲೆ ಭೌಗೋಳಿಕವಾಗಿ ಕುರುಚಲು ಕಾಡು ಮತ್ತು ಚಿಕ್ಕ ಚಿಕ್ಕ ಬೆಟ್ಟ, ಗುಡ್ಡಗಳಿಂದ ವಿಶಾಲವಾದ ಮೈದಾನಗಳಿಂದ ಕೂಡಿದ ಸಮಶೀತೋಷ್ಣ ಭೂ ಪ್ರದೇಶವಾಗಿದ್ದು, ಪಶುಪಾಲನೆ ಮತ್ತು ಕುರಿ ಸಾಕಾಣಿಕೆಗೆ ಪ್ರಶಸ್ತವಾದ ಭೂಪ್ರದೇಶವಾಗಿದೆ. ಇಂತಹ ಭೌಗೋಳಿಕ ಹಿನ್ನೆಲೆ ಇರುವ ಪ್ರದೇಶದಲ್ಲಿ ಪಶುಪಾಲಕ ಬುಡಕಟ್ಟುಗಳು ನೆಲೆ ನಿಂತಿರುವುದನ್ನು ಕಾಣಬಹುದು. ಇದನ್ನು ಸಮರ್ಥಿಸುವಂತೆ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಒಂದರಲ್ಲೇ ಸುಮಾರು 21 ಹುಲ್ಲುಗಾವಲು (ಕಾವಲು)ಗಳಿವೆ. ಅದೇ ರೀತಿ ಹೊಸದುರ್ಗ ಹೊಳಲ್ಕೆರೆಗಳಲ್ಲಿ ಕ್ರಮವಾಗಿ 9 ಮತ್ತು 13 ಕಾವಲು, ಗೋಸಿಕೆರೆ ಕಾವಲು, ಪಿಲ್ಲಿಗುಂಡ್ಲು ಕಾವಲು, ಪಿರೇಹಳ್ಳಿ ಕಾವಲು, ಚೌಡಮ್ಮನ ಕಾವಲು, ಕುರಂಡಿಹಳ್ಳಿ - ಜೋಗಿಹಳ್ಳಿ ಕಾವಲು, ಮಲ್ಲೂರಹಳ್ಳಿ ಕಾವಲು, ಮೊಳಕಾಲ್ಮೂರು ತಾಲ್ಲೂಕಿನ ಬೊಮ್ಮಗೊಂಡನಕೆರೆ ಕಾವಲು, ಮುತ್ತೇಗಾರ ಹಳ್ಳಿ ಕಾವಲು, ಜಗಲೂರು ತಾಲ್ಲೂಕಿನ ತುರುಸೂರು ಕಾವಲು, ಕಡಮನಕಟ್ಟೆ ಕಾವಲು ಹೊಳಲ್ಕೆರೆ ತಾಲ್ಲೂಕಿನ ಅಂದನೂರು, ಗಂಜಿಗಟ್ಟೆ ಕಾವಲು, ಹಿರಿಯೂರು ತಾಲ್ಲೂಕಿನ ಬಬ್ಬೂರು ಕಾವಲುಗಳನ್ನು ಕಾಣಬಹುದು. ಅಲ್ಲದೆ ಚಳ್ಳಕೆರೆ ತಾಲ್ಲೂಕಿನಲ್ಲಿರುವ ಮಿದಾಪುರ (ಮೂಲದ ಹೆಸರು ಬೋರೆದೇವರಹಟ್ಟಿ)ದ ಕಾವಲು ಸುಮಾರು 10 ಕಿಲೋಮೀಟರ್ ಸುತ್ತಳತೆ ಇರುವ ಹುಲ್ಲುಗಾವಲು ಪ್ರದೇಶ ಈ ಭೌಗೋಳಿಕ ವಿಸ್ತೀರ್ಣದಲ್ಲಿ ವಿಶಾಲವಾದ ಮೈದಾನವಿದ್ದ ಕಾರಣ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪಶು ಮತ್ತು ಕುರಿ ಸಂವರ್ಧನೆಗೆ ಯೋಗ್ಯವಾದ ಸ್ಥಳವೆಂದು ಗುರುತಿಸಿ, ಇಲ್ಲಿ ಹಲವಾರು ತಳಿಯ ಹಸು ಮತ್ತು ಕುರಿಗಳನ್ನು ಇತ್ತೀಚಿನವರೆಗೂ ಸಾಕಲಾಗುತ್ತಿತ್ತು. ಅವುಗಳಲ್ಲಿ ಮುಖ್ಯವಾಗಿ ಪಶುಗಳಿಗೆ ಸಂಬಂಧಿಸಿದಂತೆ ಅಮೃತ ತಳಿ ಹೋರಿಗಳು, ನಗರಿ ಹಸುಗಳು, ಹಳ್ಳಿಕಾರ್‌ಗಳು, ಕುರಿಗಳಿಗೆ ಸಂಬಂಧಿಸಿದಂತೆ ಬನ್ನೂರು ಕುರಿಗಳು ಅಲ್ಲದೆ, ವಿದೇಶಿ ತಳಿಗಳಾದ 'Ram Bullet' ಎಂಬ ವಿಶೇಷ ತಳಿಗಳು ಹಾಗೂ ಮೇಕೆಗಳನ್ನು ಸಾಕಲಾಗುತ್ತಿತ್ತು. ಅಲ್ಲದೆ ಈ ಭಾಗದ ಜನರಿಗೆಂದೆ ಅಮೃತ ತಳಿ ಅಭಿವೃದ್ಧಿಗೆ ಹಾಗೂ ಮೇವಿಗೆಂದು ಮೈಸೂರು ಮಹಾರಾಜರ ಕಾಲದಲ್ಲಿ ಇಂತಿಷ್ಟು ಎಕರೆ ಭೂಮಿಯೆಂದು ಮೀಸಲಿರಿಸಲಾಗಿತ್ತು. ಇಂದು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಈ ಎಲ್ಲವುಗಳನ್ನು ಗಾಳಿಗೆ ತೂರಿ ISSRO, DRDO, NAL, HAL ನಂತಹ ಪ್ರತಿಷ್ಠಿತ ಸಂಸ್ಥೆಗಳಿಗೆ ಭೂಮಿಯನ್ನು ಹಸ್ತಾಂತರ ಮಾಡಿ ತಮ್ಮ ಮನಸೋ ಇಚ್ಛೆ ನಡೆದುಕೊಳ್ಳುವ ಮೂಲಕ ಪಶುಪಾಲನೆ, ಕುರಿ ಸಾಕಾಣಿಕೆಯನ್ನೇ ನಂಬಿ ಬದುಕು ಕಟ್ಟಿಕೊಂಡಿರುವ ಪಶುಪಾಲಕ ಬುಡಕಟ್ಟುಗಳನ್ನು ಒಕ್ಕಲೆಬ್ಬಿಸಿವೆ. ಇಷ್ಟಕ್ಕೆ ಸುಮ್ಮನಾಗದ ಜನರು ಈ ಅನ್ಯಾಯದ ವಿರುದ್ಧ ನ್ಯಾಯಾಲಯದ ಮೆಟ್ಟಿಲೇರಿರುವುದನ್ನು ನಾವು ಕಾಣಬಹುದು.



ಇಷ್ಟೆಲ್ಲ ಅಂಶಗಳು ಪಶುಪಾಲನೆಗೆ ಪೂರಕವಾಗಿರುವ ಈ ಪ್ರದೇಶವನ್ನು ಪಶುಪಾಲಕ ಬುಡಕಟ್ಟುಗಳ 'ತೂಗು ತೊಟ್ಟಿಲು' ಎಂದು ಕರೆಯಬಹುದಾಗಿದೆ.

ಕಥೆಯೊಂದರ ಪ್ರಕಾರ ಮ್ಯಾಸಬೇಡರ ಮೂಲ ಪುರುಷನು ಮಹಾವಿಷ್ಣುವಿನ ಆಶೀರ್ವಾದದಿಂದ ಪಶುಗಳ ಮಂದೆ (ಗುಂಪು)ಯಲ್ಲಿ ಜನಿಸಿದನೆಂದು ಇವನಿಗೆ ಮಂದ ಭೂಪಾಲನೆಂದು ಹೇಳಲಾಗುತ್ತದೆ. ಹೀಗೆ ಈ ಬುಡಕಟ್ಟಿನ ಮೂಲ ಪುರುಷ ಪಶುಗಳ ಮಂದೆಯಲ್ಲಿ ಹುಟ್ಟಿ ಬೆಳೆದು ದೊಡ್ಡವನಾಗಿ ದನ ಮೇಯಿಸುವ ಕಾಯಕ (ವೃತ್ತಿ) ಕೈಗೊಂಡನೆಂದು ಇವನಿಗೆ 'ಮಂದರಾಜ'ನೆಂದು ಇವನ ಅನುಯಾಯಿಗಳಿಗೆ 'ಮಂದಲೋರು' ಎಂದು ಕರೆಯಲಾಯಿತು. ಈಗಲೂ ಮ್ಯಾಸಬೇಡರಲ್ಲಿ 'ಮಂದಲೋರು' ಎಂಬ ಬೆಡಗು (ಕುಲ, ಬಳಿ) ಇರುವುದನ್ನು ಕಾಣಬಹುದು. ಈ ಬುಡಕಟ್ಟಿನ ಮತ್ತೊಬ್ಬ ಪೂರ್ವಿಕ ಶುಕ್ಲ ಮಲ್ಲಿನಾಯಕನು ಈಶ್ವರನ ಅಂಶದಿಂದ ಜನಿಸಿದವನಾಗಿದ್ದು ಶಿವನ ಹಣೆಗೆ ಹಚ್ಚುವ ವಿಭೂತಿಯ ಒಂದು ತುಣುಕು ಭೂಮಿಗೆ ಬಿದ್ದು ಬಸವನ (ನಂದಿಯ) ಕಾಲಿನ ಗೊರಸಿನಲ್ಲಿ ಮಗು ಜನಿಸಿ ಅದು ಬೆಳೆದು ದೊಡ್ಡದಾಗಿ ಶುಕ್ಲ ಮಲ್ಲಿನಾಯಕನಾಗಿ ದನ ಕಾಯುವ ಕಾಯಕವನ್ನು ಮುಂದುವರಿಸಿಕೊಂಡು ಹೋದನೆಂದೂ ಇವನ ಕಾಯಕವನ್ನು 'ಕಿಲಾರಿ' ಎಂಬುದಾಗಿ ಕರೆಯಲಾಯಿತು. ಮತ್ತೊಂದು ಕತೆಯ ಪ್ರಕಾರ ಮ್ಯಾಸಬೇಡರ ಪೂರ್ವಿಕ ಮೂಗನಾಯಕ ಬಾಣ ಪ್ರಯೋಗದಿಂದ ಭೂಲೋಕದ ಕರ್ಮ ಮುಗಿಸಿ ಹೊರಟ (ಸಾವಿಗೀಡಾದ) ಶ್ರೀಕೃಷ್ಣನು ಮೂಗ ನಾಯಕನಿಗೆ ಗೋವುಗಳನ್ನು ಕಾಯುವ ಕಾಯಕವನ್ನು ಒಪ್ಪಿಸಿ ಉಡುಗೊರೆಯಾಗಿ ಬಂಗಾರದ ಬೆತ್ತ, ಕೊಳಲು, ನೀಡಿದನೆಂದು ತಿಳಿದು ಬರುತ್ತದೆ. ಹೀಗೆ ಪಶುಪಾಲನೆಯ ಹಿನ್ನೆಲೆಯನ್ನು ಸಮರ್ಥಿಸುವಂತಹ ಒಂದು ದೊಡ್ಡ ಮೌಖಿಕ ಪರಂಪರೆಯೇ ಇದ್ದು, ಈ ಮೂಲ ವ್ಯಕ್ತಿಗಳೆಲ್ಲ ಇಂದು ಸಾಂಸ್ಕೃತಿಕ ವೀರರಾಗಿ ಈ ಬುಡಕಟ್ಟಿನ ಆದಿದೈವಗಳಾಗಿ ಗುರುತಿಸಿಕೊಳ್ಳುತ್ತಿದ್ದಾರೆ.

ಮ್ಯಾಸಬೇಡರ ಪ್ರಮುಖ ದೈವಗಳಾದ ರೊಪ್ಪಲ ಸೂರನಾಯಕ, ದಡ್ಡಿ ಸೂರನಾಯಕ, ಕೋರೆಲ ಮಲ್ಲಿನಾಯಕ ಕಿಲಾರಿ ಸಂಪ್ರದಾಯವನ್ನೇ ಮುಂದುವರಿಸಿಕೊಂಡು ಹೋದರು. ಸಮುದಾಯದ ಏಳಿಗೆಗಾಗಿ ಗಾದರಿ ಪಾಲನಾಯಕ ಮತ್ತು ಜಗಲೂರು ಪಾಪನಾಯಕನವರು ಶ್ರಮಿಸಿದರು. ಇವರ ಮಹಿಮೆ ಪವಾಡಗಳಿಗೆ ಸಂಬಂಧಿಸಿದಂತೆ ಜಿಲ್ಲೆಯಾದ್ಯಂತ ಪುಣ್ಯಕ್ಷೇತ್ರಗಳಿರುವುದನ್ನು ನಾವು ಕಾಣಬಹುದು.

ಅಲೆಮಾರಿಗಳ ಕೇಂದ್ರವೆಂದೇ ಕರೆಯಲ್ಪಡುವ ಆಂಧ್ರಪ್ರದೇಶವು ಮ್ಯಾಸಬೇಡ ಬುಡಕಟ್ಟಿನ ಮೂಲ ಸ್ಥಾನವೆಂದು ಹೇಳಬಹುದು. ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಶ್ರೀಶೈಲದ ಸುತ್ತಮುತ್ತಲ ಪ್ರದೇಶದಲ್ಲಿ ಪಶುಪಾಲನೆ ಮಾಡಿಕೊಂಡು ನೆಲೆಸಿದ್ದರೆಂದೂ, ಆ ಪ್ರದೇಶದಲ್ಲಿ ಬರಗಾಲ ಬಂದಾಗ ತಮ್ಮ ದನಕರುಗಳಿಗೆ ಮೇವು ನೀರು ಅರಸುತ್ತ



ಕರ್ನಾಟಕದ ಕಡೆಗೆ ಬಂದರೆಂಬುದಾಗಿ ತಿಳಿದು ಬರುತ್ತದೆ. ನಾಯಕನಹಟ್ಟಿಯ ದೊರೆಗಳ ವಂಶಾವಳಿಗೆ ಸಂಬಂಧಿಸಿದಂತೆ "ಹಟ್ಟಿಯ ಮೂಲ ಪುರುಷನಾದ ಕಾಟೀ ಮಲ್ಲನಾಯಕನು ಶ್ರೀಶೈಲ ಪರ್ವತದಲ್ಲಿ ಉಂಟಾದ ಭೀಕರ ಬರಗಾಲದಿಂದ ಶ್ರೀಶೈಲದ ಕಡೆಯಿಂದ ಹೊರಟು 1 ಲಕ್ಷ ಕಂಪಳ (ದನಗಳು) 500 ಜನ ಮೇಸರು (ಮ್ಯಾಸಬೇಡರು) ಹಾಗೂ 12 ಪೆಟ್ಟಿಗೆ ದೇವರುಗಳು ಹಾಗೂ 6 ಜನ ತಮ್ಮಂದಿರೊಂದಿಗೆ ಕರ್ನಾಟಕದ ಆಗಿನ ವಿಜಯನಗರ (ಹಂಪೆಯ) ಬಳಿ ಇರುವ ಆನೆಗೊಂದಿ ಪ್ರದೇಶಕ್ಕೆ ವಲಸೆ ಬಂದನೆಂದು, ನಂತರ ವಿಜಯನಗರ ಅರಸರ ಒಲುಮೆಗೆ ಪಾತ್ರನಾಗಿ ಮ್ಯಾಸಬೇಡ ಕುಲಕ್ಕೆ ದೊರೆಯಾಗಿ ವಿಜಯನಗರ ಸಾಮ್ರಾಜ್ಯದಾದ್ಯಂತ ಹಟ್ಟಿ ಹಾಕಿಕೊಂಡಿರಲು ಅನುಮತಿ ಪಡೆದುಕೊಂಡನು. ನಂತರ ತನ್ನ ಸಹೋದರರೊಂದಿಗೆ ಹೊರಟು ಆಂಧ್ರಪ್ರದೇಶದ ರಾಯದುರ್ಗ ಬಳಿಯ ಕುಂದುರ್ಪೆಗುಡ್ಡದ ಬಳಿ ಹಟ್ಟಿ (ರೊಪ್ಪ) ಹಾಕಿಕೊಂಡು ಉಳಿದ ತಮ್ಮಂದಿರು ಕುಂದುರ್ಪೆ ಸೇರಿದಂತೆ ರತ್ನಗಿರಿ, ಮಿಡಿಗೇಶಿ, ವೈ.ಎನ್. ಹೊಸಕೋಟೆ, ನಿಡಗಲ್ಲ, ಶಂಕರಗಲ್ಲುಗಳಲ್ಲೂ ಬಂದು ನೆಲೆಸುತ್ತಾರೆ". ಹೀಗೆ ಈ ಸಮುದಾಯದವರಿಗೆ ಸಂಬಂಧಿಸಿದ ಇವರ ಮೂಲ ವೃತ್ತಿ ಕುರಿತು ಸಿಕ್ಕುವ ಮೊದಲ ದಾಖಲೆಯು ಮ್ಯಾಸಬೇಡರನ್ನು ಪಶುಪಾಲಕ ಸಂಸ್ಕೃತಿಯವರು ಎಂದು ತಿಳಿಸುತ್ತದೆ. ಈ ದಾಖಲೆಯ ಪ್ರತಿ ಅಚ್ಚಾದ ಕಾಲಮಾನ "ಶಾಲಿವಾಹನ ಶಕ ವರುಷಂಗಳು 1262 ವಿರೋಧಿ ನಾಮ ಸಂ. ವೈಶಾಖ ಶು. 1010 ಗುರುವಾರ" ಎಂಬುದಾಗಿದ್ದು, ಈ ಕಾಲಮಾನವನ್ನು ಬಿ. ರಾಜಶೇಖರಪ್ಪನವರು "ನಾಯಕನಹಟ್ಟಿ ದೊರೆಗಳ ವಂಶಾವಳಿ" 16ನೆಯ ಶತಮಾನದ ಕೊನೆಯ ಭಾಗ ಎಂಬುದಾಗಿ ಗುರುತಿಸುತ್ತಾರೆ.

**ಪಶುಪಾಲಕ ಪಾಳೆಯಪಟ್ಟುಗಳು :** ಪಶುಪಾಲನೆ ಮತ್ತು ಕೃಷಿ ಮೂಲದಿಂದ ಬಂದ ಮ್ಯಾಸಬೇಡರು ದೊಡ್ಡ ದೊಡ್ಡ ಸಾಮ್ರಾಜ್ಯ ಕಟ್ಟಿದ ರಾಜರಂತೆ ನಡೆದುಕೊಳ್ಳದೆ ತಮ್ಮ ನೆಲೆ ನಿಂತ ಕಾಡಿನ ಅಂಚಿನ ಪ್ರದೇಶಗಳಲ್ಲೇ ತಮ್ಮ ಅನುಕೂಲಕ್ಕೆ ತಕ್ಕಂತೆ ಇಂತಿಷ್ಟು ಹಟ್ಟಿಗಳಿಗೆ ಒಂದು ಗುಡಿಕಟ್ಟು (ಗುರುಸ್ಥಾನ) ಮತ್ತು ಕಟ್ಟೆ ಮನೆ (ನ್ಯಾಯ ತೀರ್ಮಾನದ ತೀರ್ಪು ನೀಡುವ ಸ್ಥಳ)ಯನ್ನು ರಚಿಸಿಕೊಂಡು ಅದಕ್ಕೆ ಒಬ್ಬ ದೊರೆ ಮತ್ತು ಅಧಿಕಾರ ವರ್ಗವನ್ನು ರಚಿಸಿಕೊಂಡು ಜನರ ಮಾನ ಪ್ರಾಣ, ಆಸ್ತಿಗಳಿಗೆ ರಕ್ಷಣೆ ಒದಗಿಸುತ್ತ ಸಮುದಾಯದ ಏಳಿಗೆಗಾಗಿ ದುಡಿಯುತ್ತಾ ಸಮಾಜಮುಖಿ ಕೆಲಸಗಳನ್ನು ಮಾಡುತ್ತ ತಾವು ನೆಲೆನಿಂತ ಸ್ಥಳಗಳಲ್ಲಿ ಚಿಕ್ಕ ಚಿಕ್ಕ ಪಾಳೆಯಪಟ್ಟುಗಳನ್ನು ಕಟ್ಟಿದರು. ದೊಡ್ಡ ಸಂಸ್ಥಾನಗಳ ರಾಜ ಮಹಾರಾಜರು ಪಾಳೆಯಗಾರರೊಂದಿಗೆ ಕೊಡು ಕೊಳ್ಳುವಿಕೆ ಸಂಬಂಧಗಳನ್ನು ಬೆಳೆಸಿಕೊಂಡು ಅವರಿಗೆ ಅಧೀನರಾಗಿ ಸಾಮಂತರಾಗಿ ನಡೆದುಕೊಂಡಿರುವುದು ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಹೀಗೆ ಸ್ಥಾಪಿತವಾದ ಪಶುಪಾಲಕ ಪಾಳೆಯ ಪಟ್ಟುಗಳೆಂದರೆ



- ಹಂಪೆ ಬಳಿಯ ಆನೆಗೊಂದಿ, ಕಮಲಾಪುರ, ಕುಂದುರ್ಪೆಗುಡ್ಡ, ಗಲಗಲ್ಲು, ನಿಡಗಲ್ಲು, ಶಂಕರಗಲ್ಲು, ಮಿಡಿಗೇಶಿ, ವೈ.ಎನ್. ಹೊಸಕೋಟೆ, ಹರ್ತಿಕೋಟೆ, ಉಜ್ಜನಿ, ತಾಯ್ದೋಣಿ, ನಾಗರಕಟ್ಟೆ (ನಾಯಕನಹಟ್ಟಿ), ಗೋನೂರು, ಶೆಟ್ಟೂರು, ಸಿರಿವಾಳ, ನಾಗಲಮಡಿಕೆ, ದೊಡ್ಡೇರಿ, ಜಗಲೂರು, ಗುಡೆಕೋಟೆ, ರಾಯದುರ್ಗ, ಉಡೇಗೋಳ, ಜರಿಮಲೆ, ಮೊಳಕಾಲ್ಮೂರು, ಹೂತುಕುಚೆ, ಕಂಪಳದೇವರಹಟ್ಟಿ, ಹೀರೆಹಳ್ಳಿ, ತುರುನೂರು, ಅಂದನೂರು, ಗಂಜಿಗಟ್ಟೆ ಗುರುತಿಸುವಂತೆ ಮಾಡಿದೆ. ಈ ಪಶುಪಾಲಕ ಪಾಳೆಯ ಪಟ್ಟೆಯ ಸಂಸ್ಕೃತಿಯನ್ನು ಇನ್ನೂ ಜೀವಂತವಾಗಿ ಉಳಿಸಿಕೊಂಡು ಬರುತ್ತಿರುವ ಪ್ರಮುಖ ಮತ್ತು ಆಕರ್ಷಣೀಯವಾದ ಕಟ್ಟೆಮನೆಯಾದ ನನ್ನಿವಾಳ ಕಟ್ಟೆಮನೆ ಮತ್ತು "ಕಂಪಳದೇವರಹಟ್ಟಿಯ ಗುಡಿಕಟ್ಟೆ"ಯನ್ನು ನಾವು ಇಂದಿಗೂ ಕಾಣಬಹುದು. ಮ್ಯಾಸಬೇಡರ ಪಶುಪಾಲಕ ಸಂಸ್ಕೃತಿಗೆ ಸಂಬಂಧಿಸಿದಂತೆ ಈ ಎರಡು ಸ್ಥಳಗಳಲ್ಲಿ ವರ್ಷವಿಡೀ ಹಬ್ಬ ಹರಿದಿನಗಳು, ಮ್ಯಾಸಬೇಡರ ಆಚಾರ - ವಿಚಾರ, ಸಂಪ್ರದಾಯಗಳನ್ನು ಇಂದಿಗೂ ಅನುಸರಿಸಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ದೊರೆ ದರ್ಬಾರು, ದೇವರೆತ್ತುಗಳ ರಾಸುಗಳ ಗಣತಿ, ದೇವರೆತ್ತಿನ ಗೂಡ, ದೀವಣಿಗೆ ಹಬ್ಬ, ಗುಗ್ಗರಿಹಬ್ಬ, ಅರವಜ್ಜಿ ಜಾತ್ರೆ, ಮಿಂಚೇರಿ ಯಾತ್ರೆ ಇನ್ನೂ ಮುಂತಾದವುಗಳು ಪಶುಪಾಲಕ ಸಂಸ್ಕೃತಿಯ ಪಳೆಯುಳಿಕೆಗಳಂತೆ ಕಂಡುಬರುತ್ತವೆ.

ಹೀಗೆ ಅವರು ನೆಲೆನಿಂತ ಸ್ಥಳಗಳಲ್ಲಿ ಕಟ್ಟಿದ ಪಾಳೆಯ ಪಟ್ಟುಗಳನ್ನು ಪಶುಪಾಲಕ ಪಾಳೆಯ ಪಟ್ಟುಗಳೆಂದು ಕರೆಯಲಾಗುತ್ತದೆ. ಅಧಿಕಾರ ನಡೆಸಿದ ಭೌಗೋಳಿಕ ಪ್ರದೇಶವನ್ನು 'ಮ್ಯಾಸಮಂಡಲ' ಎಂದೂ ಕರೆಯಲಾಗುತ್ತದೆ.

ಪಶುಪಾಲಕ ಸಂಸ್ಕೃತಿಯನ್ನು ಸಮರ್ಥಿಸುವಂತೆ ಕಂಡು ಬರುವ 'ಕಿಲಾರಿ' ಸಂಪ್ರದಾಯ. ಈ ಹಿಂದೆ ಹೇಳಿದಂತೆ ಇದು ಶ್ರೀಕೃಷ್ಣನಿಂದ ಮ್ಯಾಸಬೇಡರ ಪೂರ್ವಿಕ ಮೂಗನಾಯಕನಿಗೆ ಬಂದುದಾಗಿದ್ದು, ಈ ಸಂಪ್ರದಾಯ ತಂದೆಯಿಂದ ಮಗನಿಗೆ ವರ್ಗಾವಣೆ ಯಾಗುವಂತಹದ್ದು, ವಾರಸುದಾರಿಕೆಯನ್ನು ಬೇರೆಯವರಿಗೆ ವರ್ಗಾಯಿಸುವಂತಿಲ್ಲ. ಕಿಲಾರಿಯಾದವನು ಯಾವ ರೀತಿಯ ಸಂಭಾವನೆ, ವಂತಿಗೆ ಇಲ್ಲದೆ ದೇವರಿಗೆಂದೇ ಮೀಸಲಾಗಿರುವ ಪವಿತ್ರವಾದ ದೇವರೆತ್ತು (ಮುತ್ತಯ್ಯ)ಗಳನ್ನು ಕಾಯುವ ಕಾಯಕ ಜೀವನ ಪರ್ಯಂತ ನಡೆಸಿಕೊಂಡು ಬರಬೇಕು. ದೇವರೆತ್ತುಗಳನ್ನು ಕಾಡಿನಲ್ಲಿ ರೊಪ್ಪ ಹಾಕಿಕೊಂಡು ಜೋಪಾನವಾಗಿ ಕಾಪಾಡುವ ಹೊಣೆಗಾರಿಕೆ ಇವನದು. ಹಬ್ಬ ಹರಿದಿನಗಳಲ್ಲಿ, ಭಕ್ತಾದಿಗಳು ನೀಡುವ ಕಾಣಿಕೆ ದವಸ ಧಾನ್ಯ, ವಸ್ತುಗಳೇ ಇವನ ಜೀವನಾಧಾರ. ರಾತ್ರಿ ಇವನು ರೊಪ್ಪದಲ್ಲೇ ಎತ್ತಿನಗೂಡಿನಲ್ಲಿಯೇ ತಂಗಬೇಕು. ದೇವರೆತ್ತುಗಳಿಗೆ ಪ್ರತಿ ನಿತ್ಯ ತಪ್ಪದೆ ಉದಿ-ಪದಿ ಹಾಕಿ, ಶಾಂತಿ ಮಾಡಿದ ನಂತರವೇ ಈತನ ಊಟವಾಗಬೇಕು. ಹಬ್ಬ

ಹರಿದಿನಗಳಲ್ಲಿ (ಮುತ್ತೇಗಾರ) ದೇವರೆತ್ತುಗಳನ್ನು ದೇವರ ಗುಡಿ ಮುಂದೆ ಮೆರೆಸುವುದು ಇವನ ಮುಖ್ಯ ಕರ್ತವ್ಯಗಳಲ್ಲೊಂದು.

ದೇವರೆತ್ತಿನ ಗೂಡುಗಳು ಮ್ಯಾಸಬೇಡರಿಗೆ ಪವಿತ್ರವಾದ ಸ್ಥಳ ದೇವಸ್ಥಾನಗಳಿದ್ದಂತೆ. ಮದುವೆಯಾಗುವ ವಧು-ವರರು ದೇವರೆತ್ತುಗಳಲ್ಲಿ ನೀರು ಹಾಕಿಸಿಕೊಳ್ಳುವ ಶಾಸ್ತ್ರ ಮಾಡುತ್ತಾರೆ ಹಾಗೂ ಕುಲಗೆಟ್ಟವರನ್ನು ಕುಲಕ್ಕೆ ಸೇರಿಸಿಕೊಳ್ಳುವಾಗಲು ದೇವರೆತ್ತಿನ ಗೂಡು ಅಷ್ಟೇ ಮುಖ್ಯ. ಇಲ್ಲಿ ನೀರು ಹಾಕುವ ಮೂಲಕ ಸೂತಕ, ಮೈಲಿಗೆ ಕಳೆಯಲಾಗುತ್ತದೆ. ಹಬ್ಬ ಹರಿದಿನಗಳಲ್ಲಿ ದೇವಸ್ಥಾನಗಳ ಮುಂದೆ ದೇವರೆತ್ತುಗಳನ್ನು ಮೆರೆಸುವ ಉದ್ದೇಶವೇನೆಂದರೆ, ತಮ್ಮ ಕುಲದ ಪೂರ್ವಿಕರಾದ ಹಿರಿಯರು ಎತ್ತುಗಳ ರೂಪದಲ್ಲಿ ಬಂದು ನಮ್ಮನ್ನು ಆಶೀರ್ವದಿಸುತ್ತಾರೆಂಬ ನಂಬಿಕೆ ಇದೆ. (ಮುತ್ತಯ್ಯಗಾರು - ಎಂದರೆ ಹಿರಿಯರು ಎಂದು ಅರ್ಥ.)

ಪಶುಪಾಲನ ಹಿನ್ನೆಲೆಯ ಮ್ಯಾಸಬೇಡರಲ್ಲಿ 12 ಪೆಟ್ಟಿಗೆ ದೈವಗಳಿದ್ದು, ಅವುಗಳಲ್ಲಿ ಕೆಲವು ವಿಷ್ಣುಗಣ ಇನ್ನುಳಿದ ಕೆಲವು ಶೈವಗಳಿಂದ ಕೂಡಿದವುಗಳಾಗಿವೆ. ಈ ಹಿನ್ನೆಲೆಯಲ್ಲಿ ಸಸ್ಯಹಾರ ಮತ್ತು ಮಾಂಸಹಾರಗಳಿಂದ ಕೂಡಿದ ಹರಕೆಗಳನ್ನು ಭಕ್ತರು ತೀರಿಸುವುದನ್ನು ಕಾಣಬಹುದು. ಈ 12 ಪೆಟ್ಟಿಗೆ ದೈವಗಳಿಗೆ ಸಂಬಂಧಿಸಿದಂತೆ ಜಿಲ್ಲೆಯಾದ್ಯಂತ ಅಲ್ಲಲ್ಲಿ ಕಾಡುಗಳಲ್ಲಿ ಪ್ರತ್ಯೇಕವಾಗಿ ರೊಪ್ಪಗಳನ್ನು ಹಾಕಿಕೊಂಡು ದೇವರೆತ್ತುಗಳನ್ನು ಪೋಷಿಸಿಕೊಂಡು ಬರುತ್ತಾರೆ. ನೆಲಗೇತಿ ಮುತ್ತೆಗಾರ ಎತ್ತುಗಳು, ಜೋಸೆ ದೇವರ ಎತ್ತುಗಳು, ಪಾಪೇದೇವರ ಎತ್ತುಗಳು, ಕಂಪಳದೇವರ ಎತ್ತುಗಳು ವಡೇಲಾರ ಎತ್ತುಗಳು, ಹತ್ತು ಮುತ್ತೇಗಾರ ಎತ್ತುಗಳು, ನನ್ನಿವಾಳದ ಕಟ್ಟೆಮನೆಯ ಮುತ್ತೆಗಾರ ಎತ್ತುಗಳು, ಗಾದ್ರಿದೇವರ ಎತ್ತುಗಳು, ಬಂಗಾರು ದೇವರ ಎತ್ತುಗಳು, ಬೊಮ್ಮದೇವರ ಎತ್ತುಗಳು, ಓಬಳದೇವರ ಎತ್ತುಗಳು ಎಂದು ಅವುಗಳನ್ನು ಕರೆಯಲಾಗುತ್ತದೆ.

**ಹಬ್ಬ ಆಚರಣೆಗಳು :** ದೀವಳಿಗೆ ಹಬ್ಬ, ಎತ್ತಿನಗೂಡು (ಕಾರ ಹುಣ್ಣಿಮೆ), ಗುಗ್ಗರಿ (ಕಾಳ) ಹಬ್ಬ, ಪೇಯಲು ತಾಗುನಾಕಿ ಇಡುಸುಂದಿ (ಕರು ಹಾಲು ಕುಡಿಯುವುದಕ್ಕೆ ಬಿಡುವ ಆಚರಣೆ), ಗಾದ್ರಿ ಗುಡ್ಡಕ್ಕೆ ಯಾತ್ರೆ ಹೋಗುವುದು, ಶೂನ್ಯದ ಮಾರಮ್ಮನ ಗೂಡು, ಹೆನ್ನು-ಹೆನ್ನು, ಗೋಸಿಡ್ಲು ಯಾತ್ರೆ, ಅರವಜ್ಜಿ ಜಾತ್ರೆ, ಡಿಕ್ಕಿ ಆಚರಣೆ, ಇನ್ನೂ ಮುಂತಾದವುಗಳು ಪಶುಪಾಲನ ಸಂಸ್ಕೃತಿಯ ಹಿನ್ನೆಲೆಯಲ್ಲಿ ನಡೆಯುವ ಹಬ್ಬ ಮತ್ತು ಆಚರಣೆಗಳಾಗಿ ಕಂಡು ಬರುತ್ತವೆ.

ದೇವರ ಪೂಜೆಗೆಂದು ಮೀಸಲು ಬಿಡುವ ಹಸುವೊಂದಿದ್ದು ಅದರಿಂದ ಕರೆದ ಹಾಲನ್ನು ಮಾತ್ರ ದೇವರ ಪೂಜೆಗೆಂದು ಬಳಸಲಾಗುತ್ತದೆ. ಈ ಹಸುವಿನಿಂದ ಪಡೆದ ಹಾಲನ್ನು



ಜನ ಸಾಮಾನ್ಯರು ಬಳಸುವಂತಿಲ್ಲ. ಮ್ಯಾಸಬೇಡರಲ್ಲಿ ಯಾವುದೇ ಹಬ್ಬ ಹರಿದಿನಗಳು ನಡೆಯಬೇಕೆಂದರೆ ಮೊದಲು ಮೀಸಲು ಹಾಲು ಬಂದ ನಂತರವೇ ನಡೆಯಬೇಕು. ಅಷ್ಟು ಕಟ್ಟುನಿಟ್ಟಾಗಿ ಇದನ್ನು ಅನುಸರಿಸಿಕೊಂಡು ಬರುತ್ತಾರೆ. ಈ ರೀತಿ ಹಾಲು ಕೊಡುವ ಹಸುವನ್ನು 'ಜನ್ನಿಗೆ ಹಸು' ಎಂದು ಕರೆಯುತ್ತಾರೆ.

ದೇವರೆತ್ತು ಅಥವಾ ಹಸುಗಳೇನಾದರೂ ಸತ್ತರೆ ಅವುಗಳು ಮ್ಯಾಸಬೇಡರಿಗೆ ದೈವ ಸಮಾನವಾದ್ದರಿಂದ ಸತ್ತ ಮನುಷ್ಯರಿಗೆ ಯಾವ ರೀತಿ ಸಂಸ್ಕಾರ ನೆರವೇರಿಸುವರೋ ಹಾಗೆಯೇ ಸತ್ತ ದೇವರೆತ್ತು, ಹಸುವನ್ನು ಕಲ್ಲು ಬಣವೆ ಸಂಸ್ಕಾರ ಪದ್ಧತಿಯಲ್ಲಿ ಹೂಳುತ್ತಾರೆ. ದೊಡ್ಡದಾದ ಗುಂಡಿ ತೆಗೆದು ಅದರಲ್ಲಿ ಮೃತ ಕಳೇಬರವನ್ನು ಅರ್ಧಕ್ಕೆ ಹೂತು ಉಳಿದಂತೆ ಜಲ್ಲಿಕಲ್ಲಿನ ರಾಶಿಯಿಂದ ಮುಚ್ಚುತ್ತಾರೆ. ಇದನ್ನು 'ಕಲ್ಲು ಬಣವೆ' ಎಂದು ಕರೆಯುತ್ತಾರೆ. ಈ ರೀತಿಯ 'ಕಲ್ಲು ಬಣವೆ'ಗಳನ್ನು ಜಿಲ್ಲೆಯಾದ್ಯಂತ ಅಲ್ಲಲ್ಲಿ ಕಾಣಬಹುದಾಗಿದೆ. ಈ ರೀತಿಯ ಕಲ್ಲುಬಣವೆಗಳು ಕೂಡ ಮ್ಯಾಸಬೇಡರಿಗೆ ಪವಿತ್ರವಾದ ಸ್ಥಳಗಳು.

ಮ್ಯಾಸಬೇಡರ ದೈವಗಳ ಮುಂದೆ ದೇವಸ್ಥಾನಗಳಲ್ಲಿ ಬಳಸುವ ಪವಿತ್ರವಾದ ಚರ್ಮ ವಾದ್ಯ 'ದಗಮು'. ಇದನ್ನು ಹಸುವಿನ ಚರ್ಮದಿಂದ ತಯಾರಿಸಲಾಗುತ್ತದೆ. ಇಲ್ಲಿ ಬಳಸುವ ಹಸುವಿನ ಚರ್ಮ ಹುಲಿಯೊಂದಿಗೆ ಹೋರಾಡಿ ಪ್ರಾಣ ಬಿಟ್ಟ ಹಸುವಾಗಿರಬೇಕು ಇಲ್ಲವೆ ಕರು ಹಾಕದೆ ಇರುವ ಗೊಡ್ಡು (ಬಂಜೆ) ಬಿದ್ದಿರುವ ಹಸುವಾಗಿದ್ದು ಅದು ಜೀವಂತವಾಗಿರುವಾಗಲೇ ಅದರ ಚರ್ಮ ಸುಲಿದು ನಂತರ ಅದನ್ನು ಸಜೀವ ಸಮಾಧಿ ಮಾಡುತ್ತಾರೆ. ಅದರ ಚರ್ಮವನ್ನು ಹದ ಮಾಡಿ ಕಟ್ಟಿದ ವಾದ್ಯವಾಗಿರಬೇಕು. ಇದನ್ನು ತುಂಬಾ ಕಟ್ಟುನಿಟ್ಟಿನಿಂದ ಆಚರಿಸಲಾಗುತ್ತದೆ. ಬಂಜೆ ಹಸು ಪವಿತ್ರತೆಯ ಸಂಕೇತ ಎಂಬ ನಂಬಿಕೆ ಇದಕ್ಕೆ ಕಾರಣವಾಗಿದೆ.

ಮ್ಯಾಸಬೇಡರಲ್ಲಿರುವ ಬೆಡಗು (ಕುಲ, ಬಳಿ)ಗಳು - ಮಂದಲೋರು (ಮಂದೆ, ಗುಂಪು), ಎನುಮಲೋರು (ಎಮ್ಮೆ ಸಾಕುವವರು) ಪೇಯಿಲೋರು (ಕರು) ಗುಡ್ಡಮ ಎದ್ದುಲವಾರು (ಗುಡ್ಡದಲ್ಲಿರುವ ಎತ್ತಿನವರು), ಎದ್ದುಲವಾರು (ಎತ್ತಿನವರು), ಪಡ್ಡುಪ್ರಾಯಕ್ಕೆ ಬಂದ ಹೆಣ್ಣು ಹಸು), ಮಲಕೋಟಿ ಎದ್ದುಲವಾರು (ಮಲಕೋಟಿ ಎತ್ತಿನವರು) ಹಾಗೆಯೇ ಮ್ಯಾಸಬೇಡರಲ್ಲಿ ಹೀಗೆ ಸುಮಾರು 237 ಬೆಡಗುಗಳು ಇವೆ. ಇವುಗಳೆಲ್ಲಾ ಬಹುತೇಕ ಪಶುಪಾಲನೆಯ ಹಿನ್ನೆಲೆಯಲ್ಲಿ ಬಂದ ಬೆಡಗುಗಳಾಗಿಯೇ ಕಂಡುಬರುತ್ತದೆ ಹಾಗೂ ಇವರ ವಾಸಿಸುವ ಸ್ಥಳಗಳನ್ನು ಹಟ್ಟಿಗಳೆಂದು ಕರೆಯಲಾಗುತ್ತಿದ್ದು, ಎತ್ತಿನಹಟ್ಟಿ, ಪೇಯಿಲೋರ ಹಟ್ಟಿ, ಎತ್ತಿನ ಗೌಡ್ರಹಟ್ಟಿ, ತೋಡ್ಲಾರಹಟ್ಟಿ ಹೀಗೆ ಇನ್ನೂ

ಮುಂತಾದವುಗಳನ್ನು ಕಾಣಬಹುದು. ಹುಟ್ಟಿನಿಂದ ಸಾವಿನವರೆಗೂ ಇವರ ಬದುಕಿನಲ್ಲಿ ಬೆರೆತು ಹೋಗಿರುವ ಪಶುಪಾಲನ ಸಂಸ್ಕೃತಿಯಿಂದಾಗಿ ಇವರನ್ನು 'ಪಶುಪಾಲಕ ಮ್ಯಾಸಬೇಡರೆಂದು' ಕರೆಯಲಾಗಿದೆ.

## ಪರಾಮರ್ಶನ ಗ್ರಂಥಗಳು


1. ಸಂಪಾದಕರು, ಲಕ್ಷ್ಮಣ ತೆಲಗಾವಿ - ಹರತಿಸಿರಿ - ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, 1987
2. ಮ್ಯಾಸ ಮಂಡಲ - ಲೇ. ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2003.
3. ಮ್ಯಾಸ ನಾಯಕರು ಒಂದು ಜನಾಂಗೀಯ ಅಧ್ಯಯನ - ಡಾ. ಕರಿಶೆಟ್ಟಿ ರುದ್ರಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1995.
4. ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುವೀರರು, ಲೇ. ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.
5. ವಾಲ್ಮೀಕಿ ಮಂದಾರ - ಸಂ. ಹರ್ತಿಕೋಟೆ ವೀರೇಂದ್ರಸಿಂಹ ಮತ್ತು ಡಾ. ಅಮರೇಶ ಯತಗಲ್, ಪ್ರಕಾಶನ - ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, 2008.
6. ಮ್ಯಾಸಬೇಡರ ಕಥನಗಳು, ಸಂಪಾದಕರು : ಪ್ರಭಾಕರ ಎ.ಎಸ್., ಕನ್ನಡ ವಿಶ್ವವಿದ್ಯಾಲಯ, ಹಂಪಿ, 1999.
7. ಬುಡಕಟ್ಟು ಕುಲ ಕಸುಬುಗಳು, ಡಾ. ಕೆ.ಎಂ. ಮೈತ್ರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.
8. ದುರ್ಗಶೋಧನ - ಲೇ. ಬಿ. ರಾಜಶೇಖರಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2001
9. ನನ್ನಿವಾಳದ ಸುತ್ತಿನ ಮ್ಯಾಸಬೇಡರ ಹಟ್ಟಿಗಳು, ಒಂದು ಸಾಂಸ್ಕೃತಿಕ ಅಧ್ಯಯನ, ಲೇ. ಬಿ. ಪಾಪಣ್ಣ, ಅಪ್ರಕಟಿತ ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, 2008.









# ಕೋಲಾರ ಜಿಲ್ಲೆಯ ದಲಿತ ಚಳವಳಿ ಮತ್ತು ಸಾಹಿತ್ಯ

– ಬೀರಮಾನಹಳ್ಳಿ ರಾಮಕೃಷ್ಣ
ಸಾಹಿತಿ

ಕೋಲಾರ ಜಿಲ್ಲೆಯಲ್ಲಿ ದಲಿತ ಚಳುವಳಿಯ 1975ರ ಪ್ರಾರಂಭದ ದಿನಗಳವು. ಹಳ್ಳಿಗಳಲ್ಲಿ ಊಳಿಗಮಾನ್ಯ ಪದ್ಧತಿ, ಪಾಳೇಗಾರಿಕೆ, ಗೌಡರಗತ್ತು ಮಿತಿಮೀರಿತ್ತು. ವಂಶಪಾರಂಪರ್ಯವಾಗಿ ಜೀತಗಾರಿಕೆಯಲ್ಲಿ ಸಿಕ್ಕಿ ಹಾಕಿಕೊಂಡ ಅಸ್ಪೃಶ್ಯ ಕುಟುಂಬಗಳು ವರ್ಷದ ಲೆಕ್ಕದಲ್ಲಿ ಒಡೆಯರ ಭೂಮಿಯನ್ನು ಕನ್ನಡಿಯಾಗಿಸಲು ರಾತ್ರಿ ಹಗಲು ದುಡಿದು ಧಣಿಯ ಬಾಗಿಲು ಕಾಯಬೇಕಾಗಿತ್ತು. ಅಸ್ಪೃಶ್ಯರನ್ನು 'ಹೊಲೆಯ', 'ಮಾದಿಗ' ಎಂದು ಏಕವಚನದಲ್ಲಿ ಹೆಸರಿಡಿದು ಬೈಯ್ಯುತ್ತಾ ಗುಡಿ ಭಜನೆ ಮಂದಿರಗಳಿಗೆ ಸೇರಿಸದೆ, ಸೇದುವ ಬಾವಿ, ಕೊಳವೆ ಬಾವಿ, ಹೋಟಲ್ಲು, ಸವರ್ಣೀಯರ ಬ್ರಾಹ್ಮಣರ ಕೇರಿಗಳಿಗೆ ಹೆಜ್ಜೆ ಹಾಕಿಸದೆ ನಿರ್ಬಂಧ ವಿಧಿಸಲಾಗಿತ್ತು. ಈ ವಿಧಿಯನ್ನು ಅಪ್ಪಿ ತಪ್ಪಿ ಮುರಿದರೆ ಕೂಲಿಗೆ ಕರೆಯದೆ, ಅಂಗಡಿಯಲ್ಲಿ ಬೇಳೆಕಾಳು ಕೊಡದೆ, ನೀರು ಕೊಡದೆ, ಹೋಟಲ್ಲಿನಲ್ಲಿ ತಿಂಡಿ ಕೊಡದೆ, ಊರಿನ ರಸ್ತೆಗಳಲ್ಲಿ, ತಮ್ಮ ಜಮೀನುಗಳ ಗೆನಿಮೆಗಳ ಹತ್ತಿರ ಸೇರಿಸದೆ ಸಾಮಾಜಿಕ, ಆರ್ಥಿಕ ಬಹಿಷ್ಕಾರ ಹಾಕಲಾಗುತ್ತಿತ್ತು. ಈ ಬಹಿಷ್ಕಾರ ಶಾಸನ ರೂಪದಲ್ಲಿ ಹಲವು ದಿನ, ತಿಂಗಳು, ವರ್ಷಗಳು ಮುಂದುವರೆಯುತ್ತಿತ್ತು.

ಈ ಬಹಿಷ್ಕಾರ ದಿನಗಳಲ್ಲಿ ಯಾರು ಹತ್ತಿರ ಬಂದು ಸಹಾಯ ಮಾಡುವವರು ಇರಲಿಲ್ಲ. ತಮ್ಮ ಮುರುಕು ಗುಡಿಸಲುಗಳಲ್ಲಿ ಕಿತ್ತು ತಿನ್ನುವ ಹಸಿವು, ಬಡತನ, ಕೂಲಿ ಕಾಣದೆ ದಡಕ್ಕೆ ಬಿದ್ದ ಮೀನುಗಳಂತೆ ಅಸ್ಪೃಶ್ಯ ಕುಟುಂಬಗಳು ಸಾವು ಬದುಕಿನಲ್ಲಿ ವಿಲವಿಲನೆ ಒದ್ದಾಡುತ್ತಿದ್ದರು.

ಯಾವ ಕ್ಷಣದಲ್ಲಿ ಗುಡಿಸಲಿಗೆ ಬೆಂಕಿ ಬೀಳುವುದೋ, ನಮ್ಮಗಳ ಮೇಲೆ ದೌರ್ಜನ್ಯವಾಗುವುದೋ, ಹೆಣ್ಣು ಮಕ್ಕಳ ಮಾನಭಂಗ ಅತ್ಯಾಚಾರವಾಗುವುದೋ, ಯಾವ ಸಂದರ್ಭದಲ್ಲಿ ನಮ್ಮ ಸಾವು ಕಾದಿದೆಯೋ ಎನ್ನುವ ಒಳಹೊರ ನೋವಿನಲ್ಲಿ ಕರಗಿ ಹೋಗಿದ್ದರು.

ಹಳ್ಳಿಗಳಲ್ಲಿ ಹೊಲೆಮಾದಿಗರು ದೇವಮೂಲೆಗೆ ಒಂದು ಕೇರಿ, ಅಗ್ನಿಮೂಲೆಗೆ ಮತ್ತೊಂದು ಕೇರಿಯಾಗಿ ನೆಲೆಯೂರಿದ್ದರು. ಅಸ್ಪೃಶ್ಯತೆಯ ಬಡತನವು ನೋವು ಇಬ್ಬರದು ಒಂದೇ ಆಗಿದ್ದರೂ ಕೂಡ ಒಬ್ಬರಲ್ಲಿ ಒಬ್ಬರು ಸೇರುತ್ತಿರಲಿಲ್ಲ. ಊರಿನ ಸವರ್ಣೀಯರು ಇವರಿಬ್ಬರು ಒಟ್ಟಿಗೆ ಸೇರುವುದರಿಂದ ಸಂಘಟನೆಯಾಗಿ ನಮ್ಮ ಮೇಲೆ ತಿರುಗಿ ಬೀಳುವರೆಂದು ಎಡಬಲಗಳು ಕಿತ್ತಾಡುವಂತೆ, ಕಚ್ಚಾಡುವಂತೆ ಒಬ್ಬರನ್ನು ಮತ್ತೊಬ್ಬರು ದಲಿತರಲ್ಲಿ ಎತ್ತಿ ಕಟ್ಟಿ ದುಃಖ ದುಮ್ಮಾನಗಳಿಗೆ ಗುರಿಪಡಿಸುತ್ತಿದ್ದರು. ಮತ್ತೆ ಏನೂ ಗೊತ್ತಿಲ್ಲದವರಂತೆ ಇದ್ದು; ಸಹಾಯ ಮಾಡುವವರಂತೆ ನಟಿಸಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿದ್ದರು. ದಲಿತರು ತಪ್ಪು ಮಾಡಿದರೆ ಅಥವಾ ತಪ್ಪಿತಸ್ಥರೆಂದು ಸಿಕ್ಕಿ ಹಾಕಿಸಿ, ಹೆಣ್ಣಾಗಲಿ, ಗಂಡಾಗಲಿ, ಮುದುಕರಾಗಲಿ, ಮಕ್ಕಳಾಗಲಿ ತಮಟೆ ಬಡಿಸಿ ಕರೆಸಿ, ಚಾವಡಿ ಕಂಬಕ್ಕೆ ಕಟ್ಟಿ ಹಾಕಿಸಿ, ಅವಮಾನ ಪಡಿಸಿ ಕ್ರೂರವಾದ ಶಿಕ್ಷೆ, ದಂಡವನ್ನು ಹಾಕುವ ವ್ಯವಸ್ಥೆ ರೂಢಿಯಲ್ಲಿತ್ತು. ಅಸ್ಪೃಶ್ಯರಲ್ಲಿ ಎದುರು ಉತ್ತರ ಕೊಡುವ ಧ್ವನಿಯೇ ಇರಲಿಲ್ಲ.

ಪಿತ್ರಾರ್ಜಿತ ಜಮೀನು ಹೊಂದಿದ್ದ ದಲಿತ, ಕುಟುಂಬಗಳು ಎತ್ತು ಬಂಡಿ ಇಲ್ಲದೆ ಬೀಡು ಬಿಟ್ಟಿದ್ದರು. ಕೆಲವರು ಬೇಸಾಯ ಮಾಡಿದರು. ವರ್ಷಕ್ಕೆ ಒಂದು ಬೆಳೆ ಬೆಳೆಯುವುದು ಕಷ್ಟಕರವಾಗಿತ್ತು. ತೋಟ ಮಾಡಲು ನೀರಿನ ಆಸರೆ ಇರಲಿಲ್ಲ ; ಬಹಳಷ್ಟು ಜನ ಜೀತಕ್ಕಾಗಿ, ಕೂಲಿಗಾಗಿ ಶರಣು ಹೊಡೆದಿದ್ದರು. ಇವರು ಮಕ್ಕಳನ್ನು ಸ್ಕೂಲಿಗೆ ಕಳುಹಿಸುವುದು ಅಪರೂಪವಾಗಿತ್ತು. ಸ್ಕೂಲಿಗೆ ಸೇರಿಸಿದ ಮಕ್ಕಳನ್ನು ಕೂಡ ಕುರಿ, ಎಮ್ಮೆ, ದನ ಕಾಯಲು ಜೀತವಿಡುತ್ತಿದ್ದರು. ಕೆಲವು ಸಲ ಮದುವೆಯಾದ ಗಂಡಹೆಂಡತಿ ಸಾಲತೀರಿಸಲು, ಕೆಲವು ಸಲ ಇಡೀ ಕುಟುಂಬವೇ ಸಾಲ ತೀರಿಸಲು ಜೀತಕ್ಕೆ ಸವರ್ಣೀಯರಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಿದ್ದರು.

ದೇವರು ಧರ್ಮ ಸಂಪ್ರದಾಯಗಳಿಗೆ ದಾಸರಾಗಿದ್ದ ದಲಿತರಿಗೆ ಹಬ್ಬ, ಹರಿದಿನ ಶ್ರಾದ್ಧ, ಮದುವೆ ಮುಂತಾದ ಕಾರ್ಯಗಳಿಗೆ ಊರಿನ ಜಮೀನುದಾರರು ಬಡ್ಡಿಗೆ ಸಾಲ ನೀಡಿ, ಬಡ್ಡಿಗೆ ಚಕ್ರಬಡ್ಡಿಯಾಗಿ ಹೊಲಗದ್ದೆಗಳನ್ನು ಸದ್ದಿಲ್ಲದೆ ಹೆಬ್ಬೆಟ್ಟು ಹಾಕಿಸಿಕೊಂಡು ತಮ್ಮ ಕಬ್ಬಿಣದ ಪೆಟ್ಟಿಗಳಲ್ಲಿ ಪತ್ರಗಳನ್ನು ಭದ್ರಪಡಿಸಿ, ಪಟ್ಟಣಗಳಿಗೆ ಕರೆದುಕೊಂಡು ಹೋಗಿ ಚಿತ್ರಾನ್ನ ಮಸಾಲೆದೋಸೆಗಳ ಕೊಡಿಸಿ ರಿಜಿಸ್ಟ್ರಾರ್ ಕಛೇರಿಯಲ್ಲಿ ನೊಂದಣಿ ಮಾಡಿಸಿಕೊಳ್ಳುತ್ತಿದ್ದರು. ಸರ್ಕಾರದಿಂದ ಬರುವ ಮನೆ, ನಿವೇಶನ, ದೀಪ ಲೋನು,



ವರಕಾಸ್ತು ಜಮೀನುಗಳು ದಲಿತರಿಗೆ ಸಿಗದೆ ಇರುವ ಹಾಗೆ, ಸಿಕ್ಕಿದರೂ ದಕ್ಕದಂತೆ ಮಾರ್ಗೋಪಾಯಗಳನ್ನು ಸವರ್ಣೀಯರು ಹಳ್ಳಿಗಳಲ್ಲಿ ರೂಢಿಸಿಕೊಂಡು ಸರ್ಕಾರ, ಪೋಲೀಸು, ಕೋರ್ಟು, ಕಾನೂನು ಇದ್ದರೂ ಸಹಾಯ ಸಿಗುವುದು ಮರೀಚಿಕೆಯಾಗಿತ್ತು.

ಹೊಲೆಮಾದಿಗರು ತಮ್ಮ ದೇವರೆಂದು ಗುಡಿಯ ಹತ್ತಿರ ಹೋದರೂ ನಾಯಿಗಳ ತರ ಬೀದಿಯಲ್ಲಿ ನಿಲ್ಲಬೇಕಾಗಿತ್ತು. ಹೋಟೆಲ್ಲುಗಳಿಗೆ ತೆಂಗಿನ ಚಿಪ್ಪು ಅಥವಾ ಗ್ಲಾಸಿನಲ್ಲಿ ಕಾಫಿ, ಟೀ ಹೊರಗಡೆ ಕುಡಿಯಬೇಕಾಗಿತ್ತು. ತಿಕ ತೊಳೆಯುವ ಕುಂಟೆಯ ನೀರನ್ನು ಮುಟ್ಟುವ ಅಧಿಕಾರವು ಕೆಲವು ಕಡೆ ದಲಿತರಿಗೆ ಇರಲಿಲ್ಲ. ಶ್ರಮಕ್ಕೆ ತಕ್ಕ ಕೂಲಿಯ ದರ ಕೇಳುವುದು ಕಷ್ಟಕರವಾಗಿತ್ತು. ಕ್ಷೌರ ಮಾಡಿಸಿಕೊಳ್ಳಲು ದಲಿತರಿಗೆ ಕ್ಷೌರಿಕರು ಮುಂದೆ ಬರದಿದ್ದಾಗ ದಲಿತರಲ್ಲೇ ಕೆಲವು ಕುಟುಂಬಗಳು ಕ್ಷೌರ ಮಾಡುವ ವೃತ್ತಿಯನ್ನು ರೂಢಿಸಿಕೊಂಡರು. ಅಂತಹ ಕುಟುಂಬಗಳನ್ನು ಕೋಲಾರ ತಾಲ್ಲೂಕಿನ ತೊರದೇವಂಡಹಳ್ಳಿಯಲ್ಲಿ ಇಂದಿಗೂ ನಾವು ಕಾಣಬಹುದು.

ಊರಿನಲ್ಲಿ ಸತ್ತದನ, ನಾಯಿ, ಕೊಚ್ಚೆ ತೆಗೆಯಲು ಉಚಿತವಾಗಿ ದಲಿತರನ್ನು ಬಳಸಿಕೊಳ್ಳುತ್ತಿದ್ದರು. ಪಟ್ಟಣಗಳಲ್ಲಿ ಮಲಹೊರುವ ಪದ್ಧತಿ ಸಾಮಾನ್ಯವಾಗಿತ್ತು. ಊರಿನಲ್ಲಿ ಮಾಡುವ 'ದ್ಯಾವ್ರ' ಸಂದರ್ಭದಲ್ಲಿ ಸವರ್ಣೀಯರು ಕೋಣವನ್ನು ಇನಾಮಾಗಿ ನೀಡಿ ಊರಿನಲ್ಲಿ ಮೆರವಣಿಗೆ ಮಾಡಿಸಿ ಬಂದ ಎಲ್ಲ ನೆಂಟರ ಮುಂದೆ ಕೋಣ, ದನ ತಿನ್ನುವರೆಂದು ನೆನಪಿಸಲಾಗುತ್ತಿತ್ತು. ಮಗ್ಗಗಳ ಇಟ್ಟಿದ್ದ ಹೊಲೆಯರು, ಚರ್ಮ ಹದ ಮಾಡುವ ಮಾದಿಗರು ಸರಿಯಾದ ಬೆಲೆ ಸಿಗದೆ ಈ ಕೆಲಸಗಳ ಬಿಟ್ಟು ಬೇಸಾಯ ಕೂಲಿನಾಲಿಗೆ ಶರಣಾದರು. ಒಟ್ಟಿನಲ್ಲಿ ಅಸ್ಪೃಶ್ಯರು ಮನುಷ್ಯರಂತೆ ಕಂಡರೂ ಸವರ್ಣೀಯರ ಕಣ್ಣಿಗೆ ಜೀತಗಾರರು, ಕೂಲಿಕಾರರು, ಗುಲಾಮರು ಎನ್ನುವ ಭಾವನೆ ಮುಗಿಲು ಮುಟ್ಟಿತ್ತು. ಮೊದಲನೆ ತಲೆಮಾರಿನಲ್ಲಿ ಓದಿದವರಲ್ಲಿ ಸ್ವಾಭಿಮಾನದಿಂದ ಬದುಕುವ ಛಲ ಒಂದು ಕಡೆ ಹೊಗೆಯಾಡುತ್ತಿತ್ತು.

ಅಂಬೇಡ್ಕರ್ ಅವರನ್ನು ಕುರಿತು ಓದುವ, ಅಧ್ಯಯನ ಮಾಡುವ ಅವರ ವಿಚಾರಗಳ ಪರಿಚಯಿಸಿಕೊಳ್ಳುವ ಕುತೂಹಲಕಾರಿಯ ದಿನಗಳಾಗಿದ್ದವು. ದಲಿತ ಕಲಾಮಂಡಲಿಯ ಕಲಾವಿದರು, ಕಾರ್ಯಕರ್ತರು ಕೂಡಿಕೊಂಡು ಕ್ರಾಂತಿ ಗೀತೆಗಳನ್ನು ಹಾಡುತ್ತಿದ್ದರು. ಅಕ್ಷರ ಕಲಿತವರು ತಮ್ಮ ದುಃಖದುಮ್ಮಾನ, ಅವಮಾನ, ಶೋಷಣೆಗಳನ್ನು ಬರಹದಲ್ಲಿ ಮೂಡಿಸತೊಡಗಿದರು. ಈ ರೀತಿ ದಲಿತ ಪ್ರಜ್ಞೆಯ ಸ್ಫೋಟ ದಲಿತ ಚಳವಳಿ, ದಲಿತ ಸಾಹಿತ್ಯವಾಯಿತು. ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ಪೃಶ್ಯರ ಮೇಲೆ ನಡೆದ ಹಲ್ಲೆ ದೌರ್ಜನ್ಯಗಳ ವಿರುದ್ಧ ಪ್ರತಿಭಟನೆಯ ದನಿಯಾಗಿ ದಲಿತ ಚಳವಳಿ ಹುಟ್ಟಿಕೊಂಡಿತು. ಪ್ರಮುಖವಾಗಿ ಹೊಲೆಮಾದಿಗರು ಕೊಳವೆ ಬಾವಿಯಲ್ಲಿ ನೀರು ಮುಟ್ಟಿದ್ದಕ್ಕೆ ಆಸ್ತಿ

ವಿವಾದದ ಹಿನ್ನೆಲೆಯಲ್ಲಿ ಅಂತರಜಾತಿ ವಿವಾಹ ಹಾಗೂ ಗಂಡು ಹೆಣ್ಣಿನ ಲೈಂಗಿಕ ಸಂಬಂಧದ ವಿಚಾರದಲ್ಲಿ ದಲಿತರ ಮೇಲೆ ಸವರ್ಣೀಯರು ನಡೆಸಿದ ಹಿಂಸೆಯ ವಿರುದ್ಧವಾಗಿ ದಲಿತ ಚಳುವಳಿಯನ್ನು ಸಂಘಟಿಸಿತು. ಹೋರಾಟದ ಹಾಡುಗಳು ಬರುತಿಹೆವು ನಾವು ಅಸಮಾನತೆಯನ್ನು ಸುಟ್ಟುಬಿಡಲು ಬುಗಿಲೆದ್ದ ಬೆಂಕಿಯ ಜ್ವಾಲೆಗಳು, ಇಕ್ರಲಾ ವದೀರ್ಲ ನನ್ಮಕಳ ಚರ್ಮ ಎಬ್ರಲಾ, ಹೀಗೆ ಈ ನಾಡ ಮಣ್ಣಿನಲ್ಲಿ ಮಣ್ಣಾದ ಜನಗಳ ಕಥೆಯ ಹೇಳುವ ಹಾಡುಗಳು ರಚನೆಯಾದವು. ಜಾತಿ ಬಿಡಿ ಮತ ಬಿಡಿ ಮಾನವತೆಗೆ ಜೀವ ಕೊಡಿ, ರಕ್ತವನ್ನು ಚೆಲ್ಲುತ್ತೇವೆ ನ್ಯಾಯವನ್ನು ಪಡೆಯುತ್ತೇವೆ ಎಂಬ ಭಾವಾವೇಶದ ಆಕ್ರೋಶ ತುಂಬಿದ ಘೋಷಣಾ ವಾಕ್ಯಗಳು ಕೋಲಾರ ಜಿಲ್ಲೆಯಲ್ಲೆಲ್ಲಾ ಕಾಣಿಸಿಕೊಂಡವು. ದಲಿತ ಚಳವಳಿಯ ಆಶಯ ಹಾಗೂ ಹೋರಾಟಗಾರರ ಬರಹವನ್ನು ಪ್ರಕಟಿಸಲು ಹಗಲು ರಾತ್ರಿ 'ಪಂಚಮ ಪಾಕ್ಷಿಕ' ಏಣಗಾಡುತ್ತಿತ್ತು. ತಲ ತಲಮಾರಿನಿಂದ ಆರ್ಥಿಕವಾಗಿ ಸಾಮಾಜಿಕವಾಗಿ ಶೈಕ್ಷಣಿಕ ಮತ್ತು ರಾಜಕೀಯವಾಗಿ ಹಿಂದುಳಿದ ಜನಾಂಗದವರು ಮಾತ್ರ ದಲಿತರು. ಇವರು ತಮ್ಮ ನೋವನ್ನು ಅತ್ಯಂತ ಸಮರ್ಥವಾಗಿ ಭಾಷೆಯ ಮುಖಾಂತರ ಸೃಷ್ಟಿಸುವಂಥದ್ದೇ ದಲಿತ ಸಾಹಿತ್ಯ ಎಂದು ಸ್ಪಷ್ಟವಾಯಿತು.

ಮುಳಬಾಗಿಲು ತಾಲ್ಲೂಕು ಅರಳ್ಳಿ ಗ್ರಾಮದಲ್ಲಿ ಚೆನ್ನಾಗಿ ಓದಿದ ತಪ್ಪಿಗೆ ಸವರ್ಣೀಯರ ಕುತಂತ್ರಕ್ಕೆ 20 ಮಾರ್ಚಿ 1975ನೇ ದಿನ ಬಲಿಯಾದ ಮುನಿವೆಂಕಟಪ್ಪನ ಸಾವಿನ ಪ್ರಕರಣದಿಂದ ಕೋಲಾರ ಜಿಲ್ಲೆಯಲ್ಲಿ ದಲಿತ ಚಳವಳಿಗೆ ಬೇರೂರಲು ಕಾರಣವಾಯಿತು. ಕೆ. ನಾರಾಯಣಸ್ವಾಮಿ, ಕೆ. ರಾಮಯ್ಯ, ಗಡ್ಡಂ ವೆಂಕಟೇಶ್, ಸಿ.ಎಂ. ಮುನಿಯಪ್ಪ, ಎಂ. ವೆಂಕಟಸ್ವಾಮಿ, ಎನ್. ಶಿವಣ್ಣ, ಮುನಿಸ್ವಾಮಿ ಮುಂತಾದವರು ಕರ್ನಾಟಕ ದಲಿತ ಸಂಘರ್ಷ ಸಮಿತಿಯನ್ನು ಹಳ್ಳಿ ಹಳ್ಳಿಗೂ ತಲುಪಿಸಲು ಶೋಷಣೆಯನ್ನು ಖಂಡಿಸಲು ಮುಂದಾದರು. ದಲಿತ ಚಳುವಳಿಯಲ್ಲಿ ತೊಡಗಿ ದುಡಿದ ಜಿಲ್ಲೆಯವರಾದ ಡಿ.ಎಂ. ತಿಮ್ಮರಾಯಪ್ಪ, ದಲಿತ ಕ್ರಿಯಾ ಸಮಿತಿಯ ರಾಜ್ಯ ಸಂಚಾಲಕರು, ಅಶ್ವತ್ ಅಂತ್ಯಜ, ದಲಿತ ಸಂಘರ್ಷ ಸಮಿತಿ (ಸಂಯೋಜಕ) ರಾಜ್ಯ ಸಂಚಾಲಕರು, ಎನ್. ಮುನಿಸ್ವಾಮಿ, ದಲಿತ ಸಂಘರ್ಷ ಸಮಿತಿಯ ರಾಜ್ಯ ಸಂಚಾಲಕರು, ಎಂ. ವೆಂಕಟಸ್ವಾಮಿ, ಸಮತಾ ಸೈನಿಕದಳ ಅಧ್ಯಕ್ಷರು, ಕೋಲಾರ ಜಿಲ್ಲೆಯವರಾದ ದಲಿತ ಸಾಹಿತಿಗಳು ಬೇರೆ ಬೇರೆ ಜಿಲ್ಲೆಗಳಲ್ಲಿ ನೆಲಸಿ ದಲಿತ ಚಳವಳಿಯಲ್ಲಿ ಸಕ್ರಿಯವಾಗಿ ದುಡಿದವರು. ದಸಂಸ ಮಂಡ್ಯ ಜಿಲ್ಲಾ ಸಂಚಾಲಕರಾಗಿ ದುಡಿದ ಗಂಗಾರಾಂ ಚಂಡಾಳ, ಉತ್ತರ ಕನ್ನಡ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿಯನ್ನು ಪ್ರಾರಂಭಿಸಿ ಸಂಘಟಿಸಿದ ಕವಿ ವಿ. ಮುನಿವೆಂಕಟಪ್ಪ ಮುಖ್ಯರು.

ಶೋಷಣೆ ಇರುವ ಕಡೆ ಕರಪತ್ರ ಹಾಕಿಸಿ, ಘೋಷಣೆ ಕೂಗಿ ನ್ಯಾಯಕ್ಕಾಗಿ ಒತ್ತಾಯಿಸುವ, ಜಾಥಮಾಡುವ, ಸರ್ಕಾರಿ ಕಛೇರಿ ಮುತ್ತಿಗೆ ಹಾಕುವ, ಅಧಿಕಾರಿಗಳನ್ನು



ಘೇರಾವೋ ಮಾಡುವ, ಸತ್ಯಾಗ್ರಹ ಮಾಡುವ ಹೋರಾಟಗಳು ಹಳ್ಳಿ ಹಳ್ಳಿಯಲ್ಲಿ ಪ್ರಾರಂಭವಾದವು. ಹಾಸ್ಟಲ್‌ಗಾಗಿ, ನಿವೇಶನಕ್ಕಾಗಿ, ಭೂಮಿಗಾಗಿ, ದೌರ್ಜನ್ಯ, ಅತ್ಯಾಚಾರ, ಕೊಲೆಗಾಗಿ ಕೋಲಾರದಲ್ಲಿ ಸಾರ್ವಜನಿಕ ಭಾಷಣ, ವಿಚಾರ ಸಂಕಿರಣ, ಬಾಯಿಗೆ ಬಟ್ಟೆ ಕಟ್ಟಿಕೊಂಡು ಮೌನ ಮೆರವಣಿಗೆ, ಕಪ್ಪು ಬಾವುಟ ಪ್ರದರ್ಶನ ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳಾಗಿ ಸಾಲು ಸಾಲು ಹೊರಟವು. ಇಂತಹ ಹೋರಾಟಗಳಲ್ಲಿ ಹುಣಸಿಕೋಟೆ ಜಾಥ, ಮರಸನಪಲ್ಲಿ ಜಾಥ, ನಾಗಸಂದ್ರದ ಭೂ ಹೋರಾಟ ಚಳವಳಿ ಬಹು ಮುಖ್ಯವಾದವು.

## ಹುಣಿಸೀಕೋಟೆ ಜಾಥ :

ಮಾಲೂರು ತಾಲ್ಲೂಕಿನ ಒಂದು ಕುಗ್ರಾಮ ಹುಣಿಸೀಕೋಟೆ. ಇಲ್ಲಿ ಕೃಷ್ಣೇಗೌಡ ಪಾಳೆಗಾರನಾಗಿ, ರಾಜಕೀಯ ವ್ಯಕ್ತಿಯಾಗಿ ಎಷ್ಟೋ ಬಡವರ ಶೋಷಣೆಗೆ ಸಿಕ್ಕಿಸಿದ್ದ. ದಲಿತ ಸಂಘರ್ಷ ಸಮಿತಿ ಮಾಲೂರು ತಾಲ್ಲೂಕಿನಲ್ಲಿ 1978ರಲ್ಲಿ ಅಂಬೇಡ್ಕರ್ ಜಾಥ ಮಾಡಿದಾಗ ಕಂಡುಕೊಂಡ ಹುಣಸಿಕೋಟೆಯ ಕುಂಬಾರ ಜಾತಿಯ ಅನುಸೂಯಮ್ಮನ ಅತ್ಯಾಚಾರ ಪ್ರಕರಣವನ್ನು ರಾಜ್ಯ ಕಾರ್ಯಕ್ರಮವಾಗಿ ಕೈಗೆತ್ತಿಕೊಂಡಿತು. ಇದರಿಂದ ಇವರ ತಂದೆ ಶೇಷಗಿರಿಯಪ್ಪನ ಕೊಲೆ ನಡೆಯಿತು. ಹುಣಿಸೀಕೋಟೆಯಿಂದ ಬೆಂಗಳೂರಿನ ವಿಧಾನಸೌಧದವರೆಗೆ ಜಾಥವನ್ನು ರೂಪಿಸಿ 'ಶೇಷಗಿರಿಯಪ್ಪನ ಕಗ್ಗೊಲೆ' ನಾಟಕದ ಜೊತೆಗೆ ಅನಸೂಯಮ್ಮ ಜಾಥದ ಮುಂಚೂಣಿಯಲ್ಲಿ ಕ್ರಾಂತಿಯ ಪಂಜು ಹಿಡಿದು ನ್ಯಾಯಕ್ಕಾಗಿ ನಿಂತು ನಡೆದಳು.

ಕೋಟೆ ಕೋಟಿ ಬಾಧೆಗಳಲ್ಲಿ ಲಕ್ಷಾಂತರ ನೋವುಗಳಲ್ಲಿ ನೀ ಹುಟ್ಟಿ ಬೆಳೆದೆಯಮ್ಮ ನನ್ನ ತಂಗಿ ಅನಸೂಯ ಎನ್ನುವ ಹಾಡುಗಳನ್ನು ಹಾಡುತ್ತಾ ನೂರಾರು ಮೈಲಿ ದಲಿತರ ದಂಡು ಜಾಥದಲ್ಲಿ ನಡೆಯಿತು. ನ್ಯಾಯಕ್ಕಾಗಿ ಬಂದ ದಲಿತರನ್ನು ಪೊಲೀಸಿನವರು ಕಬ್ಬನ್ ಪಾರ್ಕಿನಲ್ಲಿ ಬಂಧಿಸಿದರು. ವಿಧಿಯಿಲ್ಲದೆ ಆರೋಪಿ ಕೃಷ್ಣೇಗೌಡನನ್ನು ಪೊಲೀಸಿನವರು ಬಂಧಿಸಿ ದೂರು ದಾಖಲಾಯಿತು. ಆರೋಪಿಗೆ ಜಿಲ್ಲಾ ನ್ಯಾಯಾಲಯದಲ್ಲಿ ಜೀವಾವಧಿ ಶಿಕ್ಷೆಯಾಗಿ ನ್ಯಾಯವಾದ ಹೋರಾಟಕ್ಕೆ ಜಯ ಲಭಿಸಿತು. ಈ ಕಾರ್ಯಕ್ರಮ ದಲಿತೇತರ ಪರ ನಡೆಸಿದ ದಲಿತರ ಚಳವಳಿಯಾಗಿ ಮೆಚ್ಚುಗೆ ಗಳಿಸಿತು.

## ಮರಸನಪಲ್ಲಿ ಜಾಥ :

3 ಸೆಪ್ಟೆಂಬರ್ 82ರಲ್ಲಿ ಶ್ರೀನಿವಾಸಪುರ ತಾಲ್ಲೂಕು ಮರಸನಪಲ್ಲಿಯಿಂದ ಅದೇ ಊರಿನ ಭೂಮಾಲೀಕ ಎಸ್. ರಾಮಮೂರ್ತಿ ದಲಿತರನ್ನು ವಂಚಿಸುತ್ತಿದ್ದು ದಲಿತರ ಭೂಮಿಗಾಗಿ ಹೋರಾಟ ನಡೆಯಿತು. ಕೋಲಾರ ಜಿಲ್ಲಾಧಿಕಾರಿಗಳ ಕಛೇರಿಯ ತನಕ

ಐವತ್ತೇಳು ಕಿಲೋಮೀಟರ್ ದಲಿತರ ಜಾಥದ ದಂಡು ಗಲೀಟು ರಾಮಮೂರ್ತಿಯ ಅಕ್ರಮಗಳ ತನಿಖೆಯಾಗಲಿ, ನೊಂದ ದಲಿತರಿಗೆ ನ್ಯಾಯನೀಡಿ, ಎಂದು ಘೋಷಣೆ ಕೂಗುತ್ತಾ ಪಿಚ್ಚಳ್ಳಿ ಶ್ರೀನಿವಾಸ್, ಮುನಿಸ್ವಾಮಿಯವರ ಹಾಡುಗಳ ಮುಖಾಂತರ ಕೋಲಾರ ತಲುಪಿತು. ಇದರಿಂದ ದಲಿತರಿಗೆ ಹೋರಾಟದ ಫಲವಾಗಿ ಸಿಹಿ ನೀರಿನ ಬೋರು, ಭೂ ರಹಿತರಿಗೆ ಭೂಮಿ ಲಭಿಸಿತು.

## ನಾಗಸಂದ್ರದ ಭೂ ಆಕ್ರಮಣ ಚಳುವಳಿ

1985ರಲ್ಲಿ ಹುದೂತಿ ನಾಗಸಂದ್ರ ಗ್ರಾಮದಲ್ಲಿ ದಲಿತ ವರ್ಗಕ್ಕೆ ಸೇರಿದ ಜೀತದಾಳುಗಳು ಭೂಮಾಲೀಕರ ಏಕಸಾಮ್ಯದ ವಿರುದ್ಧ ಬಂಡೆದ್ದು ಜರುಗಿದ ಚಳುವಳಿ. ದಲಿತ ಸಂಘರ್ಷ ಸಮಿತಿಯಿಂದ ನಡೆದ ಈ ಚಳವಳಿಗೆ ಕೊನೆಕೊನೆಯಲ್ಲಿ ಸರ್ಕಾರದ ಬೆಂಬಲ ಸಿಕ್ಕಿತು. ಈ ಚಳವಳಿಯ ಮುಖ್ಯ ಆಶಯ.

**1. ಜೀತ ವಿಮುಕ್ತಿ**

2. ಕೃಷಿಯಿಲ್ಲದೆ ಖಾಲಿ ಬಿದ್ದ ಈಚಲು ಗಿಡಗಳಿಂದ ತುಂಬಿದ ಜಮೀನನ್ನು ಕೃಷಿಗೆ ಬಳಸಿಕೊಳ್ಳುವುದು, ಆಗಸ್ಟ್ 15ರ ಸ್ವಾತಂತ್ರ್ಯ ದಿನದಂದು ಭೂಮಿಯನ್ನು ಆಕ್ರಮಣ ಮಾಡಿ ಅರೆಸ್ಟ್ ಆಗಿ ವಿಧಾನಸೌಧದಲ್ಲಿ ಗಲಾಟೆಯಾಗಿ ಕೊನೆಗೆ ಜೀತವಿಮುಕ್ತಿ, ಕೃಷಿಯಿಲ್ಲದೆ ಖಾಲಿ ಇದ್ದ ಈಚಲು ಮರಗಳ ಭೂಮಿ ಹಂಚಿಕೆ ನಡೆಯಿತು. ಎಲ್ಲಾ ಜಾತೀಯ ಬಡವರಿಗೂ ಇಲ್ಲಿ ಪಾಲು ದೊರೆಯಿತು. ಇಂದು 'ಶಂಬೂಕನಗರ'ವಾಗಿ ತನ್ನ ಹೋರಾಟದ ಫಲವಾಗಿ ಹಲವಾರು ಸೌಲಭ್ಯಗಳನ್ನು ಪಡೆದಿರುತ್ತದೆ. ಈ ಚಳುವಳಿಯು ಕೇವಲ ತುಳಿತಕ್ಕೊಳಗಾದವರನ್ನು ಮಾತ್ರ ಬಿಡುಗಡೆಗೊಳಿಸಲಿಲ್ಲ. ಬದಲಾಗಿ ಸುತ್ತಮುತ್ತಲ ಸಮಾಜವನ್ನೇ ಬದಲಿಸಿದೆ. ಈ ಚಳವಳಿಯಲ್ಲಿ ಸಕ್ರಿಯ ಪಾತ್ರವಹಿಸಿದ ಗಂಗಾಧರಮೂರ್ತಿ ಅವರು 'ನಾಗಸಂದ್ರ ಭೂ ಆಕ್ರಮಣ ಚಳುವಳಿ' ಪುಸ್ತಕ ಬರೆದು ದುಡಿಯುವವರ ದನಿಯನ್ನು ಧ್ವನಿಸುವ ಜೀತ ಪದ್ಧತಿ ಮತ್ತು ಭೂ ಚಳುವಳಿಗೆ ಸಂಬಂಧಿಸಿದಂತೆ ಕರ್ನಾಟಕದ ಇತಿಹಾಸದಲ್ಲೊಂದು ಮಹತ್ವದ ದಾಖಲೆಯ ಕೃತಿಯಾಗಿಸಿದ್ದಾರೆ.

ಕೋಲಾರ ಜಿಲ್ಲೆಯ ದಲಿತ ಚಳವಳಿಗೆ ಮುಖ್ಯ ಪಾತ್ರವಹಿಸಿದಂತೆ ದಲಿತ ಸಾಹಿತ್ಯಕ್ಕೂ ಪ್ರಮುಖವಾದ ಕೊಡುಗೆಯನ್ನು ನೀಡಿದೆ. ಎಪ್ಪತ್ತರ ದಶಕದಲ್ಲಿ ಚಿಂತಾಮಣಿ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದ ಕಾಲದಲ್ಲಿ ಕೆ. ನಾರಾಯಣಸ್ವಾಮಿಯವರು ಅನುವಾದಿಸಿದ ನರಬಲಿ, ದಲಿತ ಕೈಪಿಡಿ, ಅಂಬೇಡ್ಕರ್ ವಾಣಿ, ಭಂಗಿಜನ ಕಥಾ, ಅಯೋಧ್ಯೆ ಭುಗಿಲು ಮುಂತಾದ ಪ್ರಮುಖ ಪುಸ್ತಕಗಳನ್ನು ಅನುವಾದಿಸಿದ್ದಾರೆ. ಇದರಿಂದ ದಲಿತ ಚಳವಳಿ, ಬರಹಗಾರರಿಗೆ



ಹಾಗೂ ಪ್ರಗತಿಪರ ಸಾಹಿತಿಗಳ ಮೇಲೆ ಈ ಪುಸ್ತಕಗಳು ಪ್ರಭಾವ ಬೀರಿದವು. ಆಗಿನಿಂದ ಪುರಾಣಗಳನ್ನು ನೋಡುವ ಹೊಸ ದೃಷ್ಟಿಕೋನ ಬದಲಾಯಿತು. ಅಂಬೇಡ್ಕರ್ ಫೆಲೋಶಿಪ್ ಅನ್ನು ಪಡೆದಿರುವ ನಾರಾಯಣಸ್ವಾಮಿಯವರು ಕೋಲಾರ ಜಿಲ್ಲೆಯಲ್ಲಿ ಮಾತ್ರವಲ್ಲ ಕರ್ನಾಟಕದಲ್ಲಿ ದಲಿತ ಚಳವಳಿ, ಸಾಹಿತ್ಯ ಚಿಗುರೊಡೆಯಲು ಬುನಾದಿ ಹಾಕಿದ್ದಾರೆ ಎಂದು ಹೇಳಬಹುದು.

ಮತ್ತೊಬ್ಬ ಪ್ರತಿಭಾವಂತ ಲೇಖಕ ಕೋಟಿಗಾನಹಳ್ಳಿ ರಾಮಯ್ಯನವರು. 'ಇವರು ಬರುತಿಹೆವು ನಾವು ಬರುತಿಹೆವು...' ಹಚ್ಚ ಬ್ಯಾಡ ಹಚ್ಚಬ್ಯಾಡವ್ವ ಜೀತಕ್ಕೆ ನನ್ನನ್ನ ಎಳೆಬಾಳೆ ಸುಳಿನಾನವ್ವ ಎನ್ನುವ ಹಾಡುಗಳು ಕರ್ನಾಟಕದ ದಲಿತ ಕಲಾಮಂಡಳಿಯ ಮುಂಚೂಣಿಯ ಹಾಡುಗಳಾಗಿದ್ದವು. ಇವರು ಬಹಳಷ್ಟು ತೆಲುಗು ಹಾಡುಗಳನ್ನು ಕನ್ನಡಕ್ಕೆ ಅನುವಾದಿಸಿದರು. ಆಂಧ್ರದ ವಿಪ್ಲವ ಕವಿಗಳ ಪ್ರಭಾವ ಇವರ ಮೇಲೆ ಗಾಢವಾಗಿದೆ. ಇವರ ಪದ್ಯಗಳಲ್ಲಿ ಬರೀ ದಲಿತ ಲೋಕದ ವಿವರಗಳು ಮಾತ್ರ ದಾಖಲಾಗುವುದಿಲ್ಲ. ಬದಲಿಗೆ ಆ ಸ್ಥಿತಿಗೆ ಕಾರಣರಾದವರ ವಿರುದ್ಧ ಸೇಡು ತೀರಿಸಿಕೊಳ್ಳುವ ಗುಣವಿರುವುದನ್ನು ಕಾಣುತ್ತೇವೆ. ಇವರ ಕೆ.ಜಿ.ಎಫ್. ಪದ್ಯವಂತೂ ಆಳುವವರ ಹಾಗೂ ಸಾಮ್ರಾಜ್ಯ ಶಾಹಿಗಳ ಕಾರ್ಯ ಹಾಗೂ ಹಣದ ದಾಹವನ್ನೆಲ್ಲಾ ಒಟ್ಟಿಗೆ ವಿವರಿಸುತ್ತಾ 'ಇಂದಲ್ಲ ನಾಳೆ ಖಂಡಿತ ಇವಳು ಛಸನಾಲ ಸೋದರಿ' ಎನ್ನುವುದನ್ನು ನೆನಪಿಸುತ್ತಾರೆ. ಕವನ ಸಂಕಲನ ಪ್ರಕಟಿಸದ ಇವರು, ಬರಗೂರು ರಾಮಚಂದ್ರಪ್ಪ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದ ಕಾಲದಲ್ಲಿ 'ಸಿಂದ್ ಮಾದಿಗರ ಸಂಸ್ಕೃತಿ' ಅಕಾಡೆಮಿಗಾಗಿ ಬರೆದಿದ್ದಾರೆ. ಈ ಪುಸ್ತಕ ಪಾತಾಳ ಸಂಸ್ಕೃತಿಯ ನಿಗೂಢ ಕಾದಂಬರಿ. ಸಾಂಸ್ಕೃತಿಕ ಸಂಶೋಧನೆಯ ಒಂದು ಗ್ರಂಥವಾಗಿದ್ದು ನಮ್ಮೊಳಗೆ ಕೊಳೆಕಟ್ಟಿ ಕೂತಿರುವ ಸುಳ್ಳುಗಳನ್ನೆಲ್ಲಾ ಹೊರದೂಡಿ ಹೊಸ ಮನಸ್ಸುಗಳನ್ನು ಚಿಂತನೆಗೆ ಹಸನುಗೊಳಿಸುವ ಗ್ರಂಥವಾಗಿದೆ.

ಸೂಕ್ಷ್ಮ ಸಂವೇದನೆಯ ಮತ್ತೊಬ್ಬ ದಲಿತ ಕವಿ ವಿ. ಮುನಿವೆಂಕಟಪ್ಪನವರು. ತಮ್ಮ ಮೊದಲ ಕವನ ಸಂಕಲನ 'ಕೆಂಡದ ನಡುವೆ' ಬರೆದು ಕೆಲಸ ಕಳೆದುಕೊಂಡು ತನ್ನ ಹೋರಾಟದ ಮೂಲಕ, ಹೋರಾಟಗಾರರ ಬೆಂಬಲದ ಮೂಲಕ ಮತ್ತೆ ಅಧಿಕಾರಿಯಾದವರು. ಅಂಬೇಡ್ಕರ್, ತೆಲುಗು ದಿಗಂಬರ ಕವಿಗಳ ಪ್ರಭಾವ ಹೊಂದಿರುವ ಡಾ. ಮುನಿವೆಂಕಟಪ್ಪನವರು ಸ್ವಾಭಿಮಾನದ ಬೀಡಿಗೆ (ಕವಿತೆ) ಮಹಾಚೇತನ ಅಂಬೇಡ್ಕರ್ (ಮಕ್ಕಳ ಪುಸ್ತಕ) ಐಕ್ಯಗೀತೆ (ಭಾವಗೀತೆಗಳು) ಬಾಲಕ ಅಂಬೇಡ್ಕರ್ (ಮಕ್ಕಳ ನಾಟಕ) ಮುಂತಾದ ಪುಸ್ತಕಗಳನ್ನು ಬರೆದಿದ್ದಾರೆ. 'ಅಸ್ಪೃಶ್ಯ ಅಣ್ಣ ತಮ್ಮಂದಿರು ಅಕ್ಕ ತಂಗಿಯರು ನಾವು ಮನುಷ್ಯರಾಗಲಾರವೇನೋ ಎಂಬುದೇ ಕೊರಗು' ಎಂದು ದಲಿತ ಲೋಕದ ಬಗ್ಗೆ ಚಿಂತಿಸುವ ಇವರ ಕವಿತೆಗಳಲ್ಲಿ ಜಾತಿಯ ಅಸಮಾನತೆಗಳ ಜೊತೆಗೆ ಅಧಿಕಾರಶಾಹಿಯ

ಹಾಗೂ ರಾಜಕೀಯ ವ್ಯಕ್ತಿಗಳ ಕುತಂತ್ರವನ್ನು ಬಯಲಿಗೆಳೆಯುವ ಪರಿ ಇದೆ. ಡಾ. ಅಂಬೇಡ್ಕರ್ ಫೆಲೊಶಿಪ್ - 1988 ಅನ್ನು ಅವರ ಸಾಹಿತ್ಯ, ಸಮಾಜ ಸೇವೆಗಾಗಿ ಭಾರತೀಯ ದಲಿತ ಸಾಹಿತ್ಯ ಅಕಾಡೆಮಿಯಿಂದ ಸೆಪ್ಟೆಂಬರ್ 24ರಂದು ಸ್ವೀಕರಿಸಿದರು.

ಕವಿ ಗಂಗಾರಾಂ ಚಂಡಾಳ 'ಚಂಡಾಲರ ಕೂಗು' ಕವನ ಸಂಕಲನದಿಂದ ಬರವಣಿಗೆಯಲ್ಲಿ ಕಾಣಿಸಿಕೊಂಡವರು. 'ತಲೆ ಮೇಲೆ ಹೇಲ್ಬುಟ್ಟಿ ಕೈಯಲ್ಲಿ ಪೊರಕೆ ಹಿಡಿದ ಚಂಡಾಲರ ಕೂಗು ಗುಡುಗುತ್ತೈತೆ ಇಂಡಿಯಾ ಬೊಂಬೆ' ಎನ್ನುವ ಇವರು 'ಉಳ್ಳವರ ಸೂಳೆ ಸ್ವಾತಂತ್ರ್ಯ "ಬೆಳಕಾಗಿ ಮುಂದೆ ನಡೆವ" ಭಾರತಿ' ಮುಂತಾದ ಉತ್ತಮ ಕವಿತೆಗಳನ್ನು ಬರೆದಿದ್ದಾರೆ. ಇವರ ಇತರೆ ಪುಸ್ತಕಗಳಲ್ಲಿ ಜೀವಸೆಲೆ ಎಂಬ ಕವನ ಸಂಕಲನ 1995ರಲ್ಲಿ ಪ್ರಕಟಕೊಂಡಿದೆ. ಕರ್ನಾಟಕ ದಲಿತ ಚಳವಳಿ ಮತ್ತು ಡಾ. ಬಿ.ಆರ್. ಅಂಬೇಡ್ಕರ್ ಕೃತಿ ದಲಿತ ಚಳವಳಿ ಇತಿಹಾಸದ ದಾಖಿಲೆ ಪುಸ್ತಕವಾಗಿದೆ. ಕೊಪರನಿಕಸ್ ಬಗ್ಗೆ ವ್ಯಕ್ತಿಚಿತ್ರವನ್ನು ಕುರಿತ ಕೃತಿ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ 1994ರಲ್ಲಿ ಪ್ರಕಟವಾಗಿದೆ. ಇವರ ಕವಿತೆಗಳಲ್ಲಿ ಜಾತಿ ವ್ಯವಸ್ಥೆಯಿಂದಾದ ಅನಾಹುತಗಳು ಅದರಿಂದಾದ ದಲಿತರ ಅಸಹಾಯಕ ಸ್ಥಿತಿಯ ಚಿತ್ರಣಗಳನ್ನು ಕಾಣಬಹುದು. ಇವರಿಗೂ ಕೆ. ನಾರಾಯಣಸ್ವಾಮಿಗೆ ಬಂದಂತೆ ಅಂಬೇಡ್ಕರ್ ಫೆಲೋಶಿಪ್ ಅನ್ನು 1996ರಲ್ಲಿ ಪಡೆದಿದ್ದಾರೆ.

ಇದೇ ರೀತಿ ಎಂ. ವೆಂಕಟಸ್ವಾಮಿ 'ಬೆಟ್ಟ ಗುಡ್ಡಗಳ ಜೋಗುಣಿಯಲ್ಲಿ' ಕವನ ಸಂಕಲನ ಹೊರತಂದು 'ಶತ ವರ್ಷಗಳ ಗತ ವೈಭವ', 'ನೀಗ್ರೋ ಗೆಳೆಯನಿಗೆ' ಮುಂತಾದ ಉತ್ತಮ ಕವಿತೆಗಳನ್ನು ಬರೆದು ದಲಿತ ಕಾವ್ಯ ಲೋಕಕ್ಕೆ ಕಾಲಿಟ್ಟಿದ್ದಾರೆ.

ನಂತರ ಹೆಚ್. ರಾಮಕೃಷ್ಣ ನನ್ನ ಜನರು, ಕಪ್ಪು ಜನರ ಹಾಡು, ಕವಿತೆಗಳಿಂದ, ಗೊಲ್ಲಹಳ್ಳಿ ಶಿವಪ್ರಸಾದ್ ರಂಗುರಂಗಿನ ರಾಜ್ಯ, ಬಾಲು ಬಾಡಿತು, ಬಂಡೆ ಮ್ಯಾಲೆ, ಕವಿತೆಗಳಿಂದ, ಮೂಡಲಗೊಲ್ಲಹಳ್ಳಿ ಕೆ. ನರಸಿಂಹಪ್ಪ, ನಾ. ನಾರಾಯಣಸ್ವಾಮಿ... ಮುಂತಾದವರು ಭರವಸೆ ಹುಟ್ಟಿಸುವ ಕವಿತೆಗಳನ್ನು ಬರೆಯತೊಡಗಿದ್ದಾರೆ. ದಲಿತ ಕಲಾ ಮಂಡಳಿ - ಪಿಚ್ಚಳ್ಳಿ ಶ್ರೀನಿವಾಸ್, ಕರ್ನಲ್ ನಾರಾಯಣಸ್ವಾಮಿ, ಹೋರಾಟದ ಹಾಡುಗಳ ಮೂಲಕ ದಲಿತರನ್ನು ಎಚ್ಚರಿಸಿ ಅರಿವುಂಟು ಮಾಡುತ್ತಿದ್ದರು.

ಅಲ್ಲದೆ ಕೋಲಾರ ಜಿಲ್ಲೆ ದಲಿತ ಸಂಘರ್ಷ ಸಮಿತಿ ನೋವು ನಲಿವುಗಳ ವಸ್ತುವುಳ್ಳ, ವೈಚಾರಿಕ ಕೃತಿಗಳ ಪ್ರಕಟನೆ ಮಾಡಿದೆ. ಇದರಲ್ಲಿ ಪ್ರಕಟವಾದ ಇತರೆ ಪುಸ್ತಕಗಳೆಂದರೆ ಭಾರತದ ಬೌದ್ಧಿಕ ದಾರಿದ್ರ್ಯ, ಭಾರತೀಯ ಸಂಸ್ಕೃತಿಯ ಜಾತಿಲಕ್ಷಣ, ಬಾಲ್ಯದಿಂದ ಪ್ರಾಯಕ್ಕೆ, ನೆಲ್ಸನ್ ಮಂಡೇಲಾ, ಹಿಂದೂ ಧರ್ಮದ ತಾತ್ವಿಕತೆ, ಜಾತಿ ಮತ್ತು ಸ್ವಾತಂತ್ರ್ಯ, ಅಭಿವೃದ್ಧಿಯ ಕತ್ತಲೆ ಬೆಳಕು, ಜೊತೆಗೆ ವಿವಿಧ ಕವಿಗಳ 'ದಲಿತ ಕಲಾ ಮಂಡಲಿ ಹಾಡುಗಳು' ಬೆಳಕಿಗೆ ತಂದಿದೆ. ಈ ಹೋರಾಟದ ಹಾಡುಗಳ ಪುಸ್ತಕ ದಲಿತ ಚಳವಳಿ, ದಲಿತ ಸಾಹಿತ್ಯಕ್ಕೆ



ಹೆಚ್ಚು ಸಹಕಾರಿಯಾಗಿರುತ್ತದೆ. ಇದರಿಂದ ಕೋಲಾರ ಜಿಲ್ಲೆಯಲ್ಲಿ ಬಂಡಾಯ ಸಾಹಿತ್ಯ ಸಮ್ಮೇಳನ ಮಾಡಿ ಬಂಡಾಯ ಸಾಹಿತ್ಯ ಚಿಗುರೊಡೆಯಲು ತನ್ನ ಪ್ರಮುಖ ಪಾತ್ರ ವಹಿಸಿದೆ. ಈ ದಲಿತ ಚಳವಳಿ, ಸಾಹಿತ್ಯದಲ್ಲಿ ಹಗಲು ಇರುಳು ಕೆಲಸ ಮಾಡಿದ, ಮಾಡುತ್ತಿರುವ ಅಸಂಖ್ಯ ಕಾರ್ಯಕರ್ತರು, ಬರಹಗಾರರು ಎಲೆಯ ಮರೆಯಲ್ಲಿ ಶೋಷಿತರ ಉಸಿರಾಗಿ ಉಸಿರಾಡುತ್ತಿದ್ದಾರೆ.

ಈಗ ದಲಿತ ಚಳವಳಿ ಒಂದು ನೆನಪು ಮಾತ್ರ. 'ಇಕ್ಕಲೂ ಆಗದ ಒದೆಯಲೂ ಆಗದ' ಸ್ಥಿತಿಯಲ್ಲಿದೆ. ಇಪ್ಪತ್ತು ವರ್ಷದಲ್ಲಿ ಗಟ್ಟಿಯಾಗಿ ಬೆಳೆದದ್ದು ಕಣ್ಣೆದುರಿನಲ್ಲೇ ಕುಸಿದಿದೆ. ನಾಯಕರ ತೀರ್ಮಾನಗಳು, ಎಡ ಬಲಜಾತಿಗಳು, ಸ್ವಾರ್ಥ, ರಾಜಕೀಯ ಪ್ರಜ್ಞೆಯ ಕೊರತೆಯಿಂದ ಇಂದು, ಇಬ್ಭಾಗವಾಗಿದೆ. ಒಂದೇ ಕಡೆ ಕೆಲಸಮಾಡುತ್ತಿದ್ದ ಗೆಳೆಯರು ಬೇರೆ ಬೇರೆ ಕಡೆ ಕೆಲಸಮಾಡತೊಡಗಿದ್ದಾರೆ. ಇವರು ಸೇರುವ ದಾರಿ ಒಂದೇ ಆಗಿದ್ದರೂ ಚೂರು ಚೂರು ಒಡೆದು ಹೋಗಿದ್ದು ಶೋಷಕರಿಗೆ ಮತ್ತೆ ಶೋಷಣೆ ಮಾಡಲು ದಾರಿ ಸಿಕ್ಕಿದಂತಾಗಿದೆ.

ದಲಿತ ಚಳವಳಿಯದು ಈ ರೀತಿಯಾದರೆ ಅಸ್ಪೃಶ್ಯರು ತನ್ನ ಹುಟ್ಟಿದ ಮೂಲದ ಗುಹೆಗೆ ಮರಳಿ ಜನಾಂಗದ ನೆನಪು, ಜನಾಂಗಿಕ ಕೌಶಲ್ಯ, ನಂಬಿಕೆಗಳು, ಆಚರಣೆಗಳು, ದಂತಕಥೆಗಳು, ಪುರಾಣಗಳು, ಎಲ್ಲಾ ರೀತಿಯ ಸೂಕ್ಷ್ಮಾತಿ ಸೂಕ್ಷ್ಮ ಹಾಗೂ ದಟ್ಟ ವಿವರಗಳೊಂದಿಗೆ ಮರು ಹುಟ್ಟು ಪಡೆಯದೆ ದಲಿತ ಸಾಹಿತ್ಯ ಸೊರಗಿದೆ. ಡಾ. ಡಿ.ಆರ್. ನಾಗರಾಜ್ ಹೇಳುವಂತೆ 'ದಲಿತರ ವಿಶಿಷ್ಟ ಲೋಕ ಕಾವ್ಯದಲ್ಲಿ ಬರದಿದ್ದಲ್ಲಿ ಅದು ಅಧಿಕೃತ ದಲಿತ ಕಾವ್ಯ ಆಗಲಾರದು' ಎನ್ನುವ ಮಾತನ್ನು ದಲಿತ ಬರಹಗಾರರು ಯೋಚಿಸಬೇಕಾಗಿದೆ.

ಕೊನೆಯದಾಗಿ ಒಂದು ಹಂತದಲ್ಲಿ ದಲಿತ ಚಳವಳಿ ಸಾಹಿತ್ಯ ಪ್ರತ್ಯೇಕವಾಗಿ ಬೆಳೆಯಬೇಕಾಗಿರುವುದು ಸರಿ ಎನಿಸಿದರೂ ಕೂಡ, ಮತ್ತೊಂದು ಹಂತದಲ್ಲಿ ದಲಿತ ಚಳುವಳಿ ಇತರೆ ಜಾತಿಯ ಬಡವರೊಂದಿಗೆ, ದಲಿತ ಸಾಹಿತ್ಯ ಬಂಡಾಯ ಸಾಹಿತ್ಯದೊಂದಿಗೆ ಬೆಸೆದುಕೊಂಡು ಬೆಳೆಯಬೇಕಾಗಿದೆ. ಒಟ್ಟಿನಲ್ಲಿ ಕರ್ನಾಟಕದಲ್ಲಿ ಚಾರಿತ್ರಿಕವಾಗಿ ದಾಖಲೆ ಮಾಡಿದ ದಲಿತ ಚಳವಳಿ, ದಲಿತ ಸಾಹಿತ್ಯ ಮತ್ತೆ 1975ರಲ್ಲಿದ್ದಂತೆ ಒಂದಾಗಿ ಗುಡುಗಿ, ಮಿಂಚಿ, ಮಳೆ ತರಿಸಿ, ಶೋಷಿತರ ಬರಗಾಲ ನೀಗಬೇಕಾಗಿದೆ.








# ತೈಲ ಕರ್ಷಿಸಿ ನಕ್ಕು ಬಿಡಿ

– ಡಾ. ವಿದ್ಯಾ

ವೈದ್ಯರು, ಹವ್ಯಾಸಿ ಪತ್ರಕರ್ತೆ

"ಆಯಿಲ್ ಪುಲ್ಲಿಂಗ್ ಮಾಡ್ಲೆ ಸುರು ಮಾಡಿದ ಮೇಲೆ ಅಸಿಡಿಟಿ ಪ್ರಾಬ್ಲೆಂ ಕಮ್ಮಿ ಆದ ಹಾಂಗೆ ಕಾಣ್ತು", "ಎನ್ನ ಉಗುರು ಸುತ್ತಿಂಗೆ ಲಾಯಕ್ಕಾವು", "ಎನ್ನ ಎಲರ್ಜಿಯೂ ಕಂಟ್ರೋಲ್ಲಿಂಗೆ ಬಯಿಂದು"... ಹಲವು ವರ್ಷಗಳ ಹಿಂದೆ ಸಮಾರಂಭವೊಂದರಲ್ಲಿ ಭೇಟಿಯಾದಾಗ ನೆಂಟರಿಷ್ಟರ ಪಟ್ಟಾಂಗದಲ್ಲಿ ಹರಿದಾಡಿದ ಮಾತುಗಳಿವು. 'ತೈಲಕರ್ಷಣ!, ನಗಬೇಡಿ' ಎಂಬ ಆಕರ್ಷಕ ಶೀರ್ಷಿಕೆಯಿಂದ ಗಮನ ಸೆಳೆದಿದ್ದ ಲೇಖನ, ಹಳೆ ಅಡಿಕೆ ಪತ್ರಿಕೆ ಸಂಗ್ರಹದಲ್ಲಿ ಭದ್ರವಾಗಿ ಕೂತಿತ್ತು. ಮತ್ತೊಮ್ಮೆ ಪೂರ್ತಿ ಓದಿ, ಮಾರನೇ ಬೆಳಿಗ್ಗೆಯಿಂದಲೇ ಆರಂಭಿಸಿದೆ. ಕೆಲವು ತಿಂಗಳುಗಳಿಗೊಮ್ಮೆಯಾದರೂ ನೋವು ಕೊಡುತ್ತಿದ್ದ ಉಗುರು ಸುತ್ತು, ಮರೆತೇಹೋಯಿತು. ಆವಾಗಾವಾಗ ಮರುಕಳಿಸುತ್ತಿದ್ದ ಬಾಯಿ ಹುಣ್ಣು ಸದ್ದಿಲ್ಲದೇ ಮಾಯವಾಗಿತ್ತು.

ಅಷ್ಟಾದಿಡ್ಡಿ ಇರುವ ಹಲ್ಲುಗಳ ಸಂದಿಗಳಲ್ಲಿ ಆಹಾರ ನಿಂತು ಕಿರಿಕಿರಿ ಅನುಭವಿಸುತ್ತಿದ್ದ ಗಂಡ, ನನ್ನ ಚಿಕಿತ್ಸಾ ಸಾಮರ್ಥ್ಯಕ್ಕೇ ಸವಾಲೆಸೆದಾಗ 'ಆಯಿಲ್ ಪುಲ್ಲಿಂಗ್' ಮಾಡಲು ಹೇಳಿದೆ. ಧಾರಾಳವಾಗಿ 'ಸೂರ್ಯವಂಶಿ'ಗಳಾಗಿರುವ ನಾವಿಬ್ಬರೂ ಮುಕ್ಕಳಿಸುತ್ತಿರುವಾಗಲೇ ನಮ್ಮ ದೂರವಾಣಿಗಳೂ ಮೊಳಗುತ್ತಿದ್ದವಾದ್ದರಿಂದ, ಸರದಿಯಲ್ಲಿ ಪರಸ್ಪರರಿಗೆ ಫೋನೊಪ್ಪಿಸಿ, ಮುಕ್ಕಳಿಸುವ ಸಂಧಾನದ ಮೂಲಕ ಪರಿಹಾರ ಕಂಡುಕೊಂಡೆವು.



ಸಮೀಪದ ಬಂಧುಗಳಲ್ಲಿ ಅನೇಕರ ಬಾಯಿಯ ದುರ್ವಾಸನೆ, ವಸಡಿನ ಗುಳ್ಳೆ, ಹಲ್ಲುಗಳ ಬಣ್ಣ ಮಾಸುವಿಕೆ, ಹಲ್ಲುಗಳ ಜುಂ ಅನ್ನುವಿಕೆ, ಬುದ್ಧಿ ಹಲ್ಲು ಬರುವಾಗಿನ ತೊಂದರೆ, ಶಿಥಿಲವಾದ ಹಲ್ಲುಗಳ ಸಮಸ್ಯೆಗಳಿಗೆ, ದೂರದಿಂದಲೇ 'ಆಯಿಲ್ ಪುಲ್ಲಿಂಗ್'ನ ಪರಿಹಾರ ಸೂಚಿಸಿದೆ. ಹೆಚ್ಚಿನವರು ಉತ್ತಮ ಫಲಿತಾಂಶ ಕಂಡುಕೊಂಡದ್ದನ್ನು ತಿಳಿಸಿದರು. ಇದರಿಂದ ಸ್ಫೂರ್ತಿ ಪಡೆದು, ಮುಂದೆ ಕ್ಲಿನಿಕಿನಲ್ಲಿ ರೋಗಿಗಳಿಗೂ ಇದನ್ನು ತಿಳಿಸುತ್ತಾ ಬಂದೆ. ಈಗ ಎಲ್ಲರಿಗೂ ಉಪದೇಶಿಸಲು ಆರಂಭಿಸಿದ್ದೇನೆ.

ನಮ್ಮಲ್ಲಿಯೇ ಪರಂಪರಾಗತವಾಗಿ ಬಂದ, ಬಾಯಿ ಸ್ವಚ್ಛಪಡಿಸುವ ವಿಧಾನವನ್ನು ಇತರ ದಂತ ವೈದ್ಯರಲ್ಲಿ ಹೇಳಿದಾಗ ಅಚ್ಚರಿ ಪಟ್ಟವರೇ ಹೆಚ್ಚು. 'ನಾವು ಇದನ್ನು ಎಲ್ಲಿಯೂ ಕೇಳಿಲ್ಲವಲ್ಲ!' ಎನ್ನುತ್ತಿದ್ದರು. ಕೆಲವು ವರ್ಷಗಳ ಹಿಂದೆ ಚೆನ್ನೈಯಲ್ಲಿ 'ಆಯಿಲ್ ಪುಲ್ಲಿಂಗ್'ಗೆಂದೇ ವಿಶೇಷವಾಗಿ ತಯಾರಿಸಿದ ಎಣ್ಣೆಯನ್ನು, ಕಂಪೆನಿಯೊಂದು ಜಾಹೀರಾತು ಫಲಕದಲ್ಲಿ ದೊಡ್ಡದಾಗಿ ಬರೆಸಿತ್ತು!

ಇತ್ತೀಚೆಗೆ, ಅಲ್ಲಿ, ಇಲ್ಲಿ ನಮ್ಮ ಕಾಲೇಜು, ವಿಶ್ವವಿದ್ಯಾನಿಲಯಗಳಲ್ಲಿ ಕೆಲವು ಕಡೆ, 'ಆಯಿಲ್ ಪುಲ್ಲಿಂಗ್' ಬಗ್ಗೆ ವೈಜ್ಞಾನಿಕ ಸಂಶೋಧನೆಗಳು ನಡೆದದ್ದೂ, ಒಳ್ಳೆಯ ಫಲಿತಾಂಶವನ್ನೇ ನೀಡುತ್ತದೆಂದು ತಿಳಿಸಿದ್ದೂ ಕಣ್ಣಿಗೆ ಬಿತ್ತು. ಅಮೇರಿಕಾದಲ್ಲೂ ಇದರ ಬಗ್ಗೆ ಸಂಶೋಧನೆ ನಡೆದು, ಬಾಯಿಯ ಕಾಯಿಲೆಗಳು ಕಡಿಮೆಯಾಗುತ್ತವೆಂದು ಕಂಡುಕೊಂಡಿದ್ದಾರೆ. ಯೂಟ್ಯೂಬ್‌ನಲ್ಲಿ 'ಆಯಿಲ್ ಪುಲ್ಲಿಂಗ್' ಬಗ್ಗೆ ವಿಡಿಯೋಗಳು ಲಭ್ಯವಿವೆ. ಆ ದೇಶದ ವಾತಾವರಣಕ್ಕೆ ತಕ್ಕಂತೆ ಎಣ್ಣೆಯನ್ನು ಬಳಸುವ ಕ್ರಮ. ಮುಕ್ಕಳಿಸುವ ವಿಧಾನ, ಉಗಿಯಲು ಪ್ಲಾಸ್ಟಿಕ್ ಪೌಚ್‌ಗಳನ್ನು ಇಲ್ಲಿ ಕಾಣಬಹುದು, 'ಆಯಿಲ್ ಪುಲ್ಲಿಂಗ್'ನಿಂದಾದ ಉಪಯುಕ್ತತೆ ಬಗ್ಗೆ ಹಲವಾರು ವಿದೇಶಿಯರು ಹೇಳಿಕೊಂಡಿದ್ದಾರೆ. ಪ್ರಪಂಚದಾದ್ಯಂತ ಇದು ಜನಪ್ರಿಯವಾಗುತ್ತಿರುವುದು ಸಂತಸದ ಸಂಗತಿ. ಮುಂದೊಂದು ದಿನ, ಬಾಯಿ ಆರೋಗ್ಯಕ್ಕೇ ಇದೊಂದು ಕ್ರಾಂತಿಕಾರಿ ಕ್ರಮವಾಗಬಲ್ಲುದು ಎಂಬ ಅಭಿಪ್ರಾಯವಿದೆ.

ಇತ್ತೀಚೆಗೆ ಬಂದ ಇನ್ನೊಂದು ವರದಿಯೂ, ತೈಲಕರ್ಷಣದ ಕಡೆಗಿನ ನನ್ನ ಆಕರ್ಷಣೆ ಹೆಚ್ಚುವಂತೆ ಮಾಡಿತು. ಬಾಯಿಯ ಶುಚಿತ್ವ ಕಮ್ಮಿಯಾಗುವುದರಿಂದ, ಹೃದಯ ಸಂಬಂಧೀ ಕಾಯಿಲೆಗಳೂ, ಬಸುರಿಯರಲ್ಲಿ ಅವಧಿಗೂ ಮುನ್ನವೇ ಹೆರಿಗೆಯಾಗುವುದು ಮುಂತಾದ ತೊಂದರೆಗಳು ಬರಬಹುದು ಎಂದು ಕೆಲವು ಸಂಶೋಧನೆಗಳ ಸಾರಾಂಶ. ಇದಕ್ಕೆ ಬಾಯಲ್ಲಿರುವ ಕ್ರಿಮಿಗಳು ಹಾನಿಕಾರಕ ಮಟ್ಟಕ್ಕೆ ವೃದ್ಧಿಯಾಗುವುದು ಕಾರಣ.



ಆಧುನಿಕರಾದಂತೆ, ಎಲ್ಲವನ್ನೂ ಬಳಸಿ ಬಿಸಾಡುವವರಾದ ನಾವು ಟೂತ್‌ಬ್ರಶ್‌ಗಳ ಬಗ್ಗೆ ಏಕೋ ನಿಲುವು ಬದಲಿಸಿದ್ದೇವೆ. ಒಮ್ಮೆ ಮಾತ್ರವೇ ಉಪಯೋಗಿಸಲ್ಪಡುತ್ತಿದ್ದ ಬೇವಿನ ಕಡ್ಡಿ, ಮಾವಿನ ಎಲೆಗಳ ಜಾಗದಲ್ಲಿ ತಿಂಗಳುಗಟ್ಟಲೇ ಬಳಕೆಯಾಗುವ ಬ್ರಶ್‌ಗಳನ್ನು ಪ್ರತಿಷ್ಠಾಪಿಸಿದ್ದೇವೆ. ಬ್ರಶ್ನನ್ನು ಮತ್ತೆ, ಮತ್ತೆ ಬಳಸುವುದೂ, ಬಾತ್‌ರೂಮಿನ ತಂಪಿನ ವಾತಾವರಣದಲ್ಲಿ ಇಟ್ಟ ಬ್ರಶ್‌ಗಳಲ್ಲಿ ಕ್ರಿಮಿಗಳು ವೃದ್ಧಿ ಹೊಂದುವುದೂ ಆಗುತ್ತಿರುತ್ತದೆ. ಹೀಗಾಗಿ ಟೂತ್ ಬ್ರಶ್‌ಗಳನ್ನು ಎಷ್ಟು ಬೇಗ ಬದಲಾಯಿಸುತ್ತೇವೋ ಅಷ್ಟು ಒಳ್ಳೆಯದು.

'ಆಯಿಲ್ ಪುಲ್ಲಿಂಗ'ನ್ನು ಹಲ್ಲುಜ್ಜುವ ಮೊದಲೇ ಮಾಡುವುದರಿಂದ ಹಾಗೂ ಮುಕ್ಕಳಿಸಿದ ಎಣ್ಣೆಯನ್ನು ಉಗಿಯುವ ಮೂಲಕ, ಸಾಕಷ್ಟು ಪ್ರಮಾಣದಲ್ಲಿ ಕ್ರಿಮಿಗಳು ನಮ್ಮಿಂದ ದೂರವಾಗುತ್ತವೆ. ಈ ನಿಟ್ಟಿನಲ್ಲಿ ಬೆಳಿಗ್ಗೆ ಎದ್ದ ಕೂಡಲೇ ಎಣ್ಣೆಯಿಂದ ಬಾಯಿ ಮುಕ್ಕಳಿಸಿ ಶುಚಿ ಮಾಡಿಕೊಂಡರೆ, ಒಂದು ಹಂತದ ಶುಚಿತ್ವ; ತಿಂಡಿ ತಿಂದ ನಂತರ ಬ್ರಶ್‌ನಿಂದ ಹಲ್ಲುಜ್ಜಿದರೆ, ಮತ್ತೊಮ್ಮೆ ಶುಚಿಯಾದಂತಾಗುತ್ತದೆ.

'ಆಯಿಲ್ ಪುಲ್ಲಿಂಗ್'ನಿಂದ ಬಾಯಿಯ ಆರೋಗ್ಯದ ಜತೆಗೇ ಮುಖದ ಸೌಂದರ್ಯವೂ ಹೆಚ್ಚುತ್ತದೆ ಎಂದು ಕೇಳಿದ್ದೆ. ಕನ್ನಡಿ ನೋಡುತ್ತಾ ಮುಖದ ನೆರಿಗೆಗಳು ಕಡಿಮೆಯಾದವೆಂದೆನಿಸಿ, 'ಹೌದಾ?' ಎಂದು ಗಂಡನನ್ನು ಕೇಳಿದರೆ, "ಕಣ್ಣು ಮಂದವಾದಾಗಲೂ ಸುಕ್ಕುಗಳು ಕಮ್ಮಿ ಕಾಣುತ್ತವೆ" ಎಂದು ಚಾಲೀಸಿನ ವಯಸ್ಸನ್ನು ಯಾವಾಗಲೋ ದಾಟಿ ಬಂದಿರುವ ನನ್ನನ್ನು ಛೇಡಿಸಿದರೂ, ಅಂಜದೆ, ಅಳುಕದೆ, ತೈಲ ಕರ್ಷಿಸಿ ನಕ್ಕುಬಿಡುತ್ತೇನೆ.

ಕೃಪೆ : ಅಡಿಕೆ ಪತ್ರಿಕೆ







45

# ಕನ್ನಡದ ದಲಿತ ಆತ್ಮಕಥೆಗಳು

– ಡಾ. ಎಂ. ಲೀಲಾವತಿ
ನಿವೃತ್ತ ಪ್ರಾಂಶುಪಾಲರು, ನ್ಯಾಷನಲ್ ಕಾಲೇಜು, ಬಸವನಗುಡಿ

ಮನುಷ್ಯರೆಲ್ಲರ ಬದುಕೂ ಒಂದೊಂದು ಕತೆಯೇ ಎಂದರೆ, ಸಮಾಜದ ಎಲ್ಲ ವರ್ಗದ ಎಲ್ಲ ರೀತಿಯ ಜನರ ಬದುಕನ್ನು ಸುಮ್ಮನೆ ಅವಲೋಕಿಸಿದರೆ ಅಲ್ಲೊಂದು ಕಥಾನಕ ಇದ್ದೇ ಇರುತ್ತದೆ. ಆತ್ಮಕತೆಯನ್ನು ಒಂದು ಸೃಜನಾತ್ಮಕ ಸೃಷ್ಟಿ ಎಂದು ನಾನು ಪರಿಭಾವಿಸುತ್ತೇನೆ.

ಕನ್ನಡದಲ್ಲಿ ಆತ್ಮಕತೆಯನ್ನು ನಾವು ಕುವೆಂಪುರವರ ನೆನಪಿನ ದೋಣಿಯಿಂದ ಪ್ರಾರಂಭಿಸಿ, ಅನೇಕ ಕವಿ ಕಲಾವಿದರ ಆತ್ಮಕತೆಗಳನ್ನು ಹೆರಿಸಬಹುದು. ಮಹಾತ್ಮಗಾಂಧಿಯವರ ಆತ್ಮಕತೆ ಅತ್ಯಂತ ಜನಜನಿತವಾದುದ್ದು, ಇವರೆಲ್ಲರ ಆತ್ಮಕತೆಗಳು ಒಂದು ಪಕ್ಕಕ್ಕಾದರೆ, ದಲಿತರ ಆತ್ಮಕತೆಗಳು ಮತ್ತೊಂದು ಮಗ್ಗುಲಿಗೆ ನಿಲ್ಲುತ್ತವೆ. ಎಂದರೆ, ಗಾಂಧೀಜಿಯವರ ಆತ್ಮಕತೆ ಅವರ ಬದುಕು ಮಾತ್ರವೇ. ಆದರೆ ದಲಿತನೊಬ್ಬನ (ಕವಿ, ಲೇಖಕ) ಆತ್ಮಕತೆ ದಲಿತಲೋಕದ, ದಲಿತಕೇರಿಯ ಆತ್ಮಕತೆಯಾಗಿ, ಒಟ್ಟು ಸಮಾಜದ ಮುಖಕ್ಕೆ ಹಿಡಿದ ದಿಟ್ಟಭೂತಗನ್ನಡಿಯಾಗಿರುತ್ತದೆ.

ಎಪ್ಪತ್ತರ ದಶಕ ಕನ್ನಡ ಸಾಹಿತ್ಯ ಲೋಕದಲ್ಲಿ ವಿಶಿಷ್ಟ ದಶಕ, ದಲಿತ ಬಂಡಾಯ ಸಾಹಿತ್ಯ ಚಳವಳಿಯ ಕಾಲವದು. ಕನ್ನಡ ಸಾಹಿತ್ಯ ಜಗತ್ತಿಗೆ ಹೊಸಸ್ಪರ್ಶವನ್ನು ಕೊಟ್ಟಕಾಲವದು. ಸಾಹಿತ್ಯ - ಸಮಾಜ - ಸಂಸ್ಕೃತಿಗಳನ್ನು ಮೇಳವಿಸಿ ಕಂಡ ಸಂದರ್ಭ. 12ನೇ ಶತಮಾನದ ವಚನ ಚಳವಳಿಯೇ ಆಧುನಿಕ ಘಟ್ಟ. ಇಲ್ಲಿ ಬರವಣಿಗೆ

ತೆರೆದುಕೊಂಡ ದಲಿತವರ್ಗ ತೊಂಬತ್ತರ ದಶಕದ ಹೊತ್ತಿಗೆ ತನ್ನ ಸುಮಾರ ಮೂವತ್ತು ವಸಂತಗಳ ಬರವಣಿಗೆಯ ಹಿನ್ನೆಲೆಯಲ್ಲಿ ತನ್ನ ಬದುಕನ್ನು ತಾನೇ ಅವಲೋಕಿಸಿ, ಚಿತ್ರಿಸಿಕೊಳ್ಳುವ ಮೂಲಕ ಮತ್ತೊಂದು ಪ್ರಕಾರಕ್ಕೆ ಅಣಿಯಾಯಿತು. ಅದೇ ದಲಿತ ಆತ್ಮಕತೆಗಳು.

ಕನ್ನಡದಲ್ಲಿ ಮೊಟ್ಟಮೊದಲಿಗೆ ಆತ್ಮಕತೆಯಾಗಿ ಹೊರಬಂದದ್ದು, ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ನಂತರ ಸಿದ್ದಲಿಂಗಯ್ಯನವರ 'ಊರುಕೇರಿ' ಎಂ. ಲಕ್ಷ್ಮಣರವರ 'ಸಂಬೋಳಿ' ಮುಳ್ಳೂರು ನಾಗರಾಜರವರ 'ಮಾಮರದ ಮೇಲೊಂದು ಕೋಗಿಲೆ' ಗೋವಿಂದರಾಜುರವರ 'ಮನವಿಲ್ಲದವರ ಮಧ್ಯೆ, ಕೆ. ನಾರಾಯಣಸ್ವಾಮಿಯವರ 'ಭಂಗಿ ಜನಕಥಾ' ಎಂ.ಎಸ್. ಪರಶಿವಮೂರ್ತಿಯವರ 'ಗೆರೆದಾಟಿದ ಮೇಲೆ'ದು. ಸರಸ್ವತಿಯವರ 'ಈಗೇನ್ ಮಾಡ್ತೀರಾ' ಹೀಗೆ ಮುಂತಾದವು.

ಮರಾಠಿ ದಲಿತ ಲೇಖಕರು ಆತ್ಮಕಥೆಗಳನ್ನು ಬಹುಪರಿಣಾಮಕಾರಿಯಾಗಿ ರಚಿಸಿ, ಮರಾಠಿ ಸಾಹಿತ್ಯದಲ್ಲಿ ಅದಕ್ಕೊಂದು ವಿಶಿಷ್ಟ ಸ್ಥಾನಗಳಿಸಿಕೊಟ್ಟಿದ್ದಾರೆ. ನನಗೆ ತಿಳಿದ ಹಾಗೆ ಕನ್ನಡಕ್ಕೆ ಮೊದಲು ಮರಾಠಿ ಆತ್ಮಕತೆಗಳನ್ನು ಬಂದಿದ್ದು, ಅವುಗಳೇ ಕನ್ನಡ ದಲಿತ ಲೇಖಕರಿಗೆ ಸ್ಫೂರ್ತಿ ಎನಿಸುತ್ತದೆ. ಕೆಲವು ಕೃತಿಗಳು ಕೇಂದ್ರ ಸಾಹಿತ್ಯ ಅಕಾಡೆಮಿ ರಾಜ್ಯ ಸಾಹಿತ್ಯ ಅಕಾಡೆಮಿಗಳ ಪುರಸ್ಕಾರಕ್ಕೂ ಪಾತ್ರವಾಗಿ, ಅನೇಕ ಭಾಷೆಗಳಿಗೆ ಭಾಷಾಂತರಗೊಂಡಿವೆ. ಶರಣಕುಮಾರಲಿಂಬಾಳೆಯುವರ 'ಅಕ್ಕರ ಮಾಶಿ', ಲಕ್ಷ್ಮಣಗಾಯಕವಾಡ ಉಚಾಲ್ಯ, ಲಕ್ಷ್ಮಣಮಾನೆಯುವರ 'ಉಪರಾ' ದಾದಸಾಹೇಬ ಬಲ್ಲಾರಿಯುವರ 'ಗೆಬಾಳ' ಮುಂತಾದವು. ಡಾ. ಅಂಬೇಡ್ಕರವರು ಜನಿಸಿದ ಮಣ್ಣಿನಲ್ಲಿ ಜನಿಸಿದ ಇವರಿಗೆ ಬಹುಶಃ ಎಲ್ಲ ರಾಜ್ಯಗಳಿಗಿಂತ ಬಹುಬೇಗನೆ ತಮ್ಮನ್ನು ಹೀಗೆ ಗುರುತಿಸಿಕೊಂಡು ಜಗತ್ತಿಗೆ ತಮ್ಮ ಬದುಕನ್ನು ಬಿಚ್ಚಿ ತೋರಿಸುವ ದಿಟ್ಟತನ ಬಂದಿರಬಹುದೇನೋ!

ಬಹುತೇಕ ಈ ಎಲ್ಲರೂ ಇನ್ನೂ ಇಳಿವಯಸ್ಸಿಗೆ ತಲುಪದವರು. ನಮ್ಮಲ್ಲಿ ಸಾಮಾನ್ಯವಾಗಿ ಇಳಿವಯಸ್ಸಿಗೆ ತಮ್ಮ ಬದುಕಿನ ಕೊನೆಗೆ ನಿಂತು. ಹಿಂದಿನೆಲ್ಲವನ್ನು ಮೆಲುಕು ಹಾಕಿರುವ ಆತ್ಮಚರಿತ್ರೆಗಳೇ ಇರುವವು. ಆದರೆ, ಈ ದಲಿತರದು ಹಾಗಲ್ಲ. ತಮ್ಮ ಆತ್ಮಕತೆಗಳನ್ನು ಬಾಳಸಂಜೆಗೆ ಮೊದಲೇ ಬರೆಯತೊಡಗಿದರು. ಬಹುಶಃ ಇದಕ್ಕೆ ಕಾರಣ, ಅವರ ಬದುಕು ಮಾಗುವವರೆಗೆ ಕಾಯಬೇಕಾಗಿಲ್ಲ. ಏಕೆಂದರೆ ಅದು ಅವರೊಬ್ಬರ ಬದುಕಾಗಿಲ್ಲ. ಶತಶತಮಾನಗಳಿಂದ ಮಾಗಿ ಹೋಗಿರುವ ದಾರುಣ ಬದುಕಿನ ದೊಡ್ಡ ಪರಂಪರೆಯ ಪ್ರತಿನಿಧಿಗಳಾಗಿ ಅವರಿಂದು ಶತಮಾನದ ಆತ್ಮಕತೆಗಳನ್ನು ಬರೆಯುತ್ತಿದ್ದಾರೆ.

ಮಾಲಗತ್ತಿಯವರ ಗೌರ್ನಮೆಂಟ್ ಬ್ರಾಹ್ಮಣ ಮೊದಲ ದಲಿತ ಆತ್ಮಕತೆಯಾಗಿ ಬಂದಾಗ ಕನ್ನಡದ ಓದುಗರು ಬಹುಕುತೂಹಲದಿಂದ ಅದನ್ನು ಓದಿದರು. ಅಲ್ಲಿಯ ಅನೇಕ ಘಟನೆಗಳು ಓದುಗನನ್ನು ಸಮಾಜದ ಅವಲೋಕನೆಗೆ ತೊಡಗಿಸುವತ್ತ ಗಮನ ಸೆಳೆಯುತ್ತವೆ. ಉದಾಹರಣೆಗೆ ಅಲ್ಲೊಂದು ವ್ಯಕ್ತಿಯನ್ನು ಪರಿಚಯಿಸುತ್ತಾರೆ. ವಿಶ್ವವಿದ್ಯಾಲಯದ ವಿದ್ಯಾರ್ಥಿ ಆತ. ಮಾಲಗತ್ತಿಯವರು ಸಂಶೋಧನಾ ವಿದ್ಯಾರ್ಥಿಯಾಗಿ ಆ ಹುಡುಗನ ರೂಂಮೇಟ್, ಬುದ್ಧಿವಂತನಾಗಿದ್ದ ಆತನನ್ನು ವಿಶ್ವವಿದ್ಯಾಲಯದ ಜನ ಹುಡುಗಿಯೊಬ್ಬಳ ಪ್ರೇಮಕ್ಕೆ ಸಿಲುಕಿಸಿ (ಅವಳನ್ನು ದೇಹದ ಹಾಗೆ ಬಳಸಿದರು) ಅವಳಿಂದ ಕ್ರಮೇಣ ಹುಡುಗ ಹೇಗೆ ಶೋಷಿತನಾಗುತ್ತಾನೆಂದರೆ ಅವನೊಬ್ಬ ವಿಚಿತ್ರ ಮಾನಸಿಕ ರೋಗಿಯಾಗಿ ಬಿಡುತ್ತಾನೆ. ಉಜ್ವಲ ಭವಿಷ್ಯದಲ್ಲಿ ಬದುಕಬೇಕಿದ್ದವನು ಗಾಢಾಂಧಕಾರದಲ್ಲಿ ಮುಳುಗಿ ಹೋಗುತ್ತಾನೆ. ಇದೊಂದು ಮನುಕುಲದ ದುರಂತ ಘಟನೆ.

ಬುದ್ಧಿವಂತ ಕೆಳವರ್ಗದ ವಿದ್ಯಾರ್ಥಿಗಳನ್ನು 'ಸುಶಿಕ್ಷಿತ ಸಮಾಜ' ಹೀಗೆ ಅದೆಷ್ಟು ಬಲಿ ತೆಗೆದುಕೊಂಡಿದೆಯೋ! ತೆಗೆದುಕೊಳ್ಳುತ್ತದೆಯೋ! ಗೊತ್ತಿಲ್ಲ. ವಿದ್ಯೆಯ ಕಡೆಗೆ ಗಮನಹರಿಸುವ ಈ ಮಕ್ಕಳನ್ನು ಇನ್ನೊಂದು ರೀತಿಯಲ್ಲಿ ದಿಕ್ಕು ತಪ್ಪಿಸುವ ಒಂದು 'ನೆಟ್‌ವರ್ಕ್' ಇಲ್ಲಿ ಸದಾಕಾಲವಿರುತ್ತದೆ. ಆ ಎಚ್ಚರ ಕೆಳವರ್ಗದ ಮಕ್ಕಳಿಗಿರಬೇಕಾಗುತ್ತದೆ. ಮಾಲಗತ್ತಿಯವರು ತಮ್ಮ ಭಗ್ನ ಪ್ರೇಮ ಪ್ರಸಂಗಕ್ಕೆ ಹೆಚ್ಚು ಪುಟಗಳನ್ನು ಬಳಸಿದ್ದಾರೆ. ಒಂದು ವೇಳೆ ಮಾಲಗತ್ತಿಯವರು ಆ ಹುಡುಗನ ಹಾಗೆ ಮನಸ್ಸನ್ನು ಅತ್ಯಂತ ಮೃದುವಾಗಿ ಹರಿಯಬಿಟ್ಟಿದ್ದರೆ ಅವನ ಹಾದಿ ಹಿಡಿಯಬೇಕಿತ್ತೇನೊ! ಆದರೆ ಅವರಲ್ಲಿ 'ಎಚ್ಚರ'ವಿತ್ತು. ಭವಿಷ್ಯ ಉಜ್ವಲವಾಯಿತು. ಈ ಎಚ್ಚರ ಇಂದಿಗೂ ವಿದ್ಯಾರ್ಥಿಗಳಿಗೆ ಅವಶ್ಯಕ.

ಭಾರತದ ಎಲ್ಲ ರಾಜ್ಯಗಳ ದಲಿತರ ಆತ್ಮಚರಿತ್ರೆಗೆ ಒಂದು ಸಾರ್ವತ್ರಿಕವಾದ ಚೌಕಟ್ಟು ಇದ್ದೇ ಇರುತ್ತದೆ. ಅದರೊಳಗೆ ಬಡತನ, ಅಪಮಾನ, ಶೋಷಣೆ, ಹಿಂಸೆ, ರೊಚ್ಚು, ಆಕ್ರೋಶ ಇವುಗಳು ಸರ್ವೇ ಸಾಮಾನ್ಯ.

ಕೆಲವು ಲೇಖಕರು ಹೀಗೆ ತಮ್ಮನ್ನು ಚರಿತ್ರಿಸಿಕೊಳ್ಳುವಾಗ ರೊಚ್ಚು ಆಕ್ರೋಶಗಳಿಗೆ ವಿಡಂಬನೆ ಅಥವಾ ಹಾಸ್ಯದ ಚಿಕಿತ್ಸೆ ಮಾಡುವ ಪ್ರಯತ್ನ ಮಾಡುತ್ತಾರೆ. ಇದೊಂದು ರೀತಿಯ ಏಕತಾನತೆಯನ್ನು ಮುರಿಯುವ ಪ್ರಯತ್ನವಿರಬೇಕು. ಸಿದ್ಧಲಿಂಗಯ್ಯನವರ 'ಊರು ಕೇರಿ; ಈ ರೀತಿಯ ಪ್ರಯತ್ನ ಮಾಡಿದೆ. ಅವರ ಪದ್ಯಗಳಾದ 'ಸಾವಿರಾರು ನದಿಗಳು' ಹೊಲೆಮಾದಿಗರ ಹಾಡು ಮುಂತಾದವು ಬೆಂಕಿ ಉಗುಳಿದ ಪದ್ಯಗಳಾಗಿದ್ದುವು. ಆ 'ಬೆಂಕಿ' ಇಲ್ಲಿ ಅವರ ಆತ್ಮಕತೆಯ ಹೊತ್ತಿಗೆ ಅಡಿಗೆಯ ಪಾತ್ರೆಗೆ ಬೇಕಾದ ಹದವಾದ 'ಉರಿ'ಯಂತಾಗಿದೆ. ಬಿಳಿಗಿರಿರಂಗಯ್ಯ ಎನ್ನುವ ದಲಿತವರ್ಗದ ಖ್ಯಾತ ಲಾಯರ್‌ರವರ

ಪ್ರಸಂಗವನ್ನು ಬಹು ಸ್ವಾರಸ್ಯವಾಗಿ ಹೇಳುತ್ತಾರೆ. ಆರ್. ಗೋಪಾಲಸ್ವಾಮಿ ಹಾಸ್ಟೆಲ್ ವಿದ್ಯಾರ್ಥಿಗಳಿಗೆ ಅವರು ಸಿಂಹಸ್ವಪ್ನವಾಗಿದ್ದದ್ದು. ಆ ಸಿಂಹವನ್ನು ಇವರ ಪದ್ಯಗಳು ಪಳಗಿಸಿದುದನ್ನು ಆಪ್ಯಾಯಮಾನವಾಗಿ ಹೇಳುತ್ತಾರೆ. ಒಬ್ಬ ದಲಿತ ವಿದ್ಯಾವಂತನಾದಾಗ ಅವನು ತನ್ನವರೂ ತನ್ನಂತೆ ವಿದ್ಯೆ ಕಲಿಯಬೇಕೆನ್ನುವ ಹಂಬಲ ಕೆಲವರಲ್ಲಿ ಎಷ್ಟು ವಿಚಿತ್ರವಾಗಿರುತ್ತದೆ ಎಂಬುದಕ್ಕೆ ಈ ಬಿಳಿಗಿರಿರಂಗಯ್ಯ ಉದಾಹರಣೆಯಾಗುತ್ತಾರೆ. ಅವರು ವಿದ್ಯಾರ್ಥಿಗಳನ್ನು ಸ್ಪೆಲಿಂಗ್ ಕೇಳುತ್ತಿದ್ದದ್ದು, ಹೇಳದಿದ್ದರೆ ಚಚ್ಚುತ್ತಿದ್ದದ್ದು ಇದೆಲ್ಲ ಒಟ್ಟು ಸಮುದಾಯ ವಿದ್ಯೆಯನ್ನು ಕಲಿಯದಿದ್ದರೆ ಅದರ ಹಣೆಯ ಬರಹದ ಬಗೆಗಿನ ಕಾಳಜಿ, ನೋವು ಅವರಲ್ಲಿ ಆ ರೀತಿಯ ಹಿಂಸಾಪ್ರವೃತ್ತಿಯಾಗಿ ಕಾಣಿಸಿಕೊಳ್ಳುತ್ತಿದ್ದಿರಬೇಕು.

ಅಲ್ಲಿ ಮತ್ತೊಂದು ಭೀಭತ್ಸ ದೃಶ್ಯವನ್ನು ಬಹು ತಣ್ಣಗೆ ಹೇಳುತ್ತಾರೆ. ಕುಡಿದ ಅಮಲಿನ ಹೆಂಗಸೊಬ್ಬಳ ಮೇಲೆ ನಡೆಯುವ ಸಾಮೂಹಿಕ ಅತ್ಯಾಚಾರವದು. ಅದು 'ಕೇಳದ ಕಾಣದ ಸಂಗತಿಗಳು' ಎನ್ನುವ ಶೀರ್ಷಿಕೆಯಲ್ಲಿದ್ದು ಸಮಾಜದ ಕಿವುಡು - ಕುರುಡುತನಗಳ ಸಾಕ್ಷಿಯ ಭೀಕರತೆಯನ್ನು ಬಿತ್ತರಿಸುತ್ತದೆ.

ಅಶಿಕ್ಷಿತರಾಗಿ ಅಜ್ಞಾನದ ಅಂಧಕಾರದಲ್ಲಿ ಮುಳುಗಿದ್ದಾಗಿನ ದಲಿತರು ಕುಡಿತವನ್ನು ತಮ್ಮ ಬದುಕಿನ ಅವಿಭಾಜ್ಯ ಭಾಗವನ್ನಾಗಿಸಿಕೊಂಡು ಸತ್ತದನದ ಬಾಡಿಗಾಗಿ ಹಾತೊರೆದದ್ದು ಎಲ್ಲ ಆತ್ಮಕತೆಗಳಲ್ಲೂ ಸರ್ವೇಸಾಮಾನ್ಯವಾಗಿ ದಾಖಲಾಗಿವೆ. ಕ್ರಮೇಣ ಓದಿನ ಮೆಟ್ಟಿಲನ್ನೇರಿ ಒಂದಿಲ್ಲೊಂದು ಸ್ಥಾನಗ್ರಹಣ ಮಾಡುತ್ತಾ ಬಂದವರು ಹೊಸ ಶೈಲಿಯ ಬಾರುಗಳ ದರ್ಬಾರಲ್ಲಿ ಒಂದು ರೀತಿಯಲ್ಲಿ ಕಳೆದುಹೋಗುವುದು. ಮತ್ತೊಂದು ದುರಂತವಾಗುತ್ತದೆ. ಆತ್ಮಚರಿತ್ರೆಯ ಕೆಲವು ಕಡೆ ನನಗೆ ಹೀಗೆ ಅನಿಸಿದ್ದನ್ನು ಹಾಗೆಯೇ ನೋವಿನಿಂದ ಹೇಳಬೇಕೆನಿಸಿದೆ.

ದಲಿತ ಸಂಘಟಕರಾಗಿ ಹೋರಾಟಗಾರರಾಗಿ, ಅತ್ಯಂತ ಉತ್ಸಾಹದಿಂದ ದುಡಿದು ಕ್ರಮೇಣ ಎಲ್ಲ ಚಳವಳಿಗಳಂತೆ ಈ ಚಳವಳಿಯೂ ಕೆಲವು ಸ್ವಾರ್ಥಕ್ಕೆ ಬಲಿಯಾಗಿ ಚೂರುಚೂರಾಗಿ ಹೋದರೂ ಆ ಚೂರುಗಳ ಎಡೆಯಲ್ಲಿಯೇ ಕೆಲವರು ಜಾಗ ಮಾಡಿಕೊಂಡು ವಿರಾಜಮಾನರಾದದ್ದು ದಂತಕತೆಯಾಗಿದೆ. 'ಸಂಜೋಳಿ'ಯ ಲಕ್ಷ್ಮಣರವರು ತಮ್ಮ ಹಲವು ಕಷ್ಟಗಳ ನಡುವೆಯೇ ವಿದ್ಯಾಸಂಸ್ಥೆಯೊಂದನ್ನು ಕಟ್ಟಲು ಹೋಗಿ ಸೋತದ್ದು ಇಂತಹ ವೈರುಧ್ಯಗಳ ನಡುವೆಯೇ. ಹಲವು ಒಡೆದ ಪ್ರಣಯ - ಮದುವೆಗಳ ನಡುವೆ ಲಕ್ಷ್ಮಣರ ಪ್ರೇಮ ಮದುವೆ ಬಹು ಸಭ್ಯ ಯಶಸ್ವಿ ಮದುವೆಯಾಗಿ ಕಂಡಿರುವುದೊಂದು ಸಮಾಧಾನ.

ಮುಳ್ಳೂರು ನಾಗರಾಜರವರು, ಬಡವನ ಮಗನಾಗಿ ಹುಟ್ಟಿ ಆಕಸ್ಮಿಕ ರಾಜಕೀಯ ಸಂದರ್ಭದಲ್ಲಿ ಬಲು ಮೇಲೇರಿದ ವೆಂಕಟರಮಣರ ಬಗೆಗೆ ಮಾತನಾಡುತ್ತಾರೆ. ಅವರು



ಬಡ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಹೋರಾಟದ ಮೂಲಕ ಸ್ಥಾಪಿಸಿದ ಹಾಸ್ಟೆಲ್ ವಾರ್ಡನ್, ಅಧ್ಯಕ್ಷ ಎಲ್ಲವೂ ಆಗಿ ಕ್ರಮೇಣ ಹಾಸ್ಟೆಲ್ ಸರಿಯಾಗಿ ನಡೆಸದೆ ವಿದ್ಯಾರ್ಥಿಗಳನ್ನು ಶೋಷಿಸುವ ವ್ಯಕ್ತಿಯಾಗಿ ರಾಜಕೀಯದಲ್ಲಿ ಮೇಲೇರುತ್ತಿದ್ದಂತೆ ಅಧಿಕಾರದ ಮದವೇರಿದ ಅವರು ಯಾವುದೋ ಸಂದರ್ಭದಲ್ಲಿ ಹುಡುಗರೊಡನೆ ಮಾತನಾಡುತ್ತಾ 'ನಂಗೆ ಬಾಳಾ ಗ್ರೇಡು ಕಣ್ರಯ್ಯ, ನಾನು ವಿಧಾನಸಭೆಯಲ್ಲಿ ಎಲ್ಲರಿಗಿಂತ ಮೇಲೆ ಕೂತ್ಕಂತೀನಿ ಚೀಫ್ ಮಿನಿಸ್ಟ್ರು ಕೂಡಾ ನನ್ನ ಕೆಳಗೇ ಕೂತ್ಕಬೇಕು. ನೋಡು ಇದೆಂತಾ ಗ್ರಾಚಾರವ' ಎಂದು ಗಹಗಹಿಸಿ ನಕ್ಕಿದ್ದರು ಎಂದು ಹೇಳುತ್ತಾ ಅವರ ಹಮ್ಮಿನ ಮಾತುಗಳನ್ನು ಇವರು 'ಗೊಮ್ಮಟೇಶ್ವರನ ಮೇಲೆ ಕಾಗೆಗಳು ಕೂತ್ಕತ್ತವೆ ಅದಕೇನ ತಕ್ಕ' ಎಂದು ಪ್ರತಿಕ್ರಿಯಿಸಿದ ಅವರ ಕೋಪಕ್ಕೆ ಸದ್ದು ಹೊಡೆದದ್ದನ್ನು ದಾಖಲಿಸುತ್ತಾರೆ. ಇದು ಬುದ್ಧಿಗೇಡಿಗಳ ದುರಂತ ಮಾತ್ರವಾಗದೆ ಕೆಲವು ಬಾರಿ ಸಮುದಾಯದ ದುರಂತವಾಗಿಯೇ ಪರಿಣಮಿಸಿ ಬಿಡುವ ಅಪಾಯವಾಗುತ್ತದೆ. ಸಮುದಾಯದ ಪ್ರಜ್ಞೆಯಿಲ್ಲದ ಸ್ವಾರ್ಥಮೂಲಕ್ಕೆ ಇಳಿದ ಇಂಥವರಿಂದಲೇ ದಲಿತೋದ್ಧಾರದ ಕನಸು ಕನಸಾಗಿಯೇ ಉಳಿದುಬಿಡುತ್ತದೆ.

ಹೀಗೆ ಈ ಆತ್ಮಕತೆಗಾರರು ಎಲ್ಲವನ್ನೂ ಮುಕ್ತವಾಗಿ ಹೇಳುವ ಮೂಲಕ ಏಕಪಕ್ಷೀಯವಾಗದೆ ತಮ್ಮಲ್ಲಿಯೇ ಇರುವ ಹಲವು ಸಣ್ಣತನವನ್ನು ಬಿಚ್ಚಿಡುವ ಪ್ರಯತ್ನ ಮಾಡಿದ್ದಾರೆ. ಕೆಳವರ್ಗದ ಜನರ ನಡುವೆಯೂ ಇರಬಹುದಾದ ಒಳಜಾತಿಗಳ ಮೇಲುಕೀಳಿನ ಸಮಸ್ಯೆಯನ್ನು ಲಕ್ಷ್ಮಣರವರು ಹೇಳಿದ್ದಾರೆ. ಕೆಳಸಮುದಾಯದ ತಮ್ಮ ಹಾಗೂ ತಮ್ಮ ಸಹೋದ್ಯೋಗಿಯೊಬ್ಬರ ನಡುವೆ ನಡೆದ ಪ್ರಸಂಗವೊಂದರಲ್ಲಿ ಸಹಭೋಜನವನ್ನು ಒಂದು ರೀತಿಯ ಚಾಣಾಕ್ಷತನದಲ್ಲಿ ನಿರಾಕರಿಸಿದುದನ್ನು ಅಲ್ಲಿ ನಾವು ಕಾಣಬಹುದು. ಇಂಥ ಪ್ರಸಂಗಗಳು ಸಾಮಾನ್ಯವಾಗಿ ಎಲ್ಲರಿಗೂ ಒಂದಲ್ಲೊಂದು ರೀತಿಯಲ್ಲಿ ಅನುಭವಕ್ಕೆ ಬಂದೇ ಬಂದಿರುತ್ತವೆ. ಕೆಳ ಸಮುದಾಯಗಳು ಒಟ್ಟಾಗಿ, ಸಂಬಂಧಗಳನ್ನು ಬೆಸೆದುಕೊಂಡು ಬಾಳುವವರೆಗೆ ಮೇಲ್ವರ್ಗದ ತಾಂಬೂಲವಾಗಿಯೇ ಇರುವುದು ಅನಿವಾರ್ಯ ಎನ್ನುವ ಸತ್ಯವನ್ನು ಇನ್ನೂ ಸರಿಯಾಗಿ ಅರಿಯಬೇಕಾಗಿದೆ. ಅಕ್ಷರಬಿದ್ದ ಎದೆಗಳಲ್ಲಿ ಸಮಾನತೆಯ ಬೀಜ ಮೊಳೆತು ಸರ್ವರಲ್ಲಿ ಸಮಪಾಲಿನ ಸಮಬಾಳಿನ ಸಾಮಗಾನ ಲಹರಿ ತೇಲುವ ಸುದಿನಕ್ಕಾಗಿ ಆಶಿಸೋಣ.





# ದಲಿತ ಸಾಹಿತ್ಯ : ಹೊಸ ಓದು

– ಡಾ. ಬಿ.ಎಂ. ಪುಟ್ಟಯ್ಯ
ಪ್ರಾಧ್ಯಾಪಕರು, ಹಂಪಿ ಕನ್ನಡ ವಿಶ್ವವಿದ್ಯಾಲಯ

**ದಲಿತ ಸಾಹಿತ್ಯ : ಹಾಹಾಕಾರ!**
**ಆಹಾ! ಓಹೋ! ಕಾರ - ಆಕರ**

ದಲಿತ ಸಾಹಿತ್ಯವನ್ನು ಕಳೆದ ಮೂರುವರೆ ದಶಕಗಳಿಂದ ಬೇರೆಬೇರೆ ಉದ್ದೇಶಗಳಿಗಾಗಿ, ಬೇರೆ ಬೇರೆ ಆಯಾಮಗಳಲ್ಲಿ ಪರಿಶೀಲಿಸಲಾಗಿದೆ, ವಿಮರ್ಶಿಸಲಾಗಿದೆ. ಅವುಗಳಲ್ಲಿ ಬೆರಗು, ಸಿಟ್ಟೆರಗು, ಆಶ್ಚರ್ಯ, ಆಸ್ವಾದನೆ, ಆಹಾ! ಓಹೋ! ಎಂಬ ಉದ್ಗಾರ, ಹೊಗಳಿಕೆ, ವೈಭವೀಕರಣ, ಅತಿ ಅಂದಾಜುಗಳು ಒಂದು ಕಡೆಗಿವೆ. ಅಸಹನೆ, ಅಸಮಾಧಾನ, ಉಪೇಕ್ಷೆ, ನಿರ್ಲಕ್ಷೆ, ಕಟುಟೀಕೆ, ತಿರಸ್ಕಾರ, ಮಿತ ಅಂದಾಜುಗಳು ಮತ್ತೊಂದು ಕಡೆಗಿವೆ. ಈ ರೀತಿಯಲ್ಲಿ ದಲಿತ ಸಾಹಿತ್ಯದ ಬಗ್ಗೆ ಪ್ರತಿಕ್ರಿಯಸಲು ಸಾಹಿತ್ಯದ ವಸ್ತು, ದೃಷ್ಟಿ, ಧೋರಣೆ, ವಿಧಾನ, ಶೈಲಿ, ಕಲೆಗಾರಿಕೆ ಮುಂತಾದ ಮಾನದಂಡಗಳನ್ನು ಬಳಸಲಾಗಿದೆ. ಈ ಮೌಲ್ಯಮಾಪನದ ಕೆಲಸ ದಲಿತ ಸಮುದಾಯದ ವಿಮರ್ಶಕರಿಂದ ಮತ್ತು ದಲಿತೇತರ ವಲಯದ ವಿಮರ್ಶಕರಿಂದ ನಡೆದಿದೆ. ಜೊತೆಗೆ ಈ ನಿಲುವುಗಳು ಜಡವಾಗಿ ಉಳಿಯದೆ ಸಣ್ಣಪುಟ್ಟ ಬದಲಾವಣೆಗಳೊಂದಿಗೆ ಇನ್ನೂ ಮುಂದುವರೆದಿವೆ.

'ಖಂಡವಿದೆ ಕೋ, ಮಾಂಸವಿದೆ ಕೋ, ಗುಂಡಿಗೆಯ ಬಿಸಿರಕ್ತವಿದೆ ಕೋ' ಎಂಬ ಮಾತುಗಳು ದೇವನೂರು ಮಹಾದೇವ ಅವರ 'ದ್ಯಾವನೂರು' ಕಥಾ ಸಂಕಲನದ ಮೊದಲ ಮುದ್ರಣದ



ಬೆನ್ನುಡಿಯಲ್ಲಿವೆ. ಈ ಮಾತುಗಳು ಏನನ್ನು ಸೂಚಿಸಲು ಪ್ರಯತ್ನಿಸುತ್ತಿರಬಹುದು? 'ತಾ' ಎಂದು ಕೇಳಿದವರಿಗೆ 'ಕೋ' ಎಂದು ಕೊಡಲು ಹೊರಟ ಸಾಲುಗಳಿರಬಹುದಲ್ಲ. ಹಾಗಾಗಿ ಇಲ್ಲಿ 'ತಾ' ಎಂದು ಕೇಳಿದವರು ಯಾರು? ಅವರೇಕೆ ಇವರಿಂದ 'ತಾ' ಎಂದು ಕೇಳಿದರು? ಅಥವಾ ಇವರೇಕೆ 'ಕೋ' ಎಂದು ಹೇಳಿದರು? 'ಖಂಡ, ಮಾಂಸ, ಗುಂಡಿಗೆಯ ಬಿಸಿರಕ್ತ' ಇವೆಲ್ಲ ಬರಿಯ ಸಾಹಿತ್ಯದ ರೂಪಕಗಳಾ? ಅಥವಾ ಸಮಾಜದ ಚಲನಶೀಲ ಕ್ರೂರ ವಾಸ್ತವಗಳಾ? ದಲಿತ ಸಾಹಿತ್ಯ ಎಂಬುದನ್ನು ಸಾಂಪ್ರದಾಯಿಕ ಅರ್ಥದಲ್ಲಿ ಬರಿಯ 'ಸಾಹಿತ್ಯ ಎಂದು ಮಾತ್ರ ನೋಡಬೇಕಾ? ಅಥವಾ ಖಂಡ, ಮಾಂಸ, ಗುಂಡಿಗೆಯ ಬಿಸಿರಕ್ತಗಳನ್ನು ಬದಿಗೊತ್ತಿ 'ಯಾರ ಜಪ್ತಿಗೂ ಸಿಗದ ನವಿಲುಗಳು' ಎಂದು ವಯ್ಯಾರದಿಂದ ಆಹಾ! ಓಹೋ! ಎಂದು ವೈಭವೀಕರಿಸಬೇಕಾ?

'ದಾರೀಲಿ ಹೋಗೋರೆ ಹಾಡೆಂದು ಕಾಡ್ಬೇಡಿ, ಹಾಡಲ್ಲ ನನ್ನ ಒಡಲುರಿ' ಎಂಬ ಪದದಲ್ಲೂ ಇದೇ ಅಂಶವಿದೆ. ದಾರಿಯಲ್ಲಿ ಹೋಗುವವರು ಹಾಡು ಹಾಡು (ಹಾಡು ಹೇಳು, ಹಾಡು ಹೇಳು) ಎಂದು ಒತ್ತಾಯಿಸಿದ್ದಾರೆ. ಹಾಗೆ ಒತ್ತಾಯಿಸಿದವರಿಗೆ ಹಾಡು ಅಲ್ಲ; ಮತ್ತು ಹಾಡಲು ಆಗುವುದಿಲ್ಲ; ಯಾಕೆಂದರೆ ಇದು ನನ್ನ ಒಡಲಿನ ಉರಿ. ಹಾಗಾಗಿ ಇದನ್ನು ಹಾಡಲು ಆಗುವುದಿಲ್ಲ ಎಂದು ಮನವರಿಕೆ ಮಾಡುವ ಪ್ರಯತ್ನವಿದೆ. ಮೇಲಿನ ಪದದಲ್ಲಿರುವ ಹೋಗು, ಹಾಡು, ಕಾಡು, ಉರಿ - ಈ ಕ್ರಿಯಾಪದಗಳನ್ನು ಗಮನಿಸಬೇಕು. ಜೊತೆಗೆ ಒಂದು ಕಡೆ ಒತ್ತಾಯಿಸಲಾಗಿರುವ ಮತ್ತೊಂದು ಕಡೆ ಆ ಒತ್ತಾಯಕ್ಕೆ ಒಳಗಾಗಿಯೂ ಅದನ್ನು ಪ್ರತಿಭಟಿಸಿರುವ ಆಯಾಮವನ್ನೂ ಗಮನಿಸಬೇಕು. ಈ ಎರಡು ಆಯಾಮಗಳ ವಸ್ತುಸ್ಥಿತಿಯನ್ನು ಇನ್ನೊಂದು ಕೋನದಿಂದಲೂ ನೋಡಬಹುದು. ಒಡಲುರಿಯನ್ನು ಹಾಡಿನಲ್ಲಿ ಮತ್ತು ದಾರೀಲಿ ಹೋಗುವವರಿಗೆ ತಿಳಿಸಲು ಆಗುವುದಿಲ್ಲ. ಹಾಗಾಗಿ ಭಾಷಿಕವಾಗಿ ಏನನ್ನು ಹೇಳಲಾಗಿದೆಯೋ ಅದಕ್ಕಿಂತಲೂ ತೀವ್ರವಾದುದು, ಸೂಕ್ಷ್ಮವಾದುದು ಭಾಷಿಕವಾಗಿ ಹೇಳದೇ ಇರುವುದರಲ್ಲಿ ಮತ್ತು ಹೇಳಲು ಆಗದೇ ಇರುವುದರಲ್ಲಿ ಇದೆ. ಅದು ಯಾವುದೆಂದರೆ ಅದೇ ಒಡಲುರಿ. ಅದೇ ನಿಗಿನಿಗಿ ಕೆಂಡ. ಅದೇ ಖಂಡ, ಮಾಂಸ,ರಕ್ತ. ಹಾಗಾಗಿ ಭಾಷಿಕವಾಗಿ ಏನು ಮತ್ತು ಎಷ್ಟು ಅಭಿವ್ಯಕ್ತವಾಗಿದೆಯೊ ಅದಷ್ಟೇ 'ದಲಿತ ಸಾಹಿತ್ಯ' ಎನ್ನುವುದು ಹುಡುಗಾಟಿಕೆಯಾಗುತ್ತದೆ ಮತ್ತು ಸರಳ ತೀರ್ಮಾನವಾಗುತ್ತದೆ. ದಲಿತ ಸಾಹಿತ್ಯ ಎಂಬುದು ಕೇವಲ ಅಕ್ಷರಗಳಲ್ಲಿ, ಭಾಷಿಕ ಅಭಿವ್ಯಕ್ತಿಗಳಲ್ಲಿ ಮಾತ್ರವೇ ಇಲ್ಲ. ದಲಿತ ಸಾಹಿತ್ಯ ಲೈಬ್ರರಿಯಲ್ಲಿ ಮಾತ್ರ ಇಲ್ಲ. ದಲಿತ ಸಾಹಿತಿಗಳ ಬೆಚ್ಚನೆಯ ಮನೆಗಳಲ್ಲಿ, ರೀಡಿಂಗ್ ರೂಮುಗಳಲ್ಲಿ, ಎಸಿ ರೂಮುಗಳಲ್ಲಿ ಇಲ್ಲ. ಅಥವಾ ದಲಿತ ಸಾಹಿತ್ಯ ಅಂತ ಯಾವುದನ್ನು ಕರೆಯಲಾಗಿದೆಯೋ ಅದು 'ಗ್ರಾಂಥಿಕ ಸಾಹಿತ್ಯ' ಮಾತ್ರವೇ ಅಲ್ಲ.



ಹೋರಾಟದ ಹಾಡುಗಳ ಲೋಕದಿಂದ ಹೇಳುವುದಾದರೆ ದಲಿತ ಸಾಹಿತ್ಯ ಎಂಬುದು ಗಾಯದ ಕತೆ, ಗಾಯವು ಮಾಯದ ಕತೆ, ಈ ಕತೆಗಳನ್ನೊಳಗೊಂಡ ನೋವಿನ ರಾಗ (ಅನುಬಂಧ 1 ನೋಡಿ). ಹಾಗಾಗಿ ದಲಿತ ಲೋಕದ ವಸ್ತುಸ್ಥಿತಿಯು ಅಕ್ಷರ ಮತ್ತು ಭಾಷಿಕ ಅಭಿವ್ಯಕ್ತಿಗಳಾಚೆಗೆ ಹೋಗುವುದರಿಂದ 'ಸಾಹಿತ್ಯ' ಎಂಬುದು ಸೀಮಿತ ಚೌಕಟ್ಟಾಗುತ್ತದೆ. ತೊಡಕಾದ ಪರಿಕಲ್ಪನೆಯಾಗುತ್ತದೆ. ಹಾಗಾಗಿ ಇದನ್ನು ವಿಶಾಲವಾಗಿ ದಲಿತರ ಸಮಗ್ರ ಅಭಿವ್ಯಕ್ತಿ ಎನ್ನಬಹುದು. ದಲಿತರು ತಮ್ಮ ಹೋರಾಟಗಳಲ್ಲಿ ಹೋರಾಟದ ಹಾಡನ್ನು ಹೇಳುತ್ತಿದ್ದರೆ ಮುಖ್ಯ ಹಾಡುಗಾರನಷ್ಟೇ ಅದಕ್ಕೆ ಕೋರಸ್ ಕೊಡುವವರ ಪಾತ್ರವೂ ಮುಖ್ಯವಾಗಿರುತ್ತದೆ. ಹೋರಾಟಗಳಲ್ಲಿ ಕೂಗುವ ಘೋಷಣೆಗಳು ದಲಿತರ ಪ್ರತಿರೋಧದ ಅಭಿವ್ಯಕ್ತಿಗಳು. ಆದರೆ ಇವನ್ನೆಲ್ಲ ಸಾಂಪ್ರದಾಯಿಕ ಧೋರಣೆಯವರು 'ಸಾಹಿತ್ಯ' ಎಂದು ಪರಿಗಣಿಸಿಲ್ಲ. ಆ ಪರಿಗಣನೆಯೂ ದಲಿತ ಸಾಹಿತ್ಯಕ್ಕೆ ಬೇಕಾಗಿಲ್ಲ. ಈಗ ಒಂದು ಪ್ರಶ್ನೆಯನ್ನು ಎತ್ತಿ ಆ ಕುರಿತು ಚರ್ಚಿಸಬಹುದು. 200ಕ್ಕೂ ಹೆಚ್ಚಿನ ಹೋರಾಟದ ಹಾಡುಗಳು, 180ಕ್ಕೂ ಹೆಚ್ಚಿನ ದಲಿತ ಬರಹಗಾರರ ಬರವಣಿಗೆಗಳು ಬುದ್ಧಿಜೀವಿ ವಲಯದ ಅಕಾಡೆಮಿಕ್ ಚರ್ಚೆಯ ಮುಂಚೂಣಿಗೆ ಯಾಕೆ ಬರಲಿಲ್ಲ? ಒಂದು ಕಡೆ ಒಬ್ಬರು ವಿಮರ್ಶಕರು ದಲಿತ ಸಾಹಿತ್ಯದ ಒಂದು ಕೃತಿಯನ್ನು ಕುರಿತು 'ಬಡವರ ನಗುವಿನ ಶಕ್ತಿ' ಎಂದು ಕೊಂಡಾಡಿದರು. ಮತ್ತೊಬ್ಬರು ವಿಮರ್ಶಕರು ಮತ್ತೊಂದು ಕಡೆ 'ಯಾರ ಜಪ್ತಿಗೂ ಸಿಗದ ನವಿಲುಗಳು' ಎಂದು ಇನ್ನೊಂದು ಕೃತಿಯನ್ನು ಕೊಂಡಾಡಿದರು. ಇಂತಹ ಕಲಾತ್ಮಕ ವೇಷದ ಅಪಾಯಕಾರಿ ಬಿರುದುಗಳೇ ದಲಿತರ ಸಮಗ್ರ ಅಭಿವ್ಯಕ್ತಿಯನ್ನು ಸಮಗ್ರವಾಗಿ ನೋಡದಂತೆ ಮಾಡಿವೆ. ಈ ಬಗೆಯ ಆಸ್ವಾದನಾ ಮತ್ತು ಆರಾಧನಾ ನಿಲುವುಗಳು ಮೇಲ್ನೋಟಕ್ಕೆ ಎಷ್ಟೇ ಗಂಭೀರ ಸಾಹಿತ್ಯ ವಿಮರ್ಶೆಯಾಗಿ ಕಂಡರೂ ಅವುಗಳ ಆಳದಲ್ಲಿ ದಲಿತರ ವಿಶಾಲವಾದ ಅಭಿವ್ಯಕ್ತಿಗಳನ್ನು ಸಮಗ್ರವಾಗಿ ನೋಡದಂತೆ ಮಾಡಿರುವ ಮಿತಿ ಇದೆ. ಈ ರೀತಿಯಲ್ಲಿ ದಲಿತ ಸಾಹಿತ್ಯದ ಕೆಲವೇ ಕೆಲವು ಕೃತಿಗಳ ಮೇಲೆ ಆಸ್ವಾದನ ಹಾಗೂ ಅರಾಧನಾ ವಿಮರ್ಶಕರ ನೇರ ದಾಳಿ ನಡೆದಿದೆ. ದಾಳಿ ಮಾಡಿ, ಬಿರುದನ್ನು ದಯಪಾಲಿಸಿದ ಆಸ್ವಾದನ ಹಾಗೂ ಆರಾಧನ ವಿಮರ್ಶೆಯು ತಾನು 'ಯಾರ ಜಪ್ತಿಗೂ ಸಿಗುವುದಿಲ್ಲ' ಎಂದು ಕಲಾತ್ಮಕ ಭ್ರಮೆಯಲ್ಲಿ ತೇಲುತ್ತಿದೆ. ಈ ದಾಳಿಯ ಸ್ವರೂಪವು ದಲಿತ ಸಾಹಿತ್ಯವನ್ನು ಚಲನಶೀಲ ಸಾಮಾಜಿಕ ಚೌಕಟ್ಟಿನಲ್ಲಿ ಗ್ರಹಿಸುವುದಕ್ಕೆ ಅಡ್ಡಿಯುಂಟುಮಾಡಿದೆ. ಈ ಅಪಾಯವನ್ನು ಮುಖ್ಯವಾಗಿ ಪರಿಗಣಿಸಬೇಕಿದೆ.

ದಲಿತ ಸಾಹಿತ್ಯದ ಹೊಸ ಓದು ಎಂಬುದು ವಿಶ್ಲೇಷಣೆಯ ಕ್ರಮಗಳಲ್ಲಿ ಒಬ್ಬರಿಂದ ಒಬ್ಬರಿಗೆ ಬೇರೆ ಬೇರೆಯಾಗುತ್ತಾ ಹೋಗಬಹುದು. ಆದರೆ ಈ ಕೆಲಸ ಅನೇಕ ಸಲ



ದಲಿತ ಸಾಹಿತ್ಯ ಎಂದು ಕರೆಯಲಾಗುವ ಪಠ್ಯಗಳ ಆಚೆಗೆ ಹೋಗಲಾರದು. ಆದರೆ ದಲಿತ ಸಾಹಿತ್ಯದ ಸಂದರ್ಭದಲ್ಲಿ ಕೇವಲ ಸಾಹಿತ್ಯಕ ಪಠ್ಯಗಳು ಮಾತ್ರ ಸಾಕಾಗಲಾರವು. ಅಥವಾ ದಲಿತ ಸಾಹಿತ್ಯ ಎಂಬುದರ ಒಪ್ಪಿತ ಸ್ವರೂಪವೊಂದೇ ಸಾಕಾಗಲಾರದು. ಕಳೆದ 30 ವರ್ಷಗಳ ದಲಿತ ಲೋಕದ ಚಲನಶೀಲ ಸ್ತರ ವಿನ್ಯಾಸಗಳು, ಅದರ ಆಂತರಿಕ ಹಾಗೂ ಬಾಹ್ಯ ಏಳು ಬೀಳುಗಳು, ಆ ಏಳು ಬೀಳುಗಳನ್ನು ಸೃಷ್ಟಿಸಿದ ಅಕ್ರಮ ಮತ್ತು ಅನ್ಯಾಯದ ವ್ಯವಸ್ಥೆ, ಅದಕ್ಕೆ ದಲಿತರ ವಿವಿಧ ಸ್ತರಗಳ ಪ್ರತಿಕ್ರಿಯೆ ಪ್ರತಿರೋಧಗಳು - ಇವೆಲ್ಲವೂ ಸಮಗ್ರವಾಗಿ ಚರ್ಚೆಗೆ ಬರುತ್ತವೆ. ಇದು ಮೂರ್ತವಾದುದು - ಅಮೂರ್ತವಾದುದು, ಸೂಕ್ಷ್ಮವಾದುದು - ಸಂಕೀರ್ಣವಾದುದು. ದಲಿತ ಸಾಹಿತ್ಯ ಎಂಬುದು ವಾಸ್ತವವಾಗಿ ದಲಿತ ಬದುಕಿನಲ್ಲಿ ಹಾಹಾಕಾರವಾಗಿದೆ ಅಥವಾ ದಲಿತ ಬದುಕಿನ ಹಾಹಾಕಾರವು ಮಾತುಗಳಲ್ಲಿ ಮತ್ತು ಬರವಣಿಗೆಯಲ್ಲಿ ದಲಿತ ಸಾಹಿತ್ಯದ ರೂಪ ಪಡೆದಿದೆ. ಆದರೆ ವಿಮರ್ಶೆಯ ರಮ್ಯ ವಲಯದಲ್ಲಿ ಅಥವಾ ಕೆಲವು ರಮ್ಯ ವಿಮರ್ಶಕರು ಅದನ್ನು ಆಹಾ!, ಓಹೋ! ಎಂದು ಬಣ್ಣಿಸಿಕೊಂಡು, ವ್ಯಾಖ್ಯಾನಿಸಿಕೊಂಡು ತಮಗೆ ತಾವೇ ಖುಷಿ ಪಟ್ಟಿದ್ದಾರೆ; ಕುಣಿದು ಕುಪ್ಪಳಿಸಿದ್ದಾರೆ. ಶ್ರಮಿಕರ ಕಣ್ಣೀರು ಒಡೆಯರಿಗೆ ಪನ್ನೀರು ತಾನೆ? ಕೆಲವು ಸಾಂಪ್ರದಾಯಿಕ ಮತ್ತು ವೃತ್ತಿಪರ ಅಧ್ಯಯನಗಳು ದಲಿತ ಸಾಹಿತ್ಯವನ್ನು ಆಹಾರ ಮಾಡಿಕೊಂಡಿವೆ; ಮತ್ತೆ ಕೆಲವು ಅಧ್ಯಯನಗಳು ದಲಿತ ಸಾಹಿತ್ಯವನ್ನು ಆಕರ ಮಾಡಿಕೊಂಡಿವೆ.

ವಾಸ್ತವವಾಗಿ ದಲಿತ ಸಾಹಿತ್ಯವೇ ಇರಲಿ, ಇನ್ಯಾವುದೇ ಸಾಹಿತ್ಯವೇ ಇರಲಿ ಅದು ಮೂಲತಃ ಒಂದು ಸಮುದಾಯದ ಅಥವಾ ಹಲವು ಸಮುದಾಯಗಳ ಸಾಮುದಾಯಿಕ ನೋವಿನ, ವೇದನೆಯ, ಹಿಂಸೆಯ ಅಭಿವ್ಯಕ್ತಿ. ಇಲ್ಲಿ ಭಾಷೆ ಎಂಬುದು ನೆಪ ಮಾತ್ರ. ನಿಜವಾಗಿ ದಲಿತರ ಎದೆಯಾಳದ ನೋವು ವೇದನೆ ಹಿಂಸೆ ಅಪಮಾನ ಸಂಕಟಗಳನ್ನು ಅಭಿವ್ಯಕ್ತಿಸಲು ಭಾಷೆಗೆ ಅಥವಾ ಅಕ್ಷರಕ್ಕೆ ಬಹಳಷ್ಟು ಮಿತಿ ಇದೆ. ವಿಶೇಷವಾಗಿ ದಲಿತ ಸಾಹಿತ್ಯದ ಸಂದರ್ಭದಲ್ಲಿ ಪ್ರಧಾನವಾಗಿರುವ ಈ ಪ್ರಶ್ನೆಯನ್ನು ಪ್ರಾಥಮಿಕವಾಗಿಯೂ ಕೇಳಿಕೊಂಡಿಲ್ಲ.

## ದಲಿತ ಸಾಹಿತ್ಯದ ವ್ಯಾಪ್ತಿ

ದಲಿತ ಸಾಹಿತ್ಯ ಎಂದರೆ ಕೇವಲ ಕೆಲವು ದಲಿತ ಸಾಹಿತಿಗಳ ಮತ್ತು ಅವರ ಸಾಹಿತ್ಯ ಕೃತಿಗಳ ರೆಡಿಮೇಡ್ ಪಟ್ಟಿ ನಮ್ಮ ಮನಸ್ಸಿಗೆ ಬರುತ್ತದೆ. ಆದರೆ ಅದಷ್ಟೇ ದಲಿತ ಸಾಹಿತ್ಯವಲ್ಲ. ಕಳೆದ 30 ವರುಷಗಳ ದಲಿತ ಸಮೂಹದ ಸಂಕೀರ್ಣ ಸ್ಥಿತ್ಯಂತರಗಳು, ಕೆಲವು ದಲಿತರ ಬೌದ್ಧಿಕ ಮಾನಸಿಕ ವಿಕಾಸಗಳು; ಆಸೆ, ಕನಸು, ಭರವಸೆಗಳು, ನೋವು,



ಯಾತನೆ, ವೇದನೆ, ಹಿಂಸೆ, ಅಪಮಾನ, ಅಸಹನೆ, ಅಸಮಾಧಾನ, ರೋಷ, ಆಕ್ರೋಶ, ಪ್ರತಿರೋಧಗಳು, ಇಂಡಿಯಾದಲ್ಲಿ ಮತ್ತು ಕರ್ನಾಟಕದಲ್ಲಿ ಡಿಎಸ್‌ಎಸ್ ರೂಪುಗೊಂಡ ಚಾರಿತ್ರಿಕ ಸಂದರ್ಭ, ಡಿಎಸ್‌ಎಸ್‌ನ ಎಲ್ಲ ಬಗೆಯ ನೂರಾರು ಹೋರಾಟಗಳು, ಡಿಎಸ್‌ಎಸ್‌ನ ಹಲವಾರು ವಿಘಟನೆಗಳು, ಗುಂಪುಗಳು, ಅನಂತರದ ಬೆಳವಣಿಗೆಗಳು, ಡಿಎಸ್‌ಎಸ್‌ನ ಸಾವಿರಾರು ಕರಪತ್ರಗಳು, ನೂರಾರು ಗೋಡೆ ಬರಹಗಳು, ಬ್ಯಾನರ್‌ಗಳು, ಪತ್ರಿಕಾ ಹೇಳಿಕೆಗಳು, 200ಕ್ಕೂ ಹೆಚ್ಚಿನ ಹೋರಾಟದ ಹಾಡುಗಳು, ಡಿಎಸ್‌ಎಸ್‌ನ ಆರಂಭದ ದಿನಗಳಲ್ಲಿ ಬಿ. ಕೃಷ್ಣಪ್ಪ, ಸಿದ್ಧಲಿಂಗಯ್ಯ, ಶಿವಣ್ಣ ಕಂದೇಗಾಲ, ಅಶ್ವತ್ ಅಂತ್ಯಜ, ವಿ. ನಾಗರಾಜ್, ಆರ್. ಮಾನಸಯ್ಯ, ಚಂದ್ರಪ್ರಸಾದ್ ತ್ಯಾಗಿ, ಮುಳ್ಳೂರ್ ನಾಗರಾಜ್ ಮುಂತಾದವರ ಪ್ರಚೋದನಕಾರಿ ಮತ್ತು ಪರಿಣಾಮಕಾರಿ ಮಾತುಗಳು / ಭಾಷಣಗಳು, ಹೋರಾಟದ ಹಾಡುಗಳ ಹಾಡುಗಾರರಾದ ಕೋಲಾರ ವೆಂಕಟೇಶ್, ಪಿಚ್ಚಳ್ಳಿ ಶ್ರೀನಿವಾಸ್, ಕರ್ನಲ್ ನಾರಾಯಣಸ್ವಾಮಿ, ಪಿ. ವೇಲಾಯುಧನ್, ಆರ್. ಮಾನಸಯ್ಯ, ಸಿ. ದಾಸಪ್ಪ - ಮುಂತಾದವರು ಹಳ್ಳಿಹಳ್ಳಿಗಳಲ್ಲಿ ಹಾಡಿದ ಹಾಡುಗಳು, ಆ ಹಾಡುಗಳಿಗೆ ಕಂಜರ, ಹಲಿಗೆ ಬಡಿದವರು, ಆ ಹಾಡುಗಳಿಗೆ ಕೋರಸ್ ಕೊಟ್ಟವರು, 'ಪತ್ರೆ ಸಂಗಪ್ಪನ ಕಗ್ಗೊಲೆ'ಯಂತಹ ನಾಟಕ, ಡಿಎಸ್‌ಎಸ್ ನಡೆಸುತ್ತಿದ್ದ ಅಧ್ಯಯನ ಶಿಬಿರಗಳು, ಜಾಥಾಗಳು, ಪ್ರತಿಭಟನಾ ಮೆರವಣಿಗೆಗಳು, ಆ ಮೆರವಣಿಗೆಯಲ್ಲಿ ದಲಿತರು ಕೂಗಿದ ಒಂದೊಂದು ಘೋಷಣೆ, ಡಿಎಸ್‌ಎಸ್ ನಡೆಸಿದ ಬಹಿರಂಗ ಕಾರ್ಯಕ್ರಮಗಳು, ವಿವಿಧ ಬಗೆಯ ಹೋರಾಟಗಳು, ಪಂಚಮ ಪತ್ರಿಕೆಯ ಒಂದೊಂದು ಸಂಚಿಕೆ, ಡಿಎಸ್‌ಎಸ್‌ನ ಹೋರಾಟ ಕುರಿತ ಪತ್ರಿಕಾ ವರದಿಗಳು, ಪತ್ರಿಕಾ ಹೇಳಿಕೆಗಳು, ಇವುಗಳನ್ನು ಕುರಿತು ದಲಿತ ಹೋರಾಟಗಾರರು ಪರಸ್ಪರ ತಮ್ಮ ಎದೆಯಾಳದಲ್ಲಿ ಮಾತಾಡಿಕೊಂಡ ಮಾತುಗಳು, ಇವುಗಳನ್ನು ಕುರಿತು ಶೋಷಕ ವಲಯದವರು ತಮ್ಮ ಹೊಟ್ಟೆಯ ಬೆಂಕಿಯಲ್ಲಿ ಬೇಯಿಸಿದ ಮಾತುಗಳು ಇವೆಲ್ಲವೂ ಒಂದು ಕಡೆ.

ಮತ್ತೊಂದು ಕಡೆ 70-80ರ ದಶಕದ ಇಂಡಿಯಾದ ಮತ್ತು ಕರ್ನಾಟಕದ ಭೂ ಸಂಬಂಧಗಳು, ಉತ್ಪಾದನ ಸಂಬಂಧಗಳು, ದುಡಿಮೆಯ ಸಂಬಂಧಗಳು, ಆಳುವ ವರ್ಗದ ರಾಜಕೀಯ ಬೆಳವಣಿಗೆಗಳು, ಸಾಮ್ರಾಜ್ಯಶಾಹಿಯ ಹಿತಾಸಕ್ತಿಗೆ ಪೂರಕವಾಗಿ ಮಾರುಕಟ್ಟೆಗೆ ಅಧೀನಗೊಳಿಸಿದ ಕೃಷಿಯ ಉತ್ಪಾದನಾ ವಿಧಾನಗಳು, ಕೃಷಿ ವಲಯದ ಬಿಕ್ಕಟ್ಟುಗಳು, ಇಂಡಿಯಾ ಮತ್ತು ಕರ್ನಾಟಕದ ರಾಜಕೀಯ ಮತ್ತು ಆರ್ಥಿಕ ರಂಗದ ಮೇಲೆ ಮುಂದುವರಿಯುತ್ತಲೇ ಸಾಗಿದ ವಿಶ್ವಬ್ಯಾಂಕ್, ಐಎಂಎಫ್, ಐಎಫ್‌ಡಿಐಗಳ ನೇರ ಹಿಡಿತಗಳು, ವರ್ಗ ವೈರುಧ್ಯಗಳನ್ನು ಮುಚ್ಚಿಡಲು ಹಾಗೂ ವರ್ಗಹೋರಾಟಗಳನ್ನು ಶಮನಗೊಳಿಸಲು ಭೂಮಾಲೀಕ ಪರ ಹಾಗೂ ಸಾಮ್ರಾಜ್ಯಶಾಹಿ ಪ್ರಣೀತ ಎನ್‌ಜಿಓಗಳ



ಮೂಲಕ ಹರಿಯ ಬಿಟ್ಟ ಜನವಿರೋಧಿ ಚಿಂತನೆಗಳು, ಫ್ಯೂಡಲಿಸಂನ ನಂಬಿಕೆಗಳ ವಿರುದ್ಧ ಬಂದ ಬಂಡವಾಳಶಾಹಿ ವೈಚಾರಿಕ ಆಕೃತಿಗಳು, ಡಿಎಸ್‌ಎಸ್‌ನ ಮೂಲಕ ಜಾಗೃತಿಗೊಂಡ ದಲಿತರನ್ನು ಹಾಗೂ ಡಿಎಸ್‌ಎಸ್ ಅನ್ನು ಹತ್ತಿಕ್ಕಲು ಫ್ಯೂಡಲಿಸಂ ಅನುಸರಿಸಿದ ಕಾರ್ಯತಂತ್ರಗಳು ಇವೆಲ್ಲವೂ ಒಪ್ಪಂದದಲ್ಲಿ ದಲಿತ ಸಾಹಿತ್ಯ ಎಂಬ ವಿಶಾಲ ವ್ಯಾಪ್ತಿಯಲ್ಲಿ ಬರುತ್ತವೆ. ಅದರ ವೈರುಧ್ಯ ಸಂಬಂಧಗಳ ಸಂಕೀರ್ಣ ಲೋಕವನ್ನು ಈ ಮುಂದಿನಂತೆ ಗುರುತಿಸಬಹುದು.

## ದಲಿತ ಸಾಹಿತ್ಯ ವ್ಯಾಪ್ತಿಯ ವೈರುಧ್ಯಗಳು, ಸಂಕೀರ್ಣಗಳು

* ಬೆಂಡಿಗೇರಿಯ ದಲಿತಣ್ಣನ ಊಹೆಗೂ ಮೀರಿದ ವಿಕೃತವಾದ ಆದರೆ ಮನುಷ್ಯರಾದ ಕಾರಣಕ್ಕಾದರೂ ಊಹಿಸಿಕೊಳ್ಳಬಹುದಾದ ಅನುಭವ ಒಂದು ಕಡೆಗಿದೆ; ಮೊಗಳ್ಳಿ ಗಣೇಶ್ ಅವರ 'ಬುಗುರಿ' ಕತೆಯ ಹೇಲು ಗುಂಡಿಯ ಚಿತ್ರಣ ಇನ್ನೊಂದು ಕಡೆಗಿದೆ. ಆ ಹೇಲು ಗುಂಡಿಯನ್ನು ಕುರಿತು ಬಂದಿರುವ ಸಾಹಿತ್ಯ ವಿಮರ್ಶೆಯೂ ಜೊತೆಗಿದೆ.

* ಹಂಗರವಳ್ಳಿಯಲ್ಲಿ ಹಿಂಸಾತ್ಮಕವಾಗಿ ತೊಡಿಸಿದ ಕ್ರೂರ ಅನುಭವ ಒಂದು ಕಡೆಗಿದೆ; ಕುಸುಮಬಾಲೆಯಲ್ಲಿ 16 ಎಳೆ ನೀರನ್ನು ಕುಡಿದು, ಸಂಘಟಿತಗೊಂಡು ಶಿಫ್ಟ್ ಡ್ಯೂಟಿಯ ರೂಪದಲ್ಲಿ ಹೊಡೆಯುತ್ತಿರುವವರ ಕೈಗಳನ್ನೇ ಸೋಲಿಸುತ್ತಿರುವ ಗಾರೆಸಿದ್ಮಾವನ ಸಾಹಸಮಯ ಚಿತ್ರಣ, ಜೊತೆಗೆ ಅದನ್ನು ಕುರಿತು ಬಂದಿರುವ ವಿಮರ್ಶೆ ಇನ್ನೊಂದು ಕಡೆಗಿದೆ.

* ಒಡಲಾಳ ಕೃತಿಯ ಕೊನೆಯಲ್ಲಿ ಎತ್ತಪ್ಪ ಮತ್ತು ಪೊಲೀಸರು ಒಟ್ಟಾಗಿ 'ಈ ಹುಂಜವನ್ನು ಹಿಡಿದು ಕೊಡು' ಎಂದಾಗ ಅದನ್ನು ಸಾಕವ್ವನ ಕುಟುಂಬದವರು ನಯ ನಾಜೂಕುಗಳಿಂದ ಹಿಡಿದುಕೊಡುವ ಚಿತ್ರಣ ಒಂದು ಕಡೆಗಿದೆ; ಒಡಲಾಳದ ಪುಟ್ಟಗೌರಿ ಗೋಡೆಯ ಮೇಲೆ ಬರೆದ ಯಾರ ಜಪ್ತಿಗೂ ಸಿಗದ ನವಿಲಿನ ಚಿತ್ರ ಇನ್ನೊಂದು ಕಡೆಗಿದೆ. ಅದನ್ನು ಕುರಿತು ಸಾಕವ್ವ ಹೇಳುವ ಮಾತೂ (ಅವಳ್ಯಾರೊ ಒಬ್ಬಳು ಕುಟ್ರೊ, ಬತ್ತ ಬಿಟ್ಟು ಹುಟ್ರೊ, ಶ್ಯಾಟ ನೋಡ್ಕೊತಿದ್ಲಂತೆ) ಅದರ ಜೊತೆಯಲ್ಲಿದೆ. ಪುಟ್ಟಗೌರಿ ಬರೆದ ನವಿಲನ್ನು ಕುರಿತ ಆಹಾ! ಓಹೋ! ಎಂಬ ಆಸ್ವಾದನಾ ಆರಾಧನಾ ರಮ್ಯ ವಿಮರ್ಶೆ ಕೂಡ ಅದರ ಜೊತೆಯಲ್ಲಿದೆ.

* ದಲಿತರಲ್ಲಿ ಈಗಾಗಲೇ ನೋಟೆಡ್ ಆಗಿರುವ ಹತ್ತಾರು ಸಾಹಿತಿಗಳ, ಅವರ ಕೃತಿಗಳ ಪಟ್ಟಿ, ಅವನ್ನು ಕುರಿತ ವಿಮರ್ಶೆಗಳು ಒಂದು ಕಡೆಗಿವೆ; ಈ ನೋಟೆಡ್ ಸಾಹಿತಿಗಳನ್ನು ಹೊರತುಪಡಿಸಿದ ಸುಮಾರು 180ಕ್ಕೂ ಹೆಚ್ಚು ದಲಿತ ಬರಹಗಾರರು ಹಾಗೂ ಅವರ ಕೃತಿಗಳು, ಇವಲ್ಲದೆ 200ಕ್ಕೂ ಹೆಚ್ಚಿನ ಹೋರಾಟದ ಹಾಡುಗಳು ಮತ್ತೊಂದು ಕಡೆಗಿವೆ.

* 'ದೊಡ್ಡ ಗೌಡರ ಬಾಗಿಲೀಗೆ ನಮ್ಮ ಮೂಳೆಯ ತ್ವಾರಣ, ನಮ್ಮ ಜನಗಳ ಕಾಲು ಕೈಯಿ ಕಂಬ ಅವರ ಹಟ್ಟಿಗೆ' ಎಂಬ ಸಿದ್ದಲಿಂಗಯ್ಯನವರ ಹಾಡಿನ ವಾಸ್ತವ ಒಂದು ಕಡೆಗಿದೆ; ಇದೇ ಪದವನ್ನು ಕುರಿತು 'ಉತ್ಪ್ರೇಕ್ಷೆ ಅಲಂಕಾರ' ಎಂಬುದಾಗಿ ವಿಮರ್ಶೆ ಎಂಬ ಹೆಸರಿನಲ್ಲಿ ಆದೇಶ ಮಾಡಿರುವ ಫ್ಯೂಡಲ್ ಹೇಳಿಕೆ ಅದರ ಜೊತೆಯಲ್ಲಿದೆ. ತಲತಲಾಂತರಗಳಿಂದ ಭೂಮಾಲೀಕರ ದರ್ಪ, ದೌರ್ಜನ್ಯಗಳಿಗೆ ಕ್ರೂರವಾಗಿ ಕೊಲೆಯಾಗಿರುವ ದುರಂತ ಇತಿಹಾಸ ಇಂಡಿಯಾದ ಕೇರಿಕೇರಿಗಳಲ್ಲಿದೆ.

* 'ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ನನಗೆ ಸಾಹಿತ್ಯಕ ಪ್ರೇರಣೆ' ಎಂದು ದೇವನೂರು ಅವರು, 'ಕುವೆಂಪು ಅವರ ಕಾವ್ಯ ನನ್ನ ಕಾವ್ಯಕ್ಕೆ ಪ್ರೇರಣೆ' ಎಂದು ಸಿದ್ದಲಿಂಗಯ್ಯನವರು ಹೇಳಿರುವ ಹೇಳಿಕೆಗಳು ಒಂದು ಕಡೆಗಿವೆ; ಕುವೆಂಪು ಅವರು 'ಒಡೇರ ದಿಣ್ಣೆಯ ಮೇಲೆ ನಿಂತು ದಲಿತರನ್ನು ಚಿತ್ರಿಸಿದ್ದಾರೆ' ಎಂಬ ಬಿ. ಕೃಷ್ಣಪ್ಪನವರ ವಿಮರ್ಶಾ ಲೇಖನದ ಧೋರಣೆ ಮತ್ತೊಂದು ಕಡೆಗಿದೆ.

* 'ದೇವನಹಳ್ಳಿಯಲ್ಲಿ ನಿರ್ಮಾಣವಾಗಲಿರುವ ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಅಂಬೇಡ್ಕರ್ ಹೆಸರಿಡಿ' ಎಂಬ ಡಿಎಸ್‌ಎಸ್‌ನ ಹಕ್ಕೊತ್ತಾಯ ಒಂದು ಕಡೆಗಿದೆ; ಕೂಲಿಗೆ ಹೋಗುವುದಕ್ಕಾಗಿ ಬಸ್ ಹತ್ತುವಾಗ ಜೇಬಲ್ಲಿ ನಯಾಪೈಸೆ ಇಲ್ಲದ ಕೂಲಿಕಾರ ದಲಿತರ ಕ್ರೂರ ಪರಿಸ್ಥಿತಿ ಮತ್ತೊಂದು ಕಡೆಗಿದೆ.

* ರಾಮಕೃಷ್ಣ ಹೆಗಡೆ ಅಧಿಕಾರವನ್ನು 'ಹೇಲಿನ ರಾಜ್ಯ'ವೆಂದು ಹಾಡಿದ ಹೋರಾಟದ ಹಾಡು, ತುರ್ತು ಪರಿಸ್ಥಿತಿ ಕರಾಳ ರಾಣಿಯ ಕತೆಯನ್ನು ಹೇಳ್ತೀವಿ, ಬಡವರ ಸಾವಿರ ಸಂಕಟವನ್ನು ಜೊತೆಯಲೆ ಹೇಳ್ತೀವಿ' ಎಂಬ ಸಿದ್ದಲಿಂಗಯ್ಯನವರ ಹಾಡು ಒಂದು ಕಡೆಗಿವೆ; ಊರು ಕೇರಿ ಕೃತಿಯನ್ನು ಅದೇ ರಾಮಕೃಷ್ಣ ಹೆಗಡೆಯವರಿಗೆ ಅರ್ಪಿಸಿದ ಸಂಗತಿ ಮತ್ತೊಂದು ಕಡೆಗಿದೆ.

* 'ಕುಸುಮಬಾಲೆ ಆಡುಮಾತಿನ ಮಹಾಕಾವ್ಯ' ಎಂಬ ರಮ್ಯ ವಿಮರ್ಶೆ ಒಂದು ಕಡೆಗಿದೆ; 'ಕುಸುಮ ಬಾಲೆ ದಲಿತರ ನೇಣು ಗಂಬ' ಎಂಬ ದಲಿತ ವಿಮರ್ಶೆ ಮತ್ತೊಂದು ಕಡೆಗಿದೆ.

'ಊರು ಕೇರಿ 'ಬಡವರ ನಗುವಿನ ಶಕ್ತಿ' ಎಂಬ ರಮ್ಯ ವಿಮರ್ಶೆ ಒಂದು ಕಡೆಗಿದೆ; 'ಇಕ್ರಲಾ ವದಿರ್ಲಾ!' ಎಂಬುದು ಕವನವೇ ಅಲ್ಲ ಎಂಬ ಫ್ಯೂಡಲ್ ಆದೇಶ ಅಲಿಯಾಸ್ ಅಸಹನೆ ಮತ್ತೊಂದು ಕಡೆಗಿದೆ.

* 'ಜಾಗತೀಕರಣದಿಂದ ದಲಿತರು ವಿಮೋಚನೆ ಪಡೆಯಬಲ್ಲರು. ಖಾಸಗೀಕರಣದಲ್ಲೂ ದಲಿತರಿಗೆ ಮೀಸಲಾತಿ ಕೊಡಿ' ಎಂಬ ಹೇಳಿಕೆಗಳು ಒಂದು ಕಡೆಗಿವೆ; ಸಾಮ್ರಾಜ್ಯಶಾಹಿಯ ಜಾಗತೀಕರಣವು ದಲಿತರ ಹಸಿವು ಮತ್ತು ಅಪಮಾನಗಳನ್ನು ಜಾಗತೀಕರಣಗೊಳಿಸಿರುವ ಗಂಭೀರ ಪರಿಸ್ಥಿತಿ ಮತ್ತೊಂದು ಕಡೆಗಿದೆ.



* ಅಕ್ಷರ ಮತ್ತು ಔಪಚಾರಿಕ ಶಿಕ್ಷಣವನ್ನು ವೈಭವೀಕರಿಸಿರುವ ಎಚ್. ಗೋವಿಂದಯ್ಯನವರ 'ಅ ಆ ಮತ್ತು...' ಎಂಬ ಕವನ ಒಂದು ಕಡೆಗಿದೆ; ಔಪಚಾರಿಕ ಶಿಕ್ಷಣವನ್ನು ವಿಮರ್ಶಿಸಿರುವ 'ದಿಲ್ಲಿ ದಿಲ್ಲಿ ಅಂತೀರಿ ಅದು ಎಂತಹ ದಿಲ್ಯಣ್ಣ' ಎಂಬ ಆರ್. ಮಾನಸಯ್ಯನವರ ಹೋರಾಟದ ಹಾಡು ಹಾಗೂ 'ವಿದ್ಯಾರ್ಥಿ ಸೋದರನೆ ಮೋಜಿನಿಂದ ತಿರುಗುವನೆ ಮೋಜಿನ ದಾರಿ ಬೇಡಯ್ಯೊ' ಎಂಬ ಸಿ. ದಾನಪ್ಪ ಅವರ ಹೋರಾಟದ ಹಾಡುಗಳು ಮತ್ತೊಂದು ಕಡೆಗಿವೆ. (ಅನುಬಂಧ - 2 ನೋಡಿ)

* ಡಾ. ಅಂಬೇಡ್ಕರರನ್ನು ಕುರಿತು, "ನೀ ಹೋದ ಮರುದಿನ ಮೊದಲಂಗೆ ನಮ್ಮ ಬದುಕು ಆಗ್ಯಾದೊ ಬಾಬಾ ಸಾಹೇಬ ನಿನ್ನಂಗ ದುಡಿದವರು ಕಳಕಳಿಯ ಪಡುವವರು ಇನ್ನೂ ತನ್ನ ಬರಲಿಲ್ಲ ಒಬ್ಬ' ಎಂಬ ಚನ್ನಣ್ಣ ವಾಲೀಕಾರರ ಹಾಡು ಒಂದು ಕಡೆಗಿದೆ; 'ಬಂಗಾರದ ಕೋಳವೊಕ್ಕ ಮಹಾ ಬೌದ್ಧ ಭಿಕ್ಷುವೆ... ಮಳೆಯನೇಕೆ ತಾರಲಿಲ್ಲ ಮಿಂಚು ಮಾಯೆ ಅಷ್ಟೆಯೆ' ಎಂಬ ಸಿದ್ದಲಿಂಗಯ್ಯನವರ ಹಾಡು ಮತ್ತೊಂದು ಕಡೆಗಿದೆ.

* 'ಮಾರ್ಕ್ಸ್‌ನ ಗುಲಾಮ ಏಕೆ ಸಿದ್ದಲಿಂಗು? ಅರಿತಿಲ್ಲವೇನು ಲೋಹಿಯಾ ನೀತಿ ನೀನು? ಕುಂಡದೊಳಗಿನ ಗಿಡವಾಗಬೇಡ ಎಂದೂ, ಈ ನೆಲದ ಒಳಗೆ ಬೇರು ಬಿಟ್ಟು ಆಗಬೇಕು ಆಲ ನೀನು' ಎಂಬ ಫ್ಯೂಡಲ್ ವೈಚಾರಿಕ ಉಪದೇಶ ಒಂದು ಕಡೆಗಿದೆ; ದೇವನೂರರ 'ಅಮಾಸ' ಕತೆಯಲ್ಲಿ ಕುಡಿದ ಅಮಲಿನಲ್ಲಿ ರೈಲ್ವೆ ಗ್ಯಾಂಗ್‌ಮನ್ ಸಿದ್ದಪ್ಪ 'ಗೌಡರನ್ನು, ಕಂಟ್ರಾಕ್ಟರನ್ನು ನೆನಸಿಕೊಂಡು, ಕಮ್ಯುನಿಸಮ್ ಬರಬೇಕು, ಆಗಲೆ ನಿಮಗೆಲ್ಲ ಬುದ್ಧಿ ಬರೋದು' ಎಂದು ಲೈಟು ಕಂಬಕ್ಕೆ ಒದೆಯುವ ಚಿತ್ರಣ ಇನ್ನೊಂದು ಕಡೆಗಿದೆ.

* 'ನಾನು ಗಾಂಧಿ ಸಿನಿಮಾ ನೋಡಿದೆ, ಆಕಾಶಕ್ಕೆ ಮೂರು ಗೇಣು ಕಮ್ಮಿ' ಎಂಬ ದೇವನೂರರ ಲೇಖನ ಒಂದು ಕಡೆಗಿದೆ; 'ಮುಳ್ಳಿನವ ಬದುಕಿಗೆ ಹೂವಿನ ಹೆಸರಿಟ್ಟ, ಕ್ರಾಂತಿಯ ಕರಗಿಸಿ ಶಾಂತಿ ಬೀಜವ ನೆಟ್ಟ' ಎಂಬ ಗಾಂಧಿಯನ್ನು ಕುರಿತ ಆರ್. ಮಾನಸಯ್ಯನವರ ಹೋರಾಟದ ಹಾಡು ಮತ್ತೊಂದು ಕಡೆಗಿದೆ. (ಅನುಬಂಧ-3 ನೋಡಿ)

* ದಲಿತರಲ್ಲೆ ಶ್ರೀಮಂತರು, ರಾಜಕಾರಿಣಿಗಳು, ದಲಿತ ಅಧಿಕಾರಿಗಳು ಬೆಂಗಳೂರಲ್ಲೇ ನೆಲೆಯೂರಿರುವ ವಾಸ್ತವ ಒಂದು ಕಡೆಗಿದೆ; 'ಈ ಗುಲಾಬಿ ನಗರದಾಗ ಗುಡಿಸಲು ಯಾಕಂತ ಬ್ಯಾಡೆಂದು ಬೆಂಗಳೂರು ದಬ್ಬಿತಲ್ಲ' ಎಂಬ ಆರ್. ಮಾನಸಯ್ಯನವರ ಹೋರಾಟದ ಹಾಡು ಮತ್ತೊಂದು ಕಡೆಗಿದೆ. (ಅನುಬಂಧ - 4 ನೋಡಿ)

* 'ಜಾತಿ ಬಿಟ್ಟು ದೇಶ ಕಟ್ಟು' ಎಂಬ ಡಿಎಸ್‌ಎಸ್‌ನ ಘೋಷ ವಾಕ್ಯ ಒಂದು ಕಡೆಗಿದೆ; 'ದೇಶ ಬಿಟ್ಟು ಜಾತಿ ಕಟ್ಟು' ಎಂಬ ಎಸ್‌ಎಸ್‌ಡಿಯ ಘೋಷ ವಾಕ್ಯ ಮತ್ತೊಂದು ಕಡೆಗಿದೆ.

* 'ಅಂಬೇಡ್ಕರರೇ ಕಣ್ಣು, ದಿಕ್ಕು, ದಾರಿ' ಎಂಬ ಡಿಎಸ್‌ಎಸ್‌ನ ನಿಲುವು ಒಂದು ಕಡೆಗಿದೆ; 'ಅಂಬೇಡ್ಕರ್ ಆಲೋಚನೆ ಸ್ಫೂರ್ತಿಯಾಗಲಿ; ಮಾರ್ಕ್ಸ್‌ವಾದ ಮಾರ್ಗವಾಗಲಿ' ಎಂಬ ಡಿಎಸ್‌ಎಸ್ ಸಂಯೋಜಕ ಸಮಿತಿಯ ನಿಲುವು ಮತ್ತೊಂದು ಕಡೆಗಿದೆ.

* "1ನೇ ತರಗತಿಯಿಂದಲೇ ದಲಿತರಿಗೆ ಇಂಗ್ಲಿಶ್ ಕಲಿಸಿ' ಎಂಬ ಹಕ್ಕೊತ್ತಾಯ ಒಂದು ಕಡೆಗಿದೆ; 'ಹಾಲು ಕುಡಿವ ಕೂಸಾ ಕೂಲಿಗೆ ಹೋಗುತಾದ ದಿವಸ' ಎಂಬ ಮಾನಸಯ್ಯನವರ ಹೋರಾಟದ ಹಾಡಿನ ಕರಾಳ ಪಾಡು ಹಾಗೂ 'ಸ್ಕೂಲಿಗೆ ಮಗನೋದ್ರೆ ಕೂಳ್ಯಾರು ಹಾಕ್ತಾರೆ' ಎಂಬ ಸಿ. ದಾನಪ್ಪ ಅವರ ಹೋರಾಟದ ಹಾಡಿನ ಕರಾಳ ವಾಸ್ತವ ಮತ್ತೊಂದು ಕಡೆಗಿದೆ. (ಅನುಬಂಧ-5 ನೋಡಿ)

'ಮನುಧರ್ಮಶಾಸ್ತ್ರ ಎಂಬ ಪುಸ್ತಕವನ್ನು ಸುಡಬೇಕೆಂಬ' ದಲಿತರ ಮೂಲಕ ಪ್ರಕಟವಾಗುತ್ತಿರುವ ಭೂಮಾಲೀಕರ ಪರ ಗ್ರಾಂಥಿಕ ಬ್ರಾಹ್ಮಣ ವಿರೋಧ ಒಂದು ಕಡೆಗಿದೆ; 'ಕೊಟ್ಟಿದ್ದು ಸಾಕು ಹೆಂಡ ಕೋಳಿ - ದಲಿತರು ನಿಂತಿದ್ದಾರೆ ಭೂಮಿ ಕೇಳಿ' ಎಂದು ತಮ್ಮ ಮೂಲಭೂತ ಸಮಸ್ಯೆಯನ್ನು ಭೂ ಸಂಬಂಧದಲ್ಲೇ ಗುರುತಿಸಿರುವ ದಲಿತರ ವರ್ತಮಾನದ ವಾಸ್ತವದ ಸವಾಲು ಮತ್ತೊಂದು ಕಡೆಗಿದೆ.

'ಸುಬ್ಬು ಹೊಲೆಯಾರ್' 'ಬಸಪ್ಪ ಮಾದರ್' ಎಂಬ ಜಾತಿಸೂಚಕ ವ್ಯಕ್ತಿ ನಾಮಗಳನ್ನು ಇಟ್ಟುಕೊಳ್ಳುವ ಛಾತಿ ಒಂದು ಕಡೆಗಿದೆ; ಬಾಡಿಗೆ ಮನೆ ಪಡೆಯಲು ಕೆಲವರು ದಲಿತ ನೌಕರರು ದಲಿತೇತರ ಜಾತಿಯ ಹೆಸರೇಳುವ ಅನಿವಾರ್ಯ ಉಪಾಯ ಇನ್ನೊಂದು ಕಡೆಗಿದೆ; ದಲಿತರ ಹೆಸರೇಳಿ ಸುಳ್ಳು ಜಾತಿ ಪತ್ರ ಪಡೆದು ಸರಕಾರಿ ಸೌಲಭ್ಯಗಳಲ್ಲಿ ದಲಿತರ ಪಾಲನ್ನು ಅನ್ಯಾಯವಾಗಿ ಪಡೆಯುತ್ತಿರುವ ವಾಸ್ತವ ಇದರ ಜೊತೆಯಲ್ಲೇ ಇದೆ.

'ದಲಿತರ ಭೂಮಿ ದಲಿತೇತರರಿಗೆ ನೋಂದಾವಣೆ ಆಗುವಂತಿಲ್ಲ' ಎಂಬ ಸರಕಾರಿ ಕಾನೂನು ಒಂದು ಕಡೆಗಿದೆ; ಕೂಲಿ ದಲಿತರ ತುಂಡು ಭೂಮಿಗಳನ್ನು ಭೂಮಾಲೀಕರು ಬ್ಯಾಂಕಿಗಿಟ್ಟು ಸಾಲ ಮಾಡಿ, ಆ ಸಾಲವನ್ನು ಉದ್ದೇಶಪೂರ್ವಕವಾಗಿಯೇ ಕಟ್ಟದೆ ಭೂಮಿ ಹರಾಜಾಗುವಂತೆ ಮಾಡಿ, ಹರಾಜಿನ ಮೂಲಕ ಆ ತುಂಡು ಭೂಮಿಯನ್ನು ಖರೀದಿಸಿ, ಸರಕಾರಿ ಕಾನೂನನ್ನು ಲೇವಡಿ ಮಾಡುತ್ತಿರುವ ಭೂಮಾಲೀಕರ ಕಾನೂನುಗಳ ಅಟ್ಟಹಾಸ ಮತ್ತೊಂದು ಕಡೆಗಿದೆ.

'ಗ್ರಾಮ ದೇವತೆಯ ಆಚರಣೆಗಳನ್ನು ಪರಿಷ್ಕರಿಸಿ ನಮಗೆ ಬೇಕಾದ ಒಳನೋಟಗಳನ್ನು ಪಡೆಯಬಹುದು ಹಾಗೂ ಗ್ರಾಮ ದೇವತೆಗಳ ಆಚರಣೆಯಲ್ಲಿ ಸಮಷ್ಟಿ ಪ್ರಜ್ಞೆಯ ಸೃಜನಶೀಲತೆಯ ಅರಿವಿನ ವಿಕಾಸದ ದಾರಿಯಿದೆ' ಎಂಬ ಅಧ್ಯಯನದ ಹೇಳಿಕೆಗಳು ಒಂದು ಕಡೆಗಿವೆ; ನಾಡಿನ ಹಳ್ಳಿ ಹಳ್ಳಿಗಳಲ್ಲಿ ಊರ ದೇವರ ಹಬ್ಬ ಜಾತ್ರೆಯಲ್ಲಿ ದಲಿತರ ಮೇಲೆ



ನಡೆಸಲಾಗುತ್ತಿರುವ ಹಲ್ಲೆ, ಕೊಲೆಗಳು ಮತ್ತೊಂದು ಕಡೆಗಿವೆ. ಇವತ್ತಿಗೂ ದಲಿತರನ್ನು ಹಳ್ಳಿಗಳ ಮೇಲು ಜಾತಿಯವರು ದೇವಸ್ಥಾನಗಳಿಗೆ ಪ್ರವೇಶ ನೀಡದಿರುವ ಕ್ರೂರ ವಾಸ್ತವ ಅದರ ಜೊತೆಯಲ್ಲಿದೆ.

ಸಾಮ್ರಾಜ್ಯಶಾಹಿಗಳ ಹಾಗೂ ಎನ್‌ಜಿಓಗಳ ಲೆಕ್ಕಾಚಾರಕ್ಕೆ ಆಹಾರ ಒದಗಿಸಲು ಮಾತೆತ್ತಿದರೆ ದಲಿತ ಮತ್ತು ದಲಿತೇತರ ವೈಚಾರಿಕ ಚಿಂತನೆಯಲ್ಲಿ 'ಬ್ರಾಹ್ಮಣಶಾಹಿ, ವೈದಿಕಶಾಹಿ, ಪುರೋಹಿತಶಾಹಿ' ಎಂಬ ಯಾಂತ್ರಿಕ ವಿರೋಧಗಳು ಒಂದು ಕಡೆಗಿವೆ; ದಲಿತ ಪುರುಷರು ಮತ್ತು ಬ್ರಾಹ್ಮಣ ಮಹಿಳೆಯರ ನಡುವೆ ಸಾಕಷ್ಟು ಮದುವೆಗಳು ನಡೆದಿರುವ ಮತ್ತು ನಡೆಯುತ್ತಿರುವ ನಿಜ ವಾಸ್ತವ ನಮ್ಮ ಮುಂದಿದೆ. ಆದರೆ ಈ ರೀತಿಯ ಮದುವೆಯ ಸಂಬಂಧಗಳು ದಲಿತರು ಮತ್ತು ಬ್ರಾಹ್ಮಣೇತರ ಮಧ್ಯಮ ಜಾತಿಗಳ ನಡುವೆ ನಡೆದಿಲ್ಲ ಎಂಬ ಕ್ರೂರ ಹಾಗೂ ವಿಕಟ ವಾಸ್ತವವೂ ಇದರ ಜೊತೆಯಲ್ಲಿದೆ. ಒಂದು ವೇಳೆ ದಲಿತರು ಬ್ರಾಹ್ಮಣೇತರ ಮಧ್ಯಮ ಜಾತಿಯವರೊಂದಿಗೆ ಮದುವೆಯ ಪ್ರಯತ್ನ ನಡೆಸಿದ್ದೇ ಆದರೆ ಆಗ ದಲಿತರ ಕೇರಿಗಳು ಬೆಂಕಿಗೆ ಆಹುತಿಯಾಗುವ, ಅಷ್ಟೇ ಅಲ್ಲ ದಲಿತರ ಹೆಣಗಳೂ ಉರುಳುವ ಭೂಮಾಲೀಕರ ವಿಕೃತ ಕ್ರೌರ್ಯ ಮತ್ತೊಂದು ಕಡೆಗಿದೆ. ದೇವನೂರರ 'ಕುಸುಮಬಾಲೆ'ಯಲ್ಲಿ ಯಾರಿಗೂ ಗೊತ್ತಾಗದಂತೆ ಚೆನ್ನನ ಕೊಲೆಯಾಗುವ ಸಾಹಿತ್ಯಿಕ ಪ್ರಾತಿನಿಧಿಕ ಅಂಶ ಇದರ ಜೊತೆಗಿದೆ.

ಮೇಲಿನ ವಿವರಣೆಗಳು ವೈರುಧ್ಯಗಳನ್ನು ಯಾಂತ್ರಿಕವಾಗಿ ಜೋಡಿಸಿರುವ ಬೌದ್ಧಿಕ ಕಸರತ್ತಿನ ಪಟ್ಟಿಯಲ್ಲ. ಕಳೆದ 30 ವರುಷಗಳಿಂದ ಇಲ್ಲಿಯವರೆಗಿನ ದಲಿತರ ಇರುವಿಕೆಯ ಸ್ತರ ವಿನ್ಯಾಸಗಳು, ಆಗುವಿಕೆಗಾಗಿ ಅವರು ನಡೆಸಿದ ಸಾಧ್ಯತೆಗಳ ಸಂಕೀರ್ಣ ನಡಿಗೆ, ಭೂಮಾಲೀಕ ವರ್ಗ ದಲಿತರನ್ನು ದಿಕ್ಕು ತಪ್ಪಿಸಿರುವ, ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ನಡೆಸಿಕೊಂಡಿರುವ ಕ್ರೂರ ವಿಧಾನಗಳ ಒಟ್ಟು ನೋಟ ಇದು. ಈ ಮೇಲಿನ ಸಂಕೀರ್ಣ ಬೆಳವಣಿಗೆಗಳನ್ನು ಗಮನಿಸಿದರೆ 'ದಲಿತ ಸಾಹಿತ್ಯ'ಕ್ಕೆ 'ಒಂದು ಸಾಹಿತ್ಯಕ ಚೌಕಟ್ಟು' ಹಾಕುವುದು ಎಷ್ಟು ಕಷ್ಟ ಎಂಬುದು ತಿಳಿಯುತ್ತದೆ. ದಲಿತ ಸಮೂಹ, ದಲಿತರ ಸ್ತರ ವಿನ್ಯಾಸಗಳು, ದಲಿತ ಸಾಹಿತ್ಯ ಹಾಗೂ ದಲಿತ ಹೋರಾಟ ಇವುಗಳನ್ನು ಪ್ರತ್ಯೇಕ ಮಾಡಲು ಬರುವುದಿಲ್ಲ. ಇವುಗಳ ನಡುವಿನ ವೈರುಧ್ಯಾತ್ಮಕ ಚಲನಶೀಲತೆಗಳೇ ಒಂದು ಕಡೆಗೆ 'ದಲಿತ ಸಾಹಿತ್ಯ'ವನ್ನೂ ಮತ್ತೊಂದು ಕಡೆಗೆ 'ದಲಿತ ರಾಜಕೀಯ ದೃಷ್ಟಿಕೋನವನ್ನೂ ರಚಿಸಲು ನಮ್ಮನ್ನು ಪ್ರಜ್ಞಾಪೂರ್ವಕವಾಗಿ ಒತ್ತಾಯಿಸುತ್ತಿವೆ. ಹಾಗಾಗಿ 'ದಲಿತ ಸಾಹಿತ್ಯ'ವು ಪಡೆದುಕೊಳ್ಳುವ ವ್ಯಾಪ್ತಿ ಮತ್ತು ಅದರ ಸಂಕೀರ್ಣ ಚಲನಶೀಲತೆಗಳು ದಲಿತರ ಸಾಮಾಜಿಕ ಪಾತಾಳಿಯ ಪಾತಾಳಕ್ಕೆ ನಮ್ಮನ್ನು ಕರೆದುಕೊಂಡು ಹೋಗುತ್ತವೆ. ದಲಿತರ ಒಡಲಾಳದ ಹಸಿವು, ಅಪಮಾನ, ಅಸಹಾಯಕತೆ, ಪ್ರತಿರೋಧ, ಕನಸು ಇವೆಲ್ಲವನ್ನೂ ತೋರಿಸುತ್ತವೆ.



ಇವುಗಳಿಗೆ ಕಾರಣವಾಗಿರುವ ಭೂ ಸಂಬಂಧಗಳನ್ನು ಹಾಗೂ ದುಡಿಮೆಯ ಸಂಬಂಧಗಳನ್ನು ಮುಖ್ಯವೆಂದು ಎತ್ತಿ ತೋರಿಸುತ್ತವೆ. ಜಮೀನ್ದಾರಿ ವ್ಯವಸ್ಥೆ ಮತ್ತು ಸಾಮ್ರಾಜ್ಯಶಾಹಿ ವ್ಯವಸ್ಥೆಯ ವಿಷ ವರ್ತುಲದಲ್ಲಿ ದಲಿತರ ನಿಜವಾದ ಸಮಸ್ಯೆಗಳಿವೆ ಎಂಬುದನ್ನು ಅವು ಮನವರಿಕೆ ಮಾಡಿಕೊಡುತ್ತವೆ. ಅಲ್ಲಿ ಭೂಮಾಲೀಕಪರ ಬ್ರಾಹ್ಮಣ ವಿರೋಧ ಇಲ್ಲವೆಂಬುದನ್ನು ಅವು ಖಚಿತವಾಗಿ ತಿಳಿಸುತ್ತವೆ. ಬಂಡವಾಳಶಾಹಿ ಪ್ರಜಾಪ್ರಭುತ್ವದಲ್ಲಿ ದಲಿತರ ಸಮಸ್ಯೆಗಳು ಪರಿಹಾರವಾಗುವುದಿಲ್ಲ ಎಂಬುದನ್ನು ಅವು ಸೂಚಿಸುತ್ತವೆ.

## ಎರಡು ನೋಟ ಕ್ರಮಗಳು

ದಲಿತ ಸಮೂಹವನ್ನು ಮತ್ತು ಅದರ ಸಮಸ್ಯೆಗಳನ್ನು ಕೆಳಗಿನಿಂದ ಪರಿಭಾವಿಸುವುದು ಒಂದು ಕ್ರಮ; ಅದನ್ನು ಮೇಲಿನಿಂದ ನೋಡುವುದು ಇನ್ನೊಂದು ಕ್ರಮ. ಸದ್ಯ ದಲಿತ ಸಮೂಹವನ್ನು ಮೇಲಿನಿಂದ ಪರಿಭಾವಿಸುವ ವಿಧಾನ ಮುಂಚೂಣಿಯಲ್ಲಿದೆ; ಅದು ಶೋಷಕರಿಗೆ ಮತ್ತು ಆಳುವ ವರ್ಗದವರಿಗೆ ಬಹಳ ಜನಪ್ರಿಯವಾಗಿದೆ. 'ಅಹಿಂದ' ಮತ್ತು 'ಪರ್ಯಾಯ ರಾಜಕಾರಣ' ಈ ಎರಡೂ ಕಡೆ ದಲಿತರನ್ನು ಕೇವಲ ಮೇಲಿನಿಂದ ನೋಡಲಾಗುತ್ತಿದೆ. ದಲಿತರನ್ನು ಸ್ಟೇಜಿನ ಮೇಲೆ, ಬಣ್ಣದ ಕುರ್ಚಿಗಳ ಮೇಲೆ, ಸ್ಟಾರ್ ಹೋಟೆಲ್‌ಗಳ ಬೈಟಕ್‌ಗಳಲ್ಲಿ, ಐಬಿಗಳಲ್ಲಿ, ಬೆಂಗಳೂರಿನ ಎಸಿ ರೂಮುಗಳಲ್ಲಿ, ಕಾನ್ವೆಂಟ್‌ಗಳಲ್ಲಿ, ಮೆಡಿಕಲ್ ಹಾಗೂ ಎಂಜಿನಿಯರಿಂಗ್ ಕಾಲೇಜುಗಳಲ್ಲಿ ನೋಡಲಾಗುತ್ತಿದೆ. ಅದರಿಂದಲೇ ಈ ಸ್ಥಾನಗಳಲ್ಲಿ ಯಾವ ದಲಿತರು ಭೂಮಾಲೀಕರಿಗೆ ಮತ್ತು ಭೂಮಾಲೀಕಪರ ಶಕ್ತಿಗಳಿಗೆ ಸಿಗುತ್ತಾರೊ ಅವರನ್ನೇ ದಲಿತರೆಂದೂ, ಅವರೆಲ್ಲರೂ ಹಿಂದುಳಿದ ಜಾತಿಗಳ ರಾಜಕೀಯದ ಜೊತೆಯಲ್ಲಿ ಇರುತ್ತಾರೆ ಮತ್ತು ಇರಬೇಕೆಂದು ಬಯಸಲಾಗುತ್ತಿದೆ. ಆದರೆ ಅದೇ ಭೂಮಾಲೀಕರ ಜಮೀನುಗಳಲ್ಲಿ ಕೂಲಿ ಮಾಡುವ, ಸೆಗಣಿ ಹೊರುವ, ಬೀದಿ ಗುಡಿಸುವ ದಲಿತರು ಇವರ ಕಣ್ಣಿಗೆ ಕಾಣುವುದೇ ಇಲ್ಲ. ಇಂತಹ ದುಡಿವ ದಲಿತರನ್ನು ಉದ್ದೇಶಪೂರ್ವಕವಾಗಿ ಮುಚ್ಚಿಟ್ಟು, ದಲಿತ ಸಾಹಿತಿ, ಚಿಂತಕರನ್ನು ಹೋಟೆಲ್‌ಗಳಲ್ಲಿ ಕೂರಿಸಿಕೊಂಡು, ವೇದಿಕೆಗಳ ಮೇಲೆ ಕೂರಿಸಿಕೊಂಡು ಹಿಂದುಳಿದ ಜಾತಿಗಳೊಂದಿಗೆ ಆಳುವ ವರ್ಗದ ರಾಜಕಾರಣಕ್ಕಾಗಿ ಒಂದಾಗಬೇಕೆಂದೂ, ಇದಕ್ಕೆ ಇಡಿಯಾಗಿ ಇಡೀ ದಲಿತ ಸಮೂಹವೇ ಎದ್ದು ಬಂದಿದೆ ಎಂದೂ ಉನ್ಮಾದದ ಮಾತುಗಳನ್ನು ಅಗ್ಗವಾಗಿ ಆಡಲಾಗುತ್ತಿದೆ. ಶೋಷಿತರ ಹಿತಾಸಕ್ತಿಗಳಿಗೆ ದಲಿತರನ್ನು ಮೇಲಿನಿಂದ ನೋಡಲಾಗುತ್ತಿದೆ. ಆದರೆ ನಾವೀಗ ದಲಿತರ ಹಿತಾಸಕ್ತಿಗಾಗಿ ದಲಿತರನ್ನು ಕೆಳಗಿನಿಂದ ನೋಡಬೇಕಾಗಿದೆ. ಒಂದು ಚಾರಿತ್ರಿಕ ಉದಾಹರಣೆಯ ಮೂಲಕ ಇದನ್ನು ಸಮರ್ಥವಾಗಿ ವಿವರಿಸಬಹುದು. ಡಿಎಸ್‌ಎಸ್ ಕಳೆದ 30 ವರುಷಗಳ ಅವಧಿಯಲ್ಲಿ ನಾಡಿನಾದ್ಯಂತ ಅನೇಕ ಭೂ ಹೋರಾಟಗಳನ್ನು ನಡೆಸಿತು. ವಿಚಿತ್ರವೆಂದರೆ ಈ ಭೂ



ಹೋರಾಟಗಳನ್ನು ಜಿಲ್ಲಾ ಸಮಿತಿಯಾಗಲಿ, ರಾಜ್ಯ ಸಮಿತಿಯಾಗಲಿ ಮೊದಲೆ ಒಂದು ಕಾರ್ಯಕ್ರಮವಾಗಿ ಯೋಜಿಸಿರಲಿಲ್ಲ. ಇವೆಲ್ಲವೂ ಗ್ರಾಮಾಂತರ ಪ್ರದೇಶಗಳ ಭೂ ಸಂಬಂಧಗಳಿಂದಾಗಿ ಭೂಮಾಲೀಕರಿಂದ ಅನ್ಯಾಯಕ್ಕೆ ಒಳಗಾದ ದಲಿತರಿಂದ, ದಲಿತ ಕಾರ್ಯಕರ್ತರ ನೆಲೆಯಿಂದ ಹುಟ್ಟಿದವು. ಇಂಡಿಯಾದ ಮಹಾನ್ ನಕ್ಸಲ್‌ಬರಿ ಹೋರಾಟ ಕೂಡ ಕೇಂದ್ರ ಸಮಿತಿಯ ಕರೆಯಾಗಿರಲಿಲ್ಲ ಎಂಬುದು ಬಹಳ ಮುಖ್ಯ ಸಂಗತಿ. ಇದನ್ನು ಯಾಕೆ ಇಲ್ಲಿ ಒತ್ತಿ ಹೇಳಬೇಕಾಯಿತೆಂದರೆ, ಕೆಲವೇ ಕೆಲವು ದಲಿತ ಸಾಹಿತ್ಯ ಕೃತಿಗಳ ಆಧಾರದಲ್ಲಿ ಮಾತ್ರ ದಲಿತ ಸಾಹಿತ್ಯವನ್ನು ಇಡಿಯಾಗಿ ಗ್ರಹಿಸಲು ಸಾಧ್ಯವಿಲ್ಲ. ದಲಿತರ ಅಸಂಖ್ಯ ಬಿಕ್ಕಟ್ಟುಗಳು, ಹತಾಶೆಗಳು, ತಲ್ಲಣಗಳು, ಕನಸುಗಳು, ಭರವಸೆಗಳು, ತರಾವರಿ ಪ್ರತಿರೋಧಗಳು ಇವುಗಳ ಮೂಲಕ ದಲಿತರನ್ನು ಕೆಳಗಿನಿಂದ ನೋಡಬೇಕು. ದಲಿತರ ಹಿತಾಸಕ್ತಿಗಾಗಿ ನೋಡಬೇಕು. ದುಡಿವವರ ಕಣ್ಣುಗಳ ಮೂಲಕ ನೋಡಬೇಕು. ದಲಿತರನ್ನು ದಲಿತ ನಾಯಕರ ಮೂಲಕವೋ, ದಲಿತ ಸಾಹಿತಿಗಳ ಮೂಲಕವೋ, ದಲಿತ ರಾಜಕಾರಣಿಗಳ ಮೂಲಕವೋ ನೋಡಬಹುದು.

## ಕವನ ಯಾಕಲ್ಲ?

ಸಿದ್ಧಲಿಂಗಯ್ಯನವರ 'ಹೊಲೆ ಮಾದಿಗರ ಹಾಡು' ಸಂಕಲನದ ಕೆಲವು ಪದಗಳಿಗೆ ಮತ್ತು ದೇವನೂರರ 'ಕುಸುಮಬಾಲೆ'ಗೆ ಕನ್ನಡ ಸಾಹಿತ್ಯ ವಿಮರ್ಶೆಯ ಒಂದು ವಲಯ ಬೆಚ್ಚಿಬಿದ್ದಿತು. ಯಾವ ಕ್ರಮದಲ್ಲಿ ಇವನ್ನು ಗ್ರಹಿಸಬೇಕು, ಯಾವ ವಿಧಾನದಲ್ಲಿ ವಿಮರ್ಶೆ ಮಾಡಬೇಕು ಎಂಬ ತೊಡಕುಗಳನ್ನು ಮೊದಲು ಎದುರಿಸಿತು. ಹೀಗೆ ತಬ್ಬಿಬ್ಬಾಗಲು ಕಾರಣಗಳು ಏನಿದ್ದವು ಮತ್ತು ಮುಂದೆ ಅವು ಸಾಹಿತ್ಯಿಕ ವಲಯದಲ್ಲಿ ಯಾವ ಪರಿಣಾಮಗಳನ್ನು ಉಂಟುಮಾಡುದವು ಎಂಬುದು ನಮಗಿನ್ನೂ ಸ್ಪಷ್ಟವಾಗಿ ಗೋಚರವಾಗಿಲ್ಲ. ಸಿದ್ಧಲಿಂಗಯ್ಯನವರ 'ಇಕ್ರಲಾ ವದಿರ್ಲಾ ಈ ನನ್ ಮಕ್ಳ ಚರ್ಮ ಎಬ್ರಲಾ!' ಎಂಬ ಪದವನ್ನು ಕುರಿತು ಕನ್ನಡದ ವಿಮರ್ಶೆಯ ಮಡಿವಂತರು 'ಇದು ಕವನವೇ ಅಲ್ಲ' ಎಂದು ಆದೇಶಿಸಿದರು. ಆದರೆ ಆ ವಿಮರ್ಶಾ ಆದೇಶದಲ್ಲಿ 'ಕವನ ಎಂದರೆ ಹೀಗಿರಬೇಕಿತ್ತು' ಎಂಬ ಯಾವ ಮೂರ್ತ ಅಪೇಕ್ಷೆಗಳೂ ಇರಲಿಲ್ಲ. ಹಾಗಾದರೆ ಮತ್ತೇನಿತ್ತು ಎಂದರೆ 'ಇಕ್ರಲಾ ವದಿರ್ಲಾ ಈ ನನ್ ಮಕ್ಳ ಚರ್ಮ ಎಬ್ರಲಾ!' ಎಂಬುದನ್ನು ಅಕ್ಷರದಲ್ಲಿ, ಲಿಖಿತವಾಗಿ ಮಾತ್ರ ದಾಖಲಿಸಬೇಡಿ ಅಥವಾ ದಾಖಲಿಸಬಾರದು ಎಂಬ ಧೋರಣೆಯೇ ಪ್ರಧಾನವಾಗಿತ್ತು. ಅದಕ್ಕೆ ಎರಡು ಕಾರಣಗಳಿವೆ. ಒಂದು : ಇದು ಬೈಗುಳವಾಗಿರುವುದರಿಂದ ಅಕ್ಷರ ಎಂಬ ಸರಸ್ವತಿಗೆ ಮೈಲಿಗೆಯಾಗುತ್ತದೆ. ಅದರ ಪಾವಿತ್ರ್ಯ ಕೆಡುತ್ತದೆ. ಅದರಲ್ಲೂ ಕವನ, ಕಾವ್ಯ ಎಂಬ ಹೆಸರಿನಲ್ಲಿ ಅದು ಮೈಲಿಗೆಯಾಗುತ್ತದೆ. ಎರಡು : ಅಂತಹ ಬೈಗುಳ ಮತ್ತು ಪ್ರತಿರೋಧವು ಅಕ್ಷರದಲ್ಲಿ ಲಿಖಿತವಾಗಿ, ಚಾರಿತ್ರಿಕವಾಗಿ

ದಾಖಲೆಯಾಗುತ್ತದೆ ಹಾಗೂ ಆ ದಾಖಲೆ ಮುಂದೆಯೂ ಚಾರಿತ್ರಿಕವಾಗಿ ಉಳಿಯುತ್ತದೆ. ಈ ಬಗೆಯ ಪೂರ್ವನಿರ್ಧಾರಿತ ಫ್ಯೂಡಲ್ ಸ್ವಭಾವದ ತಿಳುವಳಿಕೆ ಅದನ್ನು ಕವನ ಅಲ್ಲ ಎಂದು ನಿರಾಕರಿಸಿತು. ಆದರೆ ಆ ನಿರಾಕರಣೆಯ ನಡುವೆಯೇ 'ಇಕ್ರಲಾ ವದಿರ್ಲಾ!' ಪದವು ನಾಡಿನಾದ್ಯಂತ ನೂರಾರು ಜನರು ಕವನ ಬರೆಯಲು ನೇರವಾಗಿ ಪ್ರೇರೇಪಿಸಿತು. 'ಇಕ್ರಲಾ ವದಿರ್ಲಾ ಈ ನನ್ ಮಕ್ಳ ಚರ್ಮ ಎಬ್ರಲಾ!' ಎಂಬ ಪದಕ್ಕೆ ಸಮೀಪದ ನೂರಾರು ಪದಗಳು ನಾಡಿನಾದ್ಯಂತ ಹುಟ್ಟಿದವು. ಆದರೆ ಸಾಹಿತ್ಯದ ಆಸ್ವಾದನ ಹಾಗೂ ಆರಾಧನ ಧೋರಣೆ ಅವುಗಳನ್ನು ಕವನಗಳ, ಸಾಹಿತ್ಯದ ಚೌಕಟ್ಟಿನಿಂದ ಹೊರಹಾಕಿ ಪಂಚಮಗೊಳಿಸಿತು; ಅಸ್ಪೃಶ್ಯಗೊಳಿಸಿತು. ಹೀಗೆ ಅಸ್ಪೃಶ್ಯಗೊಳಿಸಲಾದ ಚಾರಿತ್ರಿಕ ಸಂಗತಿ ದಲಿತ ಸಾಹಿತ್ಯದ ಸಾಮಾಜಿಕ ಅಧ್ಯಯನದಲ್ಲಿ ಬಹಳ ಮುಖ್ಯವಾದುದು. 'ಇದು ಕವನ ಅಲ್ಲ' ಎಂದು ಹೇಳಿದವರಿಗೆ 'ಇದು ಕವನ ಹೌದು' ಎಂದು ವಿವರಿಸಬೇಕಾದ ಯಾವ ತುರ್ತುಗಳೂ ದಲಿತ ಸಾಹಿತ್ಯಕ್ಕೆ ಬೇಕಾಗಿಲ್ಲ. ಹಾಗೇನಾದರೂ 'ಇದೂ ಕವನವೇ' ಎಂದು ಸಾಬೀತುಪಡಿಸಲು ಅಥವಾ ಸಮರ್ಥಿಸಲು ಹೊರಟರೆ ವಿರೋಧಿಗಳ ಮಾನದಂಡಗಳನ್ನೇ, ಅವರ ಸಾಹಿತ್ಯಿಕ ಉಪಕರಣಗಳನ್ನೇ ಮತ್ತೆ ಬಳಸಬೇಕಾಗುತ್ತದೆ. ಇದು ಕುತರ್ಕಕ್ಕೆ ಮತ್ತು ವಿತಂಡವಾದಕ್ಕೆ ನಮ್ಮನ್ನು ಕರೆದೊಯ್ಯುತ್ತದೆ. ಹಾಗಾಗಿ ಆ ಗೊಡವೆಯನ್ನು ಉಪೇಕ್ಷೆ ಮಾಡುವುದೇ ಉಚಿತವಾದ ಆಯ್ಕೆ.

### ಚಾರಿತ್ರಿಕ ಆಯ್ಕೆ : ಶಿಕ್ಷಣ, ನೌಕರಿ, ದಲಿತರು

ಆಧುನಿಕ ಸರಕಾರಗಳ ಚಾರಿತ್ರಿಕ ಅನಿವಾರ್ಯತೆಯ ಫಲಗಳಾಗಿ ಬಂದ ಸಾಕ್ಷರತೆ, ಔಪಚಾರಿಕ ಶಿಕ್ಷಣ ಮತ್ತು ಕೆಲವು ನೌಕರಿಗಳು ದಲಿತರನ್ನೂ ಆಯ್ಕೆ ಮಾಡಿಕೊಂಡವು. ಆಧುನಿಕ ಸರಕಾರಗಳು ಬಂಡವಾಳಶಾಹಿ ಸುಧಾರಣಾವಾದವನ್ನು ಜೊತೆಯಲ್ಲೆ ಇಟ್ಟುಕೊಂಡಿದ್ದವು. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಪರಿಧಿಯಲ್ಲಿದ್ದವರಿಗೆ ಔಪಚಾರಿಕ ಶಿಕ್ಷಣ ಹಾಗೂ ಕೆಲವು (ಇಲ್ಲಿ ಕೆಲವು ಎಂಬುದು ಬಹಳ ಮುಖ್ಯ) ಸರಕಾರಿ ನೌಕರಿಗಳನ್ನು ದಯಪಾಲಿಸಲೇಬೇಕಿತ್ತು. ಆ ದಯಪಾಲಿಸುವಿಕೆ ದಲಿತರ ಉದ್ಧಾರವನ್ನಾಗಲಿ, ದಲಿತರ ವಿಮೋಚನೆಯನ್ನಾಗಲಿ ತನ್ನ ಉದ್ದೇಶವನ್ನಾಗಿ ಇಟ್ಟುಕೊಂಡಿರಲಿಲ್ಲ. ಬದಲಾಗಿ ಬಂಡವಾಳಶಾಹಿಯನ್ನು ಹಾಗೂ ಅದರ ಬಾಲಬಡುಕ ಸರಕಾರಗಳನ್ನು ದಲಿತ ಸಮೂಹ ಸಂಭ್ರಮದಿಂದ ಸ್ವಾಗತಿಸುತ್ತಿದೆ ಎಂಬುದನ್ನು ಸಾಮ್ರಾಜ್ಯಶಾಹಿಗೆ ಸ್ಪಷ್ಟವಾಗಿ ತೋರಿಸಬೇಕಾಗಿತ್ತು. ಆ ಮೂಲಕ ದಲಿತರನ್ನು ಊಳಿಗಮಾನ್ಯ ಸಂಬಂಧಗಳ ಜೊತೆಗೆ ಬಂಡವಾಳಶಾಹಿ ಸಂಬಂಧಗಳೊಂದಿಗೆ ಎಲ್ಲಾ ಬಗೆಯ ಶೋಷಣೆಗಳ ಸಮೇತ ಬೆಸೆಯಬೇಕಾಗಿತ್ತು. ಜೊತೆಗೆ ಆಧುನಿಕ ಸರಕಾರಗಳಿಗೆ 'ಸೆಕ್ಯುಲರ್ ಸ್ಟೇಟ್' ಎಂಬ ಬಿರುದು ಕೂಡ ಬೇಕಿತ್ತು. ಈ ಬಿರುದು ಸಾಮಾಜಿಕ ಅಂಚಿನ



ನೆಲೆಯುವರಿಂದ ದೊರಕಬೇಕಿತ್ತು. ಚಾರಿತ್ರಿಕವಾಗಿ ಆಧುನಿಕ ಸರಕಾರಗಳು ಸಾಮಾಜಿಕ ಅಂಚಿನವರಿಂದ ಮತ್ತು ಅವರ ತಾತ್ಕಾಲಿಕ ಹಾಗೂ ಭ್ರಮಾತ್ಮಕ ಪ್ರಜ್ಞೆಯಿಂದ ಈ ಬಿರುದನ್ನು ಬಹಳ ಸುಲಭವಾಗಿ ಪಡೆದುಕೊಂಡವು. ಈಗಂತು ಸಾಕ್ಷರತ ಕಾರ್ಯಕ್ರಮವನ್ನು ವಿಶ್ವಬ್ಯಾಂಕ್ ನೇರವಾಗಿ ಜಾರಿಮಾಡುತ್ತಿದೆ. ಔಪಚಾರಿಕ ಶಿಕ್ಷಣ ಮತ್ತು ಕೆಲವು ನೌಕರಿಗಳನ್ನು ಪಡೆದ ದಲಿತರಲ್ಲಿ ಕೆಲವರಿಗೆ ಆರ್ಥಿಕವಾಗಿ ಒಂದು ಜಂಪ್ ಸಿಕ್ಕಿತು. ಇಡೀ ದಲಿತ ಸಮೂಹದಲ್ಲಿ ಇದು ಅತೀ ಸಣ್ಣ ಗುಂಪು. ಈ ಗುಂಪು ತಾತ್ಕಾಲಿಕವಾಗಿ ರೋಮಾಂಚನಗೊಂಡು ಉನ್ಮಾದದಿಂದ ಶಿಕ್ಷಣ ಮತ್ತು ಸರಕಾರಿ ನೌಕರಿಯನ್ನು ಅತಿ ಅಂದಾಜು ಮಾಡಿ ಕೊಂಡಾಡಿತು; ವೈಭವೀಕರಿಸಿತು. ಔಪಚಾರಿಕ ಶಿಕ್ಷಣವನ್ನು ಈ ಅತೀ ಸಣ್ಣ ಗುಂಪು ದಲಿತರ ಶಕ್ತಿಯೆಂದು, ಜ್ಞಾನವೆಂದು, ವಿಮೋಚನೆಯ ಅಸ್ತ್ರವೆಂದು ತೀರ್ಮಾನಿಸಿತು. ಈ ಮೌಲ್ಯಮಾಪನವು ದಲಿತರ ವರ್ತಮಾನವನ್ನು ಪ್ರಧಾನವಾಗಿ ಆಧರಿಸಿರಲಿಲ್ಲ; ಬದಲಾಗಿ 'ಚಾರಿತ್ರಿಕವಾಗಿ ಶಿಕ್ಷಣ ನೌಕರಿ ತಮಗೆ ಸಿಕ್ಕಿರಲಿಲ್ಲ; ನಮಗೆ ಕೊಟ್ಟಿರಲಿಲ್ಲ; ಎಂಬ ಚರಿತ್ರೆಯ ಬಗೆಗಿನ ಅಸಹನೆ ಮತ್ತು ಕೋಪದ ನೆನಪುಗಳು ಈ ಬಗೆಯ ದುರ್ಬಲ ಮೌಲ್ಯಮಾಪನವನ್ನು ಸೃಷ್ಟಿ ಮಾಡಿದವು. ಚರಿತ್ರೆಯನ್ನು ಕುರಿತ ಈ ಸ್ವರೂಪದ ಅಸಹನೆ ಮೂಲತಃ ದಲಿತರ ವಾಸ್ತವ ನೆಲೆಯಿಂದ ಹುಟ್ಟಿರಲಿಲ್ಲ; ಬದಲಾಗಿ ಅದು ಭೂಮಾಲೀಕರ ಬ್ರಾಹ್ಮಣ ವಿರೋಧದ ಅಕ್ರಮ ಸಂಬಂಧದ ವಿಕೃತ ಕೂಸಾಗಿತ್ತು. ಪರಿಣಾಮವಾಗಿ ದಲಿತ ಚಿಂತಕರು, ಸಾಹಿತಿಗಳು ಚರಿತ್ರೆಯನ್ನು ತಮ್ಮ ವಂಚಿತ ಕರಾಳ ನೆನಪುಗಳೆಂದು ಬಗೆದರು ಮತ್ತು ಹೀಗೆ ವಂಚಿಸಲ್ಪಟ್ಟಿದ್ದನ್ನು ಶಿಕ್ಷಣ ತೋರಿಸಿಕೊಟ್ಟಿತು ಎಂದೂ ಬಗೆದರು. ಕವಿ ಎಚ್. ಗೋವಿಂದಯ್ಯನವರ 'ಅ ಆ ಮತ್ತು...' ಎಂಬ ಪದ್ಯವು ಈ ಎರಡೂ ಆಯಾಮದ ಚರ್ಚೆಗೆ ಸಮೃದ್ಧ ಗ್ರಾಸವನ್ನು ಒದಗಿಸುತ್ತದೆ. ಆದರೆ ಹತ್ತಾರು ಹೋರಾಟದ ಹಾಡುಗಳು 'ಶಿಕ್ಷಣವೇ ಜ್ಞಾನ, ಶಕ್ತಿ' ಎಂಬ ಏಕಮುಖಿ ಸರಳ ನಂಬಿಕೆಯನ್ನು ಬಲವಾಗಿ ವಿರೋಧಿಸಿದವು. ಆರ್. ಮಾನಸಯ್ಯನವರ 'ದಿಲ್ಲಿ ದಿಲ್ಲಿ ಅಂತೀರಿ ಅದು ಎಂತಾ ದಿಲ್ಯಣ್ಣ' ಎಂಬ ಹಾಡನ್ನು, ದೇವನೂರರ 'ಕುಸುಮಬಾಲೆ'ಯ ಚೆನ್ನ ವಿದ್ಯಾಭ್ಯಾಸದ ಫಲವನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು. 'ಒಂದನೇ ತರಗತಿಯಿಂದಲೇ ದಲಿತರ ಮಕ್ಕಳಿಗೆ ಇಂಗ್ಲಿಶ್ ಕಲಿಸಿ' ಎಂಬ ಬೇಡಿಕೆಯ ಹಿಂದೆ ಕೂಡ ಈ ಬಗೆಯ ಚರಿತ್ರೆಯ ಹಳಹಳಿಕೆ ಅಘೋಷಿತವಾಗಿ ಕ್ರಿಯಾಶೀಲವಾಗಿದೆ. ಅಂದರೆ ಚರಿತ್ರೆಯಲ್ಲಿ ತಮಗೆ ಇಂಗ್ಲೀಷಾಗಲಿ, ಅಕ್ಷರ ಶಿಕ್ಷಣವಾಗಲಿ ಇರಲಿಲ್ಲ ಎಂಬುದೇ ಇಲ್ಲಿ ಪ್ರಧಾನ ಅಂಶವಾಗಿದೆ. ಇಂಗ್ಲೀಶ್ ಭವಿಷ್ಯದಲ್ಲಿ ದಲಿತರಿಗೆ ಏನು ಮಾಡುತ್ತದೆ? ಅಥವಾ ಏನು ಕೊಡುತ್ತದೆ? ಎಂಬುದು ಇಲ್ಲಿ ಎರಡನೆ ಅಂಶವಾಗಿದೆ. ಶಿಕ್ಷಣ, ನೌಕರಿ ಮತ್ತು ಇಂಗ್ಲಿಶ್ ಇವು ಯಾವುವು ಕೂಡ ಚಾರಿತ್ರಿಕವಾಗಿ ದಲಿತರ ಸ್ವಯಂ ಆಯ್ಕೆಗಳಾಗಿರಲಿಲ್ಲ.

ಇದಕ್ಕಿಂತಲೂ ಮುಖ್ಯವಾಗಿ ದಲಿತರು ತಮ್ಮ ಬದುಕಿಗೆ ಸಂಬಂಧಿಸಿ ಆಯ್ಕೆಗಳೇ ಇಲ್ಲದ ವ್ಯವಸ್ಥೆಯಲ್ಲಿ ಬಂಧಿಗಳಾಗಿದ್ದಾರೆ.

ದಲಿತರಿಗೆ ಕೊಡ ಮಾಡಲಾದ ಶಿಕ್ಷಣವು ಬರಹಗಾರ ದಲಿತರಲ್ಲೂ; ದಲಿತ ಸಾಹಿತ್ಯವು ಆ ಸಾಹಿತ್ಯವನ್ನು ಓದುವ ಓದುಗರ ವಲಯದಲ್ಲೂ ಒಮ್ಮೆಗೆ ಕುತೂಹಲ, ಬೆರಗು, ಉತ್ಸಾಹ ಮತ್ತು ಒಂದು ಬಗೆಯ ರೋಮಾಂಚನವನ್ನು ಉಂಟುಮಾಡಿತು. ಅನೇಕ ಓದುಗರು ದಲಿತ ಸಾಹಿತ್ಯವನ್ನು ಆಸ್ವಾದನೆಯ ನೆಲೆಯಲ್ಲೆ ಓದಿದರು. ಅನೇಕರು ತಮ್ಮ ಮನೋಧರ್ಮಕ್ಕೆ ಅನುಗುಣವಾಗಿ ದಲಿತ ಸಾಹಿತ್ಯವನ್ನು ವ್ಯಾಖ್ಯಾನಿಸಿಕೊಂಡರು. ದಲಿತರು ತಮ್ಮ ಅಭಿವ್ಯಕ್ತಿಗಳಲ್ಲಿ ತಮ್ಮ ಸಮುದಾಯದ ಮುಗ್ಧತೆ, ನೋವು, ಸಂಕಟ, ಅಪಮಾನ, ಶೋಷಣೆಗಳನ್ನು ಹೊರಹಾಕಿದ್ದರು. ಆ ಮೂಲಕ ಅವುಗಳ ಕಾರಣ ಮೀಮಾಂಸೆ ಮತ್ತು ಪರಿಣಾಮ ಮೀಮಾಂಸೆಗಳನ್ನು ಚಹರೆ ರೂಪದಲ್ಲಾದರೂ ಮಂಡಿಸಿದ್ದರು. ಸಾಹಿತ್ಯ ವಿಮರ್ಶೆಯ ಹಂತದಲ್ಲಿ ಈ ವಿನ್ಯಾಸ ಒಂದು ಬಗೆಯ ಹೊರಳು ದಾರಿ ಹಿಡಿಯಿತು. ದಲಿತ ಲೋಕದ ಅನಾವರಣ ಎಷ್ಟರಮಟ್ಟಿಗೆ ಭಾಷಿಕವಾಗಿ, ಕಲಾತ್ಮಕವಾಗಿ ಯಶಸ್ವಿಯಾಗಿದೆ ಅಥವಾ ಯಶಸ್ವಿಯಾಗಿಲ್ಲ ಎಂದು ಅಳೆದು ತೂಗಿ ನೋಡುವ ಮಾರುಕಟ್ಟೆಯ ಲೆಕ್ಕಾಚಾರ ವಿಮರ್ಶೆಯಲ್ಲಿ ಮುಂಚೂಣೆಗೆ ಬಂತು. ವಾಸ್ತವವಾಗಿ ದಲಿತರ ಹಸಿವು ಮತ್ತು ಅಪಮಾನಗಳಿಗೆ ಚಾರಿತ್ರಿಕವಾಗಿ ಯಾವ ವರ್ಗವು ಕಾರಣವಾಗಿತ್ತೊ, ಆ ವರ್ಗದವರಲ್ಲಿ ದಲಿತ ಸಾಹಿತ್ಯದ ಲಜ್ಜೆಯನ್ನೊ, ಮುಜುಗರವನ್ನೊ ಹುಟ್ಟಿಸಬೇಕಿತ್ತು. ದುರಂತವೆಂದರೆ ದಲಿತ ಸಾಹಿತ್ಯದ ಒಡಲಿನಲ್ಲಿ ಸಹಜವಾಗಿ ಹುದುಗಿದ್ದ ಈ ಸಮಾಜವಾದಿ ನೈತಿಕ ಹಕ್ಕೊತ್ತಾಯವು ದಲಿತ ಸಾಹಿತ್ಯವನ್ನು ಓದುವ ಮತ್ತು ವಿಮರ್ಶೆ ಮಾಡುವ ಸಂದರ್ಭದಲ್ಲಿ ಒಂದು ಆದರ್ಶವಾಗಿಯೇ ಉಳಿಯಿತು. ಯಾಕೆಂದರೆ ಸಾಹಿತ್ಯ ವಿಮರ್ಶೆಯ ರಮ್ಯ ವಲಯವು ತಾನು ಲಜ್ಜೆಗೆಟ್ಟು ಆಹಾ! ಓಹೋ! ಎಂಬ ಆಸ್ವಾದನೆಗೆ ಮುಂದಾಯಿತು. ಪರಿಣಾಮವಾಗಿ ಉದ್ವಿಗ್ನತೆ ಮತ್ತು ಆತಂಕಗಳೇ ಪ್ರಧಾನವಾಗಿರುವ ದೇವನೂರರ 'ಒಡಲಾಳ' ಕೃತಿಯ ವಿಮರ್ಶೆಯಲ್ಲಿ ಕೆಲವು ವಿಮರ್ಶಕರಿಗೆ ಪುಟ್ಟಗೌರಿ ಬರೆದ ನವಿಲಿನ ಚಿತ್ರ ಮುಖ್ಯವಾಗಿ, 'ಯಾರ ಜಪ್ತಿಗೂ ಸಿಗದ ನವಿಲುಗಳು' ಎಂಬ ನಿಲುವನ್ನೊ, ಒಡಲಾಳದಲ್ಲಿ ಕಡಲೆ ಕಾಯಿ ತಿನ್ನುವ ಪ್ರಸಂಗವು 'ಯಜ್ಞಕ್ಕೆ ಸಮಾನವಾದ ಕ್ರಿಯೆ'ಯಾಗಿಯೂ ಮುಖ್ಯವಾಯಿತು. ದಲಿತ ಸಾಹಿತ್ಯವನ್ನು ಕುರಿತ ಈ ಬಗೆಯ ಸೀಮಿತ ಗ್ರಹಿಕೆಗಳಿಂದಾಗಿ ದಲಿತ ಸಾಹಿತ್ಯವನ್ನು ಅರಿಯುವ ಬಹುಸಾಧ್ಯತೆಗಳಿಗೆ ಅವಕಾಶವೇ ಇಲ್ಲದಂತಾಯಿತು.



## ದಲಿತರ ಅಭಿವ್ಯಕ್ತಿಯ ಸ್ವರೂಪವೇನು?

ಒಂದು ಕಡೆ ಶಿಕ್ಷಣ ಪಡೆದ ದಲಿತರಲ್ಲಿ ಮೂಡಿದ ಬಂಡವಾಳಶಾಹಿ ವೈಚಾರಿಕತೆ ಮತ್ತೊಂದು ಕಡೆ ದಲಿತರ ಬದುಕಿನಲ್ಲಿ ಅಮಾನವೀಯವಾಗಿ, ಕ್ರೂರವಾಗಿ ಹತ್ತಿಕ್ಕಲ್ಪಟ್ಟಿದ್ದ ಅಸಾಮಾನ್ಯ ಅನುಭವಗಳ ತೀವ್ರ ಒತ್ತಡಗಳು - ಇವುಗಳ ಪರಸ್ಪರ ಸಂಕರ್ಷಣದಲ್ಲಿ ಚಾರಿತ್ರಿಕ ಅನಿವಾರ್ಯವೆಂಬಂತೆ ದಲಿತ ಸಾಹಿತ್ಯ ದಲಿತರ ಮೂಲಕ ಸೃಷ್ಟಿಯಾಯಿತು. ಬಂಡವಾಳಶಾಹಿ ವೈಚಾರಿಕತೆ ಮತ್ತು ದಲಿತರ ಅನುಭವಗಳ ನಡುವೆ ಒಂದು ಬಗೆಯ ಅಗೋಚರ ಮತ್ತು ಅಮೂರ್ತ ಸಂಘರ್ಷವೇ ನಡೆದುಹೋಯಿತು. ಈ ಸಂಘರ್ಷದಿಂದ ಉಂಟಾದ ಪರಿಣಾಮದ ವಿನ್ಯಾಸ ಚಾರಿತ್ರಿಕವಾಗಿ ತುಂಬಾ ರೋಚಕವಾದುದು. ಅದು ಒಂದು ಕಡೆ ಬಂಡವಾಳಶಾಹಿ ವೈಚಾರಿಕತೆಯ ಮೂಲಕ ಮತ್ತು ಅದರ ನಿರ್ಧಿಷ್ಟ ತಾತ್ವಿಕ ಚೌಕಟ್ಟಿನ ಮೂಲಕ ದಲಿತರಲ್ಲಿ ಹತ್ತಿಕ್ಕಲ್ಪಟ್ಟಿದ್ದ ಅನುಭವಗಳನ್ನು ಅಕ್ಷರ ರೂಪದಲ್ಲಿ ಹೊರಗೆಳೆಯಿತು. ಮತ್ತೊಂದು ಕಡೆ ಆ ಬರಹಗಾರರನ್ನೂ ಕೂಡ ದಲಿತ ಅನುಭವದ ವಾಸ್ತವ ಲೋಕದಿಂದ ತಾಂತ್ರಿಕವಾಗಿ ಪ್ರತ್ಯೇಕಿಸಿತು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಔಪಚಾರಿಕ ಶಿಕ್ಷಣ ಪಡೆದ ದಲಿತರಲ್ಲಿ ಕೆಲವರು ತಮ್ಮನ್ನು ತಾವು ತಮ್ಮ ಸಮುದಾಯದ ವಾಸ್ತವದಿಂದ ತಾಂತ್ರಿಕವಾಗಿ ಪ್ರತ್ಯೇಕಿಸಿಕೊಂಡರು. ಹೀಗೆ ಪ್ರತ್ಯೇಕಿಸಿಕೊಳ್ಳುವ ಸಂಘರ್ಷಾತ್ಮಕ ಚಾರಿತ್ರಿಕ ಪ್ರಕ್ರಿಯೆಯ ಫಲಿತವಾಗಿ ದಲಿತ ಸಾಹಿತ್ಯ ಸೃಷ್ಟಿಯಾಗಿದೆ. ಈ ವಾದವನ್ನು ಇನ್ನೊಂದು ಆಯಾಮದ ಮೂಲಕ ಬಲವಾಗಿ ಸಮರ್ಥಿಸಬಹುದು. ಉದಾಹರಣೆಗೆ ಶಿಕ್ಷಣ ಪಡೆದ ಒಬ್ಬ ದಲಿತ ತಾನು ಹುಟ್ಟಿ ಬೆಳೆದ ಹಳ್ಳಿಯಲ್ಲೇ ಇನ್ನೂ ಕೂಲಿ ಮಾಡಿಕೊಂಡು ಇದ್ದಾನೆ ಎಂದು ಇಟ್ಟುಕೊಳ್ಳೋಣ. ಅಂತಹವನಿಂದ ಗ್ರಾಂಥಿಕ ದಲಿತ ಸಾಹಿತ್ಯ ಹುಟ್ಟಲು ಸಾಧ್ಯವಿಲ್ಲ. ಆದರೆ ಶಿಕ್ಷಣ ಪಡೆದ ಒಬ್ಬ ದಲಿತ ತನ್ನ ಹಳ್ಳಿಯನ್ನು ಬಿಟ್ಟು, ತನ್ನ ಸಂಬಂಧಿಕರನ್ನು ಬಿಟ್ಟು ನಗರದಲ್ಲೊ, ಪಟ್ಟಣದಲ್ಲೊ ನೆಲೆಸಿದ ಎಂದು ಇಟ್ಟುಕೊಳ್ಳೋಣ. ಅಂತಹವನಿಂದ ಗ್ರಾಂಥಿಕ ದಲಿತ ಸಾಹಿತ್ಯ ಸೃಷ್ಟಿಯಾಗುತ್ತದೆ. ಆದರೆ ಇದೇ ಮಾತನ್ನು ಹೋರಾಟದ ಹಾಡುಗಳಿಗೆ ಹೇಳಲು ಬರುವುದಿಲ್ಲ.

ಔಪಚಾರಿಕ ಶಿಕ್ಷಣವು ದಲಿತರ ನೆನಪುಗಳನ್ನು ಅವರ ಅನುಭವದ ಆಸ್ತಿಯನ್ನಾಗಿ ಮಾಡಿತು. ಹಾಗಾಗಿ ದಲಿತ ಲೇಖಕರಿಗೆ ಒಂದು ಕಡೆ ಅನುಭವದ ನೆನಪುಗಳೇ ಸೃಜನಶೀಲತೆಯ ಮಹಾನ್ ಶಕ್ತಿಯಾದವು. ಅವರು ಬರವಣಿಗೆಯ ಮೂಲಕ ತಮ್ಮನ್ನು ದಲಿತ ವಾಸ್ತವ ಬದುಕಿನಿಂದ ಪ್ರತ್ಯೇಕಿಸಿಕೊಂಡು ಸಂಕುಚಿತಗೊಂಡರು. ಶಿಕ್ಷಣ ಮತ್ತು ನೌಕರಿ ದಲಿತರಲ್ಲೇ ಒಂದು ತಾತ್ಕಾಲಿಕ ಮಧ್ಯಮ ವರ್ಗವನ್ನು ರೂಪಿಸಿತು. ಇವರ ಮೂಲಕ ಬಂಡವಾಳಶಾಹಿಯು ತನ್ನ ವೈಚಾರಿಕತೆಯನ್ನು ಜಾರಿಮಾಡಿ ವಿಸ್ತೃತಗೊಳಿಸಿತು. ದಲಿತ ಬರಹಗಾರರಿಗೆ ಬಂಡವಾಳಶಾಹಿ ವೈಚಾರಿಕತೆ ಕೂಡ ಸ್ವಯಂ ಆಯ್ಕೆ ಆಗಿರಲಿಲ್ಲ.

ಶಿಕ್ಷಣ ಪಡೆಯದ ದಲಿತರು ತಮ್ಮ ಅನುಭವದ ಆಧಾರದ ಮೇಲೆ ಆಲೋಚಿಸುತ್ತಾರೆ. ಶಿಕ್ಷಣ ಪಡೆದ ದಲಿತರು ಶಿಕ್ಷಣದ ತಿಳುವಳಿಕೆಯ ಮೂಲಕ ಆಲೋಚಿಸುತ್ತಾರೆ.

ಉದಾ : ಸೃಜನಶೀಲ ಬರವಣಿಗೆಯಲ್ಲಿ ಅಗಾಧ ಸಾಧ್ಯತೆಗಳನ್ನು ಪ್ರಕಟಿಸಿರುವ ದೇವನೂರು ಅವರು 1986ರ ಆಗಸ್ಟ್ 15ರಂದು, ತಾವು ಡಿಎಸ್‌ಎಸ್‌ನ ರಾಜ್ಯ ಸಂಚಾಲಕರಾಗಿದ್ದಾಗ 'ಒಂದು ಹೊತ್ತು ಉಪವಾಸ ಒಂದು ಗುಟುಕು ನೀರು' ಎಂಬ ಕಾರ್ಯಕ್ರಮವನ್ನು ರೂಪಿಸಿದ್ದರು. ದಲಿತ ಹೋರಾಟದ ಚರಿತ್ರೆಯಲ್ಲಿ ಮುಂದೆ ಅದು ನಗೆಪಾಟಲಿಗೆ, 'ದೇವನೂರರ ವಿರೋಧಕ್ಕೆ ಕಾರಣವಾಯಿತು. ದೇವನೂರರ ಸಾಹಿತ್ಯವು ಸಾಹಿತ್ಯಕ ವಲಯದಲ್ಲಿ ಎಷ್ಟು ಪ್ರಸಿದ್ಧಿಯೋ, ದಲಿತ ಹೋರಾಟದ ಚರಿತ್ರೆಯಲ್ಲಿ 'ಒಂದು ಹೊತ್ತು ಉಪವಾಸ, ಒಂದು ಗುಟುಕು ನೀರು' ಎಂಬ ದೇವನೂರು ಮಹಾದೇವ ನಿರ್ಮಿತ ಕಾರ್ಯಕ್ರಮ ಅಷ್ಟೇ ಪ್ರಸಿದ್ಧಿ. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ, 'ದಲಿತರು ಒಂದು ಹೊತ್ತು ಉಪವಾಸ ಮಾಡಬೇಕು' ಎಂಬ ಆಲೋಚನೆಯೇ ದಲಿತರ ವಾಸ್ತವದಿಂದ ಹೊರಗೆ ಹುಟ್ಟಿದ್ದು. ಒಂದು ವೇಳೆ ನಿಜವಾದ ದಲಿತನ ನೆಲೆಯಿಂದ ಹುಟ್ಟಿದ್ದಿದ್ದರೆ ಉಪವಾಸದ ಪ್ರಶ್ನೆಯೇ ಬರುತ್ತಿರಲಿಲ್ಲ. ಯಾಕೆಂದರೆ ನಿಜವಾದ ದಲಿತನ ಮೂಲ ಸಮಸ್ಯೆಯೇ ಹಸಿವಿನ ಪ್ರಶ್ನೆಯಿಂದ, ಉಪವಾಸದ ಪ್ರಶ್ನೆಯಿಂದ ಶುರುವಾಗುತ್ತದೆ. ಅಂದರೆ ಡಿಎಸ್‌ಎಸ್‌ನಲ್ಲಿ ದೇವನೂರ ಮಹಾದೇವರಂತಹ ಸಾಹಿತಿಗಳು ದಲಿತರ ಮೂಲ ಸಮಸ್ಯೆಗಳನ್ನು ಮೂಲೆಗೆ ತಳ್ಳಿದರು. ಹೊಟ್ಟೆ ತುಂಬಿದ ದಲಿತರ ಸಮಸ್ಯೆಗಳನ್ನು ಮುಂಚೂಣಿಗೆ ತಂದರು. ದಲಿತರ ಅಕ್ಷರ ಅಭಿವ್ಯಕ್ತಿ ಎಂಬುದು ದಲಿತರಿಂದ ಅಭಿವ್ಯಕ್ತಗೊಂಡಾಗ ಒಂದು ಕಡೆ ಅವರ ಅನುಭವವನ್ನೂ ಮತ್ತೊಂದು ಕಡೆ ಅವರ ಇರುವಿಕೆಯನ್ನೂ ಎರಡಾಗಿ ಸೀಳಿತು.

## ಓದುವಿಕೆಯಿಂದ ಮಾತಿಗೆ

ದಲಿತ ಸಾಹಿತ್ಯವು ಮೌನವಾಗಿ ಓದುವುದನ್ನು ಸಾರಾಸಗಟಾಗಿ ಅಲ್ಲದಿದ್ದರೂ ತೆಳುವಾಗಿಯಾದರೂ ತನ್ನ ಅಂತರ್ಯದಲ್ಲೇ ವಿರೋಧಿಸುತ್ತದೆ. ಅದು ತನ್ನನ್ನು ಗಟ್ಟಿ ಧ್ವನಿಯಲ್ಲಿ ಬಾಯಿಬಿಟ್ಟು ಓದಿಕೊಳ್ಳಲು ನಿವೇದಿಸಿಕೊಂಡಿದೆ. ಹೇಳುವ - ಕೇಳುವ ಅವರ ಪರಂಪರೆಯ ಪರೋಕ್ಷ ಗುಣವು ಭಾಷೆಯಲ್ಲಿ ಅಲ್ಲದಿದ್ದರೂ ಅವರ ಸಾರದಲ್ಲಿ ಮಡುಗಟ್ಟಿದೆ. ಹೋರಾಟದ ಹಾಡುಗಳಂತೂ ಇದಕ್ಕೆ ಮೇರು ಉದಾಹರಣೆ. ಒಡಲಾಳ ಮತ್ತು ಕುಸುಮಬಾಲೆಗಳಂತೂ ಇದೇ ಮಾರ್ಗದವು. ಮೊಗಳ್ಳಿಯವರ ಗದ್ಯದಲ್ಲೂ ಇದೇ ಗುಣವಿದೆ. ಬರವಣಿಗೆ ಎಂದ ಮೇಲೆ ಅದನ್ನು ಓದಬೇಕು. ಆದರೆ ಅದು ತನ್ನ ಓದನ್ನು ನಿರಾಕರಿಸಿ ಮಾತಾಗಿಸಲು ಒತ್ತಾಯಿಸುವುದು ತುಂಬ ಆಸಕ್ತಿಯ ವಿಷಯ. ಓದುವಿಕೆ



ತಾತ್ವಿಕವಾಗಿ ಪ್ರಭುತ್ವ ಪ್ರಣೀತ ವಿಧಾನ. ಮಾತು ಜನತೆಯ ಒಡಲಾಳದ್ದು. ಮಾತು ಆಲಿಸುವವರನ್ನು ಉದ್ದೇಶಿಸಲ್ಪಟ್ಟದ್ದು. ಪ್ರತಿಕ್ರಿಯೆಯನ್ನು ತಕ್ಷಣ ಅಪೇಕ್ಷಿಸುವಂತಹದ್ದು. ಇದು ಪ್ರತ್ಯಕ್ಷ ಮತ್ತು ಮುಖಾಮುಖಿ ಸ್ವರೂಪದ್ದು. ಬರಹಕ್ಕೂ ಇದು ಅನ್ವಯಿಸಬಹುದಾದರರೂ ಇವೆರಡೂ ಒಂದೇ ಅಲ್ಲ. ಹಾಗಾಗಿ ಓದನ್ನು ಪರೋಕ್ಷವಾಗಿಯಾದರೂ ನಿರಾಕರಿಸುವ ಆಳದ ಪ್ರವೃತ್ತಿ ಪ್ರಭುತ್ವ ವಿರೋಧಿ ನೆಲೆಯೇ ಆಗಿದೆ. ಅಂದರೆ ದಲಿತರ ಅನುಭವಗಳು ಓದುವ ಭಾಷೆಯಲ್ಲಿ ಪ್ರಕಟವಾಗುತ್ತವೆ; ಅದೇ ಕಾಲಕ್ಕೆ ಓದನ್ನು ನಿರಾಕರಿಸಿ ಮಾತಾಗಿ ಪರಿವರ್ತನೆಯಾಗುತ್ತವೆ. ಈ ಗತಿ ತಾರ್ಕಿಕತೆ ದಲಿತ ಸಾಹಿತ್ಯದ ಆಳದಲ್ಲಿ ಬೇರೂರಿದೆ.

## ದಲಿತರ ಓದು : ಪ್ರತಿಕ್ರಿಯೆಯ ವಿಧಾನಗಳು

ದಲಿತ ಸಾಹಿತ್ಯವನ್ನು ಕುರಿತ ದಲಿತೇತರರ ಓದಿಗೂ, ಅಕಾಡೆಮಿಕ್ ಅಲ್ಲದ ದಲಿತರ ಓದಿಗೂ ಬಹಳ ವ್ಯತ್ಯಾಸವಿದೆ. ಅಕಡೆಮಿಕ್ ಅಲ್ಲದ ದಲಿತರು ದಲಿತ ಸಾಹಿತ್ಯವನ್ನು 'ಸಾಹಿತ್ಯ' ಎಂದು ಪರಿಗಣಿಸುವುದಿಲ್ಲ; ಅದನ್ನು 'ತಮ್ಮ ಮೂರ್ತ ಪ್ರತ್ಯಕ್ಷ ಬದುಕು' ಎಂದೇ ಪರಿಗಣಿಸುತ್ತಾರೆ. ಇವರಿಗೆ ತಮ್ಮ ಬದುಕಿನ 'ಊನ'ಗಳನ್ನು, 'ದೋಷ'ಗಳನ್ನು, 'ದೌರ್ಬಲ್ಯ'ಗಳನ್ನು ಓಪನ್ನಾಗಿ ಪ್ರಕಟಿಸುವುದು ಅವಮಾನಕರ. ಅದರಲ್ಲೂ ಅಕ್ಷರದಲ್ಲಿ ಪ್ರಕಟಿಸುವುದು ಇನ್ನೂ ಅವಮಾನಕರ. ಉದಾ: ಮಾಲಗತ್ತಿ ಅವರ ಆತ್ಮಚರಿತ್ರೆ ಕುರಿತ ಪ್ರತಿಕ್ರಿಯೆಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು. ದಲಿತ ಬದುಕನ್ನು ಶೈಕ್ಷಣಿಕ ತಿಳುವಳಿಕೆಯ ಮೂಲಕ ನೋಡುವುದಕ್ಕೆ ಇದು ವಿರುದ್ಧವಾದುದು.

ಸಾಕವ್ವ ತನ್ನ ಮೊಮ್ಮಗನಲ್ಲಿ ರಾಜ್ಯಭಾರದ ಕನಸು ಕಾಣುವುದು, ಕುಸುಮಬಾಲೆಯಲ್ಲಿ 'ನಾಗರಾಜು ಕಾಂಟ್ರಡಿಕ್ಕನ್ನು ಅಂತ ಹೇಳಲು ನಾಲಿಗೆಯೇ ಹರಿದು ಬಂದಂತಾದರೂ, ಗಾರಸಿದ್ಧಾಮವನು ಅದನ್ನು ಬಹಳ ಸಲೀಸಾಗಿ ಓ ಅದ' ಎಂದು ತನಗೆ ಅತ್ಯಂತ ಸಹಜವಾಗಿ ಪರಿಚಿತವಾಗಿರುವಂತೆ ಪ್ರತಿಕ್ರಿಯಿಸುತ್ತಾನೆ. ಕುಸುಮಬಾಲೆಯಲ್ಲಂತೂ ಸ್ವತಃ ದೇವನೂರರೇ ಗೇಲಿಗೊಳಗಾಗುತ್ತಾರೆ. 'ಎನ್ನಿ ಎಲ್ಲೊ ಎನ್ನಿ ಎಲ್ಲೊ ಐಲೇಸಾ ರೈತಣ್ಣ ಕೂಲ್ಯಣ್ಣ ಬನ್ನಿರೋ' ಎಂಬ ಹೋರಾಟದ ಹಾಡೂ ಸೇರಿದಂತೆ ಹೋರಾಟದ ಇತರ ಹಾಡುಗಳಲ್ಲಿ ಇಂತಹ ಹತ್ತಾರು ವಿಧಾನಗಳನ್ನು ಕಾಣಬಹುದು.

ಅಪಮಾನಿತಗೊಂಡವರು ತಾತ್ಕಾಲಿಕವಾಗಿಯಾದರೂ ಅದರಿಂದ ಬಿಡಿಸಿಕೊಂಡಾಗ ಮಾತ್ರ ಅದು ಮಾತಾಗುತ್ತದೆ, ಅಭಿವ್ಯಕ್ತಿಯಾಗಿ ಪ್ರಕಟವಾಗುತ್ತದೆ. ಅದನ್ನು ನಿತ್ಯ ಅನುಭವಿಸುತ್ತಿರುವವರಿಗೆ ಅದು ಮಾತಿನ ಹಂತಕ್ಕೇ ಬರುವುದಿಲ್ಲ. ಅನುಭವದ ತೀವ್ರತೆ ಕಡಿಮೆಯಾಗುತ್ತಾ, ದೂರವಾಗುತ್ತಾ, ನೆನಪಾಗುತ್ತಾ ಹೋದಂತೆ ಅದು ಮಾತಿಗೆ ಹತ್ತಿರ

ಹತ್ತಿರ ಹೋಗುತ್ತದೆ. ಅನುಭವದ ತೀವ್ರತೆ ಜಾಸ್ತಿಯಿದ್ದಾಗ, ಅದು ನೆನಪಾಗದೆ ವಾಸ್ತವವಾಗಿದ್ದಾಗ ಅದು ಮಾತಾಗಲು ಮುಜುಗರ ಪಡುತ್ತದೆ. ಈ ಮೂಲಕ ದಲಿತರ ಅಭಿವ್ಯಕ್ತಿ ಅನ್ನೋದು ದಲಿತರಲ್ಲೇ ನಿರ್ದಿಷ್ಟವಾದ ಎರಡು ವರ್ಗಗಳನ್ನು ಸೃಷ್ಟಿಸಿದೆ. ಅನುಭವಗಳನ್ನು ನೆನಪಾಗಿಸಿಕೊಂಡವರು; ವಾಸ್ತವದಲ್ಲಿ ಅವನು ಅನುಭವಿಸುತ್ತಿರುವವನು. ಹೀಗೆ ಒಂದು ಕಡೆ ಅನುಭವಗಳ ವಾಸ್ತವದಲ್ಲಿರುವವರು ಅವುಗಳನ್ನು ಅಕ್ಷರದ ಮೂಲಕ ಅಭಿವ್ಯಕ್ತಿಸಬೇಡಿ ಎಂದು ಮುಜುಗರ ಪಡುತ್ತಿದ್ದಾರೆ. ಮತ್ತೊಂದು ಕಡೆ ಅದನ್ನು ಅಭಿವ್ಯಕ್ತಿಸಿದವರು ಅನುಭವಗಳಿಂದ ದೂರವಾಗಿ ಮುಜುಗರವನ್ನು ಕಳೆದುಕೊಳ್ಳುತ್ತಿದ್ದಾರೆ. ಇನ್ನೊಂದು ಕಡೆ ಈ ಅಭಿವ್ಯಕ್ತಿಯನ್ನು ಸಾಹಿತ್ಯದ ವಸ್ತುವಾಗಿ, ಆಕರವಾಗಿ ಅಧ್ಯಯನ ಮಾಡುತ್ತಿದ್ದಾರೆ. ವಿಶೇಷವೆಂದರೆ ಅಕ್ಷರದಲ್ಲಿ ಬರೆದು ಮುಜುಗರವನ್ನು ಕಳೆದುಕೊಂಡವರು ಹಾಗೂ ಅಧ್ಯಯನ ಮಾಡುವವರು ಸಾಹಿತ್ಯದ ಮೂಲಕ 'ಸಾಮಾಜಿಕ ನ್ಯಾಯ'ದ ಹೊಣೆಯನ್ನು ಮುಂದೊಡ್ಡುತ್ತಿದ್ದಾರೆ. ಅಕ್ಷರ ಬಾರದ ದಲಿತರಿಗೆ ಸಾಹಿತ್ಯಕ ಆಯಾಮದ 'ಸಾಮಾಜಿಕ ನ್ಯಾಯ' ಗೊತ್ತೇ ಇಲ್ಲ. ದಲಿತಲೋಕದ ಹೊರಗಿನವರು ದಲಿತ ಸಾಹಿತ್ಯವನ್ನು ಓದಿಕೊಂಡು, ಆ ಮೂಲಕ ದಲಿತರ ಸಮಸ್ಯೆಗಳನ್ನು ಕಲ್ಪಿಸಿಕೊಂಡು, ದಲಿತರ ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸುತ್ತಿದ್ದಾರೆ. ಆದರೆ ದಲಿತರ ಬುಡದಲ್ಲಿದ್ದವರು ಈ ವಿಧಾನವನ್ನು ಅಲ್ಲಗಳೆಯುತ್ತಿದ್ದಾರೆ.

## ದಲಿತ ಸಾಹಿತ್ಯ : ಅಧ್ಯಯನಕ್ಕಾಗಿ, ವಿಮರ್ಶೆಗಾಗಿ

ದಲಿತ ಸಾಹಿತ್ಯವನ್ನು ವಿಮರ್ಶೆಗಾಗಿ, ಅಧ್ಯಯನಕ್ಕಾಗಿ ಓದುವ ಓದುಗ ವರ್ಗವು ಕುತೂಹಲ, ಬೆರಗು, ಆಶ್ಚರ್ಯ ಮತ್ತು ರೋಮಾಂಚನಗಳಿಂದ ಸಂಭ್ರಮಿಸುತ್ತಿದೆ. ಅದು ದಲಿತ ಸಾಹಿತ್ಯದಲ್ಲಿ ಪ್ರಕಟವಾಗುತ್ತಿರುವ ಹೇಲು, ಉಚ್ಚೆ, ಹೇನು, ಕೂರೆ, ನವಿಲಿನ ಚಿತ್ರ, ಕಪ್ಪೆಕಾಯಿ ಸಿಪ್ಪೆ ಬೆಂಕಿಯಲ್ಲಿ ಉರಿಯುವುದು - ಇತ್ಯಾದಿಗಳನ್ನು ತನ್ನ ಮನೋಧರ್ಮದ ರೂಪಕ ಪ್ರತಿಮೆಗಳಲ್ಲಿ ಹಿಡಿದು ಪುನರ್ ರೂಪಿಸಿಕೊಂಡಿದೆ. ರೋಮಾಂಚನಗೊಂಡಿದೆ. ದಲಿತ ಸಾಹಿತ್ಯದಲ್ಲಿ ಅಂತಹವು ಬಂದಾಗಲೆಲ್ಲ ತನ್ನ ಕಲಾತ್ಮಕವೆಂಬ ತಕ್ಕಡಿಯಲ್ಲಿ ಅಳೆದು ತೂಗಿ ಖುಷಿಪಟ್ಟಿದೆ. 'ಖಂಡವಿದೆ ಕೋ ಮಾಂಸವಿದೆ ಕೋ' ಎಂಬುದಾಗಿ ತನ್ನ ಅನುಭವ ಲೋಕವನ್ನು ಗೋವಿನಂತೆ ಗೋಗರೆದು ಕೊಟ್ಟುದನ್ನು ಸಾಹಿತ್ಯ ಅಧ್ಯಯನ ಎಂಬುದು ಹುಲಿಯಾಗಿಯೇ ಸ್ವೀಕರಿಸಿತೋ ಏನೋ ಎಂಬ ಅನುಮಾನ ಕಾಡುವಂತಹ ಪರಿಸ್ಥಿತಿ ಈಗ ನಿರ್ಮಾಣವಾಗಿದೆ.

ಈ ಬಗ್ಗೆ ಕೆ.ವಿ. ನಾರಾಯಣ ಹೇಳುವ ಮಾತುಗಳನ್ನು ಗಮನಿಸಬೇಕು. 'ಸಾಕವ್ವ ಹೇಳುವ ಯಮುದವರ ಕತೆಗಾಗಿ ಜಾನಪದ ಪಂಡಿತರು, ಪುಟಗೌರಿ ಬರೆದ ನವಿಲಿನ



ಚಿತ್ರಕ್ಕಾಗಿ ಕಲೆಗಾರರು, ದುಪ್ಪಿಕಮೀಷನರಿಗಾಗಿ ಸಾಹಿತ್ಯ ವಿಮರ್ಶಕರು, ಕತ್ತಲ ಲೋಕದಲ್ಲಿ ಫಳಾರನೆ ಗಡಿಯಾರದ ಮಿಂಚು ಮಿಂಚಿಸುವ ಗುರುಸಿದ್ದನಿಗಾಗಿ ಬಂಡಾಯಗಾರರು ಹುಡುಕಾಟ ಮುಂದುವರಿಸಿದ್ದಾರೆ. ಇವರೆಲ್ಲಾ ಯುದ್ಧ ಮಾಡಿ ಕೊನೆಗೆ ಕೈಚೆಲ್ಲಿ ಕುಳಿತಿದ್ದಾರೆ. ಕೃತಿ ತನ್ನ ಪಾಡಿಗೆ ತಾನಿದೆ. ದೇವನೂರ ಮಹಾದೇವ ಮೂಲೆಯಲ್ಲಿ ತಲೆದೂಗುತ್ತಾ ಕುಳಿತು ಬೀಡಿ ಸೇದುತ್ತಾ, ಈ ವಾದ ವಿವಾದಗಳನ್ನು ಆಲಿಸುತ್ತಾ, ಕುರಿಯಯ್ಯ ಮೈದುಂಬಿ ನನ್ನಿ ನುಡಿದಂತೆ ಯಾರಾದರೂ ನುಡಿದರಾ ಎನ್ನುತ್ತಾ ಕಾಯುತ್ತಿರಬಹುದು.' ವಾಸ್ತವವಾಗಿ ದಲಿತ ಸಾಹಿತ್ಯವು ಆ ಬಗೆಯ ಓದಿಗಾಗಿ ಅಲ್ಲ, ಮೈದುಂಬಿ ನುಡಿಯಬಹುದಾದ ನನ್ನಿಗಾಗಿ ಕಾಯುತ್ತಿದೆ.

## ದಲಿತ ಹೋರಾಟ : ದಲಿತರ ಚಾರಿತ್ರಿಕ ಆಯ್ಕೆ ಮತ್ತು ಅದನ್ನು ದಾರಿ ತಪ್ಪಿಸಿದ ಬಗೆ ಮುಚ್ಚಿಟ್ಟ ಹಸಿ ಭೂ ಸಂಬಂಧ - ಬಿಚ್ಚಿಟ್ಟ ಹುಸಿ ಬ್ರಾಹ್ಮಣ ವಿರೋಧ

ದಲಿತ ಹೋರಾಟ ಚಾರಿತ್ರಿಕ ಅನಿವಾರ್ಯತೆಯ ಫಲವೂ ಹೌದು; ಊಳಿಗಮಾನ್ಯ ಶೋಷಣೆಯ ಕುದಿತದ ಪರಿಣಾಮದ ಫಲವಾಗಿ ದಲಿತರ ಚಾರಿತ್ರಿಕ ಆಯ್ಕೆಯೂ ಹೌದು. ಈ ಮಾತು ಕರ್ನಾಟಕಕ್ಕೂ, ಅಕ್ಕಪಕ್ಕದ ರಾಜ್ಯಗಳಿಗೂ ಇಡಿಯಾಗಿ ದೇಶಕ್ಕೂ ಅನ್ವಯಿಸುತ್ತದೆ. ಇದಕ್ಕಿಂತಲೂ ಮುಖ್ಯವಾಗಿ ದಲಿತ ಹೋರಾಟದ ಒಳಗೆ ಕಾರ್ಯಕರ್ತರ ಬದುಕಿನಿಂದ ಹಕ್ಕೊತ್ತಾಯವಾಗಿ ಬಂದ ಭೂ ಹೋರಾಟಗಳು ಭೂಮಾಲೀಕರ ನಿದ್ದೆಗೆಡಿಸಿದ್ದು ನಿಜ. ಅಂಧ್ರ, ಒರಿಸ್ಸಾ, ಬಿಹಾರದ ಗುಣಪಾಠಗಳು ಇಲ್ಲಿಯ ಶೋಷಕ ವರ್ಗಕ್ಕೆ ಸ್ಪಷ್ಟವಾಗಿ ಗೊತ್ತಿದ್ದವು. ಕರ್ನಾಟಕದಲ್ಲಿ ಡಿಎಸ್ಎಸ್ ಹುಟ್ಟುವ ಹೊತ್ತಿಗೆ ಮಹಾರಾಷ್ಟ್ರದಲ್ಲಿ ಆಗಲೇ ದಲಿತ ಹೋರಾಟ ಶೋಷಕ ವ್ಯವಸ್ಥೆಯ ಶೋಷಣೆಗೆ ಹೊಂದಿಕೊಂಡಿತ್ತು. ಹಾಗಾಗಿ ಕರ್ನಾಟಕದಲ್ಲಿ ಡಿಎಸ್ಎಸ್‌ನ ಕೇಂದ್ರ ಅಜೆಂಡಾ ಭೂಹೋರಾಟ ಆಗಬಾರದು ಎಂಬುದು ಜಮೀನ್ದಾರಿ ವರ್ಗದ ಅಘೋಷಿತ ಹಾಗೂ ಅಪ್ರಜ್ಞಾಪೂರ್ವಕ ಆಶಯವಾಗಿತ್ತು.

ಡಿಎಸ್ ಎಸ್ ಭೂ ಹೋರಾಟವನ್ನು ತನ್ನ ಮೇಜರ್ ಅಜೆಂಡಾವಾಗಿ ತೆಗೆದುಕೊಳ್ಳಬೇಕಿತ್ತು. ಇಲ್ಲವೆ ಇದೊಂದನ್ನು ಬಿಟ್ಟು ಉಳಿದೆಲ್ಲ ಹೋರಾಟಗಳಿಗೆ ಮುಂದಾಗಬೇಕಿತ್ತು. ಕಳೆದ ಶತಮಾನದ 70ರ ದಶಕದ ಹೊತ್ತಿನಲ್ಲಿ ತೆಲುಗಿನಿಂದ ಕನ್ನಡಕ್ಕೆ ಬಂದಿದ್ದ ಹತ್ತಾರು ಕ್ರಾಂತಿಕಾರಿ ಹೋರಾಟದ ಹಾಡುಗಳು ಈ ರಾಜಕೀಯ ಸಂದೇಶವನ್ನು ಸಾರಿಸಾರಿ ಹೇಳಿದ್ದವು. ಆದರೆ ಕರ್ನಾಟಕದ ಡಿಎಸ್ಎಸ್ ಆ ಹೋರಾಟದ ಹಾಡುಗಳನ್ನು ನಿದ್ದೆ ಮಂಪರಿನಲ್ಲಿ ಹಾಡಿತು. ಚಾರಿತ್ರಿಕವಾಗಿ ಶೋಷಕ ವ್ಯವಸ್ಥೆ ದಲಿತ ಹೋರಾಟವನ್ನು ನಾಶಮಾಡಬೇಕಿತ್ತು ಇಲ್ಲವೆ ಶೋಷಣಾ ವ್ಯವಸ್ಥೆಗೆ ಪೂರಕವಾಗಿ ಮಾರ್ಪಡಿಸಬೇಕಿತ್ತು.



ಇದಕ್ಕೆ ವಿರುದ್ಧವಾಗಿ ಡಿಎಸ್‌ಎಸ್ ಭೂಮಾಲೀಕ ವರ್ಗದೊಂದಿಗೆ ಯಾವುದೇ ರೂಪದ ರಾಜಿಸಂಧಾನವನ್ನು ಮಾಡಿಕೊಳ್ಳಬೇಕಿತ್ತು ಇಲ್ಲವೆ ದಲಿತ ಹೋರಾಟ ತನ್ನ ದಾರಿಯಲ್ಲಿ ರಾಜಿ ರಹಿತ ಕ್ರಾಂತಿಕಾರಿ ಮಾರ್ಗವನ್ನು ಹಿಡಿಯಬೇಕಿತ್ತು.

ಈ ಸವಾಲುಗಳನ್ನು ಶೋಷಕ ಭೂಮಾಲೀಕ ವರ್ಗ ಚಾರಿತ್ರಿಕವಾಗಿ ನಿಭಾಯಿಸಿದ ಕ್ರಮ ಮಾತ್ರ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ತುಂಬಾ ರೋಚಕವಾದುದು. ಕೆ.ಎಸ್. ಭಗವಾನ್ ಅವರು ತಮ್ಮ 'ಶಂಕರಾಚಾರ್ಯ ಮತ್ತು ಪ್ರತಿಗಾಮಿತನ' ಪುಸ್ತಕದಲ್ಲಿ ಒಂದು ಕಡೆ ಈ ವಿವರಣೆಯನ್ನು ಹೀಗೆ ಕೊಟ್ಟಿದ್ದಾರೆ. 'ಹೊಲೆಯ ಮತ್ತು ಹಾರುವ ಕಡುಬಡವರೆಂದು ಇಟ್ಟುಕೊಳ್ಳೋಣ. ಜೀವನೋಪಾಯಕ್ಕಾಗಿ ಬೀದಿ ಬದಿಯಲ್ಲಿ ಹಾರುವ ಕುಳಿತು ವಡೆ ಚಕ್ಕುಲಿ ಮುಂತಾದ ತಿಂಡಿ ತಿನಿಸುಗಳನ್ನು ಮಾಡಿ ಮಾರಾಟ ಮಾಡುತ್ತಾನೆ. ಅದೇ ರೀತಿ ಹೊಲೆಯ ತಿಂಡಿ ತಯಾರಿಸಿದರೆ ಎಷ್ಟು ಜನ ಕೊಂಡುಕೊಳ್ಳುತ್ತಾರೆ?" ಇದನ್ನು ಕೇಳಿದರೆ ಯಾರಾದರೂ ರೋಮಾಂಚನಗೊಂಡಾರು. ಇದನ್ನೇ ವಾಸ್ತವ ಎಂತಲೂ ತಿಳಿದಾರು. ಹಾಗಾಗಿ ವಿವರಣೆಯಲ್ಲಿರುವ ಅಪಾಯಕಾರಿ ನಯವಂಚನೆಯನ್ನು ಸ್ಪಷ್ಟಮಾಡಿಕೊಳ್ಳಬೇಕು. ಈ ವಿವರಣೆಯಲ್ಲಿ ದಲಿತರನ್ನು ಬ್ರಾಹ್ಮಣರ ಮೇಲೆ ಎತ್ತಿ ಕಟ್ಟಲಾಗಿದೆ. ಅದೇ ಕಾಲಕ್ಕೆ ಬ್ರಾಹ್ಮಣೇತರ ಜಮೀನ್ದಾರಿ ವರ್ಗವನ್ನು ದಲಿತರ ಶತ್ರು ಅಲ್ಲ ಎಂದು ವೈಚಾರಿಕವಾಗಿ ಮುಚ್ಚಿಡಲಾಗಿದೆ. ಮೇಲಿನ ಉದಾಹರಣೆಯಲ್ಲಿ ದಲಿತರಿಗೆ ವಿರುದ್ಧವಾಗಿ ಬ್ರಾಹ್ಮಣರೂ ಅಲ್ಲದ ದಲಿತರೂ ಅಲ್ಲದ ಯಾವುದೇ ಮಧ್ಯಮ ಜಾತಿಯನ್ನು ತರಬಹುದಾಗಿತ್ತು. ಆದರೆ ಬ್ರಾಹ್ಮಣರನ್ನು ವಿರೋಧಿಸುವ ನೆಪದಲ್ಲಿ ದೈನಂದಿನ ಜೀವನದಲ್ಲಿ ದಲಿತರ ಶತ್ರುಗಳಾಗಿರುವ ಮಧ್ಯಮ ಜಾತಿಗಳು ಮಾಡುವ ಶೋಷಣೆಯನ್ನು ಮುಚ್ಚಿಡಲಾಗಿದೆ. ಈ ಬಗೆಯ ವಿಚಾರವಾದ ಕಳೆದ 30-40 ವರುಷಗಳಲ್ಲಿ ದಲಿತ ಚಿಂತಕರನ್ನು, ಸಾಹಿತಿಗಳನ್ನು ನಯವಾಗಿ ವಂಚಿಸಿದೆ.

ದಲಿತರು ಊಳಿಗಮಾನ್ಯಶಾಹಿ ಶೋಷಣೆಯಲ್ಲಿದ್ದಾರೆ. ಹಾಗಾಗಿ ಊಳಿಗಮಾನ್ಯ ಶಾಹಿ ಶೋಷಣೆಯಿಂದ ದಲಿತರನ್ನು ಬೇರ್ಪಡಿಸುವಂತಿಲ್ಲ. ವಾಸ್ತವ ಹೀಗಿದ್ದರೂ ವೈಚಾರಿಕವಾಗಿ ದುರಂತವೇನಾಯಿತು ಎಂದರೆ ವರ್ತಮಾನದ ಭೂಮಾಲೀಕ ವರ್ಗವು ಮಾಡುವ ಶೋಷಣೆಯನ್ನು ಮುಚ್ಚಿಟ್ಟು 'ದಲಿತರೆ ನಿಮ್ಮ ಶತ್ರುಗಳು ಬ್ರಾಹ್ಮಣರು, ವೈದಿಕರು, ಪುರೋಹಿತಶಾಹಿಗಳು' ಎಂದು ಚರಿತ್ರೆಯಲ್ಲಿ ಗ್ರಾಂಥಿಕ ಮಾಹಿತಿಗಳನ್ನು ದಲಿತರಿಗೆ ತೋರಿಸಲಾಯಿತು. ಬ್ರಾಹ್ಮಣ - ಶೂದ್ರ ಎಂದು ವಿಂಗಡಣೆ ಮಾಡಲಾಯಿತು. ಪಂಚಮರಾದ ದಲಿತರನ್ನು ಭೂಮಾಲೀಕಪರ ಶೂದ್ರ ಚೌಕಟ್ಟಿನಲ್ಲಿ ಗ್ರಾಂಥಿಕವಾಗಿ / ವೈಚಾರಿಕವಾಗಿ ಸೇರಿಸಲಾಯಿತು. ಸಂಘಟಿತ ದಲಿತರಿಗೆ ಊಳಿಗಮಾನ್ಯಶಾಹಿಯ ಮೇಲೆ ವರ್ತಮಾನದಲ್ಲಿ ಹೆಪ್ಪುಗಟ್ಟಿದ್ದ ಅಸಹನೆ ಹಾಗೂ ಆಕ್ರೋಶವನ್ನು ನಯವಾಗಿ ಬ್ರಾಹ್ಮಣರ



ವಿರುದ್ಧ ತಿರುಗಿಸಲಾಯಿತು. ದಲಿತ ಚಿಂತಕರು ಬ್ರಾಹ್ಮಣ ವಿರೋಧದ ಗ್ರಾಂಥಿಕ ಹೇಳಿಕೆಗಳನ್ನು ಕಂಠಪಾಠ ಮಾಡಿಕೊಂಡರು. ಇದು ದಲಿತ ಮುಖಂಡರ ಮತ್ತು ದಲಿತ ಸಾಹಿತಿ ಚಿಂತಕರ ಬಾಯಿಯಿಂದ ಉದುರುವುದನ್ನು ನೋಡಲು ವ್ಯವಸ್ಥೆಯ ಪರ ಚಿಂತಕರು ಖುಷಿಯಿಂದ ಕಾಯುತ್ತ ಕುಳಿತರು. ಹಾಗಾಗಿಯೆ ಅನೇಕ ದಲಿತರಿಗೆ 'ಮನುಧರ್ಮಶಾಸ್ತ್ರ'ದ ಬಗ್ಗೆ ಇರುವ ಅಸಹನೆ ಮತ್ತು ಆಕ್ರೋಶ ಭೂಮಾಲೀಕ ವ್ಯವಸ್ಥೆಯ ಮೇಲೆ ಇಲ್ಲ. ಉದಾರವಾದಿ ಮಾನವತಾವಾದದ ಮುಗ್ಧತೆಯಲ್ಲಿ ದಲಿತ ಚಿಂತಕ / ನಾಯಕರು ವರ್ತಮಾನಕ್ಕೆ ಬೆನ್ನು ಹಾಕಿ, ಚರಿತ್ರೆಯ ಪುರೋಹಿತಶಾಹಿ ವಿರೋಧದ ವಿಷವನ್ನು ಅಮೃತದಂತೆ ಉಂಡರು. ದಲಿತರ ವಿಚಾರ ಮತ್ತು ವಿಮರ್ಶಾ ಸಾಹಿತ್ಯದಲ್ಲಿ ದಲಿತರ ಕೇರಿಗಳಲ್ಲಿ ಇಲ್ಲದ ಅಮೂರ್ತ/ಗ್ರಾಂಥಿಕ ಹಾಗೂ ಕಲ್ಪಿತ ಬ್ರಾಹ್ಮಣ ವಿರೋಧ ಮಡುಗಟ್ಟಿರುವುದನ್ನು ಗಮನಿಸಬಹುದು.

ಎನ್‌ಜಿಓಗಳು ಈ ಆಲೋಚನೆಯ ಸೈದ್ಧಾಂತಿಕ ಲಾಭವನ್ನು ಪಡೆದು ದಲಿತರನ್ನು ಮತ್ತಷ್ಟು ದಾರಿ ತಪ್ಪಿಸಿವೆ. ಇದು ಭೂಮಾಲೀಕ ವರ್ಗಕ್ಕೂ ಖುಷಿ ತಂದಿದೆ. ದಲಿತರ ಮದುವೆಗೆ ಸಾಲ ಕೊಟ್ಟು ಆ ನೆಪದಲ್ಲಿ ಜೀತವನ್ನು ಮುಂದುವರಿಸುತ್ತಿರುವ ಭೂಮಾಲೀಕ ವರ್ಗಕ್ಕೆ ದಲಿತರು ಬ್ರಾಹ್ಮಣರನ್ನು ವಿರೋಧಿಸಿದರೆ ತುಂಬಾ ಖುಷಿಯಾಗುತ್ತದೆ. ಇದರ ಭಾಗವಾಗಿ ದಲಿತರ, ಪ್ರಗತಿಪರರ ಮದುವೆಗಳಲ್ಲಿ 'ಪುರೋಹಿತಶಾಹಿಯ ವಿರೋಧ' ಎಗ್ಗಿಲ್ಲದೆ ಮುಂದುವರಿದಿದೆ. ಆದರೆ ದಲಿತರ ಮದುವೆಗಳಿಗೆ ಸಾಲ ಕೊಟ್ಟು ಒಂದಕ್ಕೆ ನೂರು ಸುಳ್ಳು ಲೆಕ್ಕ ಬರೆದುಕೊಂಡು ದಲಿತರನ್ನು ಜೀತಕ್ಕಿಟ್ಟುಕೊಳ್ಳುವ ಭೂಮಾಲೀಕರ ಕ್ರೌರ್ಯವನ್ನು ಯಾರೂ ಪ್ರಸ್ತಾಪ ಮಾಡುತ್ತಿಲ್ಲ.

## ಫ್ಯೂಡಲ್ ಸ್ಟೇಟಸ್‌ವರ್ಸಸ್ ದಲಿತರ ಸೆಕ್ಯುಲರ್ ಸ್ಟೇಟಸ್

ದಲಿತ ಹೋರಾಟ ಊಳಿಗಮಾನ್ಯ ಭೂಸಂಬಂಧಗಳನ್ನು ಮುಟ್ಟದಂತೆ ಅದನ್ನು ದಾರಿ ತಪ್ಪಿಸಲಾಯ್ತು. ಆದರೆ ದಲಿತ ಹೋರಾಟವು 'ಊಳಿಗಮಾನ್ಯ ಸಾಮಾಜಿಕ ಸ್ಥಾನಮಾನ'ವನ್ನು ಮೊದಲ ಬಾರಿಗೆ ಚಾರಿತ್ರಿಕವಾಗಿ ಕೆಣಕಿತು. ಈ ಕಡೆ ದಲಿತ ಹೋರಾಟದ ಜೊತೆಯಲ್ಲಿ ದಲಿತರ ಪ್ರಜಾತಾಂತ್ರಿಕ ಸ್ವಾಭಿಮಾನ ಚಿಗುರುತ್ತಿದ್ದರೆ - ಆ ಕಡೆ ಊಳಿಗಮಾನ್ಯ ಸಾಮಾಜಿಕ ಸ್ಥಾನಮಾನ ತೆಳುವಾಗಿ ಸಡಿಲಗೊಳ್ಳುವ ಇಕ್ಕಟ್ಟಿಗೆ ಒಳಗಾಯಿತು. ಇವೆರಡೂ ಪರಸ್ಪರ ಸಾಮಾಜಿಕ ಸಂಘರ್ಷಕ್ಕೆ ಒಳಗಾದವು. 80ರ ದಶಕದಲ್ಲಿ ದಲಿತ ಸಮೂಹದಲ್ಲಿ ಒಂದು ಸಾಮಾಜಿಕ ಪಲ್ಲಟ ನಡೆಯಿತು. ಹೊಸ ತಲೆಮಾರಿನ ದಲಿತರು ತಮ್ಮ ವ್ಯಕ್ತಿನಾಮಗಳನ್ನು ಬದಲಾಯಿಸಿಕೊಂಡರು. ಇದು ಕರ್ನಾಟಕದ ಸಾಮಾಜಿಕ ಚರಿತ್ರೆಯಲ್ಲಿ ಒಂದು ಬಗೆಯ ಅಗೋಚರವಾದ ಸಾಮಾಜಿಕ

ಕ್ರಾಂತಿ. ಇದು ಪ್ರಜ್ಞಾಪೂರ್ವಕವಾಗಿ ಸಂಘಟನಾತ್ಮಕವಾಗಿ ನಡೆದದ್ದಲ್ಲ. ಹಳ್ಳಿಗಳಲ್ಲಿ ಮಧ್ಯಮ ಜಾತಿಯವರು ಮಂಜಯ್ಯನನ್ನು ಮಂಜ ಎಂತಲೂ, ಕಾಳಯ್ಯನನ್ನು ಕಾಳ ಎಂತಲೂ, ಬಸವಯ್ಯನನ್ನು ಬಸ್ಯ ಎಂತಲೂ, ತಿಪ್ಪಮ್ಮನನ್ನು ತಿಪ್ಪಿ ಎಂತಲೂ, ಕಾಳಮ್ಮನನ್ನು ಕಾಳಿ ಎಂತಲೂ ಹೆಸರುಗಳನ್ನು ಅರ್ಧಮಾಡಿ ಇಲ್ಲವೆ ವಿಕೃತ ಮಾಡಿ ಸಂಬೋಧಿಸುತ್ತಿದ್ದರು. ಕುವೆಂಪು ಕಾದಂಬರಿಯಲ್ಲಿ ಇದಕ್ಕೆ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. ದೇವನೂರರ 'ಮೂಡಲ ಸೀಮೆಲಿ ಕೊಲೆ ಗಿಲೆ ಮುಂತಾಗಿ' ಕತೆಯಲ್ಲಿ ರಾಜ ಒಂದು ಮಾತು ಹೇಳ್ತಾನೆ. 'ಅಪ್ಪ ಅಪ್ಪ ಶಂಬು ನನ್ನ ರಾಜ ಅನ್ನಕಿಲ್ವಂತೆ ಗೀಜ ಅಂತಾನಂತೆ' ಎಂದು. ಅವರಪ್ಪಗೆ ಅದು ದೊಡ್ಡ ಸಮಸ್ಯೆಯಾಗಿ ಕಾಣುವುದಿಲ್ಲ. ಆದರೆ ಬಾಲಕ ರಾಜುಗೆ ಅದು ದೊಡ್ಡ ಸಮಸ್ಯೆಯಾಗಿದೆ. ಈ ರೀತಿ ಹೆಸರುಗಳನ್ನು ವಿಕೃತಗೊಳಿಸಿ ಕರೆಯುತ್ತಿದ್ದವರಿಗೆ ಒಮ್ಮೆಲೆ ರಮೇಶ, ಪ್ರಕಾಶ, ಗಣೇಶ, ಕಮಲ, ವಿಮಲ, ಸುಧಾ ಮುಂತಾದ ಹೆಸರುಗಳು ಅತ್ತ ದಲಿತ ಕೇರಿಯಲ್ಲೂ, ಇತ್ತ ಭೂಮಾಲೀಕರ ಮನೆಯಲ್ಲೂ ಒಮ್ಮೆಲೆ ರೂಢಿಗೆ ಬಂದವು. ಇತ್ತ ಭೂಮಾಲೀಕರ ಮನೆಯಲ್ಲೂ; ಅತ್ತ ಭೂಮಾಲೀಕರ ಕೂಲಿ ಮಾಡಿಸುವಲ್ಲೂ ಒಂದೇ ರೂಪದಲ್ಲಿ ಹೆಸರುಗಳು ಬಂದುದರಿಂದ ಅವುಗಳ ರೂಪ ವ್ಯತ್ಯಾಸ ಮಾಡಿ ಅಥವಾ ವಿಕೃತ ಮಾಡಿ ಕರೆಯಲು ಕಷ್ಟವಾಯಿತು. ಇದು 'ಊಳಿಗಮಾನ್ಯ ಸಾಮಾಜಿಕ ಸ್ಥಾನಮಾನ'ದ ಅಂತರಂಗಕ್ಕೆ ತೀವ್ರವಾದ ಮತ್ತು ಅಪಾರವಾದ ಅಪಮಾನವನ್ನು ಉಂಟುಮಾಡಿತು. ವ್ಯಕ್ತಿ ನಾಮಗಳಲ್ಲದೆ ಬಿಡಿಬಿಡಿಯಾದ ಕೆಲವು ಆರ್ಥಿಕ ಕಾರಣಗಳೂ, ಆಡಳಿತ ವಿಕೇಂದ್ರೀಕರಣದಂತಹ ಆಳುವ ವರ್ಗದ ರಾಜಕೀಯ ಪ್ರಯತ್ನಗಳೂ ಊಳಿಗಮಾನ್ಯ ಸಮಾಜವನ್ನು ಮತ್ತೊಂದು ರೀತಿಯಲ್ಲಿ ಕೆಣಕಿದವು. ಅಂದರೆ ಒಟ್ಟಾಗಿ ದಲಿತ ವರ್ಸಸ್ ಊಳಿಗಮಾನ್ಯಶಾಹಿಯ ನಡುವೆ ಘೋಷಿತ - ಅಘೋಷಿತ, ಗೋಚರ-ಅಗೋಚರ ನೆಲೆಯಲ್ಲಿ ಸಂಘರ್ಷ ತೀವ್ರವಾಯಿತು. ಹಾಗಾಗಿ ಕಳೆದ 30 ವರುಷಗಳ ದಲಿತರ ಚರಿತ್ರೆ ಎಂದರೆ ಅದರಲ್ಲಿ ಊಳಿಗಮಾನ್ಯಶಾಹಿ ಮೌಲ್ಯಗಳು ಅಪಮಾನವನ್ನು ಅನುಭವಿಸಿದ್ದು ಮಾತ್ರವಲ್ಲ, ಅದನ್ನು ಎದುರಿಸಿದ ಸಂಗತಿಯೂ ಸೇರಿದೆ. 'ಕುಸುಮಬಾಲೆ'ಯ 'ಮಧ್ವಾಚಾರ್ಯರ' ಪ್ರಸಂಗವನ್ನು ಸಾಂಪ್ರದಾಯಿಕ ಬ್ರಾಹ್ಮಣರ ಓದು ಹೇಗೆ ಗ್ರಹಿಸಿ ಪ್ರತಿಕ್ರಿಯಿಸುತ್ತದೊ ಗೊತ್ತಿಲ್ಲ. ಆದರೆ ಒಂದಂತೂ ನಿಜ. ಒಂದು ಕಡೆ ದಲಿತ ಹೋರಾಟ ಮತ್ತೊಂದು ಕಡೆ ದಲಿತ ಸಾಹಿತ್ಯಗಳು ಆರ್ಥಿಕ ಸಾಮಾಜಿಕ ಶ್ರೇಣೀಕರಣಗಳಿಗೆ ಕೆಲವು ಸವಾಲುಗಳನ್ನು ಒಡ್ಡಿದ್ದು ನಿಜ.

## ದಲಿತ ಸಾಹಿತ್ಯ : ಭಾಷಿಕ ಸಮಸ್ಯೆ

ದಲಿತ ಸಾಹಿತ್ಯ ಮತ್ತು ದಲಿತ ಚಳುವಳಿ ಮೇಲ್ವರ್ಗಗಳ ರಾಜಕೀಯ ಹುನ್ನಾರ ಹಾಗೂ ಪ್ರಭಾವಗಳಿಗೆ ಒಳಗಾಗಿದೆ. ಜೊತೆಗೆ ಶೋಷಕ ವರ್ಗಗಳ ಭಾಷಿಕ ಆಕೃತಿಗಳ



ಬಳಕೆಗೂ ಒಳಗಾಗಿದೆ. ದಲಿತರು ರಾಜಕೀಯವಾಗಿ ಆಲೋಚನೆ ಮಾಡದ ಕಾರಣವೂ ಇದರಲ್ಲಿ ಸೇರಿದೆ. ಉದಾ: 'ದಲಿತರು ಶತಶತಮಾನಗಳಿಂದ ಶೋಷಣೆಗೆ ಒಳಗಾಗಿದ್ದಾರೆ' ಎಂಬ ಪ್ರಸಿದ್ಧ ಹೇಳಿಕೆಯನ್ನೆ ತೆಗೆದುಕೊಳ್ಳೋಣ. ಮೇಲಿನ ಹೇಳಿಕೆಯಲ್ಲಿ ಶೋಷಣೆ ಎಂಬ ಸಾಮಾಜಿಕ ಕ್ರಿಯೆಯ ಉಲ್ಲೇಖ ಇದೆ. ಶೋಷಣೆ ಮಾಡುವ ಶೋಷಕರ ಹಾಗೂ ಅದನ್ನು ಅನುಭವಿಸುತ್ತಿರುವ ಶೋಷಿತ ದಲಿತರ ಪ್ರಸ್ತಾಪವೂ ಇದೆ. ಶೋಷಣೆಗೆ ಯಾರು ಕಾರಣ? ಎಂದು ಕೇಳಿದರೆ ದಲಿತರು ಕಾರಣ ಎಂದು ಶೋಷಕರು ಹೇಳುತ್ತಾರೆ. ಶೋಷಕರು ಕಾರಣ ಎಂದು ದಲಿತರು ಹೇಳುತ್ತಾರೆ. ಆದರೆ ಮೇಲಿನ ವಾಕ್ಯವನ್ನು ಸೂಕ್ಷ್ಮವಾಗಿ ಗಮನಿಸಿ. ಅದರಲ್ಲಿ ಶೋಷಣೆಗೆ ಕಾರಣ ದಲಿತರು ಎಂದಿದೆ. ಹೇಗೆಂದರೆ ಆ ಹೇಳಿಕೆಯಲ್ಲಿ ಶೋಷಣೆಗೆ ಒಳಗಾಗಿರುವವರನ್ನು ಸೂಚಿಸಲಾಗಿದೆ. ಶೋಷಣೆಗೆ ಒಳಗು ಮಾಡಿರುವವರನ್ನು ಸೂಚಿಸಿಲ್ಲ. ಅಂದರೆ ದಲಿತರು ಬಳಸುತ್ತಿರುವ ನುಡಿಗಟ್ಟು ಅವರದಲ್ಲ. ಅದು ಶೋಷಕರದು. ಶೋಷಕರ ನುಡಿಗಟ್ಟಿನಲ್ಲಿ ದಲಿತರು ತಮ್ಮ ವಿಚಾರಗಳನ್ನು, ಆಲೋಚನೆಗಳನ್ನು ಪ್ರಕಟಿಸುತ್ತಿದ್ದಾರೆ. ಭಾಷೆಯನ್ನೂ ಅದರ ಸಾಮಾಜಿಕ ಧೋರಣೆ ಹಾಗೂ ಪರಿಣಾಮವನ್ನೂ ಒಟ್ಟಾಗಿ ಗ್ರಹಿಸುವವರಿಗೆ ದಲಿತರು ಬಳಸುತ್ತಿರುವ ಭಾಷೆಯಲ್ಲಿ ಇಂತಹದೊಂದು ಸಮಸ್ಯೆ ಎದ್ದು ಕಾಣುತ್ತಿದೆ.

**ಅನುಬಂಧ - 1**

ಈ ನಾಡ ಮಣ್ಣಿನಲ್ಲಿ
ಮಣ್ಣಾದ ಜನಗಳ ಕತೆಯಾ
ಈ ನಾಡ ಮಣ್ಣಿನಲ್ಲಿ
ಮಣ್ಣಾಗಿ ಅರಳಿದ ಜನರಾ
ಹಣ್ಣಿನ ಗಿಡಗಳಲ್ಲಿ
ಹಣ್ಣಾಗಿ ಉದುರಿದ ಜನರಾ
ಕತೆಯನ್ನು ಹೇಳುತ್ತೀವಿ...
ಸಾರಿ ಸಾರಿ ಹೇಳುತ್ತೀವಿ
ಕಿವಿಗೊಟ್ಟು ಕೇಳಿರಣ್ಣಾ
ನೋವಿನ ರಾಗವನ್ನು...!
ಹೋರಾಟದ ಹಾಡು
.............................
ನಿನಗಾದ ಅನ್ಯಾಯ ನಮ್ಮೆದೆಗೆ ಚೂರಿ ಇರಿತ



ಗಾಯವ ಮರೆತು ಬದುಕಲಾರೆವು
ನನ ತಂಗಿ ಅನುಸೂಯ।
ಹೋರಾಟದ ಹಾಡು

**ಅನುಬಂಧ - 2**

ಓದದ ಅಣ್ಣ : ಶಹರದಾಗ ಓದಿದ ಶಾಣೆನಾದ ನನ ತಮ್ಮ ನಮ ರಾಷ್ಟ್ರ ಪಕ್ಷಿಯ ಹೆಸರೇನ ಕೋಲೆ.

ಓದಿದ ತಮ್ಮ : ಮಾಸ್ತರೇಳಿದ ಮಾತು ಪುಸ್ತಕದಾಗ ಇತ್ತು ಬಣ್ಣದ ನವಿಲೆಂದು ತಿಳಿದುಕೊಳ್ಳೊ ಕೋಲೆ.

ಓದದ ಅಣ್ಣ : ಮೂಡಣ ಸುದ್ದಿ ಮುಂಗೋಳಿ ತತ್ತಿ ಹಾಕೊ ಪುತ್ಥಳಿ ಕೋಳಿ ಕೆಂಗೋಳೆಂದು ಬರೆದುಕೊಳ್ಳೊ ಕೋಲೆ.

ಓದದ ಅಣ್ಣ : ಪಟ್ಟಣದಾಗೋದಿದ ಪಂಡಿತ ನಸ ತಮ್ಮ ನಮ ರಾಷ್ಟ್ರ ಪ್ರಾಣಿಯ ಹೆಸರೇನ ಕೋಲೆ.

ಓದಿದ ತಮ್ಮ : ಮಾಸ್ತರೇಳಿದ ಮಾತು ಪುಸ್ತಕದಾಗ ಇತ್ತು ಹುಲಿರಾಜನೆಂದು ತಿಳಿದುಕೊಳ್ಳೊ ಕೋಲೆ.

ಓದದ ಅಣ್ಣ : ದೇಶದ ಜಿತ್ತನೆ ಉದ್ಯೋಗ ಎತ್ತಿನ ಮ್ಯಾಲಿರುವಾಗ ಮಣ್ಣಿನ ಮಗ ನಮ್ಮ ಬಸವಣ್ಣ ಕೋಲೆ. ಮಣ್ಣಿನ ಮಗ ನಮ್ಮ ಬಸಣ್ಣ ಬಂಗಾರದ್ಯೋರಿ ಈ ರಾಷ್ಟ್ರಕ್ಕೆ ರಾಜನೆಂದು ಬರೆದುಕೊಳ್ಳೊ ಕೋಲೆ.

**ಅನುಬಂಧ - 3**

ಮುಳ್ಳಿನ ಬದುಕಿಗೆ ಹೂವಿನ ಹೆಸರಿಟ್ಟಿ
ಕ್ರಾಂತಿಯ ಕರಗಿಸಿ ಶಾಂತಿ ಬೀಜವ ನೆಟ್ಟಿ
ಭ್ರಾಂತಿಯ ಬೆಳೆ ತಿಂದು ನಾಡಾಯ್ತು ಪಾಂತಿ...
ಓ ನನ್ನ ಗಾಂಧಿ ನೀ ನಮ್ಮ ದೇಶಕ್ಕೆ ತಂದಿ ।
ಕೆಂಡದ ಕಿಡಿಗಳನ ಖಂಡುಗ ನೀರಿಗೆ ತುಳಿದಿ
ಭಾರತದ ಬಾವ್ಯಾಗ ಬೆಂಡಾಗಿ ತೇಲಿದಿ
ಉಂಡುಟ್ಟು ಉಪವಾಸ ಉಪದೇಶ ಮಾಡಿದ್ದಿ...
ಓ ನನ್ನ ಗಾಂಧಿ ನೀ ನಮ್ಮ ದೇಶಕ್ಕೆ ತಂದಿ...।
ಹೋರಾಟದ ಹಾಡು



ಬೆವರೂರು ಬೆಂದೂರು ಬಡತನದ ತವರೂರು
ಬೇಸರಾಗಿ ಬೆಂಗಳೂರಿಗೆ ಬಂದೆವಲ್ಲೊ
ಈ ಗುಲಾಬಿ ನಗರದಾಗ ಗುಡಿಸಲು ಯಾಕಂತ
ಬ್ಯಾಡೆಂದು ಬೆಂಗಳೂರು ದಬ್ಬಿತಲ್ಲ
ನಮ್ಮ ಬ್ಯಾಡೆಂದು ಬೆಂಗಳೂರು ದಬ್ಬಿತಲ್ಲ ।

## ಅನುಬಂಧ - 4

ಹಾಲು ಕುಡಿವ ಕೂಸು ಕೂಲಿಗೆ ಹೋಗುತಾದ ದಿವಸ
ತುತ್ತು ಕೂಳಿಗೆ ಗುಟುಕು ಗಂಜಿಗೆ ಬದುಕು ಬಿಟ್ಟಿ ಆತಾ...।
ಹೋರಾಟದ ಹಾಡು








# ಬೇಡ ಬುಡಕಟ್ಟಿನ ಸಾಂಸ್ಕೃತಿಕ – ಚಾರಿತ್ರಿಕ ಐತಿಹ್ಯಗಳು

– ಡಾ. ಎಲ್. ಲಕ್ಷ್ಮೀದೇವಿ
ಸಹ ಪ್ರಾಧ್ಯಾಪಕರು, ಎಫ್.ಎಂ.ಕೆ.ಸಿ. ಕಾಲೇಜು, ಮಡಿಕೇರಿ

ಬೇಡರ ಸಂಸ್ಕೃತಿಯ ಮೂಲವನ್ನು ಮಾದಿಗರ ಸಾಂಸ್ಕೃತಿಕ ವಿಘಟನೆಯೊಂದಿಗೆ ಗುರುತಿಸಬಹುದಾದ ಕುರುಹುಗಳು ಕಂಡುಬರುತ್ತವೆ. ಐತಿಹ್ಯವೊಂದರಂತೆ ಭೂಮಿಯನ್ನು ಸೀಳಿಕೊಂಡು ಮೊದಲಿಗೆ ಆದಿಜಾಂಬವನು ಹುಟ್ಟಿದ. ನಂತರ ಬೇಡರ ಬೊಮ್ಮಣ್ಣನು ಭೂಮಿಯಿಂದ ಹೊರಬರಲು ಪ್ರಯತ್ನಿಸುತ್ತಿದ್ದ. ಆದರೆ ಆದಿಜಾಂಬವನು ಅಂಥ ಸ್ಥಳಗಳನ್ನು ಕಾಲಿನಿಂದ ಹೊಸೆಯತೊಡಗಿದ. ಇದರಿಂದ ಬೊಮ್ಮಣ್ಣನಿಗೆ ಭೂಮಿಯಿಂದ ಹೊರಬರಲು ಅಸಾಧ್ಯವಾಯಿತು. ಕೊನೆಗೆ ಜಾಲಿಯ ಮುಳ್ಳಿನ ಪೊದೆಗಳಲ್ಲಿ ಹೊರಮೂಡಿದ. ತನ್ನ ಬುಡಕಟ್ಟಿನ ವೇಷ ಭೂಷಣಗಳಾದ ಕೋರಿ, ಲಂಗೋಟಿ, ನಾರಿನ ಉಡುದಾರಗಳನ್ನು ಹೊಂದಿ ಕೈಯಲ್ಲಿ ರುಡ್ಡಿ ಕಟ್ಟಿಗೆ (ಬೇಟೆಯ ದೊಣ್ಣೆ) ಇತ್ಯಾದಿ ಅಧಿಕೃತತೆಗಳೊಂದಿಗೆ ಬಂದವನೇ ತನ್ನ ಎದುರಾಳಿಯನ್ನು ನಿಯಂತ್ರಿಸಿದ. ಆಗ ಅಷ್ಟರಲ್ಲಿ ಒಂದು ವರ್ಷದವನಾಗಿ ಬೆಳೆದಿದ್ದ ಆದಿಜಾಂಬವನನ್ನು ಒಂದು ದಿನದ ತಂಗಟೆಯ ಗಿಡದ ಬರಲಿನಿಂದ ನಿಯಂತ್ರಿಸಿದ. ಆತನು ಬೊಮ್ಮಣ್ಣನನ್ನು ತಂದೆಯ ಸ್ಥಾನದಲ್ಲಿಟ್ಟು ಗೌರವಿಸುವುದಾಗಿ ಸಂಧಾನ ಮಾಡಿಕೊಂಡ. ಅಂದಿನಿಂದ ತಂದೆ-ಮಕ್ಕಳ ಸಂಬಂಧವನ್ನು ರೂಢಿಸಿಕೊಂಡರು. ಈ ಐತಿಹ್ಯದ ಪ್ರಕಾರ ಮಾದಿಗರ ಬೇಡರಿಗಿಂತ ಪ್ರಾಚೀನರು, ಆದರೆ ಬೇಡರ ಆಕ್ರಮಣಕ್ಕೆ ಒಳಗಾದವರೆಂದು ತಿಳಿಯಬಹುದು. ಅಂತೆಯೇ ಅಂದಿನ ಸಂಧಾನದ



ನೆನಪುಗಳು ಈಗಲೂ ಪರಂಪರೆಯ ಸಾಮರಸ್ಯಗಳಾಗಿ ಮಾರ್ಪಟ್ಟಿರುವುದು ವಿಸ್ಮಯ ತರಿಸುವ ಸಂಗತಿಯಾಗಿದೆ.

ಬೇಡರು ಮತ್ತು ಮಾದಿಗರ ಬಹುಪಾಲು ಗೋತ್ರಗಳು ಒಂದೇ ಆಗಿವೆ. ಅಂತೆಯೇ ಬೇಡ ಕುಟುಂಬಗಳ ಆಚರಣೆಗಳಲ್ಲಿ ಮಾದಿಗ ನಿರ್ದಿಷ್ಟ ಕುಟುಂಬಗಳ ಹಿರಿಯರು ಆಯಗಾರರ ಹಕ್ಕಿನೊಂದಿಗೆ ಕೆಲಸ ನಿರ್ವಹಿಸುತ್ತಾರೆ. ನಂತರ ಈ ಸಂಬಂಧಿ ಮರ್ಯಾದೆಗಳೊಂದಿಗೆ ಹೊಸ ಬಟ್ಟೆಗಳನ್ನು ಆಯದ ರೂಪದಲ್ಲಿ ಧಾನ್ಯಗಳನ್ನು, ಕಾಣಿಕೆಯಾಗಿ ಹಣವನ್ನು ಅಧಿಕಾರಯುತವಾಗಿ ಪಡೆಯುತ್ತಾರೆ. ಬೇಟೆಗಾರಿಕೆಯಲ್ಲಿ ಬೇಡರೊಂದಿಗೆ ಭಾಗವಹಿಸುತ್ತಾರೆ ಹಾಗೂ ಬೇಟೆಯ ಪಾಲನ್ನು ತಮ್ಮ ಹಕ್ಕಿನ ಅಧಿಕೃತತೆಯೊಂದಿಗೆ ಸ್ವೀಕರಿಸುತ್ತಾರೆ. ಊರೊಟ್ಟಿನ ಮಾರಿಯ ಜಾತ್ರೆಯಲ್ಲಿ ಕೋಣವನ್ನು ಕಡಿಯುವ ಹಕ್ಕು ಬೇಡರದಾಗಿರುತ್ತದೆ. ಅಂತೆಯೇ ಮಾದಿಗರ ದೊಡ್ಡಿ ದ್ಯಾವರ ಆಚರಣೆಯಲ್ಲಿ ಬೇಡರ ಮುಖಂಡರು ಭಾಗವಹಿಸುತ್ತಾರೆ. ತಂಗಟೆಯ ಗಿಡಕ್ಕೆ ಮಾದಿಗರಲ್ಲಿ ದೈವದ ಸ್ಥಾನವಿದ್ದು ತಂಗಟೆದ್ಯಾವರ ಆಚರಣೆ ಮಹತ್ವ ಪಡೆದಿದೆ. ಬೇಡರು ತಲೆ ಕಡಿದು ಕೊಲೆಗೈದ ಪಾಪವು ತಂಗಟೆಗಿಡವನ್ನು ದಾಟಿದರೆ ನಿವಾರಣೆಯಾಗುತ್ತದೆಂದು ನಂಬಿಕೆ ಇದೆ. ಈ ಹಿನ್ನೆಲೆಯಲ್ಲಿ "ತಲೆ ಕಡಿದು ತಂಗಟೆಗಿಡ ದಾಟುವವರು' ಎಂದೂ ಹೇಳಿಕೆ ಜನಪದರಲ್ಲಿ ಜನಜನಿತವಾಗಿದೆ. ಮ್ಯಾಸಬೇಡರ ಸಾವಿನ ಆಚರಣೆಗಳಲ್ಲಿ ತಂಗಟೆಯ ಗಿಡಕ್ಕೆ ವಿಶೇಷ ಮಹತ್ವವಿರುವುದನ್ನು ಗಮನಿಸಬಹುದು.

ಬೇಡರ ಕೆಲವು ಗೋತ್ರಗಳು ಲಿಂಗಾಯಿತ ಸಾದರರ ಕೆಲವು ಗೋತ್ರಗಳು ಒಂದೇ ರೀತಿಯಲ್ಲಿ ಕಂಡುಬರುತ್ತವೆಯೆಂದು ಹೇಳಲಾಗುತ್ತದೆ. ಪಾಳೆಯಗಾರ ಕಾಲದಲ್ಲಿ ವೀರಶೈವ ಧರ್ಮಕ್ಕೆ ಮಾರ್ಪಾಟಾದ ಬೇಡ ಸಂಸ್ಕೃತಿಯ ಕೆಲವು ಕುಟುಂಬಗಳ ಪಲ್ಲಟ ಈಗಾಗಲೇ ಸ್ಪಷ್ಟವಾಗಿದೆ. ಪಾಳೆಯಗಾರರು ಲಿಂಗಾಯತರಾಗಿ ಪರಿವರ್ತನೆಯಾದಾಗಲೂ ತಮ್ಮ ಗೋತ್ರದ ಅಧಿಕೃತತೆಯನ್ನು ಉಳಿಸಿಕೊಂಡಿದ್ದರ ಅನನ್ಯತೆ ಇದಾಗಿದೆ. ಅಂತೆಯೇ ತೆಲುಗಿನ ಆರ್ಯ ವೈದಿಕರ ಕೆಲವು ಗೋತ್ರಗಳಿಗೂ ಬೇಡರ ಗೋತ್ರಗಳಿಗೂ ಸಾಮ್ಯತೆ ಇರುವುದೆಂದು ಹೇಳುತ್ತಾರೆ. ಇದಕ್ಕೆ ಪೂರಕವಾಗಿ ಮಾದಿಗರು ತಮ್ಮ ಅನನ್ಯತೆಯನ್ನು ಈ ಕೋಮುಟಿಗಳ ಸಂಸ್ಕೃತಿಯೊಂದಿಗೆ ಗುರುತಿಸಿಕೊಳ್ಳುವುದನ್ನು ಪರಿಗಣಿಸಬೇಕಾಗುತ್ತದೆ. ತಾವು ಕೋಮುಟಿಗಳ ಅಣ್ಣ-ತಮ್ಮಂದಿರೆಂದು ಮಾದಿಗರ ನಂಬಿಕೆ ಐತಿಹ್ಯಗಳು ಸಮರ್ಥಿಸುತ್ತದೆ. ಆದರೆ ಕೋಮಟಿಗಳು ಇದನ್ನು ಒಪ್ಪುವುದಿಲ್ಲ. ಸಾರಾಸಗಟಾಗಿ ತಳ್ಳಿ ಹಾಕುತ್ತಾರೆ. ಮಾದಿಗರ ಪ್ರಕಾರ ಅರುಂಧತಿ ಅಥವಾ ಅರಂಜ್ಯೋತಿ ತಮ್ಮ ಮೂಲ ಮನೆತನದ ಹೆಣ್ಣುಗಳು. ಆಕೆಯನ್ನು ವಶಿಷ್ಟನು ವರಿಸಿ ಮದುವೆಯಾದ. ಆಗ ಮದುವೆಗೆ ಅಡ್ಡಿಪಡಿಸಿದ ಅಣ್ಣತಮ್ಮಂದಿರ ಗುಂಪಿಗೆ ಆಕೆ ಶಾಪ ನೀಡಿದಳು. "ಅಂಗಡಿ ಅಕ್ಕಿ; ತಂಗಟೆ ಪುಲ್ಲೆ

(ಉರುವಲು) ನಿಮ್ಮದಾಗಲಿ" ಎಂದು. ಆದ್ದರಿಂದ ಈ ಸಹೋದರರು ದರಿದ್ರವಂತರಾದ ಮಾದಿಗರಾದರು. ತನ್ನ ಮದುವೆಯನ್ನು ಪುರಸ್ಕರಿಸಿದ ಅಣ್ಣ ತಮ್ಮಂದಿರಿಗೆ "ನಿಮ್ಮಲ್ಲಿ ಸದಾ ಕಾಲ ಲಕ್ಷ್ಮಿ ನೆಲೆಸಿದ್ದು ಸುಖವಾಗಿರಿ" ಎಂದು ಹಾರೈಸಿದಳು. ಅಂತೆಯೇ ಅವರು ಕೋಮಟಿಗಳಾಗಿ ಬೇರ್ಪಟ್ಟರು ಎಂದು ಹೇಳುತ್ತಾರೆ.

ತಾವು ಮೂಲತಃ ಬೇಡರು ಎಂದು ಹೇಳಿಕೊಳ್ಳುವ ದುರುಗ-ಮುರುಗಿಯರು ಬೇಟೆಗಾರಿಕೆ, ಪಾಳೆಗಾರಿಕೆ, ಕೃಷಿ, ಪಶುಪಾಲನೆ ಇತ್ಯಾದಿ ಬೇಡರ ವೃತ್ತಿ ವಿಕಾಸದ ನೆನಪುಗಳಿಂದ ವಂಚಿತರಾಗಿದ್ದಾರೆ. ಮೂಲತಃ ಗಂಗಮತಸ್ಥ ಅಥವಾ ಮೀನುಗಾರ ಬೇಡರೆಂದು ಹೇಳುತ್ತಾರೆ. ಪಾಳೆಯಗಾರರ ದುರ್ಗಗಳ ಅಧಿದೇವತೆಯ ಆರಾಧಕರು ಇವರು. ಬೇಡರು ದುರ್ಗಮಯ ಪ್ರದೇಶಗಳಲ್ಲಿ ವಾಸಮಾಡುತ್ತಾ ಮುಂದುವರಿದು ಅಲ್ಲಿ ಕೋಟೆ-ಕೊತ್ತಳಗಳನ್ನು ಕಟ್ಟಿಕೊಂಡಾಗ ದುರ್ಗಮ್ಮ, ಕೊತ್ತಲಮ್ಮ ಎಂದು ದೇವತೆಗಳನ್ನು ಆರಾಧಿಸತೊಡಗಿದರು. ಆಗ ಇದೇ ಸಮುದಾಯದ ಅರ್ಚಕ ವೃತ್ತಿಯನ್ನು ಶತ್ರು ದಾಳಿಗಳಿಂದ ತಮ್ಮ ದೇವತೆಗಳನ್ನು ಸಂರಕ್ಷಿಸಿ ಅಲೆಮಾರಿ ಗಳಾಗಿರಬಹುದು. ದುರ್ಗಿಯು ರಾಕ್ಷಸನೊಬ್ಬನನ್ನು ಸಂಹಾರ ಮಾಡಿದ ಐತಿಹ್ಯವನ್ನು ಸಾರುತ್ತಾ, ಪೆಟ್ಟಿಗೆ ಗುಡಿಯಲ್ಲಿ ದೇವಿಯನ್ನು ಹೊತ್ತು ಭಿಕ್ಷೆ ಬೇಡುತ್ತಾರೆ. ಪೂಜಾರಿ ದೇವಿಯ ಅವಾಹನೆಯಾದ ರಾಕ್ಷಸನ ಸಂಕೇತವಾಗಿ ತನ್ನನ್ನು ತಾನು ರಕ್ತ ಬರುವಂತೆ ಚಾಟಿಯಿಂದ ಶೀಡಿಕೊಳ್ಳುತ್ತಾ ಶಿಕ್ಷಿಸಿಕೊಳ್ಳುತ್ತಾನೆ. ಅದೇ ಸಮಯದಲ್ಲಿ ಪೂಜಾರಿಣಿಯು ಉರುಮೆ ಬಡಿಯುತ್ತಾ ಪ್ರದರ್ಶನಕ್ಕೆ ಆಕರ್ಷಣೆಯ ಮೆರುಗು ನೀಡುತ್ತಾಳೆ. ಇದು ದುಷ್ಟ ಶತ್ರುವನ್ನು ಬೇಡರ ಹೆಣ್ಣು ಮಗಳು ಶಿಕ್ಷಿಸಿದ್ದರ ಸಂಕೇತವಾಗಿದೆ.

ಬೇಡ ಎಂಬ ಬುಡಕಟ್ಟು ಮೂಲದಲ್ಲಿ ಬೇಟೆಗಾರಿಕೆಯನ್ನು ಅವಲಂಬಿಸಿದ್ದುದು ವೃತ್ತಿ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡರು. ಆಗ ಗುಂಪುಗಳು ವಿಂಗಡಣೆಗೊಂಡು ಹಾಲುಬೇಡ, ಮೊಂಡಬೇಡ, ಸಂಚಲವರು, ಕೊಂಡರಾಜಲು, ಪರಿವಾರದವರು, ಬಿಲ್ಲರು ಎಂದು ಗುರುತಿಸಿಕೊಂಡದ್ದಲ್ಲದೆ, ನಾಯಕ, ತಳವಾರ ಎಂಬಿತ್ಯಾದಿ ಆಡಳಿತಾತ್ಮಕ ಹುದ್ದೆಗಳಲ್ಲಿ ಹಂಚಿಹೋದರು. ಅಂತೆಯೇ ಪಾಳೆಯಗಾರ ದೊರೆ ಎಂಬ ಅಧಿಕಾರಗಳನ್ನು ಕೆಲವರು ತಮ್ಮದಾಗಿಸಿಕೊಂಡರು. ಈ ನಾಯಕರು ತಮ್ಮ ಕುಲದೇವತೆಯ ಅನನ್ಯತೆಯನ್ನು ಉಳಿಸಿಕೊಳ್ಳಲು ಮಾರಮ್ಮ ನಾಯಕರು, ಮುತ್ಯಾಲ ನಾಯಕರು ಮೊದಲಾಗಿ ಗುರುತಿಸಿಕೊಂಡಿದ್ದಾರೆ. ಪ್ರಾದೇಶಿಕವಾಗಿ ತಮ್ಮ ಆಡಳಿತ ಸೀಮೆಗಳೊಂದಿಗೆ ತಮ್ಮನ್ನು ಸಂಕೇತಿಸಿಕೊಳ್ಳುವಾಗ ಸುರಪುರದ ಪಾಳೆಯಗಾರರು, ಚಿತ್ರದುರ್ಗದ ಪಾಳೆಯಗಾರರು, ದಾರಿನಾಯಕನ ಪಾಳ್ಯದ ಅರಸು ವಂಶಸ್ಥರು, ಗುಮ್ಮನಾಯಕನ ಪಾಳ್ಯದ ದೊರೆಗಳು ಇತ್ಯಾದಿಯಾಗಿ ಕರೆಯಲ್ಪಟ್ಟರು.



ಬೇಡರು ಮೂಲತಃ ಕಾಡುಗಳಲ್ಲಿ ವಾಸಿಸುತ್ತಿದ್ದರಾದರೂ ನಾಡಿನ ಪ್ರಭಾವಕ್ಕೆ ಒಳಗಾಗುತ್ತ ಬಂದರು ಆಗ ಕೆಲವು ಗುಂಪುಗಳು ಊರುಗಳಲ್ಲಿ ನೆಲೆಸಿದರು. ಊರಿನ ಇತರೆ ಸಮುದಾಯಗಳ ಸಾಂಸ್ಕೃತಿಕ ವಾಹಿನಿಯಲ್ಲಿ ಬೆರೆತರು. ಹಲವು ವೃತ್ತಿಗಳಲ್ಲಿ ಮಿಳಿತಗೊಂಡರು. ಅಲ್ಲದೆ ತಮ್ಮ ಮೂಲಸಂಸ್ಕೃತಿಯ ನೆನಪುಗಳನ್ನು ಆಚರಣೆಗಳಲ್ಲಿ ಉಳಿಸಿಕೊಂಡರು. ಆಗ ಕಾಡಿನಲ್ಲಿಯೇ ಉಳಿದಿದ್ದ ಬೇಡರೊಂದಿಗೆ ಇವರ ಸಂಬಂಧಗಳು ಮುರಿದುಬಿದ್ದವು. ಬೇಟೆಗಾರಿಕೆಯ ಜೊತೆಗೆ ದನಕರುಗಳನ್ನು ಮೇಯಿಸುತ್ತಾ ಕಾಡುಗಳಲ್ಲಿಯೇ ಉಳಿದವರನ್ನು ಮ್ಯಾಸ ಬೇಡರೆಂದು ಕರೆದರು. ಇಂಥ ಪರಿಸರದಲ್ಲಿ ಊರುಗಳಲ್ಲಿನ ಬೇಡರು ಊರು ಬೇಡ ಅಥವಾ ಊರು ನಾಯಕರಾದರು. ಮ್ಯಾಸನಾಯಕರಿಲ್ಲದ ಪ್ರದೇಶಗಳಲ್ಲಿ ಊರು ನಾಯಕರೆಂದು ಪ್ರತ್ಯೇಕವಾಗಿ ಕರೆಯುವ ವಾಡಿಕೆ ಇಲ್ಲ. ಅವರನ್ನು ಬೇಡರು, ನಾಯಕರು ಎಂಬಿತ್ಯಾದಿಯಾಗಿ ಕರೆಯುತ್ತಾರೆ. ಆದರೆ ಮ್ಯಾಸಬೇಡರು ಎಲ್ಲೇ ಇದ್ದರೂ ತಾವು ಮ್ಯಾಸರು, ಮ್ಯಾಸನಾಯಕರು ಎಂಬುದಾಗಿ ಕರೆದುಕೊಳ್ಳುತ್ತಾರೆ.

ಮ್ಯಾಸಬೇಡರಲ್ಲಿ ಕಳ್ಳಮ್ಯಾಸ, ಮುಂಜಿಮ್ಯಾಸ, ಅಡವಿಮ್ಯಾಸ, ಊರು ಮ್ಯಾಸ ಮೊದಲಾದ ಪ್ರಭೇದಗಳಿವೆ. ಇವರು ಕಾಡುಗಳಲ್ಲಿ ಪಶುಪಾಲನೆ ಮಾಡುತ್ತಿದ್ದರಾದರೂ ಕ್ರಮೇಣ ಕಾಡುಗಳು ನಾಶವಾದಂತೆ ಊರುಗಳಿಗೆ ಸಮೀಪವಾಗುತ್ತ ಬಂದರು. ಆದರೆ ಊರುಗಳೊಂದಿಗೆ ಬೆರೆಯುವಲ್ಲಿ ಇವರಿಗೆ ಕೆಲವು ತೊಡಕುಗಳು ಎದುರಾಗಿರಬಹುದು. ಆದ್ದರಿಂದ ಇವರು ಊರುಗಳ ಹೊರಗೆ ತಮ್ಮದೇ ಆದ ಹಟ್ಟಿಗಳನ್ನು ರೂಪಿಸಿಕೊಂಡು ಪಶುಪಾಲನೆಯೊಂದಿಗೆ ಕೃಷಿಯನ್ನು ರೂಢಿಸಿಕೊಂಡರು. ಇಂದು ಊರುಗಳು ವಿಸ್ತಾರಗೊಂಡು ಮ್ಯಾಸಬೇಡರ ಹಟ್ಟಿಗಳವರೆಗೆ ವ್ಯಾಪಿಸುತ್ತಿದ್ದರೂ ಇವರು ತಮ್ಮ ಹಟ್ಟಿಗಳ ಸಂಸ್ಕೃತಿಯನ್ನು ಬಿಟ್ಟುಕೊಟ್ಟಿಲ್ಲ. ತಮ್ಮದೇ ಆದ ಆಚರಣೆಗಳನ್ನು ಉಳಿಸಿಕೊಂಡಿದ್ದಾರೆ. ಇವುಗಳೆಲ್ಲವೂ ಬುಡಕಟ್ಟು ಮೂಲವನ್ನು ಸಮರ್ಥಿಸುವಂಥವೇ ಆಗಿದೆ. ಕಾಡುಗೊಲ್ಲರ ಸಂಸ್ಕೃತಿಗೂ ಮ್ಯಾಸಬೇಡರ ಸಂಸ್ಕೃತಿಗೂ ಸಾಮ್ಯತೆಗಳು ಕಂಡುಬಂದಂತೆ ಊರುಬೇಡರಲ್ಲಿ ಕಾಣಲಾಗುವುದಿಲ್ಲ. "ಊರ ನಾಯಕರು ಮ್ಯಾಸ ನಾಯಕರಿಗಿಂತ ರೂಢಿ, ಸಂಪ್ರದಾಯ, ಸಂಸ್ಕಾರ ಆಚರಣೆಗಳಲ್ಲಿ ಭಿನ್ನವಾಗಿ ಕಂಡುಬರುತ್ತಾರೆ. ಅಲ್ಲದೆ ಮದುವೆ ಸಂಸ್ಕಾರದ ಆಚರಣೆಗಳಲ್ಲಿ ವ್ಯತ್ಯಾಸವನ್ನು ಕಾಣುತ್ತೇವೆ." (ಡಾ. ಕೋರಿಶೆಟ್ಟಿರುದ್ರಪ್ಪ, ಸಂ. ಡಾ. ಮಂಜುನಾಥ ಬೇವಿಕಕಟ್ಟಿ, ಪು. ೨೮) ಇವರ ಗೋತ್ರಗಳು ಸಸ್ಯ ಸೂಚಕಗಳು, ಪ್ರಾಣಿ ಸೂಚಕಗಳೇ ಅಲ್ಲದೆ, ವೃತ್ತಿ ಸೂಚಕಗಳೂ ಕಳೆದ ಸಂದರ್ಭದ ಸೂಚಕಗಳೂ ಆಗಿವೆ.

ಐತಿಹ್ಯವೊಂದರಂತೆ, ಬೇಡರು ಭಿನ್ನಾಭಿಪ್ರಾಯಗಳಿಂದಾಗಿ ಹೊಡೆದಾಡಿ ಪರಸ್ಪರ ಪ್ರಾಣಗಳನ್ನು ತೆಗೆದುಕೊಳ್ಳಲಾರಂಭಿಸಿದರು. ಆಗ ಮಣಿಭಟ್ಟ ರಾಜನೆಂಬ ಬೇಡರ ಹಿರಿಯನು ಅಲ್ಲಿಗೆ ಧಾವಿಸಲಾಗಿ ಅವನಿಗೆ ಹೆದರಿದ ಬೇಢರು ಹಲವು ಗುಂಪುಗಳಾಗಿ ಅಲ್ಲಲ್ಲಿ ಅವಿತುಕೊಂಡರು. ಅಂತೆಯೇ ಆತನು ಆ ಜನಮಂದೆಯನ್ನು ಪ್ರತ್ಯೇಕಗೊಳ್ಳುವಂತೆ ಸೂಚಿಸಿದನು. ಇದರಿಂದ ಹಲವು ಗುಂಪುಗಳು ಪ್ರತ್ಯೇಕವಾಗಿ ವಾಸಿಸುವುದರ ಮೂಲಕ ಭಿನ್ನ ಗೋತ್ರಗಳು ಏರ್ಪಟ್ಟವು. ಮಣಿಭಟ್ಟನನ್ನು ಮಂದೆಗಳನ್ನು (ಗುಂಪುಗಳನ್ನು) ನಿರ್ಮಿಸುವ ಯಜಮಾನನೆಂದು ಗೌರವಿಸಿ 'ಮಂದಲ ತಾತ'ನೆಂದು ಗೌರವಿಸಿದರು. ಇವನ ಸಂತತಿ ಮಂದಲಗೋತ್ರವೆಂದು ಕರೆಯಲ್ಪಟ್ಟಿದೆ.

ಅಡವಿ ಚಂಚರು ಬೇಢರ ಮೂಲದವರೆಂದು ಹೇಳುತ್ತಾರೆ. ಅವರ ಚಂಚು ಲಕ್ಷ್ಮಿಯನ್ನು ನರಸಿಂಹದೇವನು ವರಿಸಿ ವಿವಾಹವಾದನೆಂಬ ಐತಿಹ್ಯವಿದೆ. ಆ ಸಂಸತಿಯ ಮೂಗನಾಯಕನ ವಂಶಸ್ಥರೆಂದು ಮ್ಯಾಸನಾಯಕರು ಹೇಳಿಕೊಳ್ಳುತ್ತಾರೆ. ಪಶುಪಾಲನೆಯ ಹಂತದಲ್ಲಿ ವೈಷ್ಣವಧರ್ಮದ ಪ್ರಭಾವಕ್ಕೆ ಒಳಗಾದ ನೆನಪುಗಳು ಈ ಐತಿಹ್ಯದಲ್ಲಿ ಕಂಡುಬರುತ್ತವೆ.

ಮ್ಯಾಸಬೇಡರು ಊರಿನ ಸಂಪರ್ಕವನ್ನು ಕಳೆದುಕೊಂಡದ್ದಕ್ಕೆ ಕಾರಣವೊಂದನ್ನು ಈ ಐತಿಹ್ಯವು ಸಮರ್ಥಿಸುತ್ತದೆ; "ಒಬ್ಬ ಬೇಡರ ಜಾತಿಯ ಹೆಣ್ಣಿಗೆ ಇಬ್ಬರು ಗಂಡು ಮಕ್ಕಳಿದ್ದರು. ಹಿರಿಯವನು ಊಟವಾದ ಮೇಲೆ ಹೊಲಕ್ಕೆ ಹೋಗಿದ್ದನು. ಚಿಕ್ಕವನು ಮನೆಗೆ ಬಂದು ತಾಯಿಯನ್ನು ಊಟಕ್ಕೆ ಕೇಳಿದಾಗ ತಾಯಿಯು ರೊಟ್ಟಿ ಹಾಗೂ ತರಕಾರಿಯನ್ನು ನೀಡಿದಳು. ಊಟ ಮಾಡುತ್ತಿರುವ ಅವನಿಗೆ ಮಾಂಸದ ವಾಸನೆ ಬಂದಿತು. ಆಗ ತಾಯಿಯನ್ನು ಕೇಳಿದ. ತಾಯಿ ಮಾಂಸವನ್ನು ಕೊಡದಾದಾಗ ಸಿಟ್ಟಿಗೆದ್ದ ಮಗ ಅವಳನ್ನು ಕೊಂದು ಹಾಕಿದನು. ಅನಂತರ ಅವನು ಮನೆಯಲ್ಲಿ ಹುಡುಕಿದಾಗ ಒಂದು ಗಡಿಗೆ ಸಿಕ್ಕಿತು. ಅದನ್ನು ತೆಗೆದು ನೋಡಿದಾಗ ಅದರಲ್ಲಿ ಕೊಳೆತು ನಾರುವ ಒಂದು ಬೇರು ಸಿಕ್ಕಿತು. ಅದಕ್ಕೆ ಮಾಂಸದ ವಾಸನೆಯಿತ್ತು. ಇದನ್ನರಿತ ಅವನು ತನ್ನ ಮುಂಗೋಪಿತನಕ್ಕೆ ವ್ಯಥೆ ಪಟ್ಟು ಕಠಿಣ ತಪಸ್ಸಿನಿಂದ ಋಷಿಯ ಹಂತಕ್ಕೇರಿದ ಆತನೇ ಮ್ಯಾಸನಾಯಕ ಜನಾಂಗದ ಮೂಲ ಪುರುಷನಾದನು." (ಕೋರಿಶೆಟ್ಟಿರುದ್ರಪ್ಪ, (ಸಂ) ಮಂಜುನಾಥ ಬೇವಿನಕಟ್ಟಿ, ಪು. ೬೧, ೨೦೦೭) ಇದರ ಪ್ರಕಾರ ಮಾಂಸಾಹಾರದ ಆಕರ್ಷಣೆಯಿಂದಾಗಿ ಮ್ಯಾಸನಾಯಕರು ಊರಿನ ಸಂಸ್ಕೃತಿಗೆ ಒಗ್ಗಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಇಂದು ಅನೇಕ ಬುಡಕಟ್ಟುಗಳು ಅನೇಕ ಕಾರಣಗಳಿಂದಾಗಿ ಕಾಡುಗಳಿಂದ ಕಾಲ್ತೆಗೆದು ನಾಡಿನ ಮುಖ್ಯ ವಾಹಿನಿಯೊಂದಿಗೆ ಸೇರ್ಪಡೆಯಾಗಿದ್ದಾರೆ. ಇನ್ನೂ ಕೆಲವು ಬುಡಕಟ್ಟುಗಳು ಇಂದಿಗೂ ಕಾಡುಗಳಲ್ಲಿ ವಾಸಿಸುತ್ತಿದ್ದರೂ ನಾಡಿನ ಸಂಪರ್ಕದಲ್ಲಿದ್ದಾರೆ. ನಾಡ ಜೀವನದ



ಸೌಲಭ್ಯಗಳು ಆಕರ್ಷಕವಾದ್ದರಿಂದ ನಾಡಿನಲ್ಲಿ ಹಲವು ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಇಂದು ಮ್ಯಾಸರು ಕಾಡುಗಳಿಂದ ದೂರ ಸರಿದು ಬಯಲು ಸೀಮೆಯ ಊರುಗಳ ಸಮೀಪದ ಹಟ್ಟಿಗಳಲ್ಲಿ ವಾಸಿಸುತ್ತಿದ್ದಾರೆ. ಆಚರಣೆಗಳಲ್ಲಿ ತಮ್ಮ ಅನನ್ಯತೆಯನ್ನು ಉಳಿಸಿಕೊಂಡಿದ್ದರೂ ಆಹಾರ ಪದ್ಧತಿ, ಉಡುಗೆ-ತೊಡುಗೆ, ಜೀವನಕ್ರಮ ಮತ್ತು ವೃತ್ತಿ ವಲಯಗಳಲ್ಲಿನ ಬದಲಾವಣೆಗಳನ್ನು ಸ್ವೀಕರಿಸಿದ್ದಾರೆ. ಆಧುನಿಕ ಶಿಕ್ಷಣ ಉದ್ಯೋಗ ಆಡಳಿತ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಗುರುತಿಸಿಕೊಂಡವರೂ ಇವರಲ್ಲಿದ್ದಾರೆ. ಅಕ್ಷರಸ್ಥರ ಸಂಖ್ಯೆಯೂ ಗಣನೀಯ ಪ್ರಮಾಣದಲ್ಲಿ ಹೆಚ್ಚುತ್ತಿದೆ. ವಿದ್ಯಾಭ್ಯಾಸ ಉದ್ಯೋಗ ಹಾಗೂ ವೃತ್ತಿ ಬದಲಾವಣೆಗಳಿಗೆ ಅನುಗುಣವಾಗಿ ಇವರು ಗ್ರಾಮ ಪಟ್ಟಣ ನಗರಗಳವರೆಗೂ ವ್ಯಾಪಿಸುತ್ತಿದ್ದಾರೆ.

ಮ್ಯಾಸಬೇಡರ ಸಂಸ್ಕೃತಿಯಲ್ಲಿ ಮೂಲತಃ ಏಳು ಗೋತ್ರಗಳಿದ್ದು, ಗೋಜಲವಾರು, ಗೋಸಲುವಾರು ಅಥವಾ ಗೊರ್ಲವಾರು, ಬಾಡಮುಂಡಲಕರು, ಸಾರಂಗಬಸಿರವಾರು, ಪಿಂಗಳ ರಂಗಮಾನ್ಯರು, ತಾಯದ ಸಾಮಂತು ಮತ್ತು ರಾಜಾಧಿರಾಜಲು ಎಂಬ ಹೆಸರುಗಳಿಲ್ಲವೆ. ಸಂಸ್ಕೃತಿಯ ಸಾಂಸ್ಕೃತಿಕ ದೈವಗಳು, ವೀರರು, ಪಶುಪಾಲನೆ ಮತ್ತಿತರ ವೃತ್ತಿ ಪೂರಕವಾಗಿ ಬೆಳವಣಿಗೆಯನ್ನು ಪಡೆದಿವೆ. ಮೂಲ ಗೋತ್ರಗಳ ಸೃಷ್ಟಿಗೆ ಕಾರಣವಾದ ಐತಿಹ್ಯವೊಂದು ಹೀಗಿದೆ : ಸೌರವ್ಯೂಹದ ಗೋತಿರಾಜ ಎಂಬ ವ್ಯಕ್ತಿಯ ತೊಡೆಯಿಂದ ಋಷಿಗಳು ಕಪ್ಪಗಿನ ರಾಕ್ಷಸನೊಬ್ಬನನ್ನು ಸೃಷ್ಟಿಸಿದರು. ಈತನು ರಾಜ್ಯಭಾರ ಮಾಡುವುದರಲ್ಲಿ ಅಯೋಗ್ಯನಾಗಿದ್ದ ಕಾರಣ ಬಹಿಷ್ಕರಿಸಲ್ಪಟ್ಟನು. ನಂತರ ಕಾಡಿನಲ್ಲಿ ಬೇಟೆಯಾಡುತ್ತ ಜೀವಿಸುತ್ತಿದ್ದಾಗ ಮೋಹಿನಿಯನ್ನು ಕಂಡು ಮೋಹಗೊಂಡು ಕೂಡುತ್ತಾನೆ. ಅವರಿಗೆ ಏಳು ಜನ ಗಂಡು ಮಕ್ಕಳಾದರು. ಅವರ ಹೆಸರುಗಳಿಂದ ಬೆಳೆದ ವಂಶಗಳು ಅವುಗಳನ್ನೇ ಗೋತ್ರಗಳಾಗಿ ಗುರುತಿಸಿಕೊಂಡರು.

ಮೇಲಿನ ಐತಿಹ್ಯದಲ್ಲಿ ಬುಡಕಟ್ಟಿನ ಮೂಲಪುರುಷನಾದ ಗೋತಿರಾಜನ ಮಗನು ಬುಡಕಟ್ಟಿನ ಮೂಲ ಲಕ್ಷಣವಾದ ಕಪ್ಪು ಬಣ್ಣದಿಂದ ಕೂಡಿದವನು. ಇವನ ಜನ್ಮ ಮೂಲದಲ್ಲಿ ಋಷಿಗಳ ಬುದ್ಧಿಶಕ್ತಿ ಹಾಗೂ ಗೋತಿರಾಜನ ತೊಡೆಯ ಶಕ್ತಿಗಳೆರಡೂ ಸಂಕರಗೊಂಡಿವೆ. ಈತನು ರಾಜ್ಯವಾಳುವ ನಗರ ಅಥವಾ ನಾಡಿನ ಸಂಸ್ಕೃತಿಗೆ ಯೋಗ್ಯವಾದವನಲ್ಲ ಎಂದು ಋಷಿಗಳು ಹೊರಗೆ ಹಾಕಿರಬಹುದು. ಮುಂದೆ ಕಾಡಿನಲ್ಲಿಯೂ ದೇವತಾ ಮೂಲ ಹಾಗೂ ಋಷಿ ಮೂಲದಿಂದ ಸಂಪನ್ನಗೊಂಡ ಮೇನಕೆಯನ್ನು ಕೂಡಿದನೆಂದು ಹೇಳುತ್ತಾರೆ. ಮತ್ತೊಮ್ಮೆ ಇಲ್ಲಿ ಸಾಂಸ್ಕೃತಿಕ ಸಂಕರವೇರ್ಪಟ್ಟಿದೆ. ಅಲ್ಲಿಂದ ಇವರ ವೃತ್ತಿ ಬೇಟೆಗಾರಿಕೆ ಪಲ್ಲಟಗೊಂಡಿದೆ. ಒಂದೇ ಐತಿಹ್ಯ ಅಲ್ಪ ಸ್ವಲ್ಪ ಮಾರ್ಪಾಡುಗಳೊಂದಿಗೆ ಹಲವೆಡೆ ಪಸರಿಸುತ್ತದೆ. ಇದಕ್ಕೆ

ಉದಾಹರಣೆಯಾದ ಐತಿಹ್ಯ ಹೀಗಿದೆ. ಹೋತಿ ಎಂಬ ಅರಸನಿದ್ದನು. ಆಳ್ವಿಕೆಗೆ ಆಯೋಗ್ಯನೂ ಆಗಿದ್ದನು. ಒಮ್ಮೆ ಅವನು ಕಾಡಿನಲ್ಲಿ ಬೇಟೆಯಾಡುತ್ತಿದ್ದಾಗ ಮನಿಕಾ ಎಂಬ ಸುಂದರಿಯನ್ನು ಕಂಡು ಮೋಹಿಸಿ ಮದುವೆಯಾದನು. ಇವರಿಗೆ ಏಳು ಜನ ಮಕ್ಕಳಾದರು. ಇವರ ಹೆಸರುಗಳು ಗೋತ್ರ(ಬಳಿ)ಗಳಾಗಿ ಬೇಡರಲ್ಲಿ ಉಳಿದವು. ಅಲ್ಲದೆ ವೃತ್ತಿಗಳಿಗೆ ಅನುಗುಣವಾಗಿ ಇವರಲ್ಲಿ ಗುಂಪುಗಳಲ್ಲಿ ಉಳಿದವು.

ಕರ್ನಾಟಕದ ಬೇಡರ ಸಂಸ್ಕೃತಿ ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾದ ಪ್ರದೇಶಗಳಲ್ಲಿನ ಐತಿಹ್ಯದ ಪ್ರಕಾರ ಬಸವಣ್ಣನ ಕಣ್ಣುಗಳಿಂದ ಕಣ್ಣಯ್ಯ ಮತ್ತು ಕನಕವ್ವ ಹುಟ್ಟಿಬಂದರು ಮುಂದೆ ಇವರ ಸಂತತಿಯು ಬೇಡರೆನಿಸಿದರು. ಈ ಬಸವಣ್ಣನು ವಚನಕಾರನೇ ಅಥವಾ ಶಿವನ ವಾಹನವಾದ ಬಸವನೇ ಎಂಬುದು ಸ್ಪಷ್ಟವಿಲ್ಲ.

## ಸಾಮಾಜಿಕ ಕಟ್ಟಳೆಗಳನ್ನು ಬಿಂಬಿಸುವ ಐತಿಹ್ಯಗಳು

ಬುಡಕಟ್ಟಿನ ನಿಯಮಗಳನ್ನು ಮೀರಿದವರಿಗೆ ಆಯಾ ಬುಡಕಟ್ಟು ತನ್ನದೇ ಆದ ನ್ಯಾಯಪದ್ಧತಿಯಂತೆ ಶಿಕ್ಷೆ ವಿಧಿಸಿದೆ. ಬುಡಕಟ್ಟಿನ ಹೊರಗೆ ವಿವಾಹ ಸಂಬಂಧಗಳನ್ನು ಮಾಡಿದರೆ ಅಂಥವರಿಗೆ ಬಹಿಷ್ಕಾರವನ್ನು ಹಾಕುತ್ತಾರೆ. ತಪ್ಪು ಮಾಡಿದವರು ಬುಡಕಟ್ಟಿನೊಂದಿಗೆ ತಪ್ಪೊಪ್ಪಿಕೊಂಡು ತನ್ನ ಪ್ರಾದೇಶಿಕ ಗುಂಪಿಗೆ ಬೇಟೆ ಕಡಿಸಿ ಮಾಂಸದೂಟ ಹಾಕಿಸುವ ಕ್ರಮವು ಮ್ಯಾಸ ನಾಯಕರಲ್ಲಿದೆ. ಅಂಥ ಸಂದರ್ಭಗಳಲ್ಲಿ ತಪ್ಪಿತಸ್ಥರ ನಾಲಿಗೆಗೆ ಕೆಂಪಗೆ ಕಾಯಿಸಿದ ತಾಮ್ರದ ಕಡ್ಡಿಯಿಂದ ಬರೆ ಹಾಕುತ್ತಾರೆ. ಅಲ್ಲಿಗೆ ಆ ವ್ಯಕ್ತಿಯು ಪರಿಶುದ್ಧನಾದಂತೆ. ಕೋಳಿಯನ್ನು ತಿಂದವರಿಗೆ, ಮದ್ಯಸೇವನೆ ಮಾಡಿದವರಿಗೆ, ಚಪ್ಪಲಿ ಹೊಲಿದವರಿಗೆ ಮೊದಲಾದವರಿಗೆ ಇಂಥ ಪರಿಷ್ಕಾರವಿರುತ್ತದೆ. ಬುಡಕಟ್ಟಿನೊಳಗೆ ಸೋದರ ಮಾವನ ಸಂಬಂಧದಲ್ಲಿ ಮದುವೆಗಳು ನಡೆಯುವ ಸಾಧ್ಯತೆ ಹೆಚ್ಚಾಗಿರುವುದರಿಂದ ಹುಟ್ಟುವ ಮಕ್ಕಳಿಗೆ ತಂದೆಯ ಸ್ಥಾನದ ಸಾಮಾಜಿಕ ಭದ್ರತೆ ಇರುತ್ತದೆ. ಯಾವ ಅಚಾತುರ್ಯದ ಘಟನೆಗಳು ಸಂಭವಿಸಿದರೂ ಮಕ್ಕಳ ಪಾಲಿಗೆ ಪಿತೃತ್ವದ ಹಕ್ಕು ಭದ್ರವಾಗಿರುತ್ತದೆ. ಪ್ರತ್ಯೇಕ ಸಂಸ್ಕೃತಿಗಳ ಕಾರಣದಿಂದ ಬೇರ್ಪಟ್ಟ ಮ್ಯಾಸನಾಯಕ-ಊರನಾಯಕರ ನಡುವೆ ಮದುವೆ ಸಂಬಂಧಗಳು ಏರ್ಪಟ್ಟ ಸಂದರ್ಭಗಳಲ್ಲಿ ಮ್ಯಾಸರಲ್ಲಾದ ಪ್ರತಿರೋಧವನ್ನು ಒಂದು ಐತಿಹ್ಯ ಉದಾಹರಿಸುತ್ತದೆ. ಅದರ ಪ್ರಕಾರ ನಿಡುಗಲ್ಲು ಪ್ರದೇಶದ ಕಾಮರಾಜನು ತನ್ನ ಮಗಳನ್ನು ಹರ್ತಿಕೋಟೆಯ ರಾಜಕುಮಾರನಿಗೆ ಕೊಟ್ಟು ಮದುವೆ ಮಾಡಿದ ರಾಜಕುಮಾರನು ಊರಬೇಡನಾದ್ದರಿಂದ ಕಾಮರಾಜನ ಸಂಬಂಧಿಕರು ಆ ಮದುವೆಗೆ ಪ್ರತಿಭಟನೆಯಾಗಿ ಕಾಮರಾಜನಿಂದ ದೂರ ಸರಿದರು. ಆಗ ಕಾಮರಾಜನ ಮಗ ಹನುಮನಾಯಕನು ನಿಡುಗಲ್ಲಿನಿಂದ ಎರಡು



ಲಿಂಗಗಳನ್ನು ಗೌರಸಮುದ್ರದ ಬಳಿಗೆ ತಂದು ಅಲ್ಲಿನ ಎರಡು ಹುತ್ತಗಳಿಗೆ ಹಾಕಿದ ಆಗ ಒಂದು ಹುತ್ತದಲ್ಲಿ ಬೊಮ್ಮಣ್ಣ ಹಾಗೂ ಮತ್ತೊಂದು ಹುತ್ತದಲ್ಲಿ ಮಾರಮ್ಮ ದೇವತೆಗಳು ಕಾಣಿಸಿಕೊಂಡರು. ಈ ಪವಾಡದಿಂದಾಗಿ ಚದುರಿದ ಮ್ಯಾಸರೆಲ್ಲರೂ ಅಲ್ಲಿ ನೆಲೆಸತೊಡಗಿದರು. ಹನುಮ ನಾಯಕನಿಗೆ ಮದುವೆ ಮಾಡಿಸಿದರು. ಅವನಿಗೆ ದ್ಯಾಸಳನಾಯಕ, ಯರ್‍ರ್ರಾಳ ನಾಯಕ ಮತ್ತು ಬುಕ್ಕಾಳುನಾಯಕ ಎಂಬ ಮೂರು ಜನ ಗಂಡು ಮಕ್ಕಳಾದರು. ಮುಂದೆ ಬುಕ್ಕಾಳನಾಯಕನು ತನ್ನ ತಂದೆಯ ನೆನಪಿಗಾಗಿ ಹನುಮಂತನ ದೇವಸ್ಥಾನವನ್ನು ಕಟ್ಟಿಸಿ ಅಲ್ಲಿ ತನ್ನ ಜನಾಂಗದವರಿಗೆಂದು ಊರನ್ನು ನಿರ್ಮಿಸಿದ ಅಂದಿನಿಂದ ಅಲ್ಲಿನ ಅನುಯಾಯಿಗಳು ಹನುಮಂತ ದೇವರ ಮುದ್ರೆಯನ್ನು ಒತ್ತಿಸಿಕೊಳ್ಳತೊಡಗಿದರು. ಈ ಐತಿಹ್ಯದಲ್ಲಿ ಪವಾಡ ದೈವಗಳಾಗಿರುವ ಬೊಮ್ಮಣ್ಣ ಹಾಗೂ ಮಾರಮ್ಮ ಮ್ಯಾಸನಾಯಕರ ಸಂಸ್ಕೃತಿಯಲ್ಲಿ ನಾಯಕರ ಸ್ಥಾನ ಪಡೆದವಳು. ಮಾರಮ್ಮನನ್ನು ಬೊಮ್ಮಣ್ಣನ ತಂಗಿ ಎಂದು ಆರಾಧಿಸುತ್ತಾರೆ. ಆದ್ದರಿಂದ ಇವರ ನೆನಪಿನ ಪ್ರತಿಷ್ಠಾಪನೆ ಚದುರಿದ ಗುಂಪನ್ನು ಒಗ್ಗೂಡಿಸಲು ಇಲ್ಲಿ ಬಳಕೆಯಾಗಿದೆ. ಇದು ಊರಮ್ಯಾಸ ಎಂಬ ಗುಂಪಿಗೆ ಸಮರ್ಥನೆ ಇರಬಹುದು.

ಮ್ಯಾಸನಾಯಕರಲ್ಲಿ ಕೋಳಿಯನ್ನು ಸಾಕುವುದು, ತಿನ್ನುವುದು ನಿಷೇಧವೆಂಬುದಕ್ಕೆ ಕಾರಣವಾದ ಐತಿಹ್ಯ ಓಬಳದೇವರು ತಾನು ಕೋಳಿಕೂಗದ ಊರಿನಲ್ಲಿ ವಾಸಿಸುವುದಾಗಿ ಹೇಳಿ ವಾಸವಾಗಿರುವುದರಿಂದ ಮ್ಯಾಸರ ಹಟ್ಟಿಗಳಲ್ಲಿ ಕೋಳಿ ಸಾಗಾಣಿಕೆ ಮಾಡುವಂತಿಲ್ಲ. ಆಕಸ್ಮಾತ್ತಾಗಿ ಹಟ್ಟಿಗಳಿಗೆ ಹೋದ ಕೋಳಿಗಳು ಬದುಕುವುದಿಲ್ಲ ಎಂಬ ನಂಬಿಕೆಯೂ ಇದೆ. ಅಂತೆಯೇ ಕೆಲವು ಮ್ಯಾಸರು ಮುಸ್ಲಿಂರಂತೆ ಮುಂಜಿ ಮಾಡಿಕೊಳ್ಳುವ ಸಂಪ್ರದಾಯದ ಸಮರ್ಥನೆಗೊಂದು ಮೌಖಿಕ ಚರಿತ್ರೆ ಇದೆ. ಅದರಂತೆ ಮ್ಯಾಸನಾಯಕ ಪಾಳೆಯಗಾರನೊಬ್ಬನು ನನ್ನೆಮ್ಮಳೆಂಬ ಮುಸ್ಲಿಂ ಹೆಣ್ಣನ್ನು ಮದುವೆಯಾಗಿದ್ದ. ಅವರ ಸಂತತಿಯು ಮುಂಜಿ ಆಚರಣೆಯನ್ನು ರೂಢಿಸಿಕೊಂಡಿದ್ದರಿಂದ ಮುಂಜಿಮ್ಯಾಸರೆಂದೇ ಕರೆಯಲ್ಪಟ್ಟರು ಈಗಲೂ ಮೋಹರಂ ಅನ್ನು ಮ್ಯಾಸನಾಯಕರು ವಿಶೇಷವಾಗಿ ಆಚರಿಸುತ್ತಾರೆ. ಎಲ್ಲ ಸಮುದಾಯಗಳು ಈ ಆಚರಣೆಗಳಿಗೆ ವಿಗ್ರಹಗಳನ್ನು ನೀಡಿದ್ದಾರೆ. ಅವು ಈ ಗುಂಪುಗಳ ಪೂರ್ವಿಕರಿಗೆ ನದಿದಡಗಳಲ್ಲಿ ಲಭಿಸಿದ್ದವೆಂಬ ನಂಬಿಕೆಯಿದೆ.

ಮ್ಯಾಸರ ಉಪ ಪಂಗಡವಾದ ಕಳ್ಳಮ್ಯಾಸ ಅಥವಾ ಕಳ್ಳೇಮ್ಯಾಸ ವಿಶಿಷ್ಟ ಅರ್ಥಗಳನ್ನು ಒಳಗೊಂಡಿದೆ. ಈ ಬುಡಕಟ್ಟಿನಲ್ಲಿ ಕಳ್ಳು(ಹೆಂಡ) ನಿಷಿದ್ಧವಾದದ್ದು. ಆದ್ದರಿಂದ ಈ ಹಿನ್ನೆಲೆಯನ್ನು ಪರಿಗಣಿಸುವಲ್ಲಿ ಯೋಚಿಸಿ ನಿರ್ಧರಿಸಬೇಕಾಗಿರುತ್ತದೆ. ಬುಡಕಟ್ಟಿನೊಳಗೆ ಕಳ್ಳತನವೂ ನಿಷೇಧಿಸಲ್ಪಟ್ಟಿದೆ. ಕಳ್ಳೇ-ಕಡಲೇ(ಗುಗ್ಗುರಿ)ಯು ಮ್ಯಾಸನಿರಬಹುದು. ಏಕೆಂದರೆ ಇವರ ಆಚರಣೆಗಳಲ್ಲಿ ಕಡಲೆಗುಗ್ಗುರಿಗೆ ಮಹತ್ವವಿದೆ. ನಂಬಿಕೆ ಆಚರಣೆ ಜೀವನಕ್ರಮ



ದೇವತಾರಾಧನೆ ಹಾಗೂ ವೃತ್ತಿಗೆ ಸಂಬಂಧಿಸಿದ ಬುಡಕಟ್ಟು ಕಟ್ಟಳೆಗಳನ್ನು ಮ್ಯಾಸಬೇಡರಲ್ಲಿ ವಿಶಿಷ್ಟವಾಗಿದ್ದು, ಕಾಡುಗೊಲ್ಲ ಸಂಸ್ಕೃತಿಯೊಂದಿಗೆ ಸಾಮ್ಯತೆಯನ್ನು ಪಡೆದಿವೆ. ಹಾಗೆಯೇ ಊರುಬೇಡರ ಸಂಸ್ಕೃತಿಗೂ ಇವರಿಗೂ ಅಜಗಜಾಂತರ ವ್ಯತ್ಯಾಸಗಳು ಕಂಡುಬರುತ್ತವೆ. ಆದರೆ ಕಾಡುಗೊಲ್ಲ ಮತ್ತು ಮ್ಯಾಸಬೇಡರಲ್ಲಿ ಉಂಟಾದುವೆಂದು ಹೇಳಲಾಗುವ ಪರಂಪರಾಗತ ಸಂಸ್ಕೃತಿಯ ಸಂಘರ್ಷಗಳು ಊರಬೇಡರೊಂದಿಗೆ ಕಂಡುಬರುವುದಿಲ್ಲ. ಊರ ಬೇಡರೊಂದಿಗೆ ವಿವಾಹ ಸಂಬಂಧ ಏರ್ಪಡಿಸಿಕೊಂಡ ಮ್ಯಾಸರಿಗೆ ತಮ್ಮ ಸಂಸ್ಕೃತಿಯಿಂದ ಬಹಿಷ್ಕಾರ ಹಾಕಿದ ನೆನಪುಗಳು ಇವೆಯಾದರೂ, ಅಂಥ ಬಹಿಷ್ಕೃತ ತನ್ನ ಗುಂಪಿನೊಂದಿಗೆ ಸ್ವತಂತ್ರನಾಗಿ ತನ್ನ ಅಸ್ತಿತ್ವವನ್ನು ರೂಪಿಸಿಕೊಂಡ ನಿದರ್ಶನಗಳಿವೆ. ಇಂಥ ಸಂಕರದ ಸ್ಮೃತಿಗಳು ಊರಬೇಡರಲ್ಲಿ ಇಲ್ಲ. ಮ್ಯಾಸನಾಯಕರು ತಮ್ಮ ಪೆಟ್ಟಿಗೆ ದೇವತೆಗಳನ್ನು ಮ್ಯಾಸ ಬುಡಕಟ್ಟಿನ ವೀರರನ್ನು ದೇವರ ದನಗಳನ್ನು ಪೂಜಿಸುತ್ತಾರೆ. ಈ ಸಂಬಂಧ ಆಚರಣೆಗಳು ಇವರಿಗೆ ಮಾತ್ರ ಸೀಮಿತವಾಗಿದ್ದು ಊರ ಜನರ ಪಾಲ್ಗೊಳ್ಳುವಿಕೆಗೆ ನಿಷೇಧವಿರುತ್ತದೆ. ಇವರ ಆಚರಣೆಗಳು ಬುಡಕಟ್ಟಿನ ಮೌಲ್ಯಗಳನ್ನು ಬಿಂಬಿಸುವುದರಿಂದ ಇತರರು ಭಾಗವಹಿಸುವುದನ್ನು ಮೈಲಿಗೆ ಎಂದು ಪರಿಗಣಿಸುತ್ತಾರೆ.

ಊರ ನಾಯಕರಲ್ಲಿ ಅವರದೇ ಆದ ಪ್ರತ್ಯೇಕ ಆಚರಣೆಗಳು ಕಡಿಮೆಯೆಂದೇ ಹೇಳಬೇಕು. ಊರೊಟ್ಟಿನ ಜನ ಪೂಜಿಸುವ ದೈವಗಳನ್ನು ಇವರೂ ಪೂಜಿಸುತ್ತಾರೆ. ಜನಪದರಲ್ಲಿ ಇವರ ಸಮುದಾಯ ಗಳಿಸಿಕೊಂಡ ಮಹತ್ವದ ನೆನಪುಗಳಿದ್ದರೆ ಆಗ ಸಂಬಂಧಿಸಿದ ಆಚರಣೆಗಳಲ್ಲಿ ಇವರ ಅಧಿಕೃತತೆ ಇರುತ್ತದೆ. ಉದಾಹರಣೆಗೆ ಗ್ರಾಮ ದೇವತೆಗಳಿಗೆ ಬಲಿ ಕೊಡುವ ಆಚರಣೆಗೆ ಬೇಡರು ಪರಂಪರಾಗತವಾಗಿ ನಿಗಧಿಯಾಗಿದ್ದಾರೆ. ಏಕೆಂದರೆ ಮೂಲತಃ ಬೇಟೆಗಾರರಾಗಿದ್ದ ಇವರು ಪ್ರಾಣಿಗಳನ್ನು ಕೊಲ್ಲುವುದರಲ್ಲಿ ಪಳಗಿದ್ದರು. ಆದ್ದರಿಂದಲೇ ಪ್ರಾಣಿಗಳನ್ನು ಕತ್ತರಿಸಿದಾಗ ಅವು ಚಡಪಡಿಸುವುದಾಗಲಿ ರಕ್ತಹರಿಯುವುದಾಗಲಿ ಇವರಿಗೆ ಹೆದರಿಕೆಯ ವಿಷಯವಾಗಿರಲಿಲ್ಲ. ಆದ್ದರಿಂದ ಪ್ರಾಣಿಗಳನ್ನು ದೇವತೆಗಳಿಗೆ ಬಲಿ ನೀಡುವಲ್ಲಿ ಬೇಡರಿಗೆ ಮಹತ್ವವಿದೆ. ಮಾರಿಯ ಹಬ್ಬದ ಆಚರಣೆಯಲ್ಲಿ ಬೇಡರು ಕೋಣವನ್ನು ಕತ್ತರಿಸಬೇಕೆಂಬ ನಿಯಮವೂ ಸಾಂಸ್ಕೃತಿಕ ಆಯಾಮವನ್ನು ವಿಸ್ತರಿಸುತ್ತದೆ. ಅದು ತಪ್ಪು ಮಾಡಿದವರನ್ನು ಕತ್ತರಿಸುವ ಶಿಕ್ಷೆಯ ಸಂಕೇತವಾಗಿದೆ. ಹಿಂದೆಲ್ಲಾ ಇಂಥ ಶಿಕ್ಷೆಗಳನ್ನು ನೆರವೇರಿಸಲು ಬೇಡರನ್ನು ಬಳಸಿಕೊಂಡಿರಬಹುದು. ಅಸ್ಪೃಶ್ಯನು ಮೇಲ್ಜಾತಿಯ ಮಾರಿಯನ್ನು ಮದುವೆಯಾದನೆಂದು ಅವನಿಗೆ ಆ ಸಮಾಜವು ವಹಿಸಿದ ಶಿಕ್ಷೆ ಮಾರಿ ಜಾತ್ರೆಯ ಮುಖ್ಯ ಆಚರಣೆ. ಹೀಗೆ ಊರೊಟ್ಟಿನ ಸಂಸ್ಕೃತಿಯ ಕಟ್ಟಳೆ-ಕಟ್ಟುಪಾಡುಗಳಲ್ಲಿ ಬೇಡರಿಗೂ ಕೆಲವು ಜವಾಬ್ದಾರಿಗಳಿವೆ.



ಹನುಮಂತ, ಶಿವ, ನರಸಿಂಹ, ವೆಂಕಟರಮಣ ಇತ್ಯಾದಿ ಶಿಷ್ಟ ದೈವಗಳನ್ನು ತಮ್ಮ ಸಂಸ್ಕೃತಿಯೊಂದಿಗೆ ಜನಪದೀಕರಣಗೊಳಿಸಿಕೊಂಡು ಪೂಜಿಸುವುದು ಊರನಾಯಕರ ಸಂಸ್ಕೃತಿಯ ಲಕ್ಷಣ. ನರಸಿಂಹದೇವರು ತಮ್ಮ ಹೆಣ್ಣು ಮಗಳಾದ ಚಂಚುಲಕ್ಷ್ಮಿಯ ಗಂಡನೆಂದು ಆರಾಧಿಸಿದಂತೆ, ಶಿವನ ಹೆಂಡತಿ ಪಾರ್ವತಿಯು ತಮ್ಮ ಹೆಣ್ಣು ಮಗಳೆಂದು ಪೂಜಿಸುತ್ತಾರೆ. ನಾಗಲಮ್ಮನೆಂಬ ಹೆಸರಿನ ಪಾರ್ವತಿಯ ಆರಾಧನೆಯು ನಾಗಾರಾಧನೆಯನ್ನು ಮಾತೃಮೂಲದ ಆಚರಣೆಯನ್ನಾಗಿ ರೂಢಿಸಿಕೊಂಡಿದ್ದರ ಸಂಕೇತವಾಗಿದೆ. ಹಾಗೆಯೇ ಸಪ್ತಮಾತೃಕೆಯರನ್ನು 'ಕನ್ನಿ'ಕೆಯರು ಎಂದು ಕರೆದು ಆರಾಧಿಸುವುದಕ್ಕೂ ಇಂಥದ್ದೊಂದು ಮಹತ್ವವಿದೆ. ಇವರು ವಿಶೇಷವಾಗಿ ಪೂಜಿಸುವ ಮಾಸ್ತಿ ಅಥವಾ ಮಹಾಸತಿಯರು ತಮ್ಮ ವಂಶದ ಇತಿಹಾಸದಲ್ಲಿ ಹುತಾತ್ಮರು. ಹಾಗೆಯೇ ಒಟ್ಟಾರೆ ಊರಿನ ಚರಿತ್ರೆಯಲ್ಲಿ ಸ್ಮರಣಾರ್ಹರು. ಇವರ ವೀರಗಲ್ಲುಗಳ ಆರಾಧನೆಯ ನೆನಪಾಗಿರುವ ಸಾಂಸ್ಕೃತಿಕ ವೀರರೂ ಒಟ್ಟಾರೆ ಊರಿನ ಹಿತಕ್ಕಾಗಿ ಪ್ರಾಣಾರ್ಪಣೆ ಮಾಡಿದವರಾಗಿದ್ದಾರೆ. ಕೆಲವು ಗ್ರಾಮದೇವತೆಗಳು ಆ ಊರಿನ ನಾಯಕ(ಬೇಡ)ರ ಮನೆಯ ಎಡೆಯು (ನೈವೇದ್ಯ) ತನಗೆ ಪಟ್ಟು ಹಿಡಿಯುವ ಪರಂಪರೆ ಇದೆ. ಊರನಾಯಕರ ಮನೆಯು ಮೊದಲ ಆರತಿ ಮೊದಲ ಬಲಿ ನೆರವೇರುವವರೆಗೂ ಇತರರಿಗೆ ಅವಕಾಶವಿರುವುದಿಲ್ಲ. ಹಿಂದೊಮ್ಮೆ ಊರನಾಯಕನು ಯುದ್ಧ ಇತ್ಯಾದಿ ಕಾರಣಗಳಿಗಾಗಿ ಪರವೂರುಗಳಿಗೆ ಹೋಗಿದ್ದಾಗ ಕೆಲವು ಅಲ್ಲಿನ ದೇವತೆಗಳು ಇವರ ಬೆನ್ನಿಗೆ ಬಿದ್ದು ಹಿಂಬಾಲಿಸಿ ಬಂದು ಇವರೊಂದಿಗೆ ನೆಲೆಸಿದ ಆಧಾರಗಳಿವೆ. ಇಂಥ ದೇವತೆಗಳು ಊರಿನ ಎಲ್ಲ ಸಮುದಾಯದವರಿಂದ ಪೂಜಿಸಲ್ಪಡುತ್ತವೆಯಾದರೂ ಬೇಡರಿಗೆ ಪ್ರಥಮ ಆದ್ಯತೆ ಇರುತ್ತದೆ.

ಬೇಡ-ನಾಯಕರು ಎಲ್ಲೆಲ್ಲಿ ಹೋಗಿ ನೆಲೆಸಿದರೂ ತಮ್ಮ ಮೂಲ ನೆಲೆಯ ದೇವತೆಗಳನ್ನು ತಾವು ವಾಸಿಸುವ ನೆಲೆಯಲ್ಲಿ ಪೂಜಿಸುತ್ತಾರೆ. ಆದ್ದರಿಂದ ಬೇಡರು ನೆಲೆಸಿರುವ ಊರುಗಳಲ್ಲಿ ಅಹೋಬಲ ನರಸಿಂಹ, ಕದರಿ ನರಸಿಂಹ, ತಿರುಪತಿ ತಿಮ್ಮಪ್ಪ ಮೊದಲಾದ ದೈವಗಳ ಗುಡಿಗಳನ್ನು ಕಟ್ಟಿಕೊಂಡಿರುತ್ತಾರೆ. ಹೀಗೆ ಬೇಢರ ಮೂಲ ನೆಲೆಯಿಂದ ಬಂದ ಆರಾಧನಾ ದೈವಗಳು ಅಗಸ, ಉಪ್ಪಾರ, ವಡ್ಡ, ಹೊಲೆಯ, ಮಾದಿಗ ಇತ್ಯಾದಿ ಕೆಳ ಸಮುದಾಯಗಳ ಜನರಿಂದ ಏಕಕಾಲಕ್ಕೆ ಒಂದೇ ರೀತಿಯ ನೆನಪುಗಳಿಂದ ಪುಷ್ಟಿಗೊಂಡಿರುತ್ತದೆ. ಈ ಎಲ್ಲ ಪರಿವಾರವೂ ಒಟ್ಟಿಗೆ ವಲಸೆ ಬಂದು ಆ ಊರಿನಲ್ಲಿ ನೆಲೆಸಿದ ನೆನಪು ಊರ ಸಂಸ್ಕೃತಿಯಲ್ಲಿ ಮಿಳಿತಗೊಂಡಿದ್ದರ ಧ್ಯೋತಕವಾಗಿ ಇಂಥ ಸಮುದಾಯಗಳು ದೈವೋಪಾಸನೆಯಲ್ಲಿ ಸಮಾನವಾಗಿ ಭಾಗವಹಿಸುತ್ತವೆ.

ಮ್ಯಾಸ ಬೇಡರಲ್ಲಿ ಅಕ್ಕಮ್ಮನ ಆಚರಣೆ ಅಥವಾ ಅಕ್ಕನ ಗಂಡನ ಪೂಜೆ ಎಂಬ ಪದ್ಧತಿ ಇದೆ. ಇದಕ್ಕೂ ಇತರರು ಸಾರ್ವತ್ರಿಕವಾಗಿ ಜನಸಮುದಾಯಗಳು ಪೂಜಿಸುವ ಏಳು ಜನ ಅಕ್ಕಂದಿರು (ಸಪ್ತ ಮಾತೃಕೆಗಳು) ಇವರಿಗೂ ಸಂಬಂಧವಿರುವಂತೆ ಕಂಡುಬರುವುದಿಲ್ಲ. ಐತಿಹ್ಯದ ಪ್ರಕಾರ ಮ್ಯಾಸಬೇಡರ ಏಳು ಜನ ಅಣ್ಣ-ತಮ್ಮಂದಿರು ನಿಧಿಯ ಪ್ರಲೋಭನೆಗಾಗಿ ತಮ್ಮ ಏಕೈಕ ತಂಗಿ ಅಕ್ಕಮ್ಮನನ್ನು ಬಲಿ ನೀಡಿದರು. ವಿಷಯ ತಿಳಿದ ತಾಯಿಯು ಇವರಿಗೆ ಶಾಪ ನೀಡಿದಳು. ಅಮಾಯಕಳಾಗಿದ್ದ ಅಕ್ಕಮ್ಮನನ್ನು ಸಹೋದರರು ಮೋಸದಿಂದ ಬಲಿ ನೀಡಿದಾಗಿನ ಆಕೆಯ ಅಸಹಾಯಕತೆ ದೇವತೆಯ ರೂಪಕ್ಕೆ ಕಾರಣವಾಯಿತು. ಇದಕ್ಕೆ ಸ್ಪಂದಿಸುತ್ತಾ ಬಂದಿರುವ ಆ ಸಮುದಾಯದ ಹಾಗೂ ಆ ಪರಿಸರದ ಇತರ ಹೆಣ್ಣು ಮಕ್ಕಳು ಅಕ್ಕಮ್ಮನನ್ನು ಆರಾಧಿಸುತ್ತಾರೆ. ತಮ್ಮ ದೈಹಿಕ-ಮಾನಸಿಕ ಅಸಹಾಯಕತೆಗಳನ್ನು ನಿವಾರಿಸುವಂತೆ ಹರಕೆಗಳನ್ನು ಕಟ್ಟುತ್ತಾರೆ.

## ಸಾಂಸ್ಕೃತಿಕ ನಾಯಕರಿಗೆ ಸಂಬಂಧಿಸಿದ ಐತಿಹ್ಯಗಳು

### ವಾಲ್ಮೀಕಿಯ ಮೂಲ

ವಾಲ್ಮೀಕಿಯು ಮೂಲತಃ ಕಿರಾತರ ಯಜಮಾನನಾಗಿದ್ದನೆಂದು ಜನಪದರಲ್ಲಿ ನಂಬಿಕೆಯಿದೆ. ಇದಕ್ಕೆ ಪುರಾಣದಲ್ಲಿಯೂ ವಾಲ್ಮೀಕಿ ಬೇಡರ ಸಂಸ್ಕೃತಿಯ ಮೂಲದಿಂದ ಬಂದವನೆಂಬ ಆಧಾರಗಳು ಪುಷ್ಟಿ ನೀಡುತ್ತವೆ. ವಾಲ್ಮೀಕಿಯ ಮೂಲ ಹೆಸರು ಕಾಮಕೇತುವೆಂದೂ, ಈತನಿಗೆ ಲಕ್ಷ, ಮೀನು, ಮಲ್ಲ ಎಂಬಿತ್ಯಾದಿ ಏಳು ಜನ ಗಂಡು ಮಕ್ಕಳಿದ್ದರೆಂದು ಐತಿಹ್ಯವಿದೆ. ಇದರ ಪ್ರಕಾರ ಕಾಮಕೇತುವು ತನ್ನ ಏಳು ಮಕ್ಕಳ ನೇತೃತ್ವದಲ್ಲಿ ಏಳು ಪಡೆಗಳನ್ನು ರಚಿಸಿ ಕಳ್ಳತನ, ದರೋಡೆ ನಡೆಸುತ್ತಿದ್ದ. ಮುಂದೆ ಕಾಮಕೇತು ವಾಲ್ಮೀಕಿಯಾಗಿ ರಾಮಾಯಣವನ್ನು ರಚಿಸಿ ಪ್ರಸಿದ್ಧಿ - ಕೀರ್ತಿಗಳನ್ನು ಗಳಿಸಿಕೊಂಡ. ಆದರೆ ಬೇಡ ಪಡೆಗಳು ಕಾಡಿನಲ್ಲಿ ಚದುರಿ ಹೋದರೆಂದು, ಹೀಗೆ ದೇಶದಾದ್ಯಂತ ಹರಡಿದರೆಂದು ಹೇಳುತ್ತಾರೆ.

ಬೇಡ ಬುಡಕಟ್ಟಿನಲ್ಲಿ ವಾಲ್ಮೀಕಿಯ ಬಗ್ಗೆ ಗೌರವಾಧಾರಗಳು ಇದ್ದರೂ, ಈತನ ಶಿಷ್ಟ ಸಂಪ್ರದಾಯಕ್ಕೆ ಸಮುದಾಯವು ಸ್ಪಂದಿಸಿದಂತಿಲ್ಲ. ಏಕೆಂದರೆ “ವಾಲ್ಮೀಕಿ” ಎಂಬ ಗೋತ್ರ(ಬಳು)ವಾಗಲಿ, ರಾಮಾಯಣ ಕಾವ್ಯಕ್ಕೆ ಸಂಬಂಧಿಸಿದ ಗೋತ್ರಗಳಾಗಲಿ ಕಂಡುಬರುವುದಿಲ್ಲ. 'ಸಾಕೇತಲವರು' ಎಂಬ ಗೋತ್ರದ ಮೂಲವನ್ನು ಕೆಲವರು ಸಾಕೇತ ವಂಶದ ಪ್ರಭಾವದಿಂದ ವಿವರಿಸಿದ್ದಾರೆ. ಆದರೆ ಅದು ತೆಲುಗಿನ ಸಾಕು ಗೇತಲವಾರು (ಪಶು ಪಾಲಕರು) ಎಂಬುದಾಗಿರಬಹುದು. ಅಂತೆಯೇ ಬೇಡರಲ್ಲಿ ಕಾಮಗೇತಲವರು ಎಂಬ ಗೋತ್ರವೂ ಇದೆ. ಇದು ವಾಲ್ಮೀಕಿಯ ಮೂಲ ನಾಮದ ಸ್ಮೃತಿ ಎಂದೂ



ಸಮರ್ಥಿಸಬಹುದು. ಅಥವಾ ವಾಲ್ಮೀಕಿಯು ಕಾಮಗೇತಲ ಗೋತ್ರದವನಿರಬಹುದೆಂದು ಊಹಿಸಬಹುದು. ಏಕೆಂದರೆ ಬೇಡರಲ್ಲಿ ಕೆಲವು ವಿಶೇಷಣಗಳು ಗೇತಲು (ಪಶುಗಳು) ಎಂಬ ಉತ್ತರ ಪದದ ಜೊತೆಗೆ ಸೇರಿಕೊಂಡು ಹಲವು ಬಳಿ(ಗೋತ್ರ)ಗಳಿವೆ. ಉದಾ: ನಲ್ಲಗೇತಲು, ಯರ್ರಗೇತಲು, ತೆಲ್ಲಗೇತಲು ಇತ್ಯಾದಿ ನಿರ್ದಿಷ್ಟ ಗುಂಪುಗಳು ಯಾವ ಬಣ್ಣದ ಪಶುಗಳನ್ನು ಸಾಕುತ್ತಿದ್ದರೆಂಬುದನ್ನು ಸಂಕೇತಿಸುತ್ತವೆ.

ಮತ್ತೊಂದು ಐತಿಹ್ಯದಂತೆ ರಾಮಾಯಣವನ್ನು ಬರೆದ ವಾಲ್ಮೀಕಿಯನ್ನು, ಬ್ರಹ್ಮನು ಬ್ರಹ್ಮಪೀಠಕ್ಕೆ ಸೇರಿಸಿಕೊಂಡ. ಅಂತೆಯೇ ಆತನಿಗೆ ಜನಿವಾರವನ್ನು ನೀಡಿದ. ಅಂದಿನಿಂದ ವಾಲ್ಮೀಕಿಯು ತನ್ನ ಮಕ್ಕಳಿಗೂ ಜನಿವಾರಧಾರಣೆ ಮಾಡಿದ, ಆದರೆ ಮಕ್ಕಳು ವಾಲ್ಮೀಕಿಗೆ ತಿಳಿಯದಂತೆ ಬೇಟೆಗಾರಿಕೆ ಹಾಗೂ ಮಾಂಸಾಹಾರಗಳನ್ನು ನಡೆಸುತ್ತಿದ್ದರು. ಅಂಥ ಸಂದರ್ಭಗಳಲ್ಲಿ ಜನಿವಾರಕ್ಕೆ ಅಪವಿತ್ರತೆಯಾಗಬಾರದೆಂದು ಕಾಡಿನಲ್ಲಿ ಗಿಡವೊಂದಕ್ಕೆ ನೇತು ಹಾಕುತ್ತಿದ್ದರು. ಒಮ್ಮೆ ಅದು ಗಾಳಿಗೆ ಹಾರಿ ಹೋಗಿ ಬ್ರಾಹ್ಮಣನಿಗೆ ಸಿಕ್ಕಿತ್ತು. ಇದರಿಂದ ಪೂಜೆ, ಅರ್ಚನೆಗಳೆಲ್ಲವೂ ಬ್ರಾಹ್ಮಣರ ಪಾಲಾದುವು ಎಂದು ಹೇಳುತ್ತಾರೆ. ಇದೆ ಐತಿಹ್ಯದ ಮತ್ತೊಂದು ಪಾಠಾಂತರದಲ್ಲಿ ವಾಲ್ಮೀಕಿಯ ಮಕ್ಕಳು ತಮ್ಮ ಜನಿವಾರಗಳನ್ನು ಬ್ರಾಹ್ಮಣರಿಗೆ ನೀಡಿದರೆಂದು ತಿಳಿದುಬರುತ್ತದೆ. ಇದರ ಪ್ರಕಾರ ಬೇಟೆಗಾರಿಕೆ ಹಾಗೂ ಮಾಂಸಾಹಾರದ ಬುಡಕಟ್ಟು ಜೀವನ ಮತ್ತು ಜನಿವಾರ ಭರಿತವಾದ ಶಿಷ್ಟ ಸಂಸ್ಕೃತಿಗಳ ನಡುವೆ ಹೊಂದಾಣಿಕೆ ಮಾಡಿಕೊಳ್ಳುವ ಅನಿವಾರ್ಯತೆ ಬಂದಾಗ ಮೂಲ ಬದುಕಿನ ಆಯ್ಕೆಯೇ ಬೇಡರದಾಗಿರುವುದು ತಿಳಿದುಬರುತ್ತದೆ. ಇಂಥ ಸಂದರ್ಭದಲ್ಲಿ ಬ್ರಾಹ್ಮಣ ಸಮುದಾಯದ ಶಿಷ್ಟತೆಗೆ ವಾಲ್ಮೀಕಿ ಮಾತ್ರ ಬದ್ಧನಾಗಿರಬಹುದು.

ಪೌರಾಣಿಕ ನಿದರ್ಶನಗಳು ವಾಲ್ಮೀಕಿಯು ಶಿಷ್ಟನಾಗಿದ್ದನೆಂಬ ನಿದರ್ಶನಗಳನ್ನೆ ವಿವರಿಸುತ್ತವೆ. ಅಲ್ಲದೆ, ಬೇಡರಲ್ಲಿ ಕಣ್ವ ಋಷಿಯ ವಂಶಸ್ಥರೆಂಬ ನಂಬಿಕೆ ಇದೆ. ಭಾಗವತ್, ವಿಷ್ಣು ಪುರಾಣಗಳಿಂದಲೂ ಬೇಡರ ಸಂಸ್ಕೃತಿಯ ಬಗ್ಗೆ ಹುಡುಕಾಟಗಳು ನಡೆದಿವೆ. ಅದರ ಪ್ರಕಾರ ಇವರು ಧೃವ ಚಕ್ರವರ್ತಿಯ ವಂಶಸ್ಥರು ಆತನ ಮಗ ಅಂಗನೆಂಬ ಚಕ್ರವರ್ತಿಯ ಸಂತತಿಯವರು, ಪುರಾಣದ ಪ್ರಕಾರ ಅಂಗಚಕ್ರವರ್ತಿಯು ತನ್ನ ಪಿತೃಗಳಿಗೆ (ಸ್ವರ್ಗಸ್ಥ) ಹವಿಸ್ಸನ್ನು ನೀಡುವ ಉದ್ದೇಶಕ್ಕಾಗಿ ಪುತ್ರಕಾಮೇಷ್ಠಿಯಾಗದಿಂದ ಮಗನನ್ನು ಪಡೆಯುತ್ತಾನೆ. ಆತನೇ ವೇನನೆಂಬುವವನು. ಈತನು ಬೇಟೆಗಾರಿಕೆಯಂಥ ಹಿಂಸಾತ್ಮಕ ವೃತ್ತಿಗಳನ್ನು ಅನುಸರಿಸುತ್ತಿದ್ದನು. ಈತನು ರಾಜನಾದ ಮೇಲೆ ಯಾಗ-ಯಜ್ಞಗಳಂಥ ಧರ್ಮಕಾರ್ಯಗಳನ್ನು ನಿಲ್ಲಿಸಿದ್ದಲ್ಲದೆ ಸ್ವರ್ಗಸ್ಥರಿಗೆ ಹವಿಸ್ಸು ನೀಡುವ ಬದಲು ತನಗೇ

ನೀಡಬೇಕೆಂದು ಪೀಡಿಸತೊಡಗಿದನು. ಹೀಗೆ ನಾಸ್ತಿಕನೂ ದುಷ್ಟನೂ ಆದ ಇವನನ್ನು ಋಷಿಗಳು ಕೊಂದರು. ಆದರೆ ಇವನಿಗೂ ಮಕ್ಕಳಿಲ್ಲದ್ದರಿಂದ ಇವನ ಶರೀರವನ್ನು ಮಥಿಸಲಾಗಿ ಈತನ ಹಿರಿಯ ಮಗನಾಗಿ ಬಾಹುಕನೆಂಬ ಕುಬ್ಜನೂ ಕುರೂಪಿಯೂ ಆದ ವಿಕಲಾಂಗನು ಜನಿಸಿದನು. ಈತನು ರಾಜ್ಯಭಾರಕ್ಕೆ ಅನರ್ಹನೆಂದು ತಿಳಿದ ಋಷಿಗಳು ವೇನನ ಬಲಗೈಯನ್ನು ಕಡಿದರು. ಆಗ ಪೃಥುವೆಂಬ ಮಗನು ಜನಿಸಿ ರಾಜ್ಯಭಾರ ಮಾಡಿದನು.

ಹಿರಿಯ ಮಗನಾಗಿದ್ದರೂ ತಮ್ಮನ ಅಧೀನದಲ್ಲಿ ಬದುಕುವುದು ಅಪಮಾನವೆಂದು ಅರಿತ ಬಾಹುಕನು ಕಾಡಿಗೆ ತೆರಳಿದನು. ಬೇಟೆಗಾರಿಕೆ, ಪಶುಪಾಲನೆ ಹಾಗೂ ವ್ಯವಸಾಯದಂಥ ವೃತ್ತಿಗಳಲ್ಲಿ ಮುಂದುವರೆದನು. ಕಾಲಾನಂತರ ಇವನ ಸಂತತಿ ಕಾಡುಗಳಿಂದ ನಾಡಿನ ಕಡೆಗೆ ನಡೆದು ಬಂದರೆಂದು ನಂಬಿದ್ದಾರೆ. ಹಾಗೆಯೇ ಪುರಾಣ ವ್ಯಕ್ತಿಗಳಾದ ಧರ್ಮವ್ಯಾಧ, ಏಕಲವ್ಯ, ಗುಹ, ಶಬರಿ ಮುಂತಾದವರ ಸ್ಮೃತಿಗಳು ಬೇಡ ಸಮುದಾಯದಲ್ಲಿವೆ. ಆದರೆ ಪುರಾಣ ಮೂಲದ ತಮ್ಮ ಸಾಂಸ್ಕೃತಿಕ ವ್ಯಕ್ತಿಗಳ ಕುರಿತ ಆಚರಣೆಗಳು ಈ ಸಮುದಾಯದ ಭಾಗವಾಗಿ ಎಲ್ಲೂ ಕಂಡುಬರುವುದಿಲ್ಲ.

ಪುರಾಣ ಮೂಲದ ಧರ್ಮವ್ಯಾಧನ ಕತೆಯು ಬೇಡ ಸಂಸ್ಕೃತಿಯ ವೃತ್ತಿ ಸಂಸ್ಕಾರವನ್ನು ಅನುಮೋದಿಸುವುದಾಗಿದೆ. ಬೇಡರು ಮೂಲತಃ ಮಾಂಸಾಹಾರಿಗಳು. ಆದರೆ ಕಾಲಕ್ರಮೇಣ ಮಾಂಸಾಹಾರವನ್ನು ಕಡಿಮೆ ಮಾಡಿಕೊಂಡು ಸಸ್ಯಹಾರವನ್ನು ರೂಢಿಸಿಕೊಂಡವರು ಊರುಬೇಡರಿರಬಹುದು. ಈ ಕಾರಣಕ್ಕಾಗಿಯೇ ಇವರೆಡು ಗುಂಪುಗಳು ಬೇರ್ಪಟ್ಟ ನಿದರ್ಶನಗಳು ಕೆಲವು ಐತಿಹ್ಯಗಳಲ್ಲಿವೆ. ಅಣ್ಣ-ತಮ್ಮಂದಿರಿಬ್ಬರು ತಮ್ಮ ದನ-ಕರುಗಳನ್ನು ಮೇಯಿಸುತ್ತಿದ್ದಾಗ ಹಿಂದೆ ಬರುತ್ತಿದ್ದ ತಮ್ಮನು ಆಕಳು ಕರುವಿನ ಕಾಲನ್ನು ಕುಡಿಯಲಾರಂಭಿಸಿದನಂತೆ. ಇದನ್ನು ಕಂಡ ಅಣ್ಣನು ತಮ್ಮನನ್ನು ಕಾಡಿನಲ್ಲಿಯೇ ಬಿಟ್ಟು ಬಂದ. ಹೀಗೆ ಊರುಬೇಡ ಮ್ಯಾಸಬೇಡರು ಬೇರೆಯಾದರೆಂದು ಹೇಳುತ್ತಾರೆ. ಇದೇ ಐತಿಹ್ಯವನ್ನು ಕಾಡುಗೊಲ್ಲ ಹಾಗೂ ಮ್ಯಾಸಬೇಡರ ಪ್ರತ್ಯೇಕತೆಗೆ ಸಂಬಂಧಿಸಿದಂತೆಯೂ ಹೇಳುತ್ತಾರೆ.

ವಾಲ್ಮೀಕಿಯ ಮೂಲದಿಂದ ತಮ್ಮನ್ನು ಬೇಡರು ಗುರುತಿಸಿಕೊಳ್ಳುವಾಗಲೂ ಮ್ಯಾಸಬೇಡರು ಅಡವಿಯಲ್ಲಿದ್ದ ಹೆಂಡತಿಯ ಮಕ್ಕಳೆಂದೂ, ಊರು ಬೇಡರು ಊರಿನಲ್ಲಿದ್ದ ಹೆಂಡತಿಯ ಮಕ್ಕಳೆಂದೂ ಹೇಳುತ್ತಾರೆ. ಕನಕದಾಸರನ್ನು ಬೇಡರು ಮೂಲತಃ ತಮ್ಮವನೆಂದೇ ಗುರುತಿಸುತ್ತಾರೆ. ಅಂತೆಯೇ ಕುರುಬ ಮೂಲದವನೆಂಬ ವಾದವೂ ಇದೆ. ಏನೇ ಆದರೆ ಬೇಡರು ನಂಬುವ ಕನಕದಾಸನೆಂಬ ವ್ಯಕ್ತಿ ವ್ಯಾಸರಾಯರ ಪ್ರೀತಿಯ



ಶಿಷ್ಯನಾಗಿದ್ದುದಲ್ಲದೆ, 'ವ್ಯಾಸರಾಯ ಸಂಸೇವಿತಾಃ' ಎಂದು ಹೇಳಿದ್ದರಿಂದ ಆತನ ವಂಶಸ್ಥರು ಅದನ್ನೆ ಅನುಸರಿಸಿದರು. ಈ ವ್ಯಾಸ ಪರಂಪರೆಯ ಅನುಯಾಯಿಗಳನ್ನು ಮ್ಯಾಸರೆಂದು ಅಪಭ್ರಂಶಗೊಳಿಸಿ ಉಚ್ಚರಿಸುತ್ತಾ ಬಂದರೆಂದು ಕೆಲವರು ಸಮರ್ಥಿಸುತ್ತಾರೆ.

## ಕ್ಷತ್ರಿಯ ಮೂಲ

ಬೇಡರು ಕ್ಷತ್ರಿಯ ಮೂಲದವರೆಂದು ಸಮರ್ಥಿಸಿಕೊಳ್ಳುವ ಐತಿಹ್ಯ ಹೀಗಿದೆ : ಚಂದ್ರವಂಶದ ಕ್ಷತ್ರಿಯನಾದ ಕಾರ್ತವೀರ್ಯಾರ್ಜುನನು ಜಮದಗ್ನಿಯನ್ನು ಕೊಲ್ಲುತ್ತಾನೆ. ಇದರಿಂದ ಕುಪಿತನಾದ ಜಮದಗ್ನಿ ಪುತ್ರ ಪರಶುರಾಮನು ಕಾರ್ತಿವೀರ್ಯನನ್ನು ಕೊಂದನಲ್ಲದೆ ಅವನ ವಂಶವನ್ನು ಸರ್ವನಾಶ ಮಾಡಲು ಇಪ್ಪತ್ತೊಂದು ಭಾರಿ ದಂಡಯಾತ್ರೆ ನಡೆಸುತ್ತಾನೆ. ಇದರಿಂದ ಹೆದರಿದ ಕ್ಷತ್ರಿಯರೆಲ್ಲರು ಕಾಡುಗಳನ್ನು ಸೇರಿ ಬೇಡರಾದರು.

ರೇಣುಕೆ ಅಥವಾ ಎಲ್ಲಮ್ಮನ ಆರಾಧಕ ಪಂಗಡವಾದ ಬೇಡರಲ್ಲಿನ ಐತಿಹ್ಯದಂತೆ ಇವರು ಪರಶುರಾಮನ ಪರಂಪರೆಯವರು; ಎಲ್ಲಮ್ಮನ ಆರಾಧಕರಾದರು. ಗಂಧರ್ವನನ್ನು ನೋಡಿ ಯಲ್ಲಮ್ಮನು ಚಿತ್ತ ಚಂಚಲೆಯಾಗಿದ್ದಾಳೆಂದು ನಿರ್ಧರಿಸಿದ ಪತಿ ಜಮದಗ್ನಿಯು ಆಕೆಯನ್ನು ಕೊಲ್ಲುವಂತೆ ಮಗನಾದ ಪರಶುರಾಮನಿಗೆ ತಿಳಿಸುತ್ತಾನೆ. ಅಂತೆಯೇ ಪರಶುರಾಮನು ತನ್ನ ತಾಯಿಯ ತಲೆಯನ್ನು ಕತ್ತರಿಸುತ್ತಾನೆ. ಈ ರುಂಡವು ಹಲವು ಪವಾಡಗಳಿಂದಾಗಿ ಮಹತ್ವ ಪಡೆಯುತ್ತದೆ. ನಂತರ ಪರಶುರಾಮನು ತಾಯಿಯ ಆರಾಧಕನಾಗುತ್ತಾನೆ. ಈ ಐತಿಹ್ಯವು ಪ್ರಾದೇಶಿಕವಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಪುರುಷ ಪ್ರಾಬಲ್ಯದೊಂದಿಗೆ ಸಂಘರ್ಷಗೊಂಡು ಸ್ವಂತಿಕೆಯ ಅಸ್ಥಿತ್ವವನ್ನು ಉಳಿಸಿಕೊಂಡಿದ್ದರ ಸಂಕೇತವಾಗಿ ತೋರುತ್ತದೆ. ಆಗ ಅಲ್ಲಿನ ಬೇಡರು ಕೂಡ ಮಾತೃ ಮೌಲ್ಯಗಳನ್ನು ಒಪ್ಪಿಕೊಂಡು ಅನುಸರಿಸಿರಬಹುದು.

ಕಾರ್ತವೀರ್ಯನ ನಿರ್ದೇಶನದ ಐತಿಹ್ಯವು ಕ್ಷತ್ರಿಯ ಹಾಗೂ ಬೇಡರ ಸಾಮರಸ್ಯಕ್ಕೆ ನಿದರ್ಶನವೆನ್ನಬಹುದು. ಕಾರಣಾಂತರಗಳಿಂದ ಕಾಡು ಸೇರಿದ ಕ್ಷತ್ರಿಯರು ಬೇಡರ ಆಶ್ರಯದಲ್ಲಿ ನೆಲೆಯನ್ನು ಕಂಡುಕೊಳ್ಳುತ್ತಿದ್ದರು. ಆಗ ಬೇಡರ ಬೆಂಬಲದೊಂದಿಗೆ ಬಲಗೊಳ್ಳುತ್ತಿದ್ದರು. ಹಾಗೆಯೇ ಬೇಡರು ಕೂಡ ರಾಜತಂತ್ರದ ಯುಕ್ತಿಗಳನ್ನು, ಕ್ಷತ್ರಿಯ ಧರ್ಮದ ಸೂಕ್ಷ್ಮಗಳನ್ನು ಅರಿತುಕೊಂಡರು. ಇದರಿಂದ ಇವರಿಗೆ ಆಡಳಿತದಲ್ಲಿ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಸುಲಭ ಸಾಧ್ಯವಾಯಿತು ಎನ್ನಬಹುದು. ಐತಿಹ್ಯವೊಂದರಂತೆ ಮ್ಯಾಸನಾಯಕರು ರಾಜರಾಗಿದ್ದರಂತೆ. ಮ್ಯಾಸರಾಜರೆಂದು ಗುರುತಿಸಿಕೊಳ್ಳುತ್ತಿದ್ದರು. ಪರಶುರಾಮನು ರಾಜರುಗಳನ್ನು ನಾಶಮಾಡುತ್ತಾ ಬಂದಾಗ

ರಾಜರ ವೇಷವನ್ನು ಮರೆಸಿ ದನಕರುಗಳನ್ನು ಕುರಿಗಳನ್ನು ಮೇಯಿಸುತ್ತಾ ಹೊರಟರಂತೆ. ಮೇಯಿಸುವ ವೃತ್ತಿಯವರು ಮ್ಯಾಸರು ಆದರಂತೆ.

ಪರಶುರಾಮನ ಹೆದರಿಕೆಗೆ ರಾಜರಾಗಿದ್ದವರು ವೇಷ ಬದಲಿಸಿದಂತೆ, ಬೇಹುಗಾರರಾಗಿ ವೇಷ ಬದಲಿಸಿಕೊಂಡು ರಾಜರಿಗೆ ಗುಪ್ತ ಮಾಹಿತಿಗಳನ್ನು ನೀಡುತ್ತಿದ್ದ ವೇಷಬೇಡರು ಮ್ಯಾಸಬೇಡರಾದರೆಂದು ಕೆಲವರು ಹೇಳುತ್ತಾರೆ. ಊರು ಮಾರಮ್ಮನವರು (ದುರಗ-ಮುರುಗಿ), ಮೊಂಡರು, ಕೊಂಡಮಾಮರು ಮೂಲತಃ ಬೇಹುಗಾರರಾಗಿದ್ದವರು ಬೇಡರು. ಇವರು ಕಾಲಕ್ರಮೇಣ ಆಯಾ ವೃತ್ತಿಗಳಿಗೆ ಅಂಟಿಕೊಂಡು ಬೇಡರಿಂದ ಪ್ರತ್ಯೇಕವಾದದ್ದನ್ನು ಗಮನಿಸಬಹುದು. ಆದರೂ ಈ ಕುರುಹುಗಳು ಮ್ಯಾಸಬೇಡರಲ್ಲಿ ಇಂದಿಗೂ ಉಳಿದಿರುವುದಕ್ಕೆ ಗಾವು ಸಿಗಿಯುವ ಪೋತ ರಾಜರ ಸಂಸ್ಕೃತಿ ಹಾಗೂ ರಥೋತ್ಸವಗಳಲ್ಲಿ ದೇವರನ್ನು ಹೊತ್ತ ಹೆಂಗಸರು ಅಥವಾ ಮುದ್ರೆ ಹಾಕಿಸಿಕೊಂಡ ಹೆಣ್ಣು ಮಕ್ಕಳು ಓಕುಳಿಯಾಡುವುದು ಇತ್ಯಾದಿ ಸಾಕ್ಷಿಗಳಾಗಿವೆ.

ಚಾಮರಾಜನಗರ ಜಿಲ್ಲೆಯಲ್ಲಿ ಕಂಡುಬರುವ ಕಂಪಣಬೇಡರೆಂಬ ಪ್ರಭೇದವು ಬೇಡರ ಕಣ್ಣಯ್ಯನ ವಂಶಸ್ಥರೆಂದು ಗುರುತಿಸಿಕೊಂಡಿದೆ. ಇವರು ತಮ್ಮ ಬಂಧು-ಬಳಗದ ಸಂಬಂಧಗಳನ್ನು ತಮಿಳುನಾಡಿನ, ಈರೋಡ್ ಜಿಲ್ಲೆಯ ನೆಲೆಗಳಿಂದ ಬೆರೆಸಿಕೊಳ್ಳುತ್ತಾ ಬಂದಿದ್ದಾರೆ. ಮಲೆಯ ಮಹಾದೇಶ್ವರನ ಪರಂಪರೆಯಲ್ಲಿ ಕಂಡುಬರುವ ಬೇಡಗಂಪಣ ಈ ಕಂಪಣಬೇಡರೇ ಇರಬಹುದು. ಐತಿಹ್ಯದಂತೆ, ಕರ್ನಾಟಕಕ್ಕೆ ಬಂದ ಮಲೆಯ ಮಹದೇಶ್ವರನು ದೇವರುಗಳನ್ನು ಸೆರೆಯಿಟ್ಟಿದ್ದ ಶ್ರವಣ ಎಂಬುವವನನ್ನು ನಾಶಪಡಿಸಿ ಜನರಲ್ಲಿ ತಾನೇ ದೇವರೆಂದು ಬಿಂಬಿಸಿಕೊಂಡ. ಅಲ್ಲದೆ ಬೇಡರ ಕಣ್ಣಪ್ಪನಿಂದ ಪೂಜಿಸಿಕೊಂಡ, ಅಲ್ಲಿನ ಬೇಡರ ಮನೆಯ ಹೆಣ್ಣನ್ನು ಕೊಂಗರು ಕೇಳಲಾಗಿ ಅವರು ಅಲ್ಲಿಂದ ಬೇರೆಡೆಗೆ ಕಣ್ಮರೆಯಾಗಲು ಪ್ರಯತ್ನಿಸಿದರು. ಆಗ ಹರಿಯುತ್ತಿದ್ದ ತುಂಗಭದ್ರ ನದಿಯನ್ನು ದಾಟುವುದು ಕಷ್ಟವಾಗಿ ಮಹದೇಶ್ವರನನ್ನು ಪ್ರಾರ್ಥಿಸಿದರು. ಆಗ ನದಿ ಇಬ್ಭಾಗವಾಗಿ ದಾರಿ ಬಿಟ್ಟಿತು. ನಂತರ ನೆಲೆಸಿದೆಡೆಯಲ್ಲಿ ಲಿಂಗಾಧಾರಣೆಗೆ ಒಳಗಾದರು. ಇಂತಹ ತಮ್ಮ ಕಂಪಣನಾಯಕ ಗಂಪಣನೆಂಬುವವನನ್ನು ಮೂಲ ಪುರುಷನೆಂದು ಹೇಳುತ್ತಾರೆ.

ಲಿಂಗಧಾರಣೆ ಹಾಗೂ ರಾಜ ಮಹಾರಾಜರು ಇವರಿಗೆ ತೆರಿಗೆ ರಹಿತ ಮಾನ್ಯಗಳನ್ನು ನೀಡಿದ್ದರೆಂದೂ, ಇಂಥವುಗಳಿಂದ ಇವರು ಮೂಲ ಬೇಡರಿಂದ ಪ್ರತ್ಯೇಕವಾಗಬೇಕಾಯಿತೆಂದೂ ಹೇಳುತ್ತಾರೆ. ಕಂಪ್ಲಿಯ ಅರಸ ಕುಮಾರ ರಾಮ ಹಾಗೂ ಆತನ ತಂದೆ ಕಂಪಿಲನ ಪ್ರಭಾವಗಳು ಮಹದೇಶ್ವರ ಬೆಟ್ಟದ ಸುತ್ತಲಿನ ಪರಿಸರದವರೆಗೂ



ವ್ಯಾಪಿಸಿರಬಹುದು ಎಂಬ ಆಧಾರಗಳನ್ನು ಸಂಶೋಧಕರು ಸಮರ್ಥಿಸಿದ್ದಾರೆ. ವಲಸೆಗಾರ ಬೇಡರ ಗುಂಪುಗಳನ್ನು ಬೇಡಗಂಪಣ ಅಥವಾ ಬೇಡಕಂಪಣ ಎನ್ನುವುದುಂಟು. ಈ ನೆಲೆಯಲ್ಲಿ ಕಂಪಣಬೇಡರು ವಿಶಿಷ್ಟರು.

## ಇತಿಹಾಸದ ಸ್ಮೃತಿಗಳಲ್ಲಿ ಬೇಡ ನಾಯಕರ ಐತಿಹ್ಯಗಳು

ಚಿತ್ರದುರ್ಗ ಪಾಳೆಯಗಾರರು ಎಂದ ತಕ್ಷಣ ನೆನಪಿಗೆ ಬರುವುದು ಒನಕೆ ಓಬವ್ವನ ಐತಿಹ್ಯ. ಹೈದರಾಲಿಯ ಸೈನ್ಯವು ದುರ್ಗಕ್ಕೆ ಮುತ್ತಿಗೆ ಹಾಕಿ ಕಳ್ಳಕಿಂಡಿಯಿಂದ ಕೋಟೆಯೊಳಕ್ಕೆ ಪ್ರವೇಶಿಸಲು ಪ್ರಯತ್ನಿಸುತ್ತಿದ್ದಾಗ ಓಬವ್ವ ಕೋಟೆಯನ್ನು ರಕ್ಷಿಸಿದಳೆಂಬುದು ಹಿರಿಮೆ. ಇದಕ್ಕೆ ಪೂರಕವಾಗಿ ಬೆಳೆಯುವ ಪ್ರಸಂಗದಂತೆ ಓಬವ್ವಳು ಕೋಟೆಯನ್ನು ಕಾಯುವವನ ಹೆಂಡತಿ. ಮದಕರಿ ನಾಯಕನ ಮೇಲೆ ಶತ್ರು ಸೈನ್ಯ ದಂಡೆತ್ತಿ ಬಂದಾಗ ಕೋಟೆಯ ಕಾವಲುಗಾರ ಊಟಕ್ಕೆಂದು ಮನೆಗೆ ಹೋಗಿದ್ದ. ಅದೇ ಸಮಯದಲ್ಲಿ ಮನೆಯಲ್ಲಿ ಕುಡಿಯಲು ನೀರು ಇರಲಿಲ್ಲ. ಗಂಡನಿಗೆ ಊಟ ನೀಡಿದ ಓಬವ್ವ ಕೊಡವನ್ನು ಹೊತ್ತು ನೀರಿಗೆಂದು ಕೋಟೆಯ ಕಡೆಗೆ ಹೋಗುತ್ತಾಳೆ. ಅಲ್ಲಿ ರಹಸ್ಯವಾಗಿ ಶತ್ರು ಸೈನ್ಯ ಮುತ್ತಿಗೆ ಹಾಕಿರುವುದನ್ನು ಗಮನಿಸಿದಳು. ತಕ್ಷಣವೇ ಮನೆಗೆ ಹಿಂದಿರುಗಿ ಮನೆಯಿಂದ ಒನಕೆಯನ್ನು ಒಯ್ದಳು. ರಹಸ್ಯ ಕಿಂಡಿಯ ಬಳಿ ನಿಂತು ಒಳ ನುಸುಲಿ ಬರುತ್ತಿದ್ದ ಶತ್ರುಗಳನ್ನು ಒನಕೆಯಿಂದ ಚಚ್ಚಿ ಚಚ್ಚಿ ಕೊಲ್ಲ ತೊಡಗಿದಳು. ಕೊನೆಗೆ ಒಬ್ಬ ಶತ್ರುವಿನ ಮೋಸದಿಂದ ಸಾವನ್ನಪ್ಪಿದಳು.

ಈ ಓಬವ್ವಳನ್ನು ಬೇಡನಾಯಕರು ತಮ್ಮ ಸಮುದಾಯದವಳೆಂದು ನಂಬುತ್ತಾರೆ. ಕೆಲವು ಸಂಶೋಧಕರು ಆಕೆ ಕಟ್ಟೆಲರೆಂದು ಹೇಳುತ್ತಾರೆ. ಏನೇ ಆದರೂ ಈ ಐತಿಹ್ಯದಂತೆ ಜನಪದರು ಓಬವ್ವನಿಗೆ ಕೊಡುವ ಮಹತ್ವ ಯಾವ ರಾಣಿಗೂ ಲಭಿಸಿಲ್ಲವೆಂದು ಹೇಳಬಹುದು. ಆದರೆ ಈಕೆ ಸಾಮಾನ್ಯಳು ವೀರತ್ವವನ್ನು ಮೆರೆದಳೆಂಬುದೇ ಈಕೆಯ ಹೆಗ್ಗಳಿಕೆಯ ಹೆಗ್ಗುರುತು ಆಗಿದೆ. ಆದ್ದರಿಂದ ಮದಕರಿ ನಾಯಕನಿಗಿಂತ ಮಿಗಿಲಾದ ಮಹತ್ವ ಒನಕೆ ಓಬವ್ವಳಿಗೆ ಲಭಿಸಿದೆ.

ಹೀಗೆ ಬೇಡ-ನಾಯಕರು ತಮ್ಮ ಸಮುದಾಯದ ಆಡಳಿತಾತ್ಮಕ ನೆನಪುಗಳನ್ನು ಲಾವಣಿ - ಐತಿಹ್ಯ ಕಥೆ-ಗೀತೆಗಳಂಥ ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಉಳಿಸಿಕೊಂಡಿದ್ದಾರೆ. ತರೀಕೆರೆ ಪಾಳೆಯಗಾರರು, ಚಿತ್ರದುರ್ಗದ ಪಾಳೆಯಗಾರರು, ಗುಮ್ಮನಾಯಕನಹಳ್ಳಿಯ ಪಾಳೆಯಗಾರರು, ಸುರಪುರದ ಪಾಳೆಯಗಾರರು ಹೀಗೆ ಬೇಡ ಪಾಳೆಯಗಾರರ ಬಹುಪಾಲು ಇತಿಹಾಸವು ಮೌಖಿಕ ಪರಂಪರೆಯಲ್ಲಿ ಜನಜನಿತವಾಗಿದೆ.

## ಸರ್ಜಪ್ಪ ನಾಯಕ

ತರೀಕೆರೆಯ ಪಾಳೆಯಗಾರನಾದ ಸರ್ಜಪ್ಪ ನಾಯಕನು ಬ್ರಿಟೀಷರ ಕುಟಿಲ ತಂತ್ರಕ್ಕೆ ಬಲಿಯಾಗಿ ಅವಸಾನ ಹೊಂದಿದ ಸಂಗತಿ ಐತಿಹಾಸಕವಾದದ್ದು. ಆದರೆ ಒಟ್ಟಾರೆ ಬೇಡ ಸಮುದಾಯ ಮೌಖಿಕ ಚರಿತ್ರೆಯನ್ನು ಕಟ್ಟಿಕೊಡುವ ಸರ್ಜಪ್ಪನಾಯಕನ ಐತಿಹ್ಯವು ಲಾವಣಿಗಳಲ್ಲಿ ಮೂಡಿಬಂದಿದೆ. ಇದರ ಪ್ರಕಾರ ಪರಾಕ್ರಮಿಯಾದ ಸರ್ಜಪ್ಪ ನಾಯಕನು ರಸಿಕತೆಯ ಧ್ಯೋತಕವಾಗಿ ಕುರುಬರ ಸಿಂಗಮ್ಮಳೆಂಬ ಹೆಣ್ಣಿನ ಸಂಬಂಧ ಹೊಂದಿರುತ್ತಾನೆ. ಆಕೆಯನ್ನು ಬಹಳವಾಗಿ ಪ್ರೀತಿಸುತ್ತಿದ್ದ ಅಲ್ಲದೆ ಆಕೆಯೊಂದಿಗೆ ಜೀವನವನ್ನು ಕಳೆಯುವ ಕ್ಷಣಗಳಲ್ಲಿ ತನ್ನ ಆಡಳಿತದ ವಿಷಯಗಳನ್ನೆಲ್ಲ ಹೇಳುತ್ತಿದ್ದ. ಹೀಗೆ ಆತನ ನಂಬಿಕೆಗೆ ಪಾತ್ರಳಾಗಿದ್ದ ಸಿಂಗವ್ವನನ್ನು ಬ್ರಿಟೀಷರು ಆಮಿಷವೊಡ್ಡಿ ಮರುಳುಗೊಳಿಸುತ್ತಾರೆ.

ಬ್ರಿಟೀಷರ ಮೋಸದ ಜಾಲಕ್ಕೆ ಸಿಂಗವ್ವನ ಸಹಕಾರ ದೊರೆಯುತ್ತದೆ. ಈ ರಹಸ್ಯವನ್ನು ಅರಿಯದ ಸರ್ಜಪ್ಪನಾಯಕನು ಸಿಂಗವ್ವನ ಮನೆಗೆ ಹೋದಾಗ ಕೊಲೆಯಾಗುತ್ತಾನೆ. ಹೀಗೆ ಸರ್ಜಪ್ಪನಾಯಕನು ತನ್ನ ಪ್ರೇಯಸಿಯಿಂದ ದುರಂತದ ಸಾವನ್ನಪ್ಪಿದ ದುರ್ಘಟನೆ ಬೇಡರ ನೆನಪುಗಳ ಪರಂಪರೆಯಲ್ಲಿ ಉಳಿದು ಬಂದಿದೆ.

ಸಿಂಧೂರ ಲಕ್ಷ್ಮಣನನ್ನು ಬ್ರಿಟೀಷರು ಸೆರೆಹಿಡಿದ ನೆನಪು ಜನಪದ ಕಲೆಗಳಲ್ಲಿ ಲಾವಣಿಗಳಲ್ಲಿ ಐತಿಹ್ಯಗಳಾಗಿ ಅರಳಿ ಜೀವಂತಿಕೆಯನ್ನು ಪಡೆದಿದೆ.

## ಬೇಡರ ಕಣ್ಣಪ್ಪನ ಮೂಲ ಐತಿಹ್ಯದಂತೆ

ಬೇಟೆಗಾರನಾಗಿದ್ದ ಈತನು ಶಿವನ ಮುಗ್ಧ ಭಕ್ತ. ಒಮ್ಮೆ ಬೇಟೆ ದೊರೆಯದಿದ್ದಾಗ ತನಗೆ ದೊರೆತ ಬೇಟೆಯಲ್ಲಿ ಅರ್ಧಪಾಲನ್ನು ಶಿವನಿಗೆ ಅರ್ಪಿಸುವುದಾಗಿ ಶಿವನಲ್ಲಿ ಹರಕೆ ಮಾಡಿಕೊಂಡ. ಅಂತೆಯೇ ದೊರೆತ ಬೇಟೆಯಲ್ಲಿ ಶಿವನಿಗೆ ಅರ್ಧಭಾಗವನ್ನು ನೈವೇದ್ಯ ಮಾಡಿದ. ದೇವಾಲಯದ ಅರ್ಚಕ ವರ್ಗದಿಂದ ಮಾಂಸದ ಎಡೆಗೆ ಪ್ರತಿರೋಧವೇಳುತ್ತದೆ; ಮೈಲಿಗೆಯಾಯಿತೆಂದು ಅವರೆಲ್ಲ ಸಿಡಿದೇಳುತ್ತಾರೆ. ಆದರೆ ಶಿವನಿಗೆ ಈ ಬೇಟೆಗಾರನ ಭಕ್ತಿಯ ಬಗ್ಗೆ ಸಂತೋಷವಾಗುತ್ತದೆ. ಆನಂದ ಭಾಷ್ಪ ಕಣ್ಣುಗಳಿಂದ ಹರಿಯುತ್ತದೆ. ಇದರಿಂದ ಗಾಬರಿಗೊಂಡ ಭಕ್ತನು ದೇವರಿಗೆ ಕಣ್ಣು ನೋಯುತ್ತಿದೆಯೆಂದು ತಿಳಿದು ತನ್ನ ಕಣ್ಣುಗಳನ್ನು ತೆಗೆದು ಶಿವಲಿಂಗಕ್ಕೆ ಕಸಿ ಮಾಡುತ್ತಾನೆ. ಇದರಿಂದ ಈತನಿಗೆ ಕಣ್ಣಪ್ಪನೆಂಬ ಹೆಸರು ಬಂದಿತು. ಬಹುಶಃ ಈತನೇ ಮೊದಲ ನೇತ್ರದಾನಿ ಹಾಗೂ ಒಬ್ಬರ ಕಣ್ಣುಗಳನ್ನು ಮತ್ತೊಬ್ಬರಿಗೆ ಕಸಿ ಮಾಡಬಹುದೆಂಬ ಪ್ರಯೋಗದಲ್ಲಿ ಯಶಸ್ವಿಯಾದವನು.



ಕಣ್ಣಪ್ಪನ ಈ ಐತಿಹ್ಯ ಪ್ರಸಂಗವು ಶೈವ ಪಂಥದ ಬೇಡರ ಸಾಂಸ್ಕೃತಿಕ ವಿಕಾಸದಲ್ಲಿ ಎದುರಾದ ಸಂಘರ್ಷವನ್ನು ಹೇಳುತ್ತದೆ. ಅದೆಂದರೆ ಕಣ್ಣಪ್ಪನು ಶಿವನಿಗೆಂದು ದೇವಾಲಯದಲ್ಲಿ ಮಾಂಸದ ನೈವೇದ್ಯ ಮಾಡಿದಾಗ ಅರ್ಚಕನು ಅದನ್ನು ವಿರೋಧಿಸುವುದಾಗಿದೆ. ಆದರೆ ಅರ್ಚಕನ ಮಗನು ಅದನ್ನು ಅನುಮೋದಿಸುತ್ತಾನೆಂಬ ಅಂಶವು ಮುಖ್ಯವಾಗುತ್ತದೆ. ಶಿವನು ಅರ್ಚಕನ ಶಿಷ್ಟಚಾರದ ಅರ್ಚನೆಗೆ ಒಲಿಯದೆ ಕಣ್ಣಪ್ಪನ ಮುಗ್ಧಭಕ್ತಿಗೆ ಒಲಿದವನೆಂಬ ಸಂಗತಿಯು ಸ್ವಾರಸ್ಯವನ್ನು ನೀಡಿದೆ. ಐತಿಹ್ಯವು ಮುಂದುವರೆದಂತೆಲ್ಲ ಸಂಸ್ಕೃತಿಯ ಬೆಳವಣಿಗೆಯನ್ನು ಬಿಂಬಿಸುವ ಸುಳಿವುಗಳನ್ನು ಒಳಗೊಂಡಿರುವುದು ಸ್ಪಷ್ಟವಾಗಿದೆ. ಕಣ್ಣಪ್ಪನ ಭಕ್ತಿಗೆ ಪ್ರತ್ಯಕ್ಷವಾದ ಶಿವನು ವರಗಳನ್ನು ಬೇಡುವಂತೆ ಸೂಚಿಸುತ್ತಾನೆ. ಆದರೆ ಕಣ್ಣಪ್ಪನು ನಿನ್ನ ದರ್ಶನ ಭಾಗ್ಯದ ಹೊರತಾಗಿ ತನಗೇನು ಬೇಡವೆಂದು ತಿಳಿಸಿದನು. ಶಿವನು ತಾನು ಒಮ್ಮೆ ಪ್ರತ್ಯಕ್ಷನಾದ ಮೇಲೆ ವರ ನೀಡದೆ ಅದೃಶ್ಯವಾಗುವಂತಿಲ್ಲವಾದ್ದರಿಂದ ಏನಾದರೂ ಬೇಡಿಕೋ ನೀಡುತ್ತೇನೆಂದು ಸೂಚಿಸಿದರೂ, ಈ ಭಕ್ತನು ನಿರಾಕರಿಸಿದನಂತೆ. ಕೊನೆಗೆ ಶಿವನೇ ವಿಧವಿಧದ ವರಗಳನ್ನು ವಿವರಿಸಿ ನೀಡಲೇ ಎಂದು ಕೇಳತೊಡಗಿದ ಎಲ್ಲವನ್ನೂ ಬೇಡ ಬೇಡವೆಂದು ಕಣ್ಣಪ್ಪನು ಹೇಳಿದ್ದರಿಂದ ಬೇಡ ಎಂಬ ಜಾತಿ ಸೃಷ್ಟಿಯಾಯಿತೆಂದು ಹೇಳುತ್ತಾರೆ. ಇದು ಬೇಡರ ಸ್ವಾಭಿಮಾನದ ಮೂಲವೆಂದು ನಂಬುತ್ತಾರೆ. ಶಿವನಿಗೆ ಅಸಮಾಧಾನವಾಗದಿರಲೆಂದು ಕಣ್ಣಪ್ಪನು ಅಂತಿಮವಾಗಿ ಒಂದು ಕೋರಿಕೆಯನ್ನು ಮಾಡಿಕೊಂಡನಂತೆ. ಸದಾಕಾಲವಾಗಿ ಶಿವನ ಪಾದಗಳು ತನ್ನ ತಲೆಯ ಮೇಲೆ ಇರಬೇಕೆಂದು ಕೇಳಿಕೊಳ್ಳಲು ಪ್ರಯತ್ನಿಸಿದ. ಆದರೆ ಭಕ್ತಿ ಪರವಶತೆಯಲ್ಲಿ ಆಡಬೇಕೆಂದಿದ್ದ ಮಾತುಗಳು ತಿರುಗು-ಮುರುಗು ಆಗಿ ಸದಾ ನನ್ನ ಪಾದಗಳು ನಿನ್ನ ತಲೆಯ ಮೇಲಿರಲಿ ಎಂದು ಬೇಡಿದನಂತೆ. ಇದರ ಫಲವಾಗಿಯೇ ತುಂಬೆಯ ಗಿಡವನ್ನು ಸೃಷ್ಟಿಸಿದನೆಂದು ಹೇಳುತ್ತಾರೆ. ತುಂಬೆಯ ಚೆಂಡು ಶಿವನ ತಲೆಯೆಂದು ಚಂಡಿನಲ್ಲಿನ ಬಿಳಿಯ ಹೂಗಳು ಕಣ್ಣಪ್ಪನ ಪಾದಗಳೆಂದು ಸಂಕೇತಿಸಿ ಪೂಜಿಸುತ್ತಾರೆ. ಈ ಕಾರಣ ತುಂಬೆಯ ಗಿಡ ಹಾಗೂ ಹೂವು ಪೂಜೆಯಲ್ಲಿ ಪ್ರಾಶಸ್ತ್ಯ ಪಡೆದಿವೆ.

ಶೈವ ಧರ್ಮದ ಪ್ರಭಾವು ಈ ಸಮುದಾಯದ ಮೇಲೆ ಬೀರಿದ ಪರಿಣಾಮಗಳನ್ನು ಗಮನಿಸಬೇಕಾದ ಅನಿವಾರ್ತೆ ಇದೆ.











# ದಲಿತ ಚಳವಳಿಗೆ ಬೇಕು ಮಾಂತ್ರಿಕ ಸ್ಪರ್ಶ

– ಹೆಚ್.ಪಿ. ಅನಿಲ್‌ಕುಮಾರ್
ಹವ್ಯಾಸಿ ಪತ್ರಕರ್ತರು

1970ರಿಂದ ಇಲ್ಲಿಯವರೆಗೆ ನಡೆದು ಬಂದಿರುವ ದಲಿತ ಚಳವಳಿ ಹಾಗೂ ಬಂಡಾಯ ಸಾಹಿತ್ಯ ಚಳವಳಿಯ ಆರಂಭದ ದಿನಗಳವರೆಗೆ ಒನ್ನೋಟ ಹರಿಸಿದರೆ, ಬೆಂಗಳೂರಿನ ವೃಷಭಾವತಿ ಎಂಬ ನದಿ ನೀರು ಹೇಗೆ ಮಲಿನವಾಗಿದೆಯೋ ಹಾಗೇ ಇಂದಿನ ಸಾಮಾಜಿಕ ಜೀವನ ಕೂಡ ಗಬ್ಬೆದ್ದು ಹೋಗಿದೆ ಎಂಬುದು ಮನವರಿಕೆಯಾಗುತ್ತದೆ. ದುಸ್ತರವಾದ ಜನಜೀವನಕ್ಕೆ ಯಾವುದರ ವಿರುದ್ಧ ಪ್ರತಿಭಟಿಸಬೇಕು ಎಂಬುದೇ ಮರೆತು ಹೋಗಿ ಅದು ಭ್ರಷ್ಟ ವ್ಯವಸ್ಥೆಯನ್ನು ಸುಮ್ಮನೆ ಒಪ್ಪಿಕೊಂಡಿದೆಯೇನೋ ಅನಿಸದಿರದು.

ಆಗಿನ ಅವಿಭಜಿತ ಕೋಲಾರ ಜಿಲ್ಲೆಯ ಬಂಡಾಯ ಸಾಹಿತ್ಯ - ದಲಿತ ಚಳವಳಿಯು ಎಡಪಂಥೀಯ ಧೋರಣೆಯ ಮನಸ್ಸುಗಳೊಂದಿಗೆ ತನ್ನ ಸಂಘರ್ಷದ ಮಾರ್ಗ ಕ್ರಮಿಸತೊಡಗಿತ್ತು. ಆಗ ತಾನೇ ಚಿಂತಾಮಣಿಯ ಕಾಲೇಜಿಗೆ ಕಾಲಿರಿಸಿದ್ದ ನನಗೆ ನಾನು ಹುಟ್ಟಿದ ಜಾತಿಯಲ್ಲಿನ ಹಲವಾರು ವೈರುಧ್ಯಗಳೊಂದಿಗೆ, ಸಾಮಾಜಿಕ ಮೌಲ್ಯಗಳಲ್ಲಿನ ವಿಪರ್ಯಾಸಗಳು ಕಾಡತೊಡಗಿದ್ದವು. ನಮ್ಮ ಕಾಲೇಜಿನ ಕನ್ನಡ ಉಪನ್ಯಾಸಕರಾದ ಕೆ. ನಾರಾಯಣಸ್ವಾಮಿ ಹಾಗೂ ಆರ್.ವಿ.ಎಸ್. ಸುಂದರಂ ಅವರು ಕನ್ನಡಕ್ಕೆ ಅನುವಾದಿಸಿದ್ದ ತೆಲುಗಿನ ವಿಪ್ಲವ ಕವಿಗಳ 'ದಿಗಂಬರ ಕವಿತೆ'ಗಳ ಸಂಕಲನ ಅಂಥ ಹಸಿ, ಬಿಸಿ ಯೌವನದ ದಿನಗಳಲ್ಲಿ ನನಗೆ ಸಿಕ್ಕಿತ್ತು. ಪಾರಂಪರಿಕ



ಪರಿಧಿ ಯಾಚೆಗೆ ಹರಿಯುತ್ತಿರುವ ಹೊಚ್ಚ ಹೊಸ ಧೋರಣೆಗಳ, ಹೊಸ ಭಾಷೆಯ ಹೊಸ ಆಯಾಮದ ಸುನಾಮಿ ಅಪ್ಪಳಿಸಿತ್ತು.

ಆಗ ಬಿಡುಗಡೆಯಾದ 'ಸಂಸ್ಕಾರ', 'ಕಾಡು', 'ಘಟಶ್ರಾದ್ಧ', 'ಅನ್ವೇಷಣೆ', 'ಅವಸ್ಥೆ', 'ಗ್ರಹಣ'ದಂಥ ಸಿನಿಮಾಗಳು ಹಲವರ ಬೌದ್ಧಿಕ ಲೋಕದ ವಿಸ್ತರಣೆಗೆ ನೀರೆರೆದವು. ಅದರೊಂದಿಗೆ 'ಪಂಚಮ', 'ಶೂದ್ರ', 'ವಿಮುಕ್ತ', 'ಅನ್ವೇಷಣೆ', 'ಆಂದೋಲನ', 'ಸಂಕ್ರಮಣ', 'ಸಾಕ್ಷಿ', 'ರುಜುವಾತು' - ಮೊದಲಾದ ಭಾಗವಾಗಿದ್ದವು. 'ಪ್ರಜಾವಾಣಿ' ಪತ್ರಿಕೆಯು ಈ ಕಾಲಘಟ್ಟದ ಸಾಂಸ್ಕೃತಿಕ ಪರಿಸರಕ್ಕೆ ವೇದಿಕೆಯಾಗಿತ್ತು. 'ಲಂಕೇಶ್ ಪತ್ರಿಕೆ' ಹೊಸತೊಂದು ಪತ್ರಿಕೋದ್ಯಮದ ಟ್ರೆಂಡ್‌ಗೆ ಕಾರಣವಾಯ್ತು. ಇಂಥ ಸಾಂಸ್ಕೃತಿಕ ಸನ್ನಿವೇಶದಲ್ಲಿ, ಕೋಲಾರದಲ್ಲಿ 'ಎಲ್ಲಾ ಜಾತಿಯ ಬಡವರು ದಲಿತರೇ' ಎಂಬ ಘೋಷಣೆಯೊಂದಿಗೆ ದಲಿತ ಚಳವಳಿಯ ಸಂಘರ್ಷದ ದಿನಗಳು ಮೊದಲಾಯಿತು. ಈಗ ಆದಿಮದ ಸಂತನಂತೆ ಕಾಣುವ ಕೋಟಿಗಾನಹಳ್ಳಿ ರಾಮಯ್ಯ, ಆ ದಿನಗಳಲ್ಲಿ ಬ್ಯಾಂಕ್ ಉದ್ಯೋಗ ತ್ಯಜಿಸಿ ಹೋರಾಟದ ಸಾಗರಕ್ಕೆ ಸೇರಿದ್ದರು. ಘೋಷಣೆಗಳನ್ನು ಕೂಗುತ್ತಿದ್ದಾಗಿನ ಅವರ ಕೊರಳಿನ ಉಬ್ಬಿದ ನರಗಳ ಚಿತ್ರ ನನ್ನ ನೆನಪಲ್ಲಿ ಸ್ಥಿರವಾಗಿ ಉಳಿದಿದೆ. ಇಂಥದೊಂದು ಚಳವಳಿಯ ಪ್ರವಾಹದಲ್ಲಿ ಮುಳುಗೆದ್ದ ಅಸಂಖ್ಯಾತರಲ್ಲಿ ನಾನೂ ಒಬ್ಬ.

ಆದರೆ 'ಎಲ್ಲಾ ಜಾತಿ'ಯವರನ್ನು ಎಂಬ ಧ್ಯೇಯವನ್ನು ತೆಗೆದು ಹಾಕಿ ಅದರ ಬದಲಿಗೆ ಪರಿಶಿಷ್ಟ ಜಾತಿ - ಪಂಗಡಗಳಿಗೆ ಮಾತ್ರವಾದಂತೆ ದಲಿತ ಚಳವಳಿ ಎಡವತೊಡಗಿತು ಎಂಬುದು ನನ್ನ ಅನಿಸಿಕೆ. ಮುಂದಿನ ದಿನಗಳಲ್ಲಿ ದಲಿತ ಚಳವಳಿ ರಾಜಕೀಯದ ಆಮಿಷಗಳಿಗೆ ಮುಖ ಮಾಡದೆ ಸ್ವಾಯತ್ತತೆಯಿಂದಲೂ, ಸಮಗ್ರತೆಯಿಂದಲೂ ಹೋರಾಟದ ನಿರಂತರತೆಯನ್ನು ಕಾಯ್ದುಕೊಳ್ಳಬೇಕಾಗಿತ್ತು. ಎಲ್ಲಾ ಜಾತಿಯ ಬಡವರನ್ನು ಒಳಗೊಂಡಿದ್ದಿದ್ದರೆ ಪರಸ್ಪರ ನಂಬಿಕೆಯ ತಳಹದಿಯ ಮೇಲೆ ದಮನಿತ ಜಾತಿಗಳು ಹಾಗೂ ಇತರರನ್ನು ಅರ್ಥಮಾಡಿಕೊಂಡು ಮುಂದುವರಿಯಲು ಅದಕ್ಕೆ ಸಹಕಾರಿ ಆಗುತ್ತಿತ್ತು.

ದಲಿತ ಚಳವಳಿ, ಸರ್ಕಾರಿ ನೌಕರಿಯ ಮೀಸಲಾತಿಗೋ ಅಂಥ ಮತ್ತಾವುದಕ್ಕೋ ಪ್ರಾಧಾನ್ಯಕೊಡದೆ ಮಹತ್ವದ ಗುರಿ ಹೊಂದಿರಬೇಕಾಗಿತ್ತು. ಪಟ್ಟಭದ್ರ ಹಿತಾಸಕ್ತಿಗಳು ಮೀಸಲಾತಿ ಎಂಬ ಮಾಯಾಮೃಗದ ಹಿಂದೆ ಓಡುವಂತೆ ಮಾಡಿ, ಚಳವಳಿಯನ್ನು ಅಡ್ಡದಾರಿ ಹಿಡಿಸಿದವೇನೋ? ಅಲ್ಲದೆ ಮಾಹಿತಿ ತಂತ್ರಜ್ಞಾನದ ಸ್ಫೋಟ, ಕಂಪ್ಯೂಟರ್ ದುರ್ಬಳಕೆ, ದೃಶ್ಯಮಾಧ್ಯಮದ ವಿಜೃಂಭಣೆಗಳ ವರ್ತಮಾನವು ವೈಚಾರಿಕ ಚಿಂತನೆಯ ಆಳ ವಿಸ್ತಾರಗಳಿರುವ ಜಲಾಶಯಕ್ಕೆ ಹೂಳು ತುಂಬುತ್ತಿವೆ. ಚಿಂತನೆಯ ಸಂಘರ್ಷಗಳ ಪ್ರಾಮಾಣಿಕತೆಗಳು ಅನುಮಾನಗಳಿಗೆ ಕಾರಣವಾಗುತ್ತಿವೆ. ರಾಜಕೀಯದ ತಕ್ಷಣದ ಆಮಿಷಗಳಿಗೆ ಬಲಿಯಾಗುತ್ತಿವೆ.



ಕೆನೆಪದರದ ದಲಿತರು ಆಳವಾದ ಅಧ್ಯಯನ, ವಿಶಾಲವಾದ ದೂರದೃಷ್ಟಿಯ ಧೋರಣೆಗಳನ್ನು ಬಿಟ್ಟು ಕೊಟ್ಟು, ತಕ್ಷಣದ ರಾಜಕೀಯ ಲಾಭ ಪಡೆಯಲು ಮುಂದಾಗುತ್ತಿದ್ದಾರೇನೋ ಅನಿಸುತ್ತಿದೆ.

ಇಂಥ ಒಂದು ಸಂದಿಗ್ಧದಲ್ಲಿ ದಲಿತ ಚಳವಳಿಯು ಹಿಂದಿನ ಈ ಅನುಭವವನ್ನು ಗಮನಿಸಿಕೊಂಡು ಹೊಸ ಪೀಳಿಗೆ ಮಾತ್ರ ದಲಿತ ಚಳವಳಿಗೆ ಮರುಹುಟ್ಟು ನೀಡಬಹುದೆನಿಸುತ್ತದೆ. ಅಂಬೇಡ್ಕರ್‌ರಂಥ ಸಶಕ್ತ ವ್ಯಕ್ತಿತ್ವದವರ ಮಾಂತ್ರಿಕ ಸ್ಪರ್ಶ ಸಮಕಾಲೀನ ದಲಿತ ಚಳವಳಿಗೆ ಬೇಕಾಗಿದೆ.

(ಕೃಪೆ : ಪ್ರಜಾವಾಣಿ)







49

# ಫ್ಲೋರೋಸಿಸ್ ನಿವಾರಣೆಗೆ ನಿಸ್ವಾರ್ಥ ಕಾಯಕ

– ಡಾ. ನಯಾಜ್ ಅಹ್ಮದ್

ಸಹಾಯಕ ಪ್ರಾಧ್ಯಾಪಕರು ಮತ್ತು ಹವ್ಯಾಸಿ ಪತ್ರಕರ್ತ

ಶಿಕ್ಷಣ ಇಲಾಖೆಯ ನಿವೃತ್ತ ಜಂಟಿ ನಿರ್ದೇಶಕ ಕೆ. ನಾರಾಯಣಸ್ವಾಮಿ ಎಂದರೆ ಕೋಲಾರದಲ್ಲಿ ಗೊತ್ತಾಗಲಿಕ್ಕಿಲ್ಲ. ಆದರೆ ಕೆ.ಎನ್.ಎಸ್. ಎಂದರೆ ತಟ್ಟನೆ ಗುರುತು ಹಿಡಿಯುತ್ತಾರೆ. ಜಿಲ್ಲೆಯಾದ್ಯಂತ ತಲೆ ಎತ್ತುತ್ತಿರುವ ಫ್ಲೋರೋಸಿಸ್ ರೋಗದ ವಿರುದ್ಧ ಸಮರ ಸಾರುತ್ತಿರುವ ಅವರ ಪರಿಸರ ಪ್ರಜ್ಞೆಯ ಹೆಜ್ಜೆಗಳು ಅಣ್ಣಾ ಹಜಾರೆಯವರನ್ನು ನೆನಪಿಸುತ್ತಿವೆ.

ಸರ್ಕಾರಿ ನೌಕರಿಯಲ್ಲಿದ್ದಾಗ ಯಾವುದೇ ಆರೋಪ ಕಳಂಕಗಳಿಲ್ಲದೆ ವೈಚಾರಿಕತೆ, ಸಮಾನತೆ, ಸಾಮಾಜಿಕ ನ್ಯಾಯ, ಜಾತ್ಯತೀತ ಪದಗಳಲ್ಲಿ ಗಾಢವಾಗಿ ಅಡಗಿ ಹೋಗಿ ದೇವನೂರು ಮಹದೇವ, ದಿ. ಬಿ. ಕೃಷ್ಣಪ್ಪ, ಡಾ. ಸಿದ್ಧಲಿಂಗಯ್ಯ ಅವರೊಂದಿಗೆ ಶೋಷಿತರ ಬದುಕಿಗೆ ಆಶಾ ಜ್ಯೋತಿ ಕಲ್ಪಿಸಲು 30 ವರ್ಷಗಳ ಸತತ ಪ್ರಯತ್ನ ನಡೆಸಿದ ಕೆ.ಎನ್.ಎಸ್. ಪ್ರಸ್ತುತ ಸಾಮಾಜಿಕ ಪ್ರಜ್ಞೆಯ ಜೊತೆಗೆ ಪರಿಸರ ಪ್ರಜ್ಞೆಯನ್ನೂ ಮೈತುಂಬಿಕೊಂಡಿದ್ದಾರೆ.

ಮೂಲತಃ ಗೌರಿಬಿದನೂರು ತಾಲ್ಲೂಕು ಹೊಸೂರು ಗ್ರಾಮದ ಕೆ.ಎನ್.ಎಸ್. ಅವರ ಶೇ. 80 ಭಾಗದ ಸರ್ಕಾರಿ ಸೇವೆ ಇದೇ ಜಿಲ್ಲೆಯಲ್ಲಿ ಕಳೆದರೂ ಫ್ಲೋರೋಸಿಸ್ ಕುರಿತಾಗಿ ಅವರ ಗಮನ ಹರಿದಿರಲಿಲ್ಲ. ಬಾಗೇಪಲ್ಲಿ-ಗುಡಿಬಂಡೆ ತಾಲ್ಲೂಕುಗಳಲ್ಲಿ ಅವರ ಸಂಚಾರ ಹೆಚ್ಚಿದ್ದರೂ ಈ ಬಗ್ಗೆ ಮಾಹಿತಿ ಇರಲಿಲ್ಲ. ಕೆಎನ್ಎಸ್ ಅವರೇ ಹೇಳುವಂತೆ ಈ ಭಾಗದಲ್ಲಿ 7-8 ವರ್ಷಗಳಿಂದ

ಫ್ಲೋರೋಸಿಸ್ ಅಸ್ತಿತ್ವದಲ್ಲಿದ್ದರೂ ಸಂಬಂಧಿಸಿದವರೆಲ್ಲ ಮೌನ ತಾಳಿದ್ದರು. ಜನರು ಕಾಯಿಲೆ ಅನುಭವಿಸುತ್ತಿದ್ದರು. ಬಾಗೇಪಲ್ಲಿ ತಾಲ್ಲೂಕಿನ 264 ಗ್ರಾಮಗಳ ನೀರಿನಲ್ಲಿಯೂ ಫ್ಲೋರೈಡ್ ವಿಷ ಹರಡಿದ್ದರೂ ಜನ ಕುಡಿಯುತ್ತಿದ್ದರು. ಮೈ ಕೈ ನೋವುಗಳಿಗೆ ಬೇರೇನೋ ಕಾರಣವೆನ್ನುತ್ತಿದ್ದರು. ಆದರೆ ಡ್ಯಾಸಿಡಾ ಸಂಸ್ಥೆ ಪ್ರಥಮ ಬಾರಿ ಈ ಪ್ರದೇಶದಲ್ಲಿ ಫ್ಲೋರೈಡ್ ಇರುವುದು ಪತ್ತೆ ಹಚ್ಚಿತು. ಇದರಿಂದ ದಿಗ್ಭ್ರಮೆಗೊಂಡು ಇದರ ವಿರುದ್ಧ ಸಮರ ಸಾರಲು ಮುಂದಾದೆ' ಎನ್ನುತ್ತಾರೆ.

ಕೆ.ಎಸ್.ಎಸ್. ಅವರಿಂದಾಗಿ ಈ ಜಿಲ್ಲೆಯಲ್ಲಿ ಪ್ರತಿಯೊಬ್ಬರೂ ಇಂದು ಫ್ಲೋರೈಡ್ ಬಗ್ಗೆ ಮಾತನಾಡುತ್ತಿದ್ದಾರೆ. ಮೊದಲು ಫ್ಲೋರೋಸಿಸ್ ಕುರಿತಾಗಿ ಬ್ಯಾಗಿನಲ್ಲಿ ಕರಪತ್ರ ತುಂಬಿಕೊಂಡು ಹಳ್ಳಿಹಳ್ಳಿಗೂ ಕಾಲ್ನಡಿಗೆಯಲ್ಲಿಯೇ ಹೊರಟ ಕೆ.ಎಸ್.ಎಸ್. ಅವರನ್ನು 'ಹುಚ್ಚ' ಅಂದವರೂ ಉಂಟು!

ಫ್ಲೋರೋಸಿಸ್ ನಿಯಂತ್ರಣ ಕೇಂದ್ರವೆಂಬ ಸಂಸ್ಥೆಯನ್ನೂ ಸ್ಥಾಪಿಸಿಕೊಂಡು ಅದರ ಮುಖೇನ ತಮ್ಮ ಯೋಜನೆಗಳಿಗೆ ರೂಪ ನೀಡುವ ಪ್ರಯತ್ನ ಮಾಡುತ್ತಿದ್ದಾರೆ. ನೊಂದಾವಣಿಯಾಗದ, ಏಕವ್ಯಕ್ತಿಯ ಕೇಂದ್ರವಾದ ಈ ಸಂಸ್ಥೆ ಒಂದು ನೆಪ ಮಾತ್ರ. ಸರ್ಕಾರದಿಂದಾಗಲೀ, ಇತರರಿಂದಾಗಲೀ ಈ ಸಂಸ್ಥೆಗೆ ಚಿಕ್ಕಾಸು ಪ್ರಯೋಜನವಿಲ್ಲ. ಇವರ 'ಪಿಂಚಣಿ ಹಣವೇ ಸಂಸ್ಥೆಯ ಕಾರ್ಯಗಳಿಗೆ ಜೀವ ಮೂಲ!'

1999ರ ಡಿಸೆಂಬರ್ ತಿಂಗಳಿನಿಂದ ಜುಲೈ 2000ರವರೆಗೆ ಈ ಪ್ರದೇಶದ 17 ಶಾಲಾ ಕಾಲೇಜುಗಳ 4300 ವಿದ್ಯಾರ್ಥಿಗಳಲ್ಲಿ ಫ್ಲೋರೋಸಿಸ್ ಬಗ್ಗೆ ಅರಿವು ಮೂಡಿಸಿದ್ದಾರೆ. ಭಿತ್ತಿ ಪತ್ರಗಳು, ವ್ಯಾಪಕ ಗೋಡೆ ಬರಹಗಳನ್ನು ಬರೆಯಿಸಿದ್ದಾರೆ.

ಇದಷ್ಟೇ ಇವರ ಸಾಧನೆಯಲ್ಲ. ಸುಮಾರು 700 ಮಂದಿ ಶಿಕ್ಷಕರನ್ನು ಬಳಸಿಕೊಂಡು ಅವರಿಗೆ ಪ್ರತಿ ತಿಂಗಳಿಗೆ 3 ದಿನಗಳಂತೆ 9 ದಿನಗಳ ತರಬೇತಿ ನೀಡಿ ಪ್ರತಿ ಮನೆಯಲ್ಲೂ ಫ್ಲೋರೋಸಿಸ್ ರೋಗದ ಬಗ್ಗೆ ಸಮೀಕ್ಷೆ ನಡೆಸಿದರು. ಸರ್ಕಾರವೇ ಈ ಕಾರ್ಯ ಮಾಡಿದ್ದರೆ ಲಕ್ಷಾಂತರ ರೂ. ಖರ್ಚಾಗುತ್ತಿತ್ತು. ಆದರೆ ಶಿಕ್ಷಕರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಕೇವಲ 6 ಸಾವಿರ ರೂ. ವೆಚ್ಚದಲ್ಲಿ ಸಮೀಕ್ಷಾ ಕಾರ್ಯ ಮಾಡಿದ್ದು ಬೃಹತ್ ಸಾಧನೆಯೇ ಸರಿ! ಶಿಕ್ಷಕರ ಸಹಕಾರವೂ ಶ್ಲಾಘನೀಯ.

ಫ್ಲೋರೋಸಿಸ್ ಬಗ್ಗೆ ನಾಲ್ಕು ಪುಟಗಳ ಮಾಹಿತಿ ಪ್ರತಿಗಳನ್ನು ಮುದ್ರಿಸಿ ಬಾಗೇಪಲ್ಲಿ, ಗುಡಿಬಂಡೆ ತಾಲೂಕುಗಳ ಸಾವಿರಾರು ವಿದ್ಯಾರ್ಥಿಗಳನ್ನು ಬಳಸಿಕೊಂಡು ಲಕ್ಷಾಂತರ ಮಂದಿಯ ಮನೆಯ ಬಾಗಿಲಿಗೆ ಹೋಗಿ ರೋಗದ ಬಗ್ಗೆ ಅರಿವು ಮೂಡಿಸಿ, ಮಂದಿನ



ಕ್ರಮಗಳ ಬಗ್ಗೆ ತಿಳಿ ಹೇಳಿದ ಕಾರ್ಯದಿಂದಾಗಿ ಕೆ.ಎನ್.ಎಸ್. ಅವರನ್ನು ಹುಚ್ಚ ಎಂದು ಕರೆದ ಜನರೇ ಬಹಿರಂಗವಾಗಿ 'ಗಾಂಧಿ' ಎಂದು ಪ್ರಶಂಸಿಸುತ್ತಿದ್ದಾರೆ.

ಸಾಧಾರಣ ಶರ್ಟು, ಪ್ಯಾಂಟು, ಹವಾಯಿ ಚಪ್ಪಲಿ, ಹೆಗಲಿಗೊಂದು ಬ್ಯಾಗು, ಅದರ ತುಂಬಾ ಫ್ಲೋರೋಸಿಸ್ ಕುರಿತಾದ ಮಾಹಿತಿ ತುಂಬಿಕೊಂಡು ದಿನಗಟ್ಟಲೇ ಊರೂರು, ಹಳ್ಳಿಹಳ್ಳಿ, ಮನೆ ಮನೆ ಅಲೆಯುತ್ತಿರುವ ಕೆ.ಎನ್.ಎಸ್. ಈಗ ಒಂದು ಶಕ್ತಿಯಾಗಿದ್ದಾರೆ.

ಇವರ ಕೂಗು ಸರ್ಕಾರವನ್ನೇ ಅಲುಗಾಡಿಸಿದೆ. ಇವರು ತಯಾರಿಸಿದ ವರದಿ ಜನರ ಹೃದಯಗಳಲ್ಲಿ ಬಿರುಗಾಳಿಯನ್ನೇ ಎಬ್ಬಿಸಿದೆ! ಸರ್ಕಾರ ಫ್ಲೋರೋಸಿಸ್ ನಿವಾರಣೆಗೆ 48 ಕೋಟಿ ರೂ. ಬಿಡುಗಡೆ ಮಾಡಿದೆ. ಒಂದು ಕಾಲದಲ್ಲಿ ನಿರ್ಲಕ್ಷ್ಯ ತೋರುತ್ತಿದ್ದ ಜನ ಈಗ ಫ್ಲೋರೋಸಿಸ್ ಎಂದರೆ ಆತಂಕ ವ್ಯಕ್ತಪಡಿಸುತ್ತಾ ಅದರ ನಿವಾರಣೆಗಾಗಿ ಬೊಬ್ಬೆ ಹೊಡೆಯುತ್ತಿದ್ದಾರೆ. ಎಲ್‌ಕೆಜಿ ಮಕ್ಕಳೂ ಸಹ ಫ್ಲೋರೋಸಿಸ್ ಭಯಂಕರ ಮಹಾಮಾರಿ, ಫ್ಲೋರೈಡ್ ರಹಿತ ನೀರು ಕುಡಿಯಿರಿ ಎಂದು ಕೂಗುತ್ತಿರುವುದು ಕೇವಲ ಎರಡು ವರ್ಷಗಳಲ್ಲಿ ಕೆ.ಎನ್.ಎಸ್. ಕೈಗೊಂಡ ಕಾರ್ಯ ಯೋಜನೆಗಳ ಸಂಪೂರ್ಣ ಪ್ರಾಮಾಣಿಕ ಪ್ರಯತ್ನದ ಫಲವೇ ಆಗಿದೆ!

ಬದುಕಿನುದ್ದಕ್ಕೂ ಹೋರಾಟವನ್ನೇ ಬದುಕಾಗಿಸಿಕೊಂಡು ಉತ್ತುಂಗಕ್ಕೇರಿದ ಕೆ.ಎನ್.ಎಸ್. ಎಂದೂ ಅಧಿಕಾರ, ಹಣ, ಹೆಸರಿಗೆ ಆಸೆಪಟ್ಟವರಲ್ಲ. ಇದರ ಜೀವನ ಸಾಧನೆ ನಿರಂತರವಾಗಿ ಹರಿಯುವ 'ಅಂತರ ಗಂಗೆ'. ಎಂದೇ ಕೆ.ಎನ್.ಎಸ್. ಅವರ ಹಿಂದೆ ಇಂದು ಸಾವಿರ ಸಾವಿರ ಹೆಜ್ಜೆಗಳಿವೆ.

ಕೃಪೆ : ಉದಯವಾಣಿ, 10-9-2001








### ಫ್ಲೋರೋಸಿಸ್ ವಿರುದ್ಧ ಬಾಗೇಪಲ್ಲಿ – ಗುಡಿಬಂಡೆಯಲ್ಲಿ ಸಮರ

# ಕೆ. ನಾರಾಯಣಸ್ವಾಮಿ ಅಧ್ಯಯನ ವರದಿ ಸರ್ಕಾರಕ್ಕೆ ಎಚ್ಚರಿಕೆ ಗಂಟೆಯಾಗಲಿ

– ಜಿಲಕರಪಲ್ಲಿ ಸಿ. ನಾರಾಯಣಪ್ಪ
ಪತ್ರಕರ್ತ

ಕೋಲಾರ ಜಿಲ್ಲೆಯಲ್ಲಿ ಅಂತರ್ಜಲ ಮಟ್ಟವು ದಿನೇ ದಿನೇ ಕುಸಿಯುತ್ತಿರುವುದರಿಂದ ಕುಡಿಯುವ ನೀರಿನಲ್ಲಿ ಫ್ಲೋರೈಡ್ ಅಂಶ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದು, ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕುಗಳಲ್ಲಿ 17,982 ಫ್ಲೋರೋಸಿಸ್ ವ್ಯಾಧಿ ಪೀಡಿತ ರೋಗಿಗಳನ್ನು ಪತ್ತೆ ಹಚ್ಚಲಾಗಿದೆ.

ಅಂತರ್ಜಲ ಮಟ್ಟ 500 ಅಡಿಗಿಂತಲೂ ಹೆಚ್ಚಿನ ಆಳಕ್ಕೆ ಹೋಗಿರುವ ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕಿನ 264 ಗ್ರಾಮಗಳಲ್ಲಿ ಈ ರೋಗ ವ್ಯಾಪಕವಾಗಿ ಹರಡಿದೆಯೆಂದು 1999ರ ಕೊನೆ ದಿನಗಳಲ್ಲಿ ಪ್ರಾರಂಭಿಸಲಾಗಿರುವ ಫ್ಲೋರೋಸಿಸ್ ನಿಯಂತ್ರಣ ಕೇಂದ್ರ ನಿರ್ದೇಶಕ ಕೆ. ನಾರಾಯಣಸ್ವಾಮಿ ತಮ್ಮ ಸಮೀಕ್ಷಾ ವರದಿಯಲ್ಲಿ ತಿಳಿಸಿದ್ದಾರೆ.

ಸಮೀಕ್ಷೆಯ ಪ್ರಕಾರ ಒಟ್ಟು 17,982 ರೋಗಿಗಳಲ್ಲಿ ದಂತದ ಫ್ಲೋರೋಸಿಸ್ ರೋಗಿಗಳ ಸಂಖ್ಯೆ 8,865. ಈ ಪೈಕಿ ಅತಿ ಹೆಚ್ಚು ಮಕ್ಕಳು ದಂತ ಫ್ಲೋರೋಸಿಸ್‌ಗೆ ಒಳಗಾಗಿದ್ದಾರೆ. 34,065 ಮಂದಿ ಎಲುಬೇತರ ಫ್ಲೋರೋಸಿಸ್ ವ್ಯಾಧಿಯಿಂದ ನರಳುತ್ತಿದ್ದಾರೆ.

ಈ ಸಮೀಕ್ಷಾ ವರದಿ ಮೊದಲ ಸುತ್ತಿನ ಸಮೀಕ್ಷೆಯ ನಂತರ ಹೊರಡಿಸಿದ್ದ ವರದಿಯಾಗಿದ್ದು, ಈ ಎರಡೂ ತಾಲ್ಲೂಕುಗಳಲ್ಲಿ



ಈಗಿರುವ ರೋಗಿಗಳ ಸಂಖ್ಯೆಗಿಂತ 6 ಪಟ್ಟು ಹೆಚ್ಚಿನ ಮಂದಿಯಲ್ಲಿ ವ್ಯಾಧಿಯ ಲಕ್ಷಣಗಳು ಕಾಣಿಸಿಕೊಂಡಿರಬಹುದು ಎಂದು ವರದಿಯಲ್ಲಿ ಹೇಳಲಾಗಿದೆ.

ಈ ವ್ಯಾಧಿ ಕೇವಲ ಒಂದೆರೆಡು ವರ್ಷಗಳಲ್ಲಿ ಪ್ರಾರಂಭವಾಗುವ ವ್ಯಾಧಿಯಲ್ಲ, ಕಳೆದ ಹಲವಾರು ವರ್ಷಗಳಿಂದಲೂ ಅಂತರ್ಜಲದಲ್ಲಿ ಫ್ಲೋರೈಡ್ ಅಂಶ ಹೆಚ್ಚಿರುವ ನೀರನ್ನು ಕುಡಿದು ಜನತೆಯಲ್ಲಿ ಕ್ರಮೇಣ ವ್ಯಾಧಿಯ ಲಕ್ಷಣಗಳನ್ನು ಹೆಚ್ಚಾಗುತ್ತಿವೆ.

ಈ ಸಮಸ್ಯೆಯನ್ನು ಬಗೆಹರಿಸಲು ಮತ್ತು ವ್ಯಾಧಿಯ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಉಂಟು ಮಾಡಲು ಬಾಗೇಪಲ್ಲಿ ತಾಲ್ಲೂಕಿನಲ್ಲಿ 1999ರ ಕೊನೆ ದಿನಗಳಲ್ಲಿ ಫ್ಲೋರೋಸಿಸ್ ನಿಯಂತ್ರಣ ಕೇಂದ್ರವನ್ನು ಸ್ಥಾಪಿಸಿ ಶಿಕ್ಷಣ ಇಲಾಖೆಯ ನಿವೃತ್ತ ಜಂಟಿ ನಿರ್ದೇಶಕ ಕೆ. ನಾರಾಯಣಸ್ವಾಮಿಯವರನ್ನು ನಿರ್ದೇಶಕರಾಗಿ ನೇಮಕ ಮಾಡಲಾಯಿತು.

ಕೇಂದ್ರವು ಪ್ರಾರಂಭವಾದ ಒಂದು ವರ್ಷದಲ್ಲಿಯೇ ಮಹತ್ತರ ಪ್ರಗತಿಯನ್ನು ಸಾಧಿಸಿದ್ದು. ಸರ್ಕಾರ ಅಥವಾ ದೊಡ್ಡ ಸಂಘ ಸಂಸ್ಥೆಗಳು ಮಾತ್ರ ಮಾಡಬಹುದಾಗಿದ್ದ ಸಮೀಕ್ಷೆ ಕಾರ್ಯವನ್ನು ಶಿಕ್ಷಣ ಇಲಾಖೆಯ ನೆರವಿನೊಂದಿಗೆ ಸ್ವಯಂ ಪ್ರೇರಿತವಾಗಿ ಪೂರೈಸಿದರು.

ಕೇಂದ್ರದ ನಿರ್ದೇಶಕ ಕೆ. ನಾರಾಯಣಸ್ವಾಮಿ ಏಕಾಂಗಿಯಾಗಿ ತಾಲ್ಲೂಕಿನಾದ್ಯಂತ ಸಂಚರಿಸಿ 17ಕ್ಕಿಂತಲೂ ಹೆಚ್ಚು ಪ್ರೌಢಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳಿಗೆ ಭೇಟಿ ನೀಡಿ ಸುಮಾರು 4500 ಮಂದಿ ವಿದ್ಯಾರ್ಥಿಗಳು ಮತ್ತು 120 ಮಂದಿ ಬೋಧಕರನ್ನು ತಮ್ಮೊಂದಿಗೆ ತೊಡಗಿಸಿಕೊಂಡರು. ಇದಲ್ಲದೆ ಅಂಗನವಾಡಿ ಕಾರ್ಯಕರ್ತೆಯರು, ಕೃಷಿ ಇಲಾಖೆ ನೌಕರರು ಮತ್ತು ಬೆರಳೆಣಿಕೆಯಷ್ಟು ಗ್ರಾಮಸ್ಥರನ್ನು ಕರೆಸಿಕೊಂಡು ಅವರಿಗೆ ತರಬೇತಿಯನ್ನು ನೀಡಿದರು.

ಸಮೀಕ್ಷೆ : ಸರ್ಕಾರ ಮತ್ತು ದೊಡ್ಡ ಸಂಘ ಸಂಸ್ಥೆಗಳು ಗಮನಹರಿಸದೆ ಇರುವ ನಿಧಾನವಾಗಿ ಪ್ರಾಣತೆಗೆಯುವ ಖಾಯಿಲೆ ಫ್ಲೋರೋಸಿಸ್ ರೋಗಕ್ಕೆ ತುತ್ತಾಗಿರುವವರ ಸಂಖ್ಯೆಯನ್ನು ಕಂಡುಕೊಳ್ಳುವುದು ಸಂಸ್ಥೆಯ ಮುಂದಿದ್ದ ಅತಿ ದೊಡ್ಡ ಸವಾಲು, ಇದಕ್ಕಾಗಿ ಅತ್ಯಂತ ಜಟಿಲವಾದ ಸಮೀಕ್ಷೆ ನಡೆಸಬೇಕಾಗಿದ್ದು, ಮನೆಮನೆಗೆ ತೆರಳಿ ಈ ಕಾರ್ಯವನ್ನು ಮಾಡಬೇಕಾಗಿತ್ತು.

ಯಾವುದೇ ಜನಬಲ, ಧನಬಲ, ಅಗತ್ಯ ಸಾಮಗ್ರಿಗಳು ಹಾಗೂ ವಾಹನಗಳ ಸೌಲಭ್ಯವಿಲ್ಲದೆ ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕುಗಳ ಗ್ರಾಮಾಂತರ ಪ್ರದೇಶದಲ್ಲಿ ಸಂಚರಿಸಿ ಸಮೀಕ್ಷೆ ನಡೆಸಿದ್ದಾರೆ.

ಈ ಬಗ್ಗೆ ನಿರ್ದೇಶಕ ಕೆ. ನಾರಾಯಣಸ್ವಾಮಿ 2001ನೇ ವರ್ಷದ ಪ್ರಾರಂಭದಲ್ಲಿ ಅಂದಿನ ಕ್ಷೇತ್ರ ಶಿಕ್ಷಣಾಧಿಕಾರಿ ನಾರಾಯಣರೆಡ್ಡಿಯವರೊಂದಿಗೆ ಚರ್ಚಿಸಿ ಶಿಕ್ಷಣ ಇಲಾಖೆಯನ್ನು ಸಮೀಕ್ಷೆ ಕಾರ್ಯದಲ್ಲಿ ತೊಡಗಿಸಿಕೊಳ್ಳುವಲ್ಲಿ ಯಶಸ್ವಿಯಾದರು.

ತರುವಾಯ ಸಮೀಕ್ಷೆಯ ಯೋಜನೆ ರೂಪುರೇಷೆಗಳನ್ನು ಸಿದ್ಧಪಡಿಸಿ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಅಗತ್ಯ ತರಬೇತಿ ನೀಡಿ ಅವರನ್ನು ಹೋಬಳಿವಾರು ವಿಂಗಡಿಸಿ ಸಮೀಕ್ಷೆ ಕಾರ್ಯವನ್ನು ಪ್ರಾರಂಭಿಸಿದರು. ಮನೆಮನೆಗೂ ತೆರಳಿ ಮಾಹಿತಿ ಸಂಗ್ರಹಿಸುವ ಸಲುವಾಗಿ 4 ಪುಟಗಳ 15 ಸಾವಿರ ನಮೂನೆಗಳನ್ನು ಅಚ್ಚು ಮಾಡಿಸಲಾಯಿತು.

ಪ್ರತಿ ಗ್ರಾಮದಲ್ಲಿ ಒಟ್ಟು ಮನೆಗಳ ಅರ್ಧದಷ್ಟು ಮನೆಗಳಿಗೆ ಮಾತ್ರ ಲೆಕ್ಕಾ ಹಾಕಿ ನಮೂನೆಗಳನ್ನು ಶಿಕ್ಷಕರಿಗೆ ವಿತರಿಸಲಾಯಿತು. ಶಿಕ್ಷಕರು ಈಗಾಗಲೇ 14 ಸಾವಿರ ಕುಟುಂಬಗಳನ್ನು ಭೇಟಿ ಮಾಡಿ ಪ್ರತಿ ಕುಟುಂಬದಲ್ಲಿ 3-4 ಮಂದಿಯಲ್ಲಿ ಜಾಗೃತಿ ಮೂಡಿಸುವ ಕಾರ್ಯವನ್ನು ಯಶಸ್ವಿಯಾಗಿ ಪೂರೈಸಿದರು.

ಭರ್ತಿ ಮಾಡಿದ 14 ಸಾವಿರ ನಮೂನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅಂಕಿ ಅಂಶಗಳು, ಮತ್ತಿತರೆ ವಿವರಗಳನ್ನು ಕ್ರೋಢೀಕರಿಸಲಾಯಿತು. ಇದಕ್ಕೆ ಬಾಗೇಪಲ್ಲಿ ಸರ್ಕಾರ ಪದವಿಪೂರ್ವ ಕಾಲೇಜಿನ ವಿಜ್ಞಾನ ಶಿಕ್ಷಕಿ ಹೆಚ್. ಪ್ರೇಮಕುಮಾರಿ, ಗುಡಿಬಂಡೆ ಸರ್ಕಾರಿ ಪದವಿಪೂರ್ವ ಕಾಲೇಜಿನ ಶಿಕ್ಷಕರಾದ ಬಿ. ಅಮೀರ್‌ಜಾನ್ ಮತ್ತು ವಿ. ವೆಂಕಟೇಶ್ ಅಚ್ಚುಕಟ್ಟಾಗಿ ಪಟ್ಟಿಗಳನ್ನು ಸಿದ್ಧಪಡಿಸಿದರು. ಈ ಪಟ್ಟಿಗಳನ್ನು ಶಿಕ್ಷಕ ವಿ. ಹನುಮಂತಪ್ಪರಾಯಪ್ಪನವರ ಪುತ್ರ ಹೆಚ್. ವೇಣುಗೋಪಾಲ್ ಮುದ್ರಿಸಿಕೊಟ್ಟರು. ಇದೀಗ ಬೆಳಕಿಗೆ ಬಂದಿರುವ 17,982 ಫ್ಲೋರೋಸಿಸ್ ರೋಗಿಗಳ ಸಂಖ್ಯೆ ಕೇವಲ ನೆಪ ಮಾತ್ರವಾಗಿದ್ದು, ಇದಕ್ಕಿಂತಲೂ ಐದಾರು ಪಟ್ಟು ರೋಗಿಗಳ ಪ್ರಮಾಣ ಗುಪ್ತವಾಗಿದೆ. ಅಂತರ್ಜಲ ಮಟ್ಟ ಅಭಿವೃದ್ಧಿಯಾಗದಿರುವುದರಿಂದ ಪ್ರತಿದಿನ ಈ ರೋಗಕ್ಕೆ ತುತ್ತಾಗುತ್ತಿರುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಇದಕ್ಕಾಗಿ ಸರ್ಕಾರ ಸೂಕ್ತ ಪರಿಹಾರ ಕ್ರಮಗಳನ್ನು ಸಮರೋಪಾದಿಯಲ್ಲಿ ಕೈಗೊಳ್ಳಬೇಕಾಗಿದೆಯೆಂದು ಕೆ. ನಾರಾಯಣಸ್ವಾಮಿ ಅಭಿಪ್ರಾಯಪಡುತ್ತಾರೆ. ಬಾಗೇಪಲ್ಲಿ ತಾಲ್ಲೂಕಿನ ಚೇಳೂರು, ಬಾಗೇಪಲ್ಲಿ ಕಸಬಾ, ಪಾತಪಾಳ್ಯ, ಗೂಳೂರು, ಮಿಟ್ಟೇಮರಿ ಮತ್ತು ಗುಡಿಬಂಡೆ ಕಸಬಾ ಹೋಬಳಿಗಳಲ್ಲಿ ಫ್ಲೋರೋಸಿಸ್ ರೋಗಿಗಳ ಸಂಖ್ಯೆ ಅತಿ ಹೆಚ್ಚಾಗಿದೆ.

(ಕೃಪೆ : ಜನಶಕ್ತಿ ಪತ್ರಿಕೆ, 22-03-2001)





# ಅನುಬಂಧ 1 :
# ಕೆ. ನಾರಾಯಣಸ್ವಾಮಿಯವರು ಪಡೆದ ಪ್ರಮುಖ ಪ್ರಶಸ್ತಿಗಳು ಮತ್ತು ಪುರಸ್ಕಾರಗಳು

1. 2013ನೆಯ ರಾಜ್ಯೋತ್ಸವ ಪ್ರಶಸ್ತಿ.
2. ಬೆಂಗಳೂರಿನ ಬಾಬಾಸಾಹೇಬ ಅಂಬೇಡ್ಕರ್ ಶತಮಾನೋತ್ಸವ ಸಮಿತಿ ಟ್ರಸ್ಟ್‌ನ 2010ರಲ್ಲಿನ ಬೋಧಿವರ್ಧನ ಪ್ರಶಸ್ತಿ.
3. 2009ರ ಮಾನವ ಹಕ್ಕುಗಳ ಸಂರಕ್ಷಣಾ ಪ್ರಶಸ್ತಿ ನಿಡುಮಾಮಿಡಿ ಸಂಸ್ಥಾನದ ಮಾನವಧರ್ಮ ಪೀಠದಿಂದ.
4. 1995ರಲ್ಲಿ ಮುಧೋಳದಲ್ಲಿ ನಡೆದ ಅಖಿಲ ಭಾರತ 64ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ನಾಡುನುಡಿಗೆ ಸಲ್ಲಿಸಿರುವ ಸೇವೆಗಾಗಿ ಸನ್ಮಾನ.
5. ಧಾರವಾಡದ ಕೃಷಿ ಮಾಧ್ಯಮ ಕೇಂದ್ರ ಕೃಷಿ ಸಂವಹನ ಕ್ಷೇತ್ರಕ್ಕೆ ಪೂರಕವಾಗಿ ಸಲ್ಲಿಸಿರುವ ಸೇವೆಯನ್ನು ಗಮನಿಸಿದ ಕಾಮ್ ದಶಮಾನೋತ್ಸವ ವಿಶೇಷ ಪುರಸ್ಕಾರ.
6. ಜಿಲ್ಲಾಮಟ್ಟದ ರಾಜ್ಯೋತ್ಸವ ಪ್ರಶಸ್ತಿ - 2006.
7. ತಾಲ್ಲೂಕು ಮಟ್ಟದ ರಾಜ್ಯೋತ್ಸವ ಪ್ರಶಸ್ತಿ - 2007.
8. ತಾಲ್ಲೂಕು ರೋಟರಿ ಸಂಸ್ಥೆಯ ಪ್ರಶಸ್ತಿ - 2007.
9. ಜಿ.ಪಂ. ಜಿಲ್ಲಾ ಸಮಾಜ ಕಲ್ಯಾಣ ಇಲಾಖೆಯ ಬಿ.ಆರ್. ಅಂಬೇಡ್ಕರ್ ಪ್ರಶಸ್ತಿ - 2011.
10. 2012ರಲ್ಲಿ ನಡೆದ ಗೌರಿಬಿದನೂರು ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷ ಗೌರವ.
11. ಅಡಿಕೆ ಪತ್ರಿಕೆ ಬಳಗದಿಂದ ಅಭಿನಂದನಾ ಪತ್ರ ಸಮರ್ಪಣೆ.
12. ಇವುಗಳಲ್ಲದೆ ಹಲವು ಸಂಘ ಸಂಸ್ಥೆಗಳು ಸನ್ಮಾನಿಸಿವೆ.
13. ಬೆಂಗಳೂರು, ಮಂಗಳೂರು, ಬಳ್ಳಾರಿ ವಿಎಸ್‌ಕೆ, ವಿಶ್ವವಿದ್ಯಾಲಯಗಳಲ್ಲಿ ನಡೆದ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ, ಪ್ರಬಂಧ ಮಂಡಿಸಿದ್ದಾರೆ.
14. ರೋಟರಿ ಸಂಸ್ಥೆಯಿಂದ ಅಭಿನಂದನಾ ಸಮರ್ಪಣೆ - 2002.

# ಕೆ. ನಾರಾಯಣಸ್ವಾಮಿಯವರು ರಚಿಸಿದ ಪ್ರಮುಖ ಕೃತಿಗಳು

1. ದಿಗಂಬರ ಕವಿಗಳು (ಅನು) ಆರ್.ವಿ.ಎಸ್. ಸುಂದರಂರೊಂದಿಗೆ
2. ಅಂಬೇಡ್ಕರ್ ವಾಣಿ (ಸಂಗ್ರಹಾನುವಾದ) - 1991 (ಆರು ಮುದ್ರಣಗಳನ್ನು ಕಂಡಿದೆ)
3. ದಲಿತ ಕೈಪಿಡಿ
4. ಪೋಷಕರ ಕೈಪಿಡಿ
5. ಭಂಗಿ ಜನಕಥಾ (ಅನು)
6. ಅಯೋಧ್ಯೆ ಭುಗಿಲು (ಅನು)
7. ಮಾಹಿತಿ ಹಕ್ಕು
8. ರೈತರ ನಿರಂತರ ಆತ್ಮಹತ್ಯೆಗಳು
9. ಸಂಸ್ಕಾರ (ತೆಲುಗಿಗೆ ಅನುವಾದ) ಆರ್.ವಿ.ಎಸ್. ಸುಂದರರೊಂದಿಗೆ
10. ಕುಡಿಯುವ ನೀರಿನಲ್ಲಿ ಫ್ಲೋರೈಡ್ ಅಂಶಗಳು (ಜಲಸಾಕ್ಷರತೆ)
11. ಆಯಿಲ್ ಪುಲ್ಲಿಂಗ್ (ಕಿರುಹೊತ್ತಿಗೆ) ಆರ್.ವಿ.ಎಸ್. ಸುಂದರಂರೊಂದಿಗೆ
12. ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಪರಿಚಯಾತ್ಮಕ ಲೇಖನ ಜನಪ್ರಗತಿ ಪತ್ರಿಕೆಯಲ್ಲಿ
13. ನಮ್ಮ ಮಕ್ಕಳಿಗೆಷ್ಟು ವಿಷ ತಿನ್ನಿಸುತ್ತಿದ್ದೇವೆ? (ಸಂ.)
14. ಬರಗಾಲದಲ್ಲೂ ರೈತರಿಗೆ ಭದ್ರತೆಯ ಭರವಸೆ ನೀಡುವ ಸಿರಿಧಾನ್ಯಗಳು.
15. ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ - 2009, (ಎರಡು ಮುದ್ರಣಗಳು)





ಅನುಬಂಧ 2 :

ಕೆಎನ್ನೆಸ್‌ರವರ ಛಾಯಾಚಿತ್ರಗಳು

ಅನುಬಂಧ 3 :

ಸುದ್ದಿ ಮಾಧ್ಯಮಗಳ ಕಣ್ಣಲ್ಲಿ ಕೆಎನ್ನೆಸ್‌ರವರು

ಅನುಬಂಧ 4 :

ಕೆಎನ್ನೆಸ್‌ರವರಿಗೆ ಸಂದಾಯವಾದ ಪ್ರಶಸ್ತಿಗಳ ಛಾಯಾಚಿತ್ರಗಳು

# ಅನುಬಂಧ 2 : ಕೆಎನ್ನೆಸ್‌ರವರ ಛಾಯಾಚಿತ್ರಗಳು



ಶ್ರೀ ಕೆ. ನಾರಾಯಣಸ್ವಾಮಿಯವರ ತಾಯಿ ತಿಮ್ಮಕ್ಕ ಮತ್ತು ತಂದೆ ಕಂಬಯ್ಯನವರು



ಅಕ್ಕ ಕೆ. ಅಶ್ವತ್ಥಮ್ಮನವರು



ಅಕ್ಕ ಕೆ. ಲಕ್ಷ್ಮಮ್ಮನವರು



ಕೆ. ನಾರಾಯಣಸ್ವಾಮಿಯವರು



ತಂಗಿ ಕೆ. ವೆಂಕಟಮ್ಮನವರು



ತಂಗಿ ಕೆ. ವೆಂಕಟಲಕ್ಷ್ಮಮ್ಮನವರು



2013ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿಯನ್ನು ಮುಖ್ಯಮಂತ್ರಿ ಸಿದ್ಧರಾಮಯ್ಯರವರಿಂದ ಸ್ವೀಕರಿಸುತ್ತಿರುವ ಕೆ. ನಾರಾಯಣಸ್ವಾಮಿಯವರು. ಸಚಿವರಾದ ರಾಮಲಿಂಗಾರೆಡ್ಡಿ ಮತ್ತು ಉಮಾಶ್ರೀರವರು ಚಿತ್ರದಲ್ಲಿದ್ದಾರೆ



2010ರಲ್ಲಿ ಡಾ. ಬಾಬಾಸಾಹೇಬ್ ಅಂಬೇಡ್ಕರ್ ಶತಮಾನೋತ್ಸವ ಸಮಿತಿ ಟ್ರಸ್ಟ್, ಬೆಂಗಳೂರು ವತಿಯಿಂದ ಕೆ. ನಾರಾಯಣಸ್ವಾಮಿಯವರಿಗೆ ಬೋಧಿವರ್ಧನ ಪ್ರಶಸ್ತಿ ಪ್ರಧಾನ ಮಾಡಿದ ಸಂದರ್ಭದ ಚಿತ್ರ



ನಿಡುಮಾಮಿಡಿ ಸಂಸ್ಥಾನದಿಂದ ಮಾನವಹಕ್ಕು ದಿನಾಚರಣೆಯಲ್ಲಿ ಸಂಸ್ಥಾನದ ಮಾನವ ಹಕ್ಕುಗಳ ಸಂರಕ್ಷಣಾ ಪ್ರಶಸ್ತಿಯನ್ನು ಶ್ರೀ ವೀರಭದ್ರ ಚನ್ನಮಲ್ಲ ದೇಶೀಕೇಂದ್ರ ಮಹಾಸ್ವಾಮೀಜಿಗಳಿಂದ ಸ್ವೀಕರಿಸುತ್ತಿರುವುದು



2012ರಲ್ಲಿ ಗೌರೀಬಿದನೂರು ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನಾಧ್ಯಕ್ಷರಾದ ಕೆ. ನಾರಾಯಣಸ್ವಾಮಿಯವರೊಂದಿಗೆ ಸ್ಥಳೀಯ ಶಾಸಕರಾದ ಎನ್.ಹೆಚ್. ಶಿವಶಂಕರರೆಡ್ಡಿಯವರು



ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಅಂದಿನ ಕೇಂದ್ರ ಸಚಿವ ಡಾ. ಎಂ. ವೀರಪ್ಪ ಮೊಯಿಲಿ. ಲೇಖಕಿ ನಾಡೋಜ ಕಮಲಾ ಹಂಪನಾ. ನಳಿನಿ ಜಮೀಲ ಮತ್ತು ಶಿಕ್ಷಣ ತಜ್ಞ ಕೆ.ಇ. ರಾಧಾಕೃಷ್ಣರೊಂದಿಗೆ ಕೆ. ನಾರಾಯಣಸ್ವಾಮಿಯವರು



ಮಹಾರಾಷ್ಟ್ರದ ರಾಳೇಗಣಸಿದ್ಧಿಯಲ್ಲಿ "ಪಾನೀಯಾತ್ರೆ"ಯ ಸಂದರ್ಭದಲ್ಲಿ ಅಣ್ಣಾ ಹಜಾರೆಯವರೊಂದಿಗೆ ಕೆ. ನಾರಾಯಣಸ್ವಾಮಿಯವರು



ಸ್ವಾಮಿ ಅಗ್ನಿವೇಶ್ ಅವರೊಂದಿಗೆ ಶ್ರೀ ಕೆ. ನಾರಾಯಣಸ್ವಾಮಿಯವರು



ಜಲಬ್ರಹ್ಮ ರಾಜಸ್ತಾನದ ರಾಜೇಂದ್ರಸಿಂಗ್‌ರವರೊಂದಿಗೆ ಕೆ. ನಾರಾಯಣಸ್ವಾಮಿಯವರು



ಗೌರಿಬಿದನೂರಿನಲ್ಲಿ ನಡೆದ ಕುವೆಂಪು ಶತಮಾನೋತ್ಸವ ಸಮಾರಂಭದಲ್ಲಿ ಶಾಸಕರಾದ ಎನ್.ಹೆಚ್. ಶಿವಶಂಕರರೆಡ್ಡಿಯವರಿಂದ ಸನ್ಮಾನಿತರಾಗುತ್ತಿರುವ ಕೆ. ನಾರಾಯಣಸ್ವಾಮಿರವರು. ಸಾಹಿತಿ ಡಾ. ಎಲ್. ಹನುಮಂತಯ್ಯ ಮತ್ತು ಇತರರು



ಬರವಣಿಗೆಯಲ್ಲಿ ನಿರತರಾಗಿರುವ ಕೆ. ನಾರಾಯಣಸ್ವಾಮಿಯವರು



ಸಮಾರಂಭವೊಂದರಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಹಾಗೂ ತಮ್ಮ ಗುರುಗಳಾದ
ಜಿ.ಪಿ. ದಾಸೇಗೌಡರೊಂದಿಗೆ ಕೆ. ನಾರಾಯಣಸ್ವಾಮಿಯವರು




ಬಹುಮಾಧ್ಯಮ ಪ್ರಚಾರ ಆಂದೋಲನದ ಆಶ್ರಯದಲ್ಲಿ ಕೋಲಾರದಲ್ಲಿ ನಡೆದ ಮಳೆ ನೀರು ಕೊಯ್ಲು ಮತ್ತು
ಜಲ ಸಂರಕ್ಷಣೆ ಕುರಿತ ಕಾರ್ಯಕ್ರಮದಲ್ಲಿ ಶ್ರೀ ಕೆ. ನಾರಾಯಣಸ್ವಾಮಿಯವರು ಮಾತನಾಡುತ್ತಿರುವುದು



ಕೋಲಾರ ಜಿಲ್ಲೆಯ ಗ್ರಾಮವೊಂದರಲ್ಲಿ ಮಹಿಳೆಯರನ್ನು ಕುರಿತು ಜಲ ಸಂರಕ್ಷಣೆ
ಬಗ್ಗೆ ಶ್ರೀ ಕೆ. ನಾರಾಯಣಸ್ವಾಮಿ ಅವರು ಮಾತನಾಡುತ್ತಿರುವುದು.
ದ.ಸಂ.ಸ. ಮುಖಂಡ ಎಸ್. ಮುನಿಸ್ವಾಮಿ ಇದ್ದಾರೆ.



ಬಾಗೇಪಲ್ಲಿಯಲ್ಲಿ ಏರ್ಪಡಿಸಿದ್ದ ಫ್ಲೋರೋಸಿಸ್ ಜಾಗೃತಿ ಸಮಾರಂಭದಲ್ಲಿ
ಶಾಸಕರಾದ ಎನ್. ಸಂಪಂಗಿಯವರೊಂದಿಗೆ ಕೆ. ನಾರಾಯಣಸ್ವಾಮಿಯವರು



ಬೆಂಗಳೂರಿನ ಶಾಸಕರ ಭವನದಲ್ಲಿ ನಡೆದ ಸಾಹಿತಿ ಮ.ನಾ. ಕೃಷ್ಣಮೂರ್ತಿಯವರ ಪುಸ್ತಕಗಳ ಬಿಡುಗಡೆ ಸಮಾರಂಭದಲ್ಲಿ ಅಂದಿನ ಸಂಸ್ಕೃತ ವಿ.ವಿ. ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್. ಬೆಂಗಳೂರು ವಿ.ವಿ.ಯ ಡಾ. ಸಮತಾ ಬಿ. ದೇಶಮಾನೆ, ಸಾಹಿತಿ ಕುಂ. ವೀರಭದ್ರಪ್ಪ, ರಾಣಿಚೆನ್ನಮ್ಮ ವಿ.ವಿ.ಯ ಡಾ. ಅಮರೇಶ್ ಯತಗಲ್ ಅವರೊಂದಿಗೆ ಕೆ. ನಾರಾಯಣಸ್ವಾಮಿಯವರು



ನರ್ಮದಾ ಬಚಾವೋ ಆಂದೋಲನದ ನಾಯಕಿ ಮೇಧಾ ಪಾಟ್ಕರ್ ಮತ್ತು ಸಾವಯವ ಕೃಷಿ ತಜ್ಞ ಶ್ರೀ ನಾರಾಯಣ ರೆಡ್ಡಿ ಅವರೊಂದಿಗೆ ಕೆ. ನಾರಾಯಣಸ್ವಾಮಿಯವರು



ಭೀಮರತ್ನ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಸಾಲುಮರದ ತಿಮ್ಮಕ್ಕರವರೊಂದಿಗೆ
ಚರ್ಚೆಯಲ್ಲಿ ತೊಡಗಿರುವ ಶ್ರೀ ಕೆ. ನಾರಾಯಣಸ್ವಾಮಿಯವರು



ಗೌರಿಬಿದನೂರು ತಾಲ್ಲೂಕು ನಕ್ಕಲಹಳ್ಳಿ ಗ್ರಾಮದಲ್ಲಿ ನಡೆದ ಪರಿಸರ ಸಂರಕ್ಷಣೆಯ
ಮಹತ್ವದ ಬಗ್ಗೆ ಮಹಿಳೆಯರಲ್ಲಿ ಜಾಗೃತಿ ಮೂಡಿಸುತ್ತಿರುವ ಕೆ. ನಾರಾಯಣಸ್ವಾಮಿಯವರು



ಪತ್ನಿ ಕೆ. ಜಯಕುಮಾರಿಯವರೊಂದಿಗೆ ಕೆ. ನಾರಾಯಣಸ್ವಾಮಿಯವರು



ಮಗಳು ಪದ್ಮ ಕೆ.ಎಸ್., ಮೊಮ್ಮಗ ವರುಣ್, ಮೊಮ್ಮಗಳು ಪರಿಣಿತ, ಅಳಿಯ ಕೆ.ಎಲ್. ವೇಣುಗೋಪಾಲ್‌ರೊಂದಿಗೆ ಕೆ. ನಾರಾಯಣಸ್ವಾಮಿ



ಗೌರಿಬಿದನೂರು ತಾಲ್ಲೂಕಿನ ನಕ್ಕಲಹಳ್ಳಿ ಗ್ರಾಮದಲ್ಲಿ ರೂಪಿಸಿದ್ದ 'ಹಸಿರು ಗ್ರಾಮ' ಯೋಜನಾ ಅನುಷ್ಠಾನ ಕಾರ್ಯಕ್ರಮದಲ್ಲಿ ಉಪನ್ಯಾಸ ನೀಡುತ್ತಿರುವ ಕೆ. ನಾರಾಯಣಸ್ವಾಮಿಯವರು




ಹೈದರಾಬಾದ್ ಸಮೀಪದ ಪರಗಿಯಲ್ಲಿ ನೈಸರ್ಗಿಕ ಕೃಷಿ ಕುರಿತು ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಕೆ. ನಾರಾಯಣಸ್ವಾಮಿಯವರನ್ನು ಸನ್ಮಾನಿಸಲಾಯಿತು.



ಗುಡಿಬಂಡೆಯಲ್ಲಿ ಫ್ಲೋರೋಸಿಸ್ ತಪಾಸಣೆಯ ತರಬೇತಿ ಕಾರ್ಯಾಗಾರದ ಉದ್ಘಾಟನಾ
ಸಮಾರಂಭದಲ್ಲಿ ಶಾಸಕ ಎನ್. ಸಂಪಂಗಿ ಇತರರೊಂದಿಗೆ ಶ್ರೀ ಕೆ. ನಾರಾಯಣಸ್ವಾಮಿಯವರು



ಅಧ್ಯಯನ ನಿರತರಾಗಿರುವ ಕೆ. ನಾರಾಯಣಸ್ವಾಮಿಯವರು



ಫ್ಲೋರೈಡ್-ಫ್ಲೋರೋಸಿಸ್ ಕುರಿತು ಭೋಪಾಲ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಕಾರ್ಯಾಗಾರದಲ್ಲಿ
ಭಾಗವಹಿಸಿದ್ದ ಕರ್ನಾಟಕ ಪ್ರತಿನಿಧಿಗಳೊಂದಿಗೆ ಶ್ರೀ ಕೆ. ನಾರಾಯಣಸ್ವಾಮಿಯವರು



ಮಹಾರಾಷ್ಟ್ರದ ಶ್ರೀ ಅಣ್ಣಾ ಹಜಾರೆ ಹಾಗೂ ಗುಜರಾತಿನ "ವೃಕ್ಷ ಪ್ರೇಮಿ" ಪ್ರೇಮ್‌ಜಿ
ಬಾಯಿಪಟೇಲ್ ಅವರೊಂದಿಗೆ ಶ್ರೀ ಕೆ. ನಾರಾಯಣಸ್ವಾಮಿರವರು



ನಿಡುಮಾಮಿಡಿ ಸಂಸ್ಥಾನದ ಮಾನವ ಧರ್ಮಪೀಠದಿಂದ
ಮಾನವ ಹಕ್ಕುಗಳ ದಿನಾಚರಣೆ ಸಮಾರಂಭದಲ್ಲಿ ಕೆ. ನಾರಾಯಣಸ್ವಾಮಿಯವರು



ಮಹಾರಾಷ್ಟ್ರದ ರಾಳೆಗಣಸಿದ್ಧಿಯಲ್ಲಿ ಭ್ರಷ್ಟಾಚಾರ ವಿರೋಧಿ ಆಂದೋಲನದ
ನೇತಾರ ಅಣ್ಣಾ ಹಜಾರೆಯವರೊಂದಿಗೆ



ಅಡವಿನ ಅಂಚಿನಲ್ಲಿರುವ ಕುಂಟೆಗಳ ಸಮೀಕ್ಷೆ ಕಾರ್ಯದಲ್ಲಿ ತೊಡಗಿರುವ
ಕೆ. ನಾರಾಯಣಸ್ವಾಮಿಯವರು




ದಸಂಸ ಏರ್ಪಡಿಸಿದ್ದ ಕಾರ್ಮಿಕ ದಿನಾಚರಣೆಯಲ್ಲಿ ಕೆ. ನಾರಾಯಣಸ್ವಾಮಿಯವರು, ಶಾಸಕರಾದ
ಎಸ್.ಹೆಚ್. ಶಿವಶಂಕರರೆಡ್ಡಿ ಮತ್ತು ಗಾಯಕ ಗೊಲ್ಲಹಳ್ಳಿ ಶಿವಪ್ರಸಾದ್‌ರವರು ಭಾಗವಹಿಸಿದ್ದರು



ದಲಿತ ಸಂಘರ್ಷ ಸಮಿತಿ ಗೌರಿಬಿದನೂರು ತಾಲ್ಲೂಕು ಶಾಖೆ ಕೃಷ್ಣರಾಜಪುರದಿಂದ ಗೌರಿಬಿದನೂರಿಗೆ ಏರ್ಪಡಿಸಿದ್ದ ಕಾಲ್ನಡಿಗೆ ಜಾಥಾದಲ್ಲಿ ಕೆ. ನಾರಾಯಣಸ್ವಾಮಿಯವರು ಮಾತನಾಡುತ್ತಿರುವುದು



ಗೌರಿಬಿದನೂರು ತಾಲ್ಲೂಕು ವಿದುರಾಶ್ವತ್ಥದಲ್ಲಿ ದಸಂಸ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ದಸಂಸ ಮುಖಂಡರಾದ ಎಸ್. ಮುನಿಸ್ವಾಮಿ, ಡಾ. ಚಿನ್ನಕ್ಕೈಮಾರಯ್ಯರೊಂದಿಗೆ ಕೆ. ನಾರಾಯಣಸ್ವಾಮಿ




ಚಿಕ್ಕಬಳ್ಳಾಪುರದಲ್ಲಿ ದಸಂಸ ಏರ್ಪಡಿಸಿದ್ದ ಸಮಾರಂಭದಲ್ಲಿ ಸಾಹಿತಿ ಕೆ. ರಾಮಯ್ಯ, ಕವಿ ಗೊಲ್ಲಹಳ್ಳಿ ಶಿವಪ್ರಸಾದ್, ಕೆ.ಎಂ. ಕೊಮ್ಮಣ್ಣ, ಸಿ.ಜಿ. ಗಂಗಪ್ಪರೊಂದಿಗೆ ಕೆ. ನಾರಾಯಣಸ್ವಾಮಿಯವರು




ಗೋವಾದ ಕಡಲ ದಡದಲ್ಲಿ ಮೊಮ್ಮಗ ಕೆ.ಪಿ. ವರುಣ್, ಅಳಿಯ ಕೆ.ಎಲ್. ವೇಣುಗೋಪಾಲ್, ಕುಟುಂಬದ ಗೆಳೆಯ ಎಚ್. ವೇಣುಗೋಪಾಲ್, ಮೊಮ್ಮಗಳು ಪರಿಣಿತ, ಮಗಳು ಕೆ.ಎನ್. ಪದ್ಮ, ಪತ್ನಿ ಕೆ. ಜಯಕುಮಾರಿ, ಎಚ್. ವೇಣುಗೋಪಾಲ್‌ರವರ ತಾಯಿ ಎಸ್.ಕೆ. ನಾಗರತ್ನಮ್ಮರವರು




ಗೌರಿಬಿದನೂರು ತಾಲ್ಲೂಕಿನಲ್ಲಿ ದಸಂಸ ಗೇಣಿದಾರರ ಸಮಸ್ಯೆಗಳ ಪರಿಹಾರಕ್ಕಾಗಿ ಕೃಷ್ಣರಾಜಪುರದಿಂದ ತಾಲ್ಲೂಕು ಕೇಂದ್ರದವರೆಗೆ ಏರ್ಪಡಿಸಿದ್ದ ಕಾಲ್ನಡಿಗೆ ಜಾಥಾವನ್ನು ಕೆ. ನಾರಾಯಣಸ್ವಾಮಿ ಜಾಥಾಗೆ ತಮಟೆ ಹೊಡೆಯುವುದರ ಮೂಲಕ ಚಾಲನೆ ನೀಡಿದರು. ರಾಜ್ಯ ಸಂಚಾಲಕ ಎನ್. ವೆಂಕಟೇಶ್, ಶಿವಪ್ರಸಾದ್, ಕೆ.ಸಿ. ರಾಜಾಕಾಂತ್, ಸಿ.ಜಿ. ಗಂಗಪ್ಪ, ವಿ. ಹನುಮಂತಪ್ಪ ಇದ್ದಾರೆ.




ದಲಿತ ಸಂಘರ್ಷ ಸಮಿತಿ ಜಿಲ್ಲಾ ಶಾಖೆ ಏರ್ಪಡಿಸಿದ್ದ ಜಿಲ್ಲಾಮಟ್ಟದ ದಸಂಸ ಸಾಂಸ್ಕೃತಿಕ ಅಧ್ಯಯನ ಶಿಬಿರದಲ್ಲಿ ಶಿಬಿರಾರ್ಥಿಗಳು ಮತ್ತು ಸಂಪನ್ಮೂಲ ವ್ಯಕ್ತಿಗಳೊಂದಿಗೆ ಕೆ. ನಾರಾಯಣಸ್ವಾಮಿ (ಕೊನೆಯ ಸಾಲಿನಲ್ಲಿ ನಿಂತಿದ್ದಾರೆ)



ಒಂದು ಎಕರೆ ಕುಷ್ಕಿಯಲ್ಲಿ ಸಮಗ್ರ ಕ್ರಾಂತಿ ವಿಚಾರ ಸಂಕಿರಣದ ಉದ್ಘಾಟನಾ ಸಮಾರಂಭದಲ್ಲಿ ಪ್ರಾಧ್ಯಾಪಕರಾದ ಡಾ. ಕೆ.ಪಿ. ನಾರಾಯಣಪ್ಪ, ಕೃಷಿ ಇಲಾಖೆಯ ಸಹಾಯಕ ನಿರ್ದೇಶಕಿ ಅನುರೂಪ ಮತ್ತು ಇತರರೊಂದಿಗೆ ಕೆ. ನಾರಾಯಣಸ್ವಾಮಿಯವರು



ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ವಿಶೇಷ ಜಿಲ್ಲಾಧಿಕಾರಿಯಾಗಿದ್ದ ಶ್ರೀಯುತ ಎನ್. ಜಾಯಣ್ಣ, ನಾಯಕ ಸಮುದಾಯದ ಮುಖಂಡ ಆರ್. ಅಶೋಕಕುಮಾರ್, ನಾಗರಾಜಪ್ಪ ಮತ್ತಿತರರೊಂದಿಗೆ ಕೆ. ನಾರಾಯಣಸ್ವಾಮಿಯವರು



ವಾಲ್ಮೀಕಿ ನಾಯಕ ನೌಕರರು ಮತ್ತು ನಿವೃತ್ತ ನೌಕರರ ಸಂಘ, ಗೌರೀಬಿದನೂರು ಇವರು ಆಯೋಜಿಸಿದ್ದ
ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಸಚಿವ ಸತೀಶ್ ಜಾರಕಿಹೊಳಿ, ಐ.ಎ.ಎಸ್. ಅಧಿಕಾರಿಯಾದ
ಡಾ. ನಾಗಾಂಬಿಕಾ ದೇವಿ ಮತ್ತು ನ್ಯಾ. ಎನ್.ವೈ. ಹನುಮಂತಪ್ಪ ಮತ್ತಿತ್ತರರೊಂದಿಗೆ ಕೆ. ನಾರಾಯಣಸ್ವಾಮಿಯವರು



ನಾಯಕ ಸಮುದಾಯದ ವಿದ್ಯಾರ್ಥಿಗಳ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಕೃಷಿ ವಿಶ್ವವಿದ್ಯಾಲಯದ ಉಪ ಕುಲಪತಿಗಳಾದ
ಡಾ. ಎಸ್. ಬಿಸಲಯ್ಯ, ವಾಣಿಜ್ಯ ಇಲಾಖೆಯ ಜಂಟಿ ಆಯುಕ್ತರಾದ ಶ್ರೀ ನಾಗರಾಜಪ್ಪ, ಸಹಾಯಕ ಆಯುಕ್ತರಾದ
ಶ್ರೀ ವೇಣುಗೋಪಾಲ್, ಕೆಎನ್ನೆಸ್‌ರವರ ಚಿಕ್ಕಪ್ಪ ಕದಿರಪ್ಪರೊಂದಿಗೆ ಕೆ. ನಾರಾಯಣಸ್ವಾಮಿಯವರು



ಸೆಂಟರ್ ಫಾರ್ ಸೈನ್ಸ್ ಅಂಡ್ ಎನ್ವಿರಾನ್‌ಮೆಂಟ್ ಪ್ರೋಗ್ರಾಮ್, ಮಹಾರಾಷ್ಟ್ರ ಇಲ್ಲಿ ಆಯೋಜಿಸಿದ್ದ
ಜಲಶಿಕ್ಷಣ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಕೆ. ನಾರಾಯಣಸ್ವಾಮಿಯವರು




ಕೃಷ್ಣದೇವರಾಯ ವಿಶ್ವವಿದ್ಯಾಲಯದಲ್ಲಿ ಆಯೋಜಿಸಿದ್ದ ನೀರಿನ ಕುರಿತ ವಿಚಾರ ಸಂಕಿರಣದಲ್ಲಿ
ಭಾಗವಹಿಸಿದ್ದ ಕೆ. ನಾರಾಯಣಸ್ವಾಮಿಯವರು, ದೇವರಾಜರೆಡ್ಡಿಯವರು ಮತ್ತು ಇತರರು



ಕೃಷಿ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿಗಳಾದ ಡಾ. ಎಸ್. ಬಿಸಲಯ್ಯರವರೊಂದಿಗೆ
ಕೆ. ನಾರಾಯಣಸ್ವಾಮಿಯವರು



ಕಾರ್ಯಕ್ರಮವೊಂದರಲ್ಲಿ ಕೆ. ನಾರಾಯಣಸ್ವಾಮಿಯವರು ಮಾತನಾಡುತ್ತಿರುವುದು.
ಕೃಷಿ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿಗಳಾದ ಡಾ. ಎಸ್. ಬಿಸಲಯ್ಯನವರು ಹಾಗೂ
ಮತ್ತಿತ್ತರರು ಚಿತ್ರದಲ್ಲಿದ್ದಾರೆ



ಕಾರ್ಯಕ್ರಮವೊಂದರಲ್ಲಿ ಕೆ. ನಾರಾಯಣಸ್ವಾಮಿಯವರು ಮಾತನಾಡುತ್ತಿರುವುದು.
ಕೃಷಿ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿಗಳಾದ ಡಾ. ಬಿಸಲಯ್ಯನವರು, ನಾಗಾಂಬಿಕಾದೇವಿ, ಐ.ಎ.ಎಸ್.
ಹಾಗೂ ಮತ್ತಿತ್ತರರು ಚಿತ್ರದಲ್ಲಿದ್ದಾರೆ



ಗೌರಿಬಿದನೂರು ಪಟ್ಟಣದಲ್ಲಿ 2016ನೇ ಸಾಲಿನಲ್ಲಿ ನಡೆದ ನಾಯಕ ಸಮುದಾಯದ ವಿದ್ಯಾರ್ಥಿಗಳ
ಪ್ರತಿಭಾ ಪುರಸ್ಕಾರದಲ್ಲಿ ಕೆ. ನಾರಾಯಣಸ್ವಾಮಿ, ಬೆಂಗಳೂರು ವಿಶ್ವವಿದ್ಯಾಲಯದ ಪ್ರೊ. ಗೋಮತಿದೇವಿ,
ವಾಲ್ಮೀಕಿ ನಾಯಕ ಮಹಾಸಭಾದ ಅಧ್ಯಕ್ಷ ನರಸಿಂಹಯ್ಯ ಮತ್ತು ಇತರರು



ಜಲಶಿಕ್ಷಣದ ಕುರಿತು ರವೀಂದ್ರ ಭಾರತಿ, ಹೈದರಾಬಾದ್ ಇಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಕೆ. ನಾರಾಯಣಸ್ವಾಮಿಯವರು



ಸಂಪಾದಕರಾದ ಡಾ. ಕೆ.ಪಿ. ನಾರಾಯಣಪ್ಪ ಮತ್ತು ಸಾಹಿತಿ ಶ್ರೀ ಮು.ನಾ. ಕೃಷ್ಣಮೂರ್ತಿರವರೊಂದಿಗೆ ಶ್ರೀ ಕೆ. ನಾರಾಯಣಸ್ವಾಮಿ ಮತ್ತು ಶ್ರೀ ಎಚ್. ವೇಣುಗೋಪಾಲ್‌ರವರು



ಡಾ. ಹೆಚ್.ಎಸ್. ಕಲಾಭವನ, ಗೌರೀಬಿದನೂರು ಇಲ್ಲಿ ಆಯೋಜಿಸಿದ್ದ ಪ್ರತಿಭಾ ಪುರಸ್ಕಾರ ಕಾರ್ಯಕ್ರಮದಲ್ಲಿ ಸನ್ಮಾನ ಸ್ವೀಕರಿಸುತ್ತಿರುವ ಕೆ. ನಾರಾಯಣಸ್ವಾಮಿಯವರು



ನಾಯಕ ಸಮುದಾಯದ ವಿದ್ಯಾರ್ಥಿಗಳ ಪ್ರತಿಭಾ ಪುರಸ್ಕಾರದ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತಿರುವ ಕೆ. ನಾರಾಯಣಸ್ವಾಮಿಯವರು

# ಬಳ್ಳಾರಿ ವಿವಿಯಲ್ಲಿ ಸೆಮಿನಾರ್

## ಬಯಲು ಸೀಮೆಯಲ್ಲಿ ನೀರಿನ ಸ್ವಾವಲಂಬನೆ ಕುರಿತು ವಿಚಾರ ಸಂಕಿರಣ



ಬಳ್ಳಾರಿ ವಿಎಸ್‌ಕೆ ವಿವಿ ಸಭಾಂಗಣದಲ್ಲಿ ಆಯೋಜಿಸಿದ್ದ ವಿಚಾರ ಸಂಕಿರಣವನ್ನು ಕುವೆಂಪು ವಿವಿ ಪ್ರಾಣಿಶಾಸ್ತ್ರ ವಿಭಾಗದ ಪ್ರಾಧ್ಯಾಪಕ ಬಿ.ಬಿ.ಹೊಸೆಟ್ಟಿ ಉದ್ಘಾಟಿಸಿದರು.

ಬಳ್ಳಾರಿ: ವಿಎಸ್‌ಕೆ ವಿವಿ ಸಭಾಂಗಣದಲ್ಲಿ 30ನೇ ಸಹ್ಯಾದ್ರಿ ದಿನದಂಗವಾಗಿ ಎನ್ನೆಸ್ಸೆಸ್ ಘಟಕ, ಶಿವಮೊಗ್ಗ ಪರಿಸರ ಅಧ್ಯಯನ ಕೇಂದ್ರ, ಶಿರಸಿ ಪರಿಸರ ಸಂರಕ್ಷಣಾ ಕೇಂದ್ರದ ಸಹಯೋಗದಲ್ಲಿ 'ಬಯಲು ಸೀಮೆಯಲ್ಲಿ ನೀರಿನ ಸ್ವಾವಲಂಬನೆ' ಕುರಿತು ವಿಚಾರ ಸಂಕಿರಣ ನಡೆಯಿತು.

ಕುವೆಂಪು ವಿವಿ ಪ್ರಾಣಿಶಾಸ್ತ್ರ ವಿಭಾಗದ ಪ್ರಾಧ್ಯಾಪಕ ಬಿ.ಬಿ.ಹೊಸೆಟ್ಟಿ ಉದ್ಘಾಟಿಸಿದರು. ಸಂಪನ್ಮೂಲ ವ್ಯಕ್ತಿಗಳಾದ ಚಿತ್ರದುರ್ಗದ ನಾಗರಾಜರೆಡ್ಡಿ, ಗೌರಿಬಿದನೂರಿನ ಪ್ರೊ.ನಾರಾಯಣಸ್ವಾಮಿ, ತುಮಕೂರಿನ ಮಲ್ಲಿಕಾರ್ಜುನ ಹೊಸಪಾಳ್ಯ ಉಪನ್ಯಾಸ ನೀಡಿದರು. ವಿವಿ ಪ್ರಭಾರ ಕುಲಪತಿ ಕೆ.ಎಚ್.ಶಿವಪ್ರಸಾದ್ ಅಧ್ಯಕ್ಷತೆ ವಹಿಸಿದ್ದರು. ರಾಜಸ್ಥಾನದ ಜಲನಿರ್ವಹಣಾ ಪರಿಣತ ಲಕ್ಷ್ಮಣಸಿಂಗ್, ಕುಲಸಚಿವ ಕೆ.ವಿಜಯಕುಮಾರ್, ಹಣಕಾಸು ಅಧಿಕಾರಿ ಡಾ.ಭೀಮನಗೌಡ, ಪರಿಸರ ಅಧ್ಯಯನ ಕೇಂದ್ರದ ನಿರ್ದೇಶಕ ಜಿ.ಎಲ್.ಜನಾರ್ದನ, ಪರಿಸರ ಸಂರಕ್ಷಣಾ ಕೇಂದ್ರದ ಪಾಂಡುರಂಗ ಹೆಗಡೆ ಇತರರು ಇದ್ದರು. ಎನ್ನೆಸ್ಸೆಸ್ ಸಂಯೋಜನಾಧಿಕಾರಿ ಡಾ.ಎಚ್.ರಾಮಕೃಷ್ಣ ನಿರ್ವಹಿಸಿದರು.

# ಫ್ಲೋರೋಸಿಸ್ ವ್ಯಾಧಿ ವಿರುದ್ಧ ಗುಡಿಬಂಡೆ ವಿದ್ಯಾರ್ಥಿಗಳ ಸಮರ

(ವಿಶೇಷ ವರದಿ)

ಗುಡಿಬಂಡೆ,ನ. 28 - ವೈದ್ಯರಿಗೆ, ವಿಜ್ಞಾನಿಗಳಿಗೆ, ತಜ್ಞರಿಗೆ, ನೀತಿ ನಿರೂಪಕರಿಗೆ ಸವಾಲಾಗಿರುವ ಚಿಕಿತ್ಸೆಯೇ ಇಲ್ಲದ ಫ್ಲೋರೋಸಿಸ್ ವ್ಯಾಧಿಯ ವಿರುದ್ಧ ಗುಡಿಬಂಡೆ ತಾಲೂಕಿನ ಪ್ರೌಢಶಾಲೆ ಹಾಗೂ ಪದವಿ ಪೂರ್ವ ಕಾಲೇಜಿನ ವಿದ್ಯಾರ್ಥಿಗಳು ಸಮರ ಘೋಷಿಸಿ ತಮ್ಮದೇ ಆದ ರೀತಿಯಲ್ಲಿ ಚಿಕಿತ್ಸೆ ನೀಡುತ್ತಿದ್ದಾರೆ.

ಕಂಬಲೂ ಅಸಾಧ್ಯ, ನಂಬದಿರಲೂ ಸಾಧ್ಯವಿಲ್ಲ. ಆದರೆ ನಂಬುವಂತೆ ಪ್ರತ್ಯಕ್ಷವಾಗಿ ಮಾಡಿ ತೋರಿಸುವುದು ಅಪೂರ್ವ ಸಾಧನೆ. ಇಲ್ಲಿಯವರೆಗೆ ಯಾರೂ ಮಾಡಲಾಗದ್ದನ್ನು ಅಚ್ಚುಕಟ್ಟಾಗಿ ಈ ವಿದ್ಯಾರ್ಥಿಗಳು ಮಾಡಿದ್ದಾರೆ. ಫ್ಲೋರೋಸಿಸ್ ವ್ಯಾಧಿಯ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವುದೇ ಈ ಚಿಕಿತ್ಸೆಯ ವಿಧಾನ.

ತಾಲೂಕಿನಲ್ಲಿ ಹಿರಿಯರೆನಿಸಿಕೊಂಡವರು, ಜನಪ್ರತಿನಿಧಿಗಳು, ಪೋಷಕರು, ಸಂಬಂಧಿಸಿದ ಇಲಾಖೆಯವರು ಈ ನಿಟ್ಟಿನಲ್ಲಿ ನಿರ್ಲಕ್ಷ್ಯ ವಹಿಸಿ ಮೌನವಾಗಿರುವುದನ್ನು ಅರಿತ ವಿದ್ಯಾರ್ಥಿಗಳು ತಮ್ಮ ವಯಸ್ಸಿಗೆ ಮೀರಿದ, ತಮ್ಮಿಂದ ಅಸಂಭವ ಎಂದು ಪರಿಗಣಿಸಲ್ಪಟ್ಟ ಒಂದು ಗುರುತರವಾದ ಹೊರೆಯನ್ನು ತಮ್ಮ ಹೆಗಲ ಮೇಲೆ ಹೊರಿಸಿಕೊಂಡು ಅವರಲ್ಲಿ ಏನನ್ನು ಸಾಧಿಸಿದ್ದಾರೆ ತಮ್ಮ ಈ ಗುಣಾತ್ಮಕ ಕಾರ್ಯದ ಮೂಲಕ ವಿದ್ಯಾರ್ಥಿಗಳಿಂದಲೇನು ಎಂಬುದನ್ನು ಹಿರಿಯರಿಗೆ, ಅಧಿಕಾರಿಗಳಿಗೆ ಮತ್ತು ಜನ ಪ್ರತಿನಿಧಿಗಳೆನಿಸಿಕೊಂಡವರಿಗೆ ತೋರಿಸಿಕೊಟ್ಟು ಅವರ ಕಣ್ಣು ತೆರೆಸಿದ್ದಾರೆ.

ರಾಜ್ಯದ ಬೇರೆ ಬೇರೆ ಸ್ಥಳಗಳಲ್ಲಿ ವಿದ್ಯಾರ್ಥಿ ಸಮೂಹ ನಾನಾ [illegible] ಚಟುವಟಿಕೆಗಳಲ್ಲಿ ತೊಡಗಿರುವುದು ನಿಜ. ಬೇಡಿಕೆಗಳ ಈಡೇರಿಕೆ, ಸಮಸ್ಯೆಗಳ ಪರಿಹಾರ ಮುಂತಾದ ಹಲವಾರು ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಸ್ತೆ ತಡೆ, ಬಂದ್, ಧರಣಿ ಮುಂತಾದವುಗಳನ್ನು ನಡೆಸಿ ಸರಕಾರ ಮತ್ತು ಜನರ ಗಮನ ಸೆಳೆದಿರಬಹುದು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಇಲ್ಲಿ ವಿದ್ಯಾರ್ಥಿಗಳು ಸಾರ್ವಜನಿಕರ ಆರೋಗ್ಯದ ಕುರಿತು ಕಾಳಜಿ ವಹಿಸಿ ಇದರ ಪರಿಹಾರಕ್ಕಾಗಿ ಕಣ್ಮುಚ್ಚಿರುವ ತಂತ್ರಗಳಿಗೆ ಮಾರು ಹೋಗದೆ ತಾವೇ ಸ್ವತಃ ಮನೆಗಳಿಗೆ ಹೋಗಿ ಜಾಗೃತಿ ಮೂಡಿಸುತ್ತಿದ್ದಾರೆ.

ಇದನ್ನು ಮಾನವೀಯ ಸೇವೆ ಎಂದು ಪರಿಗಣಿಸಿ ಒಂದು ವಾರದ ವರೆಗೆ ಪ್ರತಿ ದಿನ ತರಗತಿಗಳನ್ನು ತಪ್ಪಿಸಿಕೊಳ್ಳದೆ, ಸಂಜೆಯ ಮತ್ತು ಬೆಳಗಿನ ವೇಳೆ ಮನೆ ಮನೆಗಳಿಗೆ ಹೋಗಿ ಸಾರ್ವಜನಿಕರನ್ನು ಬಡಿದೆಬ್ಬಿಸಿ ಅವರಲ್ಲಿ ಎಚ್ಚರ ಮೂಡಿಸುವುದು ಈ ವಿದ್ಯಾರ್ಥಿಗಳ ವೈಶಿಷ್ಟ್ಯ. ಸರಕಾರ ಮತ್ತು ಸರಕಾರೇತರ ಸಂಘ ಸಂಸ್ಥೆಗಳಿಂದ ಮಾತ್ರ ಮಾಡಬಹುದಾಗಿದ್ದನ್ನು ಯಾರಿಂದಲೂ ಒಂದು ನಯಾ ಪೈಸೆಯನ್ನು ಬಯಸದೆ, ಇದು ತಮ್ಮ ಕರ್ತವ್ಯವೆಂದು ಈ ವಿದ್ಯಾರ್ಥಿಗಳು ಮಾಡುತ್ತಿರುವುದು ಅವರ ಕಾರ್ಯ ವೈಖರಿ.

ಇದೇ ಕಾರ್ಯವನ್ನು ಸರಕಾರವಾಗಲೀ, ಇತರೇ ಯಾವುದೇ ಸಂಘ ಸಂಸ್ಥೆಗಳಾಗಲೀ ಮಾಡಿದ್ದರೆ ಲಕ್ಷಾಂತರ ರೂಪಾಯಿ ವೆಚ್ಚವನ್ನು ತೋರಿಸಲಾಗುತ್ತಿತ್ತು. ಆದರೆ ಇಲ್ಲಿ ಯಾವುದೇ ಹಣದ ಖರ್ಚಿಲ್ಲ, ಪ್ರಚಾರದ ಆಸೆಯಿಲ್ಲ. ಇರುವುದು ಕೇವಲ ಆರೋಗ್ಯದ ಬಗ್ಗೆಗಿನ ಕಾಳಜಿ ಮಾತ್ರ.

ಈ ಕಾರ್ಯಕ್ರಮಕ್ಕೆ ವಿದ್ಯಾರ್ಥಿಗಳನ್ನು ಯಾವುದಕ್ಕಾಗಿ ಉಪಯೋಗಿಸಿಕೊಂಡರು ಎಂಬುದೇ ಹಲವರಲ್ಲಿ ಮೂಡಿದ ಪ್ರಶ್ನೆ. ಇದಕ್ಕೆ ಸರಿಯಾದ ಉತ್ತರ ಕಾರ್ಯಕ್ರಮದ ವ್ಯವಸ್ಥಾಪಕರಿಗಿಂತಲೂ ಉತ್ತಮವಾಗಿ ವಿದ್ಯಾರ್ಥಿಗಳೇ ಉತ್ತರ ನೀಡುತ್ತಾರೆ. ನಾಲ್ಕು ಗೋಡೆಗಳ ಮಧ್ಯೆ ಕುಳಿತು ಕಲಿಯುವುದಕ್ಕಿಂತ ತಮ್ಮಲ್ಲಿರುವ ಪ್ರೌಢಿಮೆಯನ್ನು ಉಪಯೋಗಿಸಿಕೊಂಡು ಸಾರ್ವಜನಿಕರಲ್ಲಿ ಆರೋಗ್ಯದ ಬಗ್ಗೆ ಜಾಗೃತಿ ಮೂಡಿಸಿ ಅವರೊಂದಿಗೆ ಯಾವ ರೀತಿ ವರ್ತಿಸಬೇಕೆಂಬುದು ಈ ಕಾರ್ಯಕ್ರಮದಿಂದ ನಾವು ಕಲಿತಂತಾಗಿದೆ ಎಂದು ವಿದ್ಯಾರ್ಥಿಗಳು ಹೇಳುತ್ತಿದ್ದಾರೆ.

ತಾಲೂಕಿನಲ್ಲಿ ಒಂದು ಪದವಿ ಪೂರ್ವ ಕಾಲೇಜು ಹಾಗೂ 6 ಪ್ರೌಢಶಾಲೆಗಳಿದ್ದು, ಈ ಸಂಸ್ಥೆಗಳ 7 ಮುಖ್ಯಸ್ಥರು, 80 ಮಂದಿ ಬೋಧಕರು,1600 ವಿದ್ಯಾರ್ಥಿಗಳು, ಒಬ್ಬ ಕ್ಷೇತ್ರ ಶಿಕ್ಷಣಾಧಿಕಾರಿ, [illegible] ಕೇಂದ್ರದ ನಿರ್ದೇಶಕರು ಈ ಸಮರದಲ್ಲಿ ಭಾಗವಹಿಸಿದ್ದರು.

ಇವರನ್ನು ಫ್ಲೋರೋಸಿಸ್ ಕುರಿತಾಗಿ ತೃಪ್ತಿಕರವಾಗಿ ತೀವ್ರ ತರಬೇತಿ ನೀಡಿ ಸಜ್ಜುಗೊಳಿಸಲಾಗಿತ್ತು. ಬೇರೆ ಬೇರೆ ಹಂತಗಳಲ್ಲಿ 60ಕ್ಕೂ ಹೆಚ್ಚು ಭಾಷಣಗಳು, 8-9 ಪ್ರೇರಣಾತ್ಮಕ ಭಾಷಣಗಳು, [illegible] ಮೂಲಕ ವಿದ್ಯಾರ್ಥಿಗಳು ತಾವು ಕಲಿತ ಅಸ್ತ್ರವನ್ನು ಸಮರ್ಥವಾಗಿ ಬಳಸಿಕೊಂಡು ಮನೆಗಳಿಗೆ ತೆರಳಿ ಫ್ಲೋರೋಸಿಸ್ ಬಗ್ಗೆ ಜನರನ್ನು ಜಾಗೃತಿಗೊಳಿಸುತ್ತಿದ್ದರು.

ಗುಡಿಬಂಡೆ ಪಟ್ಟಣ, ಎಲ್ಲೋಡು, ಹಂಪಸಂದ್ರ, ಬೆಂಡೂರು, ದೇಚಗಾನಹಳ್ಳಿ, ವರ್ಲಕೊಂಡ, ಸೋಮೇನಹಳ್ಳಿ ಮುಂತಾದ ಗ್ರಾಮಗಳಲ್ಲಿ ಇದೇ ತಿಂಗಳ 6ರಿಂದ 14ರ ತನಕ ಸಾಂಕೇತಿಕವಾಗಿ ಕಾರ್ಯಕ್ರಮದ ಉದ್ಘಾಟನೆ ಮತ್ತು ಫ್ಲೋರೋಸಿಸ್ ಕುರಿತ ಲೇಖನ ಬಿಡುಗಡೆ ಕಾರ್ಯಕ್ರಮಗಳು ನಡೆದವು.

ಈ ಸಂದರ್ಭದಲ್ಲಿ ನುರಿತವರನ್ನು ಆಹ್ವಾನಿಸಿ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವಂತಹಾ ಭಾಷಣಗಳನ್ನು ಏರ್ಪಡಿಸಲಾಗಿತ್ತು.

ಈ ಕುರಿತಾಗಿ ಒಟ್ಟು 18 ತಂಡಗಳನ್ನು ತಯಾರಿಸಲಾಗಿದ್ದು, ಪ್ರತಿ ದಿನ ಸಂಜೆ ಬಾಲಕ ಬಾಲಕಿಯರು ಕೈಯ್ಯಲ್ಲಿ ಲೇಖನ ಹಿಡಿದು ಬೀದಿ ಬೀದಿಗಳಲ್ಲಿ ಸಂಚರಿಸುತ್ತಾ ಆರೋಗ್ಯದ ಬಗ್ಗೆ ಕಾಳಜಿ ಮೂಡಿಸುತ್ತಿದ್ದರು. ತಾಲೂಕಿನ 105 ಗ್ರಾಮಗಳ 50 ಸಾವಿರ ಮಂದಿಗೆ ಈ ಕುರಿತು ಜಾಗೃತಿ ಮೂಡಿಸುವ ಕಾರ್ಯಕ್ರಮ [illegible] ಕುರಿತ ಲೇಖನವೊಂದನ್ನು ನೀಡುತ್ತಿದ್ದರು.

ಈಗಾಗಲೇ ಸುಮಾರು 32 ಸಾವಿರ ಜನರಿಗೆ ಈ ಕುರಿತು ಜಾಗೃತಿ ಮೂಡಿಸಿದಂತಾಗಿದ್ದು, ಎರಡು ಹಂತಗಳಲ್ಲಿ ಉಳಿದ ಗ್ರಾಮಗಳಲ್ಲಿ ಮತ್ತು ಮನೆಗಳಿಗೆ ಭೇಟಿ ನೀಡಲಾಗುವುದು ಎಂದು ಆಯೋಜಕರು ತಿಳಿಸಿದ್ದಾರೆ.

[illegible] ಮಹಿಳೆಯರು, ವಿದ್ಯಾರ್ಥಿಗಳು ಹಾಗೂ ಶಿಕ್ಷಕರನ್ನು ಸಂದರ್ಶಿಸಲಾಗುತ್ತಿದೆ. [illegible] ಮತ್ತು ಪ್ರಯೋಜನಗಳ ಕುರಿತು ಚರ್ಚಿಸಲಾಗುತ್ತಿದೆ

ದಲಿತ ಸಂಘರ್ಷ ಸಮಿತಿಯಿಂದ ವಿಚಾರ ಸಂಕಿರಣ

# ತಪ್ಪು ನಡಿಗೆಗೆ ದಲಿತರು, ಸಂಘಟನೆ ಅಪಾಯದಲ್ಲಿ

20 01 15



[illegible]

5-11-0[illegible]

# 'ಛಾವಣಿ ನೀರು ಸಂಗ್ರಹ' ವಿಧಾನ

ಚಿಕ್ಕಬಳ್ಳಾಪುರ, ನ.4 - ಕುಡಿಯುವ ನೀರಿನ ಸಮಸ್ಯೆ ನಿವಾರಣೆಗೆ 'ಮೇಲ್ಛಾವಣಿ ನೀರು ಸಂಗ್ರಹ ಬಳಕೆ' ವಿಧಾನ ಅಳವಡಿಕೆಯೇ ರಾಮಬಾಣ ಎಂದು ಶಿಕ್ಷಣ ಇಲಾಖೆಯ ನಿವೃತ್ತ ಜಂಟಿ ನಿರ್ದೇಶಕ ಹಾಗೂ [illegible] ತಿಳಿಸಿದ್ದಾರೆ.

[illegible]

[illegible] ಎಂದು ಅಭಿಪ್ರಾಯಪಟ್ಟರು.

ಸಂಗ್ರಹಣೆ ಹೇಗೆ: [illegible]

[illegible] ಮೂಲಕ ಅನೇಕ ವರ್ಷಗಳ ಕಾಲ ನೀರನ್ನು ಕೆಡದಂತೆ ಸಂಗ್ರಹಿಸಲು ಸಾಧ್ಯ. ಸರಕಾರಿ ಕಟ್ಟಡಗಳಲ್ಲಿ ಛಾವಣಿ ನೀರು ಸಂಗ್ರಹಣೆಗೆ ಸರಕಾರ ಪರಿಣಾಮಕಾರಿ ಯೋಜನೆ ರೂಪಿಸುವ ಅಗತ್ಯವಿದೆ ಎಂದು ತಿಳಿಸಿದರು.

ಮುನಿರಾಜು, ಭಾಗ್ಯಮ್ಮ ರಾಜಣ್ಣ, ಕೋದಿರಂಗಪ್ಪ, ವೆಂಕಟಪ್ಪ, ಶೀನಪ್ಪ, ನಂಜಮ್ಮ, ಬಿ.ಶ್ರೀನಿವಾಸ್, ನಿರ್ಮಲಾಪ್ರಭು, ಎನ್.ಜಯರಾಂ, ಕ್ಷೇತ್ರ ಶಿಕ್ಷಣಾಧಿಕಾರಿ ಉದಯ್ ಶಂಕರ್, ಸರಕಾರಿ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲ ಶಂಕರರೆಡ್ಡಿ ಹಾಜರಿದ್ದರು. ಕೋದಿರಂಗಪ್ಪ ಸ್ವಾಗತಿಸಿ, ನಿರೂಪಿಸಿದರು.


ಕರ್ನಾಟಕ ಸರ್ಕಾರ
ಶ್ರೀ ಕೆ.ನಾರಾಯಣ ಸ್ವಾಮಿ
ಕೃಷಿ – ಪರಿಸರ
ಸನ್ಮಾನ್ಯರೆ,
ರಾಜ್ಯದ ಸರ್ವತೋಮುಖ ಅಭಿವೃದ್ಧಿಗಾಗಿ
ತಾವು ತಮ್ಮ ಕ್ಷೇತ್ರದಲ್ಲಿ ಸಲ್ಲಿಸಿರುವ ಅನುಪಮ ಸೇವೆಯನ್ನು
ಕೃತಜ್ಞತೆಯಿಂದ ಸ್ಮರಿಸುತ್ತ ಕರ್ನಾಟಕ ಸರ್ಕಾರವು
ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ತಮಗೆ
೨೦೧೩ನೇ ಸಾಲಿನ
'ರಾಜ್ಯ ಪ್ರಶಸ್ತಿ' ಯನ್ನು
ನೀಡಿ ಗೌರವಿಸಲು ಹರ್ಷಿಸುತ್ತದೆ.
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ


ಕರ್ನಾಟಕ ಸರ್ಕಾರ
ರಾಜ್ಯ ಪ್ರಶಸ್ತಿ ೨೦೧೩



ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್, ಸಮಾಜ ಕಲ್ಯಾಣ ಇಲಾಖೆ ಹಾಗೂ ನಗರಸಭೆ



ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

ಭಾರತ ರತ್ನ, ಸಂವಿಧಾನ ಶಿಲ್ಪಿ

## ಡಾ॥ ಬಿ. ಆರ್. ಅಂಬೇಡ್ಕರ್ ರವರ

120ನೇ ಜನ್ಮದಿನಾಚರಣೆ ಹಾಗೂ



ಹಸಿರು ಕ್ರಾಂತಿಯ ಹರಿಕಾರ, ಭಾರತದ ಮಾಜಿ ಉಪಪ್ರಧಾನಿ

## ಡಾ॥ ಬಾಬು ಜಗಜೀವನರಾಂ ರವರ

104ನೇ ಜನ್ಮ ದಿನಾಚರಣೆ ಸಮಾರಂಭ

### ಸನ್ಮಾನ ಪತ್ರ

ಶ್ರೀಮತಿ ಶ್ರೀ........ ಕೆ.ಎನ್. ನಾರಾಯಣಸ್ವಾಮಿ ಜಲ ತಜ್ಞರು. ........

........ [illegible] ........

ಇವರು ........ ಸಾಮಾಜಿಕ ಕ್ಷೇತ್ರ ಮತ್ತು ಜಲಸಂರಕ್ಷಣೆಯಲ್ಲಿ ........ ತಮ್ಮನ್ನು ತಾವು ಸಮರ್ಪಿಸಿಕೊಂಡು ಉತ್ತಮ ಸೇವೆ ಸಲ್ಲಿಸಿದ್ದಕ್ಕಾಗಿ ದಿನಾಂಕ : 14-04-2011 ರಂದು ಚಿಕ್ಕಬಳ್ಳಾಪುರ ನಗರದಲ್ಲಿ ನಡೆದ ಭಾರತರತ್ನ ಸಂವಿಧಾನ ಶಿಲ್ಪಿ ಡಾ॥ಬಿ. ಆರ್. ಅಂಬೇಡ್ಕರ್‌ರವರ 120ನೇ ಹಾಗೂ ಹಸಿರು ಕ್ರಾಂತಿಯ ಹರಿಕಾರ ಭಾರತದ ಮಾಜಿ ಉಪಪ್ರಧಾನಿ ಡಾ॥ ಬಾಬು ಜಗಜೀವನರಾಂ ರವರ 104ನೇ ಜನ್ಮ ದಿನಾಚರಣೆ ಸಂದರ್ಭದಲ್ಲಿ ಅಭಿಮಾನದಿಂದ ಸನ್ಮಾನಿಸಲಾಗಿದೆ.

ಶ್ರೀ ಬಿ.ಎಸ್. ಶೇಖರಪ್ಪ

ಶ್ರೀಮತಿ ಡಾ॥ ಎನ್. ಮಂಜುಳ



# ಕನ್ನಡ ಸಾಹಿತ್ಯ ಪರಿಷತ್ತು

## ಸನ್ಮಾನ ಪತ್ರ

ಬಿಜಾಪುರ ಜಿಲ್ಲೆ ಮುಧೋಳದಲ್ಲಿ ದಿನಾಂಕ ೪-೬ ಜೂನ್, ೧೯೯೪ರ ವರೆಗೆ ನಡೆದ ಅಖಿಲ ಭಾರತ ೬೩ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ

ಶ್ರೀ / ಶ್ರೀಮತಿ ನಾರಾಯಣ ಸ್ವಾಮಿ . ಕೆ

ಅವರು ನಾಡು ನುಡಿಗೆ ಸಲ್ಲಿಸಿರುವ ಸೇವೆಯನ್ನು ಗಮನಿಸಿ ಪರಿಷತ್ತು ಸನ್ಮಾನಿಸಿದೆ.

ದಿನಾಂಕ ೫-೬-೧೯೯೪

ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು



ಜೈಭೀಮ್

# ಸಮತಾ ಸೈನಿಕ ದಳ - SSD

ಜೈ ಭಾರತ್



ನಂ. 5, ಕಪಾಲಿ ಟಾಕೀಸ್ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು-09, ಮೊ: 9844085332

## ಭೀಮರತ್ನ ಪ್ರಶಸ್ತಿ ಸಂಮಾನ

ಶ್ರೀಮತಿ / ಶ್ರೀ ಕೆ. ನಾರಾಯಣಸ್ವಾಮಿ ರವರೆ, ತಾವೂ ಅಂಬೇಡ್ಕರ್ ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿರುವ ಅನುಪಮ ಸೇವೆಯನ್ನು ಪರಿಗಣಿಸಿ ಡಾ|| ಬಿ.ಆರ್. ಅಂಬೇಡ್ಕರ್ ಅವರ **125ನೇ ಜಯಂತೋತ್ಸವ** ಸಂಧರ್ಭದಲ್ಲಿ 14-04-2016 ರಂದು 2016 ಸಾಲಿನ ಈ ಪ್ರಶಸ್ತಿಯನ್ನು ತಮಗೆ ನೀಡಿ ಗೌರವಿಸಲಾಗಿದೆ.

ಡಾ. ಬಾನಂದೂರು ಕೆಂಪಯ್ಯ
ಅಭಿನಂದನಾ ಸಮಿತಿಯ ಅಧ್ಯಕ್ಷರು

ಡಾ. ಎಂ. ವೆಂಕಟಸ್ವಾಮಿ
ಅಧ್ಯಕ್ಷರು, ಸಮತಾ ಸೈನಿಕ ದಳ

---



## ರೋಟರಿ ಸಂಸ್ಥೆ

ಆರ್.ಐ. ಜಿಲ್ಲೆ 3190 ಗೌರೀಬಿದನೂರು, ಕೋಲಾರ ಜಿಲ್ಲೆ.




## ಪ್ರಶಸ್ತಿ ಪತ್ರ

ಶ್ರೀ ಕೆ. ನಾರಾಯಣ ಸ್ವಾಮಿ ನಿವೃತ್ತ ಜಿ.ಡಿ.ಪಿ.ಐ., ಗೌರಿಬಿದನೂರು

ಅವರ ಸಮಾಜ ಸೇವೆಯನ್ನು ಗುರ್ತಿಸಿ ಸ್ಥಳೀಯ ರೋಟರಿ ಸಂಸ್ಥೆಯು ಕೃತಜ್ಞತಾಪೂರ್ವಕವಾಗಿ ಗೌರವಿಸಿ ಅಭಿನಂದಿಸುತ್ತದೆ.

ರೊ. ತಿಕ್ಕಿಪಿವಾದಿರಾಜ್

ರೊ. ಟಿ.ಎಸ್. ಅಂಜದ್ ಪಾಷ
ಕಾರ್ಯದರ್ಶಿ
ರೋಟರಿ ಸಂಸ್ಥೆ, ಗೌರಿಬಿದನೂರು.

ಲೋಕೇಶ್ವರ್
ಮುಖ್ಯ ಅತಿಥಿಗಳು

ರೊ. ಕೆ. ವರಾಹ ಮೂರ್ತಿ
ಅಧ್ಯಕ್ಷರು
ರೋಟರಿ ಸಂಸ್ಥೆ, ಗೌರಿಬಿದನೂರು.

ದಿನಾಂಕ 28-5-2002 ಮಂಗಳವಾರ



ಕರ್ನಾಟಕ ಚಿತ್ರಕಲಾ ಅಕಾಡೆಮಿಯ ರಾಜ್ಯಪ್ರಶಸ್ತಿ ವಿಜೇತ
ಕಲಾವಿದ ಶ್ರೀ ದೇವೇಂದ್ರ ಹುಡಾರವರು
ಕೆ. ನಾರಾಯಣಸ್ವಾಮಿಯವರ ಬಗೆಗಿನ ಅಭಿಮಾನದಿಂದ
ರಚಿಸಿಕೊಟ್ಟ ಚುಕ್ಕಿಚಿತ್ರ.
ಚಿತ್ರದ ಹಿಂಬದಿಯಲ್ಲಿ ಬುದ್ಧ ಹಾಗೂ
ಡಾ. ಬಿ.ಆರ್. ಅಂಬೇಡ್ಕರ್‌ರವರನ್ನು ಕಾಣಬಹುದಾಗಿದೆ

